# ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಲ್ಲಿಸುತ್ತಿರುವ ಮಹಾಪ್ರಬಂಧ


ಸಂಶೋಧಕರು

ಶ್ರೀದೇವಿ ವೀರಭದ್ರಪ್ಪ

ಮಾರ್ಗದರ್ಶಕರು

ಡಾ. ಎಚ್.ಎಸ್.ಶ್ರೀಮತಿ

ಪ್ರಾಧ್ಯಾಪಕರು

ಮಹಿಳಾ ಅಧ್ಯಯನ ವಿಭಾಗ





ಭಾಷಾ ನಿಕಾಯ

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿದ್ಯಾರಣ್ಯ–೫೮೩ ೨೭೬

೨೦೦೯

# ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

ಮಹಾಪ್ರಬಂಧ

ಸಂಶೋಧಕರು

ಶ್ರೀದೇವಿ ವೀರಭದ್ರಪ್ಪ

ಮಾರ್ಗದರ್ಶಕರು

ಡಾ. ಎಚ್.ಎಸ್.ಶ್ರೀಮತಿ

ಪ್ರಾಧ್ಯಾಪಕರು

ಮಹಿಳಾ ಅಧ್ಯಯನ ವಿಭಾಗ





ಭಾಷಾ ನಿಕಾಯ

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿದ್ಯಾರಣ್ಯ-೫೮೩ ೨೭೬

೨೦೦೯

## ಮಾರ್ಗದರ್ಶಕರ ಪ್ರಮಾಣ ಪತ್ರ

**ಶ್ರೀದೇವಿ ವೀರಭದ್ರಪ್ಪ** ಅವರು **'ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ'** ಎಂಬ ಶೀರ್ಷಿಕೆಯ ಮಹಾ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾ ನಿಕಾಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿರುತ್ತಿರುವ ಪ್ರಸ್ತುತ ಮಹಾ ಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ: 16/9/09

**ಡಾ. ಎಚ್.ಎಸ್.ಶ್ರೀಮತಿ**

ಪ್ರಾಧ್ಯಾಪಕರು

**ಮಹಿಳಾ ಅಧ್ಯಯನ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಸಂಶೋಧಕರ ಪ್ರಮಾಣ ಪತ್ರ

'ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ' ಎಂಬ ಮಹಾ ಪ್ರಬಂಧವನ್ನು ಡಾ. ಎಚ್.ಎಸ್. ಶ್ರೀಮತಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾ ನಿಕಾಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾ ಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ: 16/09/19

ಶ್ರೀದೇವಿ ವೀರಭದ್ರಪ್ಪ
ಸಂಶೋಧಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಪರಿವಿಡಿ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಗುರಿ ಮತ್ತು ವೈಧಾನಿಕತೆ

ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಗುರಿ ಮತ್ತು ವೈಧಾನಿಕತೆ

## ೧.೧ ಪ್ರಸ್ತಾವನೆ

ಆರೋಗ್ಯಕರ ಸಮಾಜ ರೂಪಿಕೆಯ ಅಗತ್ಯಗಾಗಿ ಸಾಮಾಜಿಕ ಸಂರಚನೆಯಲ್ಲಿ ಹಲವಾರು ವಿಭಿನ್ನ ಬಗೆಯ ವ್ಯವಸ್ಥೆಗಳನ್ನು ರೂಪಿಸಿಕೊಳ್ಳಲಾಗಿದೆ. ಈ ಬಗೆಯ ಸಮಾಜ ವ್ಯವಸ್ಥೆಯ ನಿರ್ಮಾಣದಲ್ಲಿ ಮಹಿಳಾ ಬದುಕನ್ನು ಗ್ರಹಿಸುವಲ್ಲಿ ವಿಫಲವಾಗಿದೆ. ಸುವ್ಯವಸ್ಥಿತ ಸಮಾಜ ವ್ಯವಸ್ಥೆಯ ಮುಂದುವರಿಕೆಗಾಗಿ ಕೆಲವು ಸಾಮಾಜಿಕ ಸಂಸ್ಥೆಗಳಡಿಯಲ್ಲಿ ನೀತಿ ನಿಯಮಗಳನ್ನು ರೂಪಿಸಲಾಗಿದೆ. ಅವುಗಳನ್ನು ಕಡ್ಡಾಯವಾಗಿ ಪಾಲಿಸಿಕೊಂಡು ಹೋಗಬೇಕೆನ್ನುವ ಒತ್ತಡವನ್ನು ಏರಲಾಗುತ್ತದೆ. ಈ ಬಗೆಯ ಪ್ರತಿಯೊಂದು ಸಂಗತಿಗಳಲ್ಲಿಯೂ ಮಹಿಳಾ ಅಸ್ತಿತ್ವವನ್ನು ಕಡೆಗಣಿಸುವ ಅಂಶಗಳೇ ಹೆಚ್ಚಾಗಿವೆ. ಮಾನವ ಸಹಜ ಜೀವಿಗಳಲ್ಲಿ ಹೆಣ್ಣನ್ನು ಸಹಜೀವಿಯಾಗಿ ಪರಿಗಣಿಸದೇ ನಿರಂತರವಾಗಿ ಅವಳ ಒಟ್ಟು ಬದುಕನ್ನು ನಾನಾ ವಿಧದ ಕಾರಣಗಳಿಂದ ದಮನಗೈಯುವಲ್ಲಿ ಪುರುಷ ಸಂಸ್ಕೃತಿಯ ಚಹರೆಗಳಿವೆ. ಇದಕ್ಕೆ ಪೂರಕವಾಗಿ ಧರ್ಮ, ಸಂಸ್ಕೃತಿ, ಕುಟುಂಬ, ವಿವಾಹ ಇತ್ಯಾದಿ ಸಂಸ್ಥೆಗಳಿವೆ. ಹೆಣ್ಣು ಈ ನಿಯಮಗಳನ್ನು ಉಲ್ಲಂಘಿಸಿದಾಗಲಷ್ಟೇ ಆಕ್ರಮಣಗಳಾಗುತ್ತವೆ –ಯೆಂದೇನಿಲ್ಲ, ಅವುಗಳನ್ನು ಅಚ್ಚುಕಟ್ಟಾಗಿ ಪಾಲಿಸುವಾಗಲೂ ಅವಳ ಮೇಲಿನ ಹಿಂಸೆ –ದೌರ್ಜನ್ಯಗಳು ನಿಲ್ಲುವುದಿಲ್ಲ. ಅಲ್ಲಿನ ಪ್ರಮಾಣಗಳಲ್ಲಿ ಅಲ್ಪ – ಸ್ವಲ್ಪ ವ್ಯತ್ಯಾಸವಿರಬಹುದಷ್ಟೆ. ಈ ಬಗೆಯ ಕೆಲವು ಸಂಗತಿಗಳನ್ನು ಆಧರಿಸಿ ಹೇಳುವುದಾದರೆ ಆರೋಗ್ಯಕರ ಸಮಾಜ ವ್ಯವಸ್ಥೆ ಅಥವಾ ಸುವ್ಯವಸ್ಥಿತ ಸಮಾಜ ವ್ಯವಸ್ಥೆಯೆಂಬುದು ಪುರುಷರನ್ನು, ಪ್ರಬಲರನ್ನು ಮಾತ್ರ ಕೇಂದ್ರಿಕರಿಸಿ ರೂಪಿಸಲಾಗಿದೆ. ಆ ಕಾರಣವಾಗಿ ಜಗತ್ತಿನ ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರು ಇಂದು ಒಟ್ಟು ಸಮಾಜದಲ್ಲಿ ನಾನಾ ಬಗೆಯ ಹಿಂಸೆ–ದೌರ್ಜನ್ಯಕ್ಕೊಳಗಾಗುತ್ತಿದ್ದಾರೆ. ಮಹಿಳೆಯ ಸಮಸ್ಯೆಯನ್ನು ಸಾಮಾಜಿಕ ಸಮಸ್ಯೆಯಾಗಿ ಪರಿಗಣಿಸದಿರುವ ಪಿತೃ ಸಂಸ್ಕೃತಿಯಲ್ಲಿ, ಇತ್ತೀಚಿನ ಮಹಿಳಾ ಚಳುವಳಿಗಳ– ಆಂದೋಲನಗಳ ಒತ್ತಾಯಕ್ಕೆ ಮಣಿದು ಕೆಲವು ಸಮಸ್ಯೆಗಳತ್ತ ಗಮನಹರಿಸಿದೆ. ಅಂತಹವುಗಳಲ್ಲಿ 'ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ'ವು ಇಂದು ಜಾಗತಿಕ ಮಟ್ಟದಲ್ಲಿ ಚರ್ಚಿತವಾಗುತ್ತಿರುವ ಜ್ವಲಂತ ಸಮಸ್ಯೆಯಾಗಿದೆ.

ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ವಿವರಿಸಿಕೊಳ್ಳುವ ಮೊದಲು 'ದೌರ್ಜನ್ಯ'ವನ್ನು ಗ್ರಹಿಸಿಕೊಳ್ಳುವುದು ಇಲ್ಲಿ ಅಗತ್ಯವಾಗಿದೆ. ಮೊದಲ ಹಂತದಲ್ಲಿ ದೌರ್ಜನ್ಯವೆನ್ನುವುದು

'ಸ್ವಕೇಂದ್ರಿತ ಚಿಂತನೆ' ಈ ಪ್ರಪಂಚದಲ್ಲಿ ತನ್ನ ಅಗತ್ಯತೆಯೇನು? ಎಂಬುದನ್ನು ಮಾತ್ರ ಯೋಚಿಸುವುದು ಅದನ್ನು ಪಡೆಯುವಾಗ ಸುತ್ತಣದವರಿಗೆ ಏನಾಗುತ್ತದೆ ಎಂಬುದನ್ನು ಯೋಚಿಸದೆ ತಾನು ಭಾವಿಸಿದ್ದೆ (ಅಂದುಕೊಂಡಿದ್ದೇ) ಸರಿ. ಅದನ್ನು ಪಡೆಯಲು ಹೊರಟಾಗ ಆಗುವ ಪರಿಣಾಮಗಳ ಕುರಿತು ಯೋಚಿಸದಿರುವುದು.

ಈ ಬಗೆಯ ಮನಸ್ಥಿತಿಯನ್ನು ಹೊಂದಿರುವ ವ್ಯಕ್ತಿಗೆ ಸಂಬಂಧ ಸಹಜೀವನದ ಬಗ್ಗೆಯಾಗಲಿ, ಒಟ್ಟು ಬದುಕಿನಲ್ಲಿ ಯಾರ ಬಗ್ಗೆಯೂ ಕಾಳಜಿಯಿರುವುದಿಲ್ಲ. ಈ ಮನೋವೃತ್ತಿ ಮುಂದುವರಿದಂತೆ ತನ್ನ ಬದುಕಿನ ಬಗೆಗೂ ಲಕ್ಷ್ಯವಿರುವುದಿಲ್ಲ. ಆದರೆ ಇದು ಗಮನಕ್ಕೂ ಬರುವುದಿಲ್ಲ. ಇಂತಹ ಸ್ಥಿತಿಗೆ ಮನುಷ್ಯ ತಲುಪಿ, ಅದು ಎಸಗುವ ಕ್ರಿಯೆಯೆ ದೌರ್ಜನ್ಯವಾಗುತ್ತದೆ. ಇದು ದೈಹಿಕ, ಮಾನಸಿಕ, ಭಾವನಾತ್ಮಕ ಹಲ್ಲೆ ಆಗಿರಬಹುದು. ದೈಹಿಕ ಆಕ್ರಮಣಗಳು ಒರಟಾದ ಹಂತದಲ್ಲಿಯಾದರೆ. ಬೌದ್ಧಿಕ ಆಕ್ರಮಣಗಳು ಸೂಕ್ಷ್ಮವಾಗಿ ಕಾಣಬಹುದು. ಬೌದ್ಧಿಕ ಆಕ್ರಮಣಗಳು ಅಕ್ಯಾಡೆಮಿಕ್ (ಪಾಂಡಿತ್ಯ, ಶೈಕ್ಷಣಿಕ) ನೆಲೆಯಲ್ಲಿ ಸಾಕಷ್ಟು ಕಾಣಸಿಗುತ್ತವೆ. ಉದಾ: ವ್ಯಕ್ತಿತ್ವವನ್ನು ಬೇರೆ-ಬೇರೆ ಕಾರಣಗಳಿಗೆ ಕುರೂಪಗೊಳಿಸುವುದು ಇತ್ಯಾದಿ. ಯಾವುದೇ ಆಕ್ರಮಣಗಳಾದರೂ ಕಾರಣ ಒಂದೇ ಅದು "ಸ್ವ ಕೇಂದ್ರಿತ ಚಿಂತನೆ" ಇದರ ಆಸಕ್ತಿ. ಹಿತಾಸಕ್ತಿಗಳನ್ನು ಗಮನಿಸಿದ ಹೊರತು ಇನ್ನೇನು ಯೊಚಿಸದೆ ಆ ಸಂದರ್ಭದಲ್ಲಿ ಯಾವುದರ ಮೇಲಾದರೂ ಆಕ್ರಮಣ ಮಾಡಬಹುದು. ಅದು ದೈಹಿಕ ಹಲ್ಲೆ ಕ್ಷುಲ್ಲಕ ಕಾರಣಗಳಿಗೆ ಅವಮಾನ, ಹೊಡೆತ-ಬಡಿತ, ಹೀಯಾಳಿಸುವಿಕೆ. ಇತ್ಯಾದಿ ಬಗೆಯಲ್ಲಿ ಇನ್ನೊಂದು ಜೀವಿಗೆ ನೋವಿಗೀಡುಮಾಡುವುದು. ಹೀಗೆ ಬೇರೇನೋ ಕಾಳಜಿ, ಕಾರಣ, ವಿವೇಚನೆಯಿಲ್ಲದೆ 'ಆಕ್ರಮಣ' ಮಾಡುವುದೇ ದೌರ್ಜನ್ಯ. ಈ ತೆರನಾದ ಆಕ್ರಮಣ ಹಿಂಸೆಗಳು ಇನ್ನೊಂದು ಜೀವಿಯ ಮೇಲೆ ಎಸಗಲು ಇರುವ ಕಾರಣಗಳು ಹಲವಾರು. ತಮಗೆ ಜೀವ ಭಯವಾದಾಗ, ಎದುರಿನ ವ್ಯಕ್ತಿಯ ಆಕ್ರಮಣ ಪ್ರತಿಭಟಿಸಬೇಕಾದಂತಹ ಹಲವು ಸಂಗತಿಗಳಿಗಾಗಿ ಆಗುವ ಆಕ್ರಮಣಗಳು ಕ್ರೌರ್ಯವೇ ವಿನಃ ದೌರ್ಜನ್ಯವಲ್ಲ. ಅಂದರೆ ಯಾವ ಆಕ್ರಮಣ ಇತರೆ ಸಂಗತಿಗಳ, ಜೀವಗಳ ಬಗೆಗೆಯೂ ಕಾಳಜಿಯಿಲ್ಲದೆ, ತನ್ನ ಸ್ವ ಹಿತಾಸಕ್ತಿಗಳು ವಿವೇಚನಾ ಪೂರ್ಣವಾಗಿಯವೆಯೊ? ಎಂಬುದನ್ನು ಯೊಚಿಸದೆ, ತಕ್ಷಣದಲ್ಲಿ ತನಗೆ ಅನ್ನಿಸಿರುವಂತೆಯೇ ನಡೆಯಬೇಕು ಎನ್ನುವಂತಹ ಮನಸ್ಥಿತಿ. ಅದು ಈಡೇರದೆ ಹೋದಾಗ ಸುಲಭವಾಗಿ ತನ್ನ ಅಧೀನದಲ್ಲಿರುವವರ ಮೇಲೆ ಆಕ್ರಮಣ ಎಸಗುವುದು. ಉದಾ: ತಾಯಿ ತನ್ನ ಮಗುವಿನ ಮೇಲೆ ಕೋಪ ತೀರಿಸಿಕೊಳ್ಳುವ ಹಾಗೆ. ಆದರೆ ಇಲ್ಲಿಯದು ಸ್ವಕೇಂದ್ರಿತ ಚಿಂತನೆಯಲ್ಲದೆ ಹೋದರೂ ಅಸಹಾಯಕತೆಯಾಗಿರುತ್ತದೆ. ಇದು ಅನಾರೋಗ್ಯಕರ ಮನಸ್ಥಿತಿ. ಇಲ್ಲಿ ಅವರು ಅಸಹಾಯಕರು ಎಂಬುದರ ಪರಿವೆಯೂ ಗ್ರಹಿಕೆಗೆ ಬರುವುದಿಲ್ಲ. ಈ ಸ್ಥಿತಿಯಲ್ಲಿ ಏನಿದ್ದರೂ ಆಕ್ರಮಣವೆಸಗುತ್ತಾರೆ. ಅದು ಪಾತ್ರೆ ಕುಕ್ಕುವುದು, ಮಗುವಿಗೆ ಹೊಡೆಯುವುದು ಇತ್ಯಾದಿ. ಇಲ್ಲಿನ ಕ್ರಿಯೆಗಳಲ್ಲಿ ವ್ಯತ್ಯಾಸವಿದೆಯೇ

ವಿನಃ ಮೂಲ ಒಂದೇ ಆಗಿದೆ. ಅವರಲ್ಲಿರುವ ಅಸಮಧಾನದ ಹೊಗೆಯನ್ನು ಹೊರಹಾಕಲಾಗದೆ ಈ ತರಹದ ಅನಾರೋಗ್ಯಕರ ಸ್ಥಿತಿಯಲ್ಲಿ ವ್ಯಕ್ತವಾಗುತ್ತದೆ. ಅಂತಿಮವಾಗಿ ಇದು ಸ್ವ-ಹಿಂಸೆಯಂತಹ ಆತ್ಮ ಹತ್ಯೆಯ ಮನೋಭಾವಕ್ಕೂ ತಲುಪುವುದನ್ನು ಕಾಣಬಹುದು.

ಆದರೆ ಈ ಬಗೆಯ ದೌರ್ಜನ್ಯವು ಯಾರು ಅಧಿಕಾರದ ಸ್ಥಾನದಲ್ಲಿರುತ್ತಾರೋ? ಆಕ್ರಮಣಗಳನ್ನು ಮಾಡುವ ಅವಕಾಶಗಳನ್ನು ಹೊಂದಿರುತ್ತಾರೋ.? ಅವರು ಅವರ ಅಧೀನರ ಮೇಲೆ ಆಕ್ರಮಣವೆಸಗುತ್ತಾರೆ. ಇದು ಆಯಾ ಜಾತಿ, ವರ್ಗ, ವರ್ಣ, ಸಮಾಜ, ಸಮುದಾಯ, ಪ್ರದೇಶಗಳಿಗನುಗುಣವಾಗಿ ಭಿನ್ನವಾಗುತ್ತದೆಯಲ್ಲದೆ, ಈ ಬಗೆಯ ದೌರ್ಜನ್ಯವು ಒರಟುತನವೂ, ನಯಗಾರಿಕೆಯೂ ಆಗಿರಬಹುದು. ಅರ್ಥಾತ್ ಅಭಿವ್ಯಕ್ತಿಯಲ್ಲಿ ವ್ಯತ್ಯಾಸವೇ ವಿನಃ ಗುಣದಲ್ಲಿ ಅಲ್ಲ. ಕೆಲವರು ಇದನ್ನು ಹೊಡೆದು – ಬಡಿದು ಹಿಂಸಿಸಬಹುದು, ಇಲ್ಲವೆ ಹೀನಾಮಾನವಾಗಿ ಬಯ್ದು ಸುಮ್ಮನಾಗಬಹುದು, ಕೆಲವೊಮ್ಮೆ ಊಟಹಾಕದಿರಬಹುದು, ಮಾತನಾಡದಿರಬಹುದು, ಅಪಪ್ರಚಾರಗಳನ್ನು ಮಾಡುವುದಾಗಿರಬಹುದು. ಈ ಎಲ್ಲ ಬಗೆಯ ದೌರ್ಜನ್ಯದ ಪರಿಗಳು ಅಸ್ವಸ್ಥ ಮನಸ್ಸಿನ ಪ್ರತಿಕ್ರಿಯೆಗಳೇ ಆಗಿವೆ. ಇವು ಬರಿ ಅಸ್ವಸ್ಥಮನಸ್ಸಿನ ಪ್ರತಿಕ್ರಿಯೆಗಳಾದರೆ ಅವರಿಗಷ್ಟೇ ಚಿಕಿತ್ಸೆ ಕೊಡಬಹುದಿತ್ತು. ಆದರೆ ಈ ಆಕ್ರಮಣ ಬೇರೆಯವರ ಮೇಲೆ ಪರಿಣಾಮ ಬೀರುವುದರಿಂದ ಇದನ್ನು ಒಂದು ಸಾಮಾಜಿಕ ಸಮಸ್ಯೆಯಾಗಿ ಸ್ವೀಕರಿಸಿ, ಅದನ್ನು ಎದುರಿಸುವುದರತ್ತ ಆಲೋಚಿಸಬೇಕಾಗಿದೆ.

ಆದ್ದರಿಂದ ದೌರ್ಜನ್ಯದ ಸ್ವರೂಪವನ್ನು ವಿವರಿಸಿಕೊಳ್ಳಬೇಕಾಗಿದೆ. ಇದರ ಒಟ್ಟು ಸ್ವರೂಪವು ಜಾತಿ ಊಳಿಗಮಾನ್ಯಶಾಹಿ ವ್ಯವಸ್ಥೆಯಲ್ಲಿ ಸ್ಪಷ್ಟವಾಗಿ ಕಾಣಬಹುದು. ಶ್ರಮ ವಿಭಜನೆಯನ್ನು ಆಧರಿಸಿ ಹೇಳುವುದಾದರೆ 'ಕೈ ಕೆಸರಾದರೆ ಬಾಯಿಮೊಸರು' ಎಂದು ಹೇಳುವ ಪ್ರಕೃತಿ ನಿಯಮವು, ಸಾಮಾಜಿಕ ವ್ಯಾಖ್ಯಾನದಲ್ಲಿ ಭಿನ್ನವಾಗುತ್ತದೆ. ಇದು ಜೀತ ಪದ್ಧತಿ, ಜಾತಿಪದ್ಧತಿ, ಒಡೆಯ-ಆಳಿನ ಪರಿಕಲ್ಪನೆಯಲ್ಲಿರುವ ಬಲವಂತ ಸಮಾಜದಲ್ಲಿ ಹೆಚ್ಚು ಖಚಿತವಾಗಿ ಕಾಣಬಹುದು.

ಉದಾ:- ಜಾತಿ ನೆಲೆಯಲ್ಲಿ ದೌರ್ಜನ್ಯವನ್ನು ವಿವರಿಸುವುದಾದರೆ, ಬದನವಾಳುವಿನಲಿ ದಲಿತರ ಮೇಲೆ ಸವರ್ಣೀಯರು ಎಸಗಿದ ದೌರ್ಜನ್ಯ, ಕಂಬಾಲಪಲ್ಲಿಯಲ್ಲಿ ದಲಿತರನ್ನು ಸಜೀವ ದಹನ ಮಾಡಿದ್ದು, ಬೆಂಡಗೆಯಲ್ಲಿ ಯಾವುದೋ ಸಣ್ಣ ಕಾರಣಕ್ಕೆ ಅನ್ನ ತಿನ್ನುವ ಬಾಯಿಗೆ ಮಲ ತಿನ್ನಿಸಿದ್ದು, ಹಲಗೆ ಬಾರಿಸಲಿಲ್ಲ, ಸತ್ತ ಪ್ರಾಣಿಯನ್ನು ಹೊರತೆಗಿಯಲ್ಲಿಲ್ಲವೆಂಬ ಕಾರಣಕ್ಕೆ ಊರಿನಿಂದ ಬಹಿಷ್ಕಾರ ಹಾಕಿದ್ದು, ಬುದ್ಧಿವಂತರಾಗಿ ಶೈಕ್ಷಣಿಕ ಪ್ರಗತಿ ಹೊಂದಿದವರನ್ನು ಊರಿನಲ್ಲೆ ಕೊಲೆಗೈದದ್ದು, ಗೋಧ್ರಾ ಹತ್ಯಾಕಾಂಡ, ಬಾಬ್ರಿ ಮಸೀದಿ ಹೋರಾಟ ಇತ್ಯಾದಿ, ಹೀಗೆ ಪಟ್ಟಿಮಾಡುತ್ತ ಹೋದರೆ ದೌರ್ಜನ್ಯದ ಸ್ವರೂಪವು ಇತಿಹಾಸದುದ್ದಕ್ಕೂ ದಾಖಲೆಯಾಗಿರುವುದು ಕಂಡಬರುತ್ತದೆ.

ಹೀಗೆ ದೌರ್ಜನ್ಯ ಎಸಗುವವರಿಗೆ, ಯಾರ ಮೇಲೆ ಎಸಗುತ್ತಾರೋ ಅವರಿಂದ ಇವರಿಗೆ ಯಾವುದೇ ಬಗೆಯಲ್ಲೂ ತೊಂದರೆಗಳಾಗಿರುವುದಿಲ್ಲ. ಆಕ್ರಮಣಕಾರರೆ ಕೆಲವೊಮ್ಮೆ ಇವರಿಂದ

ಅಡ್ಡಿ ಎಂದು ತಮ್ಮಷ್ಟಕ್ಕೆ ಊಹಿಸಿಕೊಂಡಿರುವುದಾಗಲಿ, ಇನ್ನೂ ಕೆಲವೊಮ್ಮೆ ಅದರ ವಿವೇಚನೆಯೂ ಇಲ್ಲದೆ, ಅವರ ಅಧೀನರ ಮೇಲೆ, ಅಸಹಾಯಕರ ಮೇಲೆ ಆಕ್ರಮಣ ಎಸಗಲಾಗುತ್ತದೆ. ಅದು ಚಿಕ್ಕಮಕ್ಕಳನ್ನು ಹೊಡೆಯುವುದು, ಅಪ್ಪ-ಅಮ್ಮಂದಿರು ಮಗಳ ಮೇಲೆ ಹಾಕುವ ನಿರ್ಬಂಧ, ಗಂಡ-ಹೆಂಡತಿಯ ಮೇಲೆ ಹೇರುವ ನಿರ್ಬಂಧ ಇತ್ಯಾದಿ ಮನೆಯೊಳಗಿನ ಸಣ್ಣ ಆವರಣದಿಂದ ಹಿಡಿದು; ವ್ಯಕ್ತಿ ಸಂಬಂಧದಿಂದ, ಸಮಾಜ ವ್ಯವಸ್ಥೆಯೊಳಗಿನ ಯಾವುದೇ ಸಂಬಂಧದೊಳಗೆ ಆಗಬಹುದು.

ಉದಾ:- ಅಮೇರಿಕದಂತಹ ದೇಶ ಹಣದಿಂದ, ಇತ್ಯಾದಿಯಿಂದ ಅನುಕೂಲವಾಗಿದ್ದು, ಇರಾಕ್‌ನಂತಹ ದೇಶಕ್ಕೆ ಪೆಟ್ರೋಲ್‌ಬೇಕೆಂದು ಒತ್ತಾಯಿಸುವುದು, ಇದನ್ನು ತರ್ಕಕ್ಕೆ ಹೆಚ್ಚಿದರೆ, ಪೆಟ್ರೋಲ್ ಇರಾಕ್‌ನವರದು ಕೊಡುವ ನಿರ್ಧಾರ ಮಾಡಬೇಕಿರುವ ಹಕ್ಕಿರುವುದು ಅವರಿಗೆ, ಆದರೆ ಪ್ರಬಲ ರಾಷ್ಟ್ರದ ಆಕ್ರಮಣದಿಂದ ಕೊಡಲೆಬೇಕಾದ ಅನಿವಾರ್ಯತೆ ಸ್ಪಷ್ಟವಾಗುತ್ತದೆ. ಇದು ಎಳೆಯ ಮಕ್ಕಳ ಆಟಿಕೆಗಳಲ್ಲಿಯೂ ಕಾಣಬಹುದು. ಇಲ್ಲಿ ನ್ಯಾಯ, ತರ್ಕಗಳ ಯಾವ ಸಂಗತಿಗೂ ಅವಕಾಶ ಇರುವುದಿಲ್ಲ. ಇದು ಸರಸ, ಸಾಮ ಭೇದ, ದಂಡಗಳಲ್ಲಿಯೂ ಕಾಣಬಹುದಾಗಿದೆ. ಇಂಥದೊಂದು ಮನಸ್ಥಿತಿಯಲ್ಲಿ ಆಕ್ರಮಣ ಮಾಡುವುದು ಊಟ, ತಿಂಡಿ, ಉಸಿರಾಟದಷ್ಟೆ ನಿರರ್ಗಗಳವಾಗಿರುತ್ತದೆ. ಇದಕ್ಕೆ ಯಾವ ಪೂರ್ವಭಾವಿ ಸಿದ್ಧತೆಯು ಇರುವುದಿಲ್ಲ.

ಈ ಬಗೆಯ ದೌರ್ಜನ್ಯವನ್ನು ಆರ್ಕ್ಸ್‌ಫರ್ಡ್ ನಿಘಂಟುವು ವ್ಯಕ್ತಿ ಅಥವಾ ಅವನ ಆಸ್ತಿಯನ್ನು ಬಲಪ್ರಯೋಗದಿಂದ ಹಾನಿ ಮಾಡುವುದು, ಮಾನಸಿಕ ನೋವು ಮತ್ತು ರಕ್ತಹರಿಸುವಿಕೆಯಾಚೆಗೂ ಇದು ಹೋಗಿ ನಿಲ್ಲುವುದು, ಬಹುಮುಖ್ಯವಾಗಿ ನಮ್ಮ ಉದ್ದೇಶಗಳ ಈಡೇರಿಕೆಗೆ ಒತ್ತಾಯಪೂರ್ವಕವಾಗಿ ಬೇರೆಯವರ ವೈಯಕ್ತಿಕ ಸ್ವಾತಂತ್ರ್ಯದಲ್ಲಿ ಮೂಗು ತೂರಿಸುವ ಮೂಲಕ ಸಂಯಮಹೀನವಾಗಿ ಅಥವಾ ಹಿಂಸಾತ್ಮಕವಾಗಿ ವರ್ತಿಸುವುದು ಅಥವಾ ಮಾತಿನ ಮೂಲಕ ಅವಹೇಳನ ಮಾಡುವುದು. ಅಂತಿಮವಾಗಿ ಆವೇಶ ಅಥವಾ ಮನೋವಿಕಾರದಿಂದ ವರ್ತಿಸುವುದೇ ದೌರ್ಜನ್ಯ. ಎಂದು ವಿವರಿಸಿದ್ದಾರೆ. [ಉಲ್ಲೇಖ: ವುಮೆನ್ ವೈಯಲೆನ್ಸ್: ಎಸ್. ಎನ್. ಡಿ. ಟಿ.][೧]

ಡಾ. ಮೈತ್ರೇಯಿ ಕೃಷ್ಣರಾಜ್‌ರವರು ಸಾಮಾನ್ಯವಾಗಿ ದೌರ್ಜನ್ಯವೆಂದರೆ ಅಧಿಕಾರವನ್ನು ಸಾಧಿಸಲು ಅಥವಾ ಅನುಭವಿಸಲು ಒಬ್ಬರು ಇನ್ನೊಬ್ಬರನ್ನು ನಿಯಂತ್ರಿಸುವ ಪರಿಣಾಮಕಾರಿ ತಂತ್ರಗಾರಿಕೆಯೆ ಆಗಿದೆ. ಇದರಿಂದ ಅಧಿಕಾರವನ್ನು ಶಾಶ್ವತವಾಗಿ ಉಳಿಸಿಕೊಳ್ಳಲು, ಅಧಿಕಾರ ಹೀನರ ಮೇಲೆ ಒತ್ತಾಯ ಪೂರ್ವಕ ನಿರ್ಭಂಧಗಳನ್ನು ಹೇರುವ ಮೂಲಕ ಹಿಂಸಿಸುವುದರ ಜೊತೆಗೆ ಅವರ ಅಧಿಕಾರ ಹೀನತೆಯನ್ನು ಎತ್ತಿ ತೋರಿಸುವುದಾಗಿದೆ. ಹೀಗೆ ದೌರ್ಜನ್ಯದ ನಿಗೂಢ ಬಗೆಯನ್ನು ಗಮನಿಸಿದಾಗ, ಯಾವ ಸಾಮಾಜಿಕ ಸಂಘಟನೆಯ ಕ್ರಮಾನುಗತ ವ್ಯವಸ್ಥೆಯಲ್ಲಿ ಪ್ರಧಾನ- ಅಧೀನ ಗುಂಪುಗಳ ವರ್ಗೀಕರಣಗಳಿವೆಯೋ ಅಲ್ಲೆಲ್ಲವೂ ಸಹ ದೌರ್ಜನ್ಯದೊಂದಿಗೆ

ಅನಿವಾರ್ಯವಾಗಿ ಚಲಿಸಲೆಬೇಕೆಂಬಂತೆ ಭ್ರಮೆಯನ್ನು ಮೂಡಿಸಲಾಗಿದೆ. ಹಾಗೂ ಎಲ್ಲ ಅಧಿಕಾರಗಳ ಮೂಲಕ ಹೇರಲಾದ ಒತ್ತಡಗಳನ್ನು, ಆಕ್ರಮಣಗಳನ್ನು ಶಿಕ್ಷಾರ್ಹವೆಂದು ಅಂಗೀಕರಿಸದಿರುವುದು ಸಾಮಾಜೀಕರಣದ ತಂತ್ರಗಾರಿಕೆಯೆ ಆಗಿದೆಯೆಂದು ವ್ಯಾಖ್ಯಾನಿಸಿದ್ದಾರೆ. [ಉಲ್ಲೇಖ : ವುಮೆನ್ ಆ್ಯಂಡ ವಯಲೆನ್ಸ್ : ಎ ಕಂಟ್ರಿ ರಿಪೋರ್ಟ್][3]

ಮೇಲಿನ ಎರಡು ವ್ಯಾಖ್ಯಾನಗಳಲ್ಲಿನ ಪ್ರಮುಖವಾಗಿ ಕಂಡುಬರುವ ಅಂಶಗಳು ದೌರ್ಜನ್ಯವೆಂದರೆ ಸ್ವಕೇಂದ್ರಿತ ಚಿಂತನೆಯೆಂದು ಆಕ್ಸಫರ್ಡ ನಿಘಂಟು ವಿವರಿಸಿದರೆ, ಸಾಮಾಜಿಕ ವ್ಯವಸ್ಥೆಯ ಅಸಮಾನ ಅಧಿಕಾರ ಸಂಬಂಧಗಳೇ ದೌರ್ಜನ್ಯದ ಮೂಲ ಸೆಲೆಯೆಂದು ಮೈತ್ರೇಯಿ ಕೃಷ್ಣರಾಜ್‌ರವರು ವ್ಯಾಖ್ಯಾನಿಸಿದ್ದಾರೆ. ಹೀಗೆ ದೌರ್ಜನ್ಯ ಮತ್ತು ಅಧಿಕಾರಕ್ಕೆ ಅವಿನಾಭಾವ ಸಂಬಂಧವನ್ನು ಎತ್ತಿ ಹಿಡಿದ ಈ ವ್ಯಾಖ್ಯಾನದಲ್ಲಿ ದೌರ್ಜನ್ಯದ ಸ್ವರೂಪ, ಮೂಲನೆಲೆಯು ಅಧಿಕಾರದೊಂದಿಗೆ ತಳಕು ಹಾಕಿಕೊಂಡಿರುವುದರಿಂದ ಇಲ್ಲಿ ಅಧಿಕಾರವನ್ನು ವ್ಯಾಖ್ಯಾನಿಸಿಕೊಳ್ಳುವುದು ಅಗತ್ಯವಾಗಿದೆ.

**ಹಿಂಸೆ, ದೌರ್ಜನ್ಯ – ಅಧಿಕಾರದ ನೆಲೆಗಟ್ಟು.**

ಭಾರತದ ಸನ್ನಿವೇಶದಲ್ಲಿ ಅಧಿಕಾರವನ್ನು ವಿವರಿಸಿಕೊಳ್ಳುವುದಾದರೆ, ಅಧಿಕಾರ, ಜಾತಿ, ವರ್ಗ, ಪುರೋಹಿತ ಶಾಹಿ, ಧರ್ಮ, ಇವುಗಳು ಒಂದಕ್ಕೊಂದು ಸರಪಳಿಯಂತೆ ಸೇರಿಕೊಂಡಿವೆ. ಈ ಕುರಿತು ಡಾ.ಬಿ.ಆರ್. ಅಂಬೇಡ್ಕರ್‌ರವರು ಜಾತಿಯನೆಲೆಯಲ್ಲಿ ಅಧಿಕಾರವನ್ನು ವಿವರಿಸುವಾಗ ಅಸ್ಪೃಶ್ಯತೆಯ ಬೇರು ಜಾತಿ ವ್ಯವಸ್ಥೆಯಲ್ಲಿದೆ, ಜಾತಿ ವ್ಯವಸ್ಥೆಯ ಬೇರು ಧರ್ಮಾವಲಂಬಿಯಾದ ವರ್ಣಾಶ್ರಮದಲ್ಲಿದೆ, ವರ್ಣಾಶ್ರಮದ ಬೇರು ಬ್ರಾಹ್ಮಣ ಧರ್ಮದಲ್ಲಿದೆ, ಬ್ರಾಹ್ಮಣ ಧರ್ಮದ ಬೇರು ಅಧಿಕಾರ ಅಥವಾ ರಾಜಕೀಯ ಶಕ್ತಿಯಲ್ಲಿದೆ [ಉಧೃತ : ಆಧುನಿಕ ಕನ್ನಡ ನಾಟಕಗಳಲ್ಲಿ ಪ್ರಭುತ್ವ, ಯಾಜಮಾನ್ಯತೆ ಹಾಗೂ ಅಧಿಕಾರ ಕೇಂದ್ರಗಳ ಪ್ರತಿನಿಧಿಕರಣ : ವಸ್ತುನಿಷ್ಠ ಅಧ್ಯಯನ][೪] ಅಧಿಕಾರದೊಂದಿಗೆ ತಳಕು ಹಾಕಿಕೊಂಡಿರುವ ಪರಿಯನ್ನು ಈ ವ್ಯಾಖ್ಯಾನವು ಹೇಳುತ್ತದೆ. ಈ ನೆಲೆಯಲ್ಲಿ ಅಧಿಕಾರ ಪ್ರತಿ ವ್ಯಕ್ತಿಯ ಬದುಕಿನಲ್ಲಿ ಇಲ್ಲದೆ ಇಲ್ಲ, ಮನುಷ್ಯರ ಅಪರಿಮಿತ ಆಕಾಂಕ್ಷೆಗಳಲ್ಲಿ ಅಧಿಕಾರವು ಒಂದು ಎನ್ನಬಹುದಾಗಿದೆ.

ಸಾಮಾಜಿಕವಾಗಿ ದತ್ತವಾದ ಅಧಿಕಾರಕ್ಕಾಗಿ ನಡೆದ ಕಲಹಗಳು, ಅದನ್ನು ಶಾಶ್ವತವಾಗುಳಿಸಿಕೊಳ್ಳುವಲ್ಲಿ ದೈನಂದಿನ ಬದುಕಿನಲ್ಲಿ ಇಂದಿಗೂ ನಡೆಯುವ ಸಂಘರ್ಷಗಳು, ಈ ಕಾರಣಕ್ಕಾಗಿಯೇ ಎಸಗುತ್ತಿರುವ ಹಿಂಸೆ – ದೌರ್ಜನ್ಯಗಳ ಉದಾಹರಣೆಗಳು ಚರಿತ್ರೆಯಲ್ಲಿ ಸಾಕಷ್ಟು ಹೇರಳವಾಗಿವೆ. ಇಂದಿಗೂ ಹೆಚ್ಚುತ್ತಿರುವ ಜಾತಿ ನೆಲೆಯ ಸಂಘರ್ಷಗಳು, ಲಿಂಗಾಧಾರಿತ ದೌರ್ಜನ್ಯಗಳು ಅಧಿಕಾರವನ್ನು ಮತ್ತು ಪಡೆದ ಅಧಿಕಾರವನ್ನು ಶಾಶ್ವತವಾಗಿ ಉಳಿಸಿಕೊಳ್ಳುವ ಹೆಬ್ಬಯಕೆಯಿಂದಲೇ ಆಗಿವೆಯೆಂಬುದನ್ನು ಗ್ರಹಿಸಬಹುದಾಗಿದೆ. ಅಧಿಕಾರ ತಂತ್ರಗಳಾದ ಬಹುಮಾನ, ಪ್ರಭಾವ, ಸುಳ್ಳು, ವಂಚನೆ, ಜಾಣ್ಮೆ, ಒತ್ತಾಯ, ನಿರ್ದೇಶನ, ಇವುಗಳನ್ನು ಪೋಷಿಸಲು ಜಾತಿ, ಲಿಂಗ, ಧರ್ಮ, ಸಂಸ್ಕೃತಿಯನ್ನು ಹೆಚ್ಚು ಪ್ರಖರವಾಗಿ ಬಳಸಲಾಗಿದೆಯಾದ್ದರಿಂದ ಇವುಗಳನ್ನೇ ಅಧಿಕಾರದ ಮೂಲ

ನೆಲೆಯೆಂದು ಹೇಳಬಹುದಾಗಿದೆ. ಈ ಬಗೆಯ ಅಧಿಕಾರವನ್ನು ಕುರಿತು ಅನೇಕ ತಜ್ಞರು ವ್ಯಾಖ್ಯಾನಿಸಿದ್ದಾರೆ.

**ಅಧಿಕಾರದ ವ್ಯಾಖ್ಯಾನ ಮತ್ತು ಸ್ವರೂಪ**

POWERನ ಇಂಗ್ಲಿಷ್ ಪದಕ್ಕೆ ಸಂವಾದಿಯಾಗಿ 'ಅಧಿಕಾರ' ಎಂಬ ಪದವು ಬಳಸಲಾಗುತ್ತಿದೆ. ಇದರ ಸಾಮಾನ್ಯ ಅರ್ಥ, ಶಕ್ತಿ, ಸಾಮರ್ಥ್ಯ, ಪ್ರಭುತ್ವ, ಆಳ್ವಿಕೆ, ಆಡಳಿತ ಎಂದಾಗಿದೆ. "ವ್ಯಕ್ತಿಯೊರ್ವನು ಇತರರ ಮೇಲೆ, ತನ್ನ ಅಭಿಪ್ರಾಯವನ್ನು ಹೇರುವ ಸಾಮರ್ಥ್ಯವೇ ಅಧಿಕಾರ"ವೆಂದು ಸ್ಕವರ್ಜನ ಬರ್ಜರ್‌ರವರು ಹೇಳಿದರೆ, ಮಾರ್ಗೆಂಥೊ ಅವರು "ಬೇರೆಯವರ ಮನಸ್ಸು ಮತ್ತು ಕಾರ್ಯಗಳ ಮೇಲೆ ಒಬ್ಬನು ಹೊಂದಿರುವ ಸಾಮರ್ಥ್ಯವೇ ಅಧಿಕಾರ" ಎಂದಿದ್ದಾರೆ [ಉಧೃತ : ಭಾಗ್ಯಶ್ರೀ ಮಲ್ಲಿಕಾರ್ಜುನ್: ರಾಜಕೀಯ ಭಾಧ್ಯತೆಗಳ ತಳಹದಿ][೪]

ಇಚ್ಛೆಗೆ ಅನುಗುಣವಾದ ಪರಿಣಾಮಗಳನ್ನು ಉತ್ಪಾದಿಸುವುದೇ ಅಧಿಕಾರ ಎಂದು ವ್ಯಾಖ್ಯಾನಿಸಬಹುದು. ಹೀಗಾಗಿ ಅದೊಂದು ಪರಿಣಾಮಾತ್ಮಕ ಪರಿಕಲ್ಪನೆ. "ವ್ಯವಸ್ಥೆಯ ಸ್ವರೂಪದ ಬಗ್ಗೆ ತರಬೇತಿ ಹೊಂದಿದ ಅಧಿಕಾರಶಾಹಿಯು ಮಾನವನನ್ನು ಯಂತ್ರದಂತೆ ಭಾವಿಸುತ್ತದೆ. ತನ್ನ ಅನುಕೂಲಕ್ಕೆ ತಕ್ಕಂತೆ ಕಾರ್ಯನಿರ್ವಹಿಸುವಂತೆ ಅದನ್ನು ಮಾರ್ಪಡಿಸುತ್ತದೆ. ಅಂಥ ಆಡಳಿತ ಯಂತ್ರವು ಇತಿಹಾಸದ ಯಾವುದೇ ದೌರ್ಜನ್ಯಕ್ಕಿಂತ ಹೆಚ್ಚು ಅಮಾನವೀಯವಾಗಿ ನಡೆದುಕೊಳ್ಳುತ್ತದೆ." [ಉಲ್ಲೇಖ : ಅಧಿಕಾರ ಮಿಂಮಾಂಸೆ ಮೂಲ : ಬ್ರರ್ಟಂಡ್ ರಸೆಲ್. ಅನು: ಪಿ.ವಿ.ನಾರಾಯಣ][೫]

ಅಧಿಕಾರ ಶಾಹಿಯು ಮಾನವನನ್ನು ಯಂತ್ರದಂತೆ ಭಾವಿಸಿ ತನ್ನ ಅನುಕೂಲಕ್ಕೆ ತಕ್ಕಂತೆ ಕಾರ್ಯನಿರ್ವಹಿಸುವಂತೆ ಮಾರ್ಪಡಿಸುವ ಪರಿಯನ್ನು ಮಹಿಳಾ ನೆಲೆಯಲ್ಲಿ ನಿಂತು ವಿವರಿಸುವುದಾದರೆ, ಅಧಿಕಾರಶಾಹಿಯು ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಪುರುಷನ ಕೈಯಲ್ಲಿರುವುದರಿಂದ, ವ್ಯವಸ್ಥೆಯು ಹೆಣ್ಣನ್ನು ಒಂದು ಯಂತ್ರದಂತೆ ಪರಿಭಾವಿಸಿ, ತನ್ನ ಅನುಕೂಲ, ಅಗತ್ಯಗಳಿಗೆ ಅನುಗುಣವಾಗಿ ಮಹಿಳಾ ಬದುಕನ್ನು ರೂಪಿಸಲಾಗಿದೆ.

ಉದಾ: ಗೃಹಕೃತ್ಯ ಕುಟುಂಬದ ಪೋಷಣೆಯ ಹೊಣೆಯು ಗಂಡಿನದೆಂದು ಹೇಳುವುದಾದರು, ಅಲ್ಲಿ ಕೆಲಸ ಕಾರ್ಯಗಳನ್ನು ಯಂತ್ರದಂತೆ ನಿರ್ವಹಿಸುವವಳು ಮಹಿಳೆಯೆ ಆಗಿದ್ದಾಳದರೂ, ಅವಳ ವೈಯಕ್ತಿಕ ಬದುಕಿನಿಂದ ಮೊದಲುಗೊಂಡು ಯಾವುದೇ ಸಂಗತಿಯನ್ನು ಸಹ ಅವಳು ತನ್ನ ಹಕ್ಕನ್ನು ಚಲಾಯಿಸುವ ನಿರ್ಧಾರ ಹೇಳುವ ಅಧಿಕಾರವನ್ನು ಹೊಂದಿರುವುದಿಲ್ಲ. ಪುರುಷ ಬದುಕಿಗೆ ಅವಳು ಪೂರಕವಾಗಿ ಬದುಕುತ್ತಿರುವಾಗಲೂ ಪುರುಷ ಸಮುದಾಯ ಅವಳ ಮೇಲೆ ನಿರಂತರ ಆಕ್ರಮಣ, ದೌರ್ಜನ್ಯ-ಹಿಂಸೆಗಳನ್ನು ಮಾಡುತ್ತಲೆ ಬಂದಿವೆ. ಅಂತೆಯೇ ರಸೆಲ್‌ರವರು ವಿವರಿಸುವ ಅಧಿಕಾರದ ಬಗೆಗಳಲ್ಲಿ ರಾಜ್ಯಾಧಿಕಾರ-ಸೈನ್ಯಾಡಳಿತದ ವರ್ಗಶ್ರೇಣಿಕರಣವನ್ನು ಲಿಂಗ ಶ್ರೇಣಿಕರಣದಲ್ಲಿನ ಗಂಡು-ಹೆಣ್ಣಿನ ಸಂಬಂಧದಲ್ಲಿಯೂ ಕಾಣಬಹುದು. ಕುಟುಂಬದ ಸಮಸ್ತ ಕೆಲಸ ಕಾರ್ಯಗಳ ಜವಾಬ್ದಾರಿ ಹೆಣ್ಣಿನದೆ ಆಗಿದ್ದು, ಗಂಡು ಅವಲಂಬಿತನಾದರೂ ಸಹಿತ, ಸ್ತ್ರೀ

ಸಮುದಾಯವನ್ನು ಅಧೀನದಲ್ಲಿರಿಸಿಕೊಳ್ಳುವ ಅಧಿಕಾರ ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಪುರುಷನಿಗೆ ಸಾಮಾಜಿಕವಾಗಿ ದತ್ತವಾದ ಅಧಿಕಾರ. ಅನೇಕ ಈ ಬಗೆಯ ಅರಿವು ಕೂಡ ಆಗದಂತೆ ರಾಜ್ಯಾಧಿಕಾರ–ಸೈನ್ಯಾಡಳಿತಕ್ಕೆ, ಪುರುಷಾಧಿಕಾರ ಸ್ತ್ರೀ ಸಮುದಾಯಕ್ಕೆ ಭ್ರಮಾತ್ಮಕತೆಯನ್ನು ಸೃಷ್ಟಿಸುವ ಮೂಲಕ ನಿಯಂತ್ರಣಕ್ಕೆಳೆದುಕೊಂಡಿದೆ. ಅಲ್ಲಲ್ಲಿ ಅಲ್ಪ ಪ್ರಮಾಣದ ಅರಿವಿನಿಂದಾಗಿ ಪ್ರತಿಭಟನೆಗಳು ಕಾಣಿಸಿಕೊಂಡಾಗ ಅದನ್ನು ನಿಯಂತ್ರಿಸಲು ದೌರ್ಜನ್ಯ–ಹಿಂಸೆಯನ್ನು ಅಸ್ತ್ರಗಳಾಗಿ ಬಳಸುವ ಮೂಲಕ ನಿಯಂತ್ರಣವನ್ನು ಹೆಚ್ಚು ಗಟ್ಟಿಗೊಳಿಸುತ್ತದೆ. ಅಧಿಕಾರವನ್ನು ಭದ್ರಪಡಿಸಿಕೊಳ್ಳುತ್ತವೆ.

'ಪವರ್'ನ ಅಸ್ತಿತ್ವವನ್ನು ಕುರಿತು ಹೇಳುವ ಗ್ರಾಂಮ್ಸಿಯವರು ದಮನಕ್ಕೊಳಗಾದವರು ದಮನಕಾರರ ಯಜಮಾನಿಕೆಯನ್ನು ಒಪ್ಪಿಕೊಂಡಾಗ 'ಪವರ್'ಗೆ ಅಸ್ತಿತ್ವ ಪ್ರಾಪ್ತವಾಗುತ್ತದೆಯೆನ್ನುವ ಗ್ರಾಂಮ್ಸಿಯವರ ಮಾತು ನಮ್ಮ ಬಂಧನಕ್ಕೆ ನಾವೆ ಕಾರಣರು ಎಂಬ ಸ್ತ್ರೀವಾದಿ ಚಿಂತಕಿ ಸಿಮೋನ್ ದ ಬೋವಾರವರ ಮಾತಿಗೆ ಪೂರಕವಾಗಿದೆ.

'ಮೌನಸಮ್ಮತಿಯ ಪಾತ್ರ' ಇಲ್ಲಿ ಮುಖ್ಯವಾಗಿದೆ. ದಮನಕ್ಕೆ ಒಳಗಾದವರು ಮೌನವಾಗಿ ದಮನವನ್ನು ಒಪ್ಪಿಕೊಳ್ಳುವಂತಹ ಸಾಮಾಜಿಕ ವ್ಯವಸ್ಥೆಯನ್ನು ದಮನಕಾರರು ಕಟ್ಟಿರುತ್ತಾರೆ. ಇದನ್ನು **"ಕಲ್ಚರ್ ಆಫ್ ಸೈನ್ಸ್"** ಎನ್ನಲಾಗಿದೆ.

ಪುರುಷ ಪ್ರಧಾನ ವ್ಯವಸ್ಥೆಯು ಮಹಿಳಾ ಬದುಕಿನ ಸುತ್ತ ಹೆಣೆದಿರುವ ಸಾಮಾಜಿಕ ವ್ಯವಸ್ಥೆಗೆ ಗ್ರಾಂಮ್ಸಿಯ ಅಧಿಕಾರ ಸಿದ್ಧಾಂತವನ್ನು ವಿಸ್ತರಿಸಬಹುದು ಅಥವಾ ಹೋಲಿಸಬಹುದಾಗಿದೆ. ಈ ರೀತಿಯ ದಮನವು ಅವರ ಗಮನಕ್ಕೆ ಬಾರದಂತಹ ವಿಸ್ಮೃತಿಯನ್ನು ಪುರುಷ ಚಿಂತನೆಗಳು ಮಹಿಳಾ ಬದುಕಿನಲ್ಲಿ ಸೃಷ್ಟಿಸಿವೆ. ಸ್ವತಃ ಮಹಿಳೆಯೇ ಈ ದಮನಕ್ಕೆ ಒಳಗಾಗುವ ಪ್ರಕ್ರಿಯೆಯನ್ನು ಸಹ ಕಾಣಬಹುದಾಗಿದೆ. ಉದಾ:– ಗಂಡ, ತಂದೆ ಅವಳ ಸಾರ್ವಜನಿಕ ವಲಯದ ಭಾಗವಹಿಸುವಿಕೆಗೆ ನಿರಾಕರಿಸಿದರೆ, ಅದನ್ನು ಅವಳ ಮೇಲೆ ಅವರಿಗಿರುವ ಪ್ರೀತಿಯೆಂದೋ, ಕಾಳಜಿಯೆಂದೋ ಸಂತಸ ಪಡುವಂತಹ ಭ್ರಮಾತ್ಮಕ ಬದುಕನ್ನು ಬದುಕುವ ಅನೇಕ ಮಹಿಳೆಯರ ಉದಾಹರಣೆಗಳು ವಾಸ್ತವದಲ್ಲಿವೆ.

'ಅಧಿಕಾರ ನಿರಂಕುಶವಲ್ಲ ಅದು ಸಂಬಂಧವಾದಿಯಾಗಿರುತ್ತದೆ' ಎಂದು ವ್ಯಾಖ್ಯಾನಿಸುವ ಗಾಂಧಿ ಚಿಂತನೆಯು ಬರ್ಟ್ರ್ಂಡ ರೆಸೆಲ್‌ರ ರಾಜಾಧಿಕಾರ ವ್ಯಾಖ್ಯಾನವನ್ನು ಪ್ರಶ್ನಿಸುವಂತೆ ಮಾಡುತ್ತಿದೆಯಾದರೂ ರಾಜ್ಯಾಧಿಕರ ಮತ್ತು ಸೈನ್ಯಾಡಳಿತದ ಬಗ್ಗೆ ಸಾಮಾಜಿಕ ವ್ಯವಸ್ಥೆಯಲ್ಲಿ ಸೃಷ್ಟಿಸಲಾದ ನಂಬುಗೆಗಳು ಅದೇ ಗ್ರಾಮ್ಸಿಯ ಮೌನ ಸಮ್ಮತಿಯ ಕಲ್ಚರ್ ಆಫ್ ಸೈನ್ಸನ ಸಿದ್ಧಾಂತದಿಂದ ಒಪ್ಪುವಂತೆ ಮಾಡುತ್ತದೆ.

ಒಟ್ಟಿನಲ್ಲಿ ಮೌನ ಸಮ್ಮತಿಯಲ್ಲಿ ಅಧಿಕಾರದ ಅಸ್ತಿತ್ವವನ್ನು ಗುರುತಿಸಿರುವ ಗ್ರಾಂಮ್ಸಿ ಇಂತಹ ಸಾಮಾಜಿಕ ವ್ಯವಸ್ಥೆಯನ್ನು ಮೀರುವ ಕುರಿತು ಚರ್ಚಿಸುವುದು ಕಂಡುಬಂದಿಲ್ಲ.

ಅಧಿಕಾರದ ಕುರಿತ ಚರ್ಚೆಗೈಯುವ ಸಂದರ್ಭದಲ್ಲಿ ಫ್ಯೂಕೊನ ಚಿಂತನೆಯನ್ನು ಪರಿಗಣಿಸದೆ ಅದನ್ನು ತಳ್ಳಿಹಾಕುವಂತಿಲ್ಲ. ಫ್ರೆಂಚ್ ತತ್ವಶಾಸ್ತ್ರಜ್ಞನ ಸಂಕಥನದ ವ್ಯಾಖ್ಯಾನವೂ ಯಾವುದೇ ಶತಮಾನದಲ್ಲಿನ ಅಧಿಕಾರ ಮತ್ತು ಅವುಗಳ ಸ್ವಸಂಬಂಧದ ಸ್ವರೂಪದ ಚಿಂತನೆಯಾಗಿದೆ. ಫ್ಯೂಕೊ 'ಜ್ಞಾನವೇ ಅಧಿಕಾರ' ಎಂದು ಹೇಳಿರುವ ಹೇಳಿಕೆಯು ಸಾಕಷ್ಟು ಪ್ರಚಾರವನ್ನು ಪಡೆದಿದೆ. (ವಸಾಹತೋತ್ತರ ಚಿಂತನೆ: ಸಿ.ಎನ್. ರಾಮಚಂದ್ರನ್)[೧]

ಫ್ಯೂಕೋನ ಡಿಸ್‌ಕೋರ್ಸ್ ಕಲ್ಪನೆಯು "ಭಾಷೆ ಮತ್ತು ಸಾಮಾಜಿಕ ಸಂಸ್ಥೆಗಳ ನಡುವಿನ ಸಂಬಂಧ ಹಾಗೂ ಜ್ಞಾನದ ವಿಶಿಷ್ಟ ರೂಪಗಳನ್ನು ಮತ್ತು ಸಾಂಸ್ಥಿಕ ನಿಯಮ, ನಿಬಂಧನೆಗಳನ್ನು ಗುರುತಿಸುತ್ತದೆ. ಈತನ ಪ್ರಕಾರ ಒಂದು ಜ್ಞಾನ ಕ್ಷೇತ್ರದ ಪ್ರಭಾವಿ ವಿದ್ವಾಂಸರ ಸಮೂಹ, ಮಾನ್ಯತೆ ಪಡೆದ ಕೃತಿಗಳು ಹಾಗೂ ನಿಯತಕಾಲಿಕ ಸಮೂಹ, ಜ್ಞಾನ ಪ್ರಸಾರ ಕೇಂದ್ರಗಳಾದ ಶಾಲಾ ಕಾಲೇಜು, ವಿಶ್ವವಿದ್ಯಾಲಯಗಳು ಮತ್ತು ಅಕಾಡೆಮಿಗಳು, ಇವುಗಳನ್ನು ಪೋಷಿಸುವ ಸರಕಾರದ ಅಂಗಗಳು ಇವೆಲ್ಲವನ್ನು ಸಂಸ್ಥೆಗಳು ಅಥವಾ ಅಧಿಕಾರ ಕೇಂದ್ರಗಳು ಎಂದು ಒತ್ತಡಗಳಿಲ್ಲದೆ ಯಾವ ಜ್ಞಾನವೂ, ಜ್ಞಾನ ಮಾರ್ಗವೂ ಅಸ್ತಿತ್ವಕ್ಕೆ ಬರಲು ಸಾಧ್ಯವಿಲ್ಲವೆಂಬುದು ಈತನ ವ್ಯಾಖ್ಯಾನವಾಗಿದೆ" [ಉಲ್ಲೇಖ: ವಸಾಹುತೋತ್ತರ ಚಿಂತನೆ ಸಿ.ಎನ್.ರಾಮಚಂದ್ರನ್][೨]

ಅಧಿಕಾರ ಸಂಕಥನವೂ ನಿರಂತರವಾಗಿ ಯಾವುದೆ ಸಂಗತಿಯಲ್ಲೂ ನಿರ್ಧಾರ ಕೈಗೊಳ್ಳುವ ಕಾರ್ಯವನ್ನು ನಿರಂತರವಾಗಿ ಮಾಡುತ್ತಲೆ ಇರುತ್ತವೆ. ಉದಾ:- ಯಾವುದು ಸಂಸ್ಕೃತಿ, ಯಾವುದು ಸ್ಪೃಶ್ಯ-ಅಸ್ಪೃಶ್ಯ, ಯೋಗ್ಯ-ಅಯೋಗ್ಯ, ಸೂಕ್ತವೆಂಬ ಮೊದಲಾದ ತೀರ್ಮಾನಗಳನ್ನು ಮಾಡುತ್ತಿರುತ್ತದೆ. ಈ ತೀರ್ಮಾನಗಳಲ್ಲಿ ಧರ್ಮ, ಜಾತಿ, ಲಿಂಗ, ವರ್ಗ, ಭಾಷೆ, ಪ್ರದೇಶ, ಕಾನೂನು ಮೊದಲಾದ ಅಧಿಕಾರ ಕೇಂದ್ರಗಳು ಸ್ಪಷ್ಟವಾಗಿ ಪ್ರಭಾವಬೀರುತ್ತವೆ.

ಫ್ಯೂಕೋ ಅಧಿಕಾರ ಮತ್ತು ಜ್ಞಾನದ ಮಾದರಿಗಳನ್ನು ಹೇಳುವಾಗ 'ಸತ್ಯ' ಮತ್ತು 'ಅಧಿಕಾರ'ದ ಕುರಿತು ನಿಷೆಯ ಅನೇಕ ವಿಚಾರಗಳನ್ನು ಒಪ್ಪಿಕೊಂಡು ಅವುಗಳನ್ನು ಬೆಳೆಸುತ್ತಾನೆ. ಜ್ಞಾನ ಎನ್ನುವುದು ಇದ್ದರೆ, ಜನರ ಒಂದು ಗುಂಪು ಒಂದು ಲೋಕದರ್ಶನವನ್ನೇ ಸೃಷ್ಟಿಸುವ ಶಕ್ತಿಯನ್ನು ಹೊಂದಿರುತ್ತದೆ. ಅಧಿಕಾರವನ್ನು ಸೃಷ್ಟಿಸಿಕೊಳ್ಳುವ ಶಕ್ತಿಗಳು ತಮಗೆ ಲಭ್ಯವಿರುವ ಭಾಷಿಕ ರಚನೆಗಳನ್ನು ಬಳಸಿಕೊಂಡು ಸಮಾಜದ ಮೇಲೆ ಅನೇಕ ಬಗೆಯ ನಿಯಂತ್ರಣಗಳನ್ನು ರೂಪಿಸಿಕೊಳ್ಳುತ್ತವೆ. ಅವು ಜ್ಞಾನವನ್ನು ತಮಗೆ ಬೇಕಾದಂತೆ ಬಳಕೆ ಮಾಡಿಕೊಳ್ಳುತ್ತಿರುತ್ತವೆ. ಈತನ ಪ್ರಕಾರ ಸತ್ಯ ಮತ್ತು ಜ್ಞಾನವೇ ಅಧಿಕಾರ. ಈ ಅಧಿಕಾರದ ಆಕಾಂಕ್ಷೆ, ಸತ್ಯದ ಆಕಾಂಕ್ಷೆಯನ್ನು ಮೀರುತ್ತದೆ ಎಂದು, ಮಾನವನ ಎಲ್ಲಾ ಸಾಮಾಜಿಕ, ಸಾಂಸ್ಕೃತಿಕ ಸಂಬಂಧಗಳಲ್ಲಿಯೂ ಅಧಿಕಾರಾಕಾಂಕ್ಷೆ ಮಧ್ಯ ಪ್ರವೇಶ ಮಾಡುತ್ತದೆಂದು ಫ್ಯೂಕೋ ವಾದಿಸುತ್ತಾನೆ.

'ಜ್ಞಾನವೇ ಅಧಿಕಾರ'ವೆನ್ನುವ ಫ್ಯೂಕೋನ ಚಿಂತನೆಯನ್ನು ಲಿಂಗ ಶ್ರೇಣಿಕರಣದ ನೆಲೆಯಲ್ಲಿ ತರ್ಕಕ್ಕೆ ಹಚ್ಚುವುದಾದರೆ, ಪುರುಷ ಪ್ರಧಾನ ವ್ಯವಸ್ಥೆಯಲ್ಲಿ, ಜ್ಞಾನದ ಬಲದಿಂದ ಅಧಿಕಾರವು

ಪುರುಷರ ಪಾಲಾಗಿಸಿಕೊಳ್ಳಲಾಯಿತು. ಮಹಿಳೆಯ ಲೈಂಗಿಕತೆಯು ಪುರುಷನಿಗೆ ಅಧೀನಗೊಂಡ ಬಗೆಯನ್ನು ಗಮನಿಸಿದಾಗ, ಮಹಿಳೆಯ ಜ್ಞಾನದ ಮೇಲೆ ಆಕ್ರಮಣವೆಸಗಿ ಅವಳ ಅಸ್ತಿತ್ವವನ್ನು ಕುಂದಿಸುವುದರ ಜೊತೆಗೆ, ವ್ಯವಸ್ಥೆಯನ್ನು ತನ್ನ ಅಗತ್ಯಗಳಿಗೆ ತಕ್ಕಂತೆ ರೂಪಿಸಿಕೊಂಡನು. ಈ ಮೂಲಕ ಮಹಿಳೆಯ ಸಾಮರ್ಥ್ಯದ ಹಲವಾರು ಸತ್ಯ ಸಂಗತಿಗಳನ್ನು ಮರೆಮಾಚುವುದಲ್ಲದೆ, ಧರ್ಮ, ಜಾತಿ, ವಿವಾಹ, ಕುಟುಂಬ ಆಚರಣೆ, ಸಂಪ್ರದಾಯ, ರೂಢಿಗಳನ್ನು ಸೃಷ್ಟಿಸುವ ಮೂಲಕ ಮಹಿಳೆಯನ್ನು 'ಜ್ಞಾನ'ವಲಯಕ್ಕೆ ಮುಖಾಮುಖಿಯಾಗದಂತೆ ತಡೆಹಿಡಿಯುವ ಯತ್ನಗಳು ಇಂದಿಗೂ ಕಾಣುತ್ತೇವೆ. ಈ ಮೂಲಕ ನಿಯಂತ್ರಣವನ್ನು ಸಾಧಿಸುವುದರೊಂದಿಗೆ ಅವಳ ಒಟ್ಟು ಬದುಕಿನ ಮೇಲೆ ಅಧಿಕಾರವನ್ನು ಸ್ಥಾಪಿಸುವುದಾಗಿದೆ.

ಸ್ತ್ರೀಯ ಸ್ಥಾನಮಾನಕ್ಕೆ ಸಂಬಂಧಿಸಿದಂತೆ ಫ್ಯೂಕೋನ ಅಧಿಕಾರ ಸಂಕಥನವು ವಿಸ್ತರಿಸುತ್ತದೆ, ಲಿಂಗತಾರತಮ್ಯ ಅಥವಾ ಲಿಂಗ ರಾಜಕಾರಣವೆಂಬುದೇ ಆತನ ಪ್ರಕಾರ ರೂಢಿಗತವಾದದ್ದು, ವಿಕ್ಟೋರಿಯನ್ ಕಾಲದ ಲೈಂಗಿಕ ಮಡಿವಂತಿಕೆಯನ್ನು ಒಂದು ರೋಗವೆಂದು ಪರಿಗಣಿಸಿದ ಫ್ರಾಯ್ಡ್, ಕಾಮದ ಮುಕ್ತ ಚರ್ಚೆಯು ಆರೋಗ್ಯಕರವೆಂದು ಹಾಗೂ ಬಿಡುಗಡೆ ದಾರಿಯತ್ತ, ಲೈಂಗಿಕ ಕ್ರಾಂತಿಯತ್ತ ಇದು ಜನರನ್ನು ಕೊಂಡೊಯ್ಯಿತು. ಇದಕ್ಕೆ ವ್ಯತಿರಿಕ್ತವಾದ ಫ್ಯೂಕೋನ ಪ್ರತಿಪಾದನೆಯೆಂದರೆ, ಯಾವುದನ್ನು ನಾವು ಹೊರತರಲು ಹೊರಡುತ್ತೇವೆಯೋ, ಆ ಲೈಂಗಿಕತೆಯ ಕಟ್ಟುಪಾಡುಗಳಿಗೆ ನಾವೇ ನಮ್ಮನ್ನು ಗುಲಾಮರನ್ನಾಗಿ ಮಾಡಿಕೊಳ್ಳುತ್ತೇವೆ. ಅಲ್ಲದೆ ಕಾಮ ಮತ್ತು ಲೈಂಗಿಕತೆಗಳನ್ನು ವೈಜ್ಞಾನಿಕ ದೃಷ್ಟಿಕೋನದಿಂದ ನೋಡಲು ಪ್ರಾರಂಭಿಸಿದೆವೊ, ಅಲ್ಲಿಂದಲೆ ಕಾಮ ಕೂಡ ಹುಚ್ಚಿಗೆ ಅಥವಾ ರೋಗಕ್ಕೆ ಕಾರಣವಾಯಿತು. ಆದರೆ ಅಂದಿನಿಂದ ಆರಂಭವಾದ 'ಲೈಂಗಿಕ ವಿಜ್ಞಾನ' ಒಂದು ರೀತಿಯ ಶಕ್ತಿ ಅಥವಾ ಅಧಿಕಾರವಾಗಿ ಪರಿವರ್ತನೆ ಪಡೆಯಿತು ಎಂದು ಅಧಿಕಾರದ ಮೂಲಗಳನ್ನು ಫ್ಯೂಕೋ ಗುರುತಿಸುತ್ತಾನೆ. ಹಾಗೂ ಹುಚ್ಚು, ಕಾಮ, ಯದ್ಧ, ರಾಜಕೀಯ, ದೇಹ ಶಕ್ತಿ, ಬುದ್ಧಿಶಕ್ತಿ ಇವೆಲ್ಲವೂ ಅಧಿಕಾರದ ಮೂಲಗಳಾಗಿದ್ದವು. [ಉಧೃತೆ: ಆಧುನಿಕ ಕನ್ನಡ ನಾಟಕಗಳಲ್ಲಿ ಪ್ರಭುತ್ವ ಯಜಮಾನ್ಯತೆ ಹಾಗೂ ಅಧಿಕಾರ ಕೇಂದ್ರಗಳ ಪ್ರತಿನಿಧೀಕರಣ ವಸ್ತುನಿಷ್ಠ ಅಧ್ಯಯನ][೮]

ಫ್ಯೂಕೋನ ವಾದಕ್ಕೆ ಇನ್ನಷ್ಟು ಪುಷ್ಟಿಕೊಡುವುದು ಜೆರೆಮಿ ಬೆಂಥಮ್ ಬರೆದ 'ಪ್ಯಾನ ಅಪ್ಟಿಕಾನಾ' ಪುಸ್ತಕ. 'ಪ್ಯಾನ ಆಪ್ಟಿಕಾನ' ಎಂಬುದನ್ನು ಡಾ.ಡಿ.ಆರ್.ನಾಗರಾಜ್‌ರವರು(೧೯೯೬). ಹೀಗೆ ವಿವರಿಸುತ್ತಾರೆ. ಪ್ಯಾನ್ ಆಪ್ಟಿಕಾನಾ(ಅಧಿಕಾರದ ಕಣ್ಣು) ಎಂಬುದು ಒಂದು ಸೆರೆಮನೆ, ಈ ಸೆರೆಮನೆಯ ಕೇಂದ್ರ ಸ್ಥಾನದಲ್ಲಿ ದೃಷ್ಟಿಸುವ ಗೋಪುರ, ಅಲ್ಲಿ ನಿಂತ ಗಾರ್ಡ ಗೋಪುರದ ಸುತ್ತಲಿನ ತಳಭಾಗದಲ್ಲಿ, ಚಿಕ್ಕ, ಚಿಕ್ಕ ಗೂಡುಗಳಲ್ಲಿ ಸೆರೆಯಾಳಾಗಿರುವ ಖೈದಿಗಳನ್ನು ಫ್ಲಡ್ ಲೈಟ್ ಬೆಳಕಿನಲ್ಲಿ ದೃಷ್ಟಿಸುತ್ತಾ, ಅವರ ಮೇಲೆ ನಿಯಂತ್ರಣ ಸಾಧಿಸುತ್ತಾನೆ. ಫ್ಯೂಕೋ ವಾಸ್ತುಶಿಲ್ಪ ಅಥವಾ

ಕಟ್ಟಡವನ್ನು ಕಟ್ಟುವ ಕಲೆಯು ಕೂಡ ಅಧಿಕಾರ ದೈವಿಕತೆ ಮತ್ತು ಶಕ್ತಿ ಇವುಗಳನ್ನು ಪ್ರಕಟಪಡಿಸುವ ಒಂದು ಕ್ರಮವಾಗಿತ್ತು ಎನ್ನುತ್ತಾನೆ. ಆ ಕಾಲದಲ್ಲಿ ಅರಮನೆ ಮತ್ತು ಚರ್ಚುಗಳು, ದೇವಸ್ಥಾನಗಳು ಬಹುದೊಡ್ಡ ವಾಸ್ತು ಶಿಲ್ಪದ ಮಾದರಿಗಳಾಗಿದ್ದವು ಮತ್ತು ನಿಯಂತ್ರಿಸುವ ಅಧಿಕಾರ ಕೇಂದ್ರಗಳಾಗಿದ್ದವು ಎಂಬುದು ವಾಸ್ತುಶಿಲ್ಪದಲ್ಲಿ ಪ್ರತಿನಿಧಿಕರಣಗೊಳ್ಳುತ್ತದೆ. ಜ್ಞಾನದ ವಿಶಾಲತೆಯು ಹೆಚ್ಚಿದಷ್ಟು ಅಧಿಕಾರವೆನ್ನುವುದು ಕೈವಶವಾಗುತ್ತದೆಯೆಂಬುದು ಫ್ಯೂಕೋನ ಒಟ್ಟು ಚಿಂತನೆಯಾಗಿದೆ.

ಇದುವರೆಗೂ ಚರ್ಚಿಸಿದ ಅಧಿಕಾರ ವ್ಯಾಖ್ಯಾನದ ಸ್ವರೂಪದಲ್ಲಿ ಅಧಿಕಾರ ದೌರ್ಜನ್ಯಗಳೆರಡೂ ಪರಸ್ಪರ ಪೂರಕವಾಗಿವೆಯೆಂಬುದು ತಿಳಿದುಬರುತ್ತದೆ. ಗ್ರಾಂಮ್ಸಿಯವರು ಮೌನ ಸಮ್ಮತಿಯ ನೆಲೆಯಲ್ಲಿ ಅಧಿಕಾರವನ್ನು, ಫ್ಯೂಕೊ ಜ್ಞಾನದ ನೆಲೆಯಲ್ಲಿ ಅಧಿಕಾರವನ್ನು ಕುರಿತು ವಿವರಿಸಿದರೆ, ಬರ್ಟ್ರೆಂಡ ರಸೆಲ್‌ರವರು ಅಧಿಕಾರದ ರೂಪಗಳನ್ನು ವಿವರಿಸುತ್ತಾರೆ, ಒಟ್ಟಿನಲ್ಲಿ ಅಧಿಕಾರ ದೌರ್ಜನ್ಯದ ಸಹಚರಿ ಎಂಬುದು ಈ ಚಿಂತನೆಗಳಿಂದ ಸ್ಪಷ್ಟವಾಗುತ್ತದೆ. ಹೀಗೆ ವ್ಯವಸ್ಥೆಯ್ಲಲಿ ದತ್ತವಾದ ಅಧಿಕಾರವನ್ನು ಶಾಶ್ವತವಾಗುಳಿಸಿಕೊಳ್ಳಲು, ಅಧಿಕಾರವುಳ್ಳವರು ಅಧಿಕಾರಹೀನರ ಮೇಲೆ ನಿಯಂತ್ರಣ ಸಾಧಿಸುವುದಾಗಿದೆ. ಆದ್ದರಿಂದ ನಿಯಂತ್ರಣ ಪರಿಣಾಮಕಾರಿ ತಂತ್ರಗಾರಿಕೆಯೇ ದೌರ್ಜನ್ಯವಾಗಿದೆ. ಅಧಿಕಾರವನ್ನು ಪಡೆಯಲು ಬಳಸುವ ಅಸ್ತ್ರವೇ ದೌರ್ಜನ್ಯ. ಹಾಗೂ ಪಡೆದ ಅಧಿಕಾರದಲ್ಲಿ ನಿರಂತರವಾಗಿ ಮುಂದುವರೆಯಲು ಬಳಸುವ ಅಸ್ತ್ರವು ದೌರ್ಜನ್ಯವೇ. ದೌರ್ಜನ್ಯ ಹುಟ್ಟುವುದೇ ಇಲ್ಲಿ ಎಂದು ಹೇಳಬಹುದಾಗಿದೆ. ಹಾಗಾಗಿ ಅಧಿಕಾರಕ್ಕಾಗಿ ದೌರ್ಜನ್ಯ, ದೌರ್ಜನ್ಯಕ್ಕಾಗಿ ಅಧಿಕಾರ ಎಂಬ ಎರಡು ಸಂಗತಿಗಳು ಸರಿ. ಈ ಬಗೆಯ ದೌರ್ಜನ್ಯವು ಜಾತಿ, ವರ್ಗ, ಊಳಿಗಮಾನ್ಯಶಾಹಿ ಇತ್ಯಾದಿಗಳಲ್ಲಿ ಕಾಣಸಿಗುವುದು ಸ್ಥೂಲವಾಗಿ ಚರ್ಚಿಸಲಾಯಿತು. ಪ್ರಸ್ತುತ ಅಧ್ಯಯನದ ಕೇಂದ್ರಬಿಂದು ಲಿಂಗಶ್ರೇಣೀಕರಣದ ನೆಲೆಯಲ್ಲಿ ದೌರ್ಜನ್ಯವನ್ನು ವಿವರಿಸಿಕೊಳ್ಳುವುದಾಗಿದೆಯಾದ್ದರಿಂದ ಲಿಂಗಾಧಾರಿತ ದೌರ್ಜನ್ಯವನ್ನು ವ್ಯಾಖ್ಯಾನಿಸಿಕೊಳ್ಳುವುದರಿಂದ ಪ್ರಾರಂಭವಾಗಬೇಕಾದ ಜರೂರಿದೆ.

**ಲಿಂಗಾಧಾರಿತ ದೌರ್ಜನ್ಯ**

ಸಾಮಾನ್ಯವಾಗಿ ಸಾಮಾಜಿಕ ವ್ಯವಸ್ಥೆಯಲ್ಲಿ ಲಿಂಗದ ಕಾರಣಕ್ಕಾಗಿಯೇ ನಡೆಯುವ ದೌರ್ಜನ್ಯವನ್ನು 'ಲಿಂಗಾಧಾರಿತ ದೌರ್ಜನ್ಯ'ವೆಂದು ಹೇಳಬಹುದು. ಈ ಬಗೆಯ ಲಿಂಗಭಿನ್ನತೆಗೆ ಪ್ರಾಕೃತಿಕ ನೆಲೆಗಟ್ಟಿನಲ್ಲಿ ತನ್ನದೇ ಆದ ವಿಶಿಷ್ಟತೆಯಿದೆ. ಸಮಾಜ ವ್ಯವಸ್ಥೆಯ ರೂಪಿಕೆಯಾದಂತೆಲ್ಲ, ಗಟ್ಟಿಗೊಳುತ್ತಾ ಹೋದಂತೆಲ್ಲ 'ಲಿಂಗಭಿನ್ನತೆ'ಯನ್ನು ಅನುಕೂಲಕ್ಕೆ ತಕ್ಕಂತೆ ತಿರುಚಲಾಯಿತು, ವರ್ಗ ಜಾತಿ ನೆಲೆಯಲ್ಲಿನ ಪ್ರಧಾನತೆ-ಅಧೀನತೆಯು ಇಲ್ಲಿ ಮುಂದುವರೆಯಿತೆನ್ನಬಹುದು. ಇದಕ್ಕೆ ಪೂರಕವಾಗಿ ಒಟ್ಟು ಸಮಾಜದ ಕಾರ್ಯವೈಖರಿಯನ್ನು ಸಂರಚಿಸಲಾಯಿತು. ಈ ಬಗೆಯ ಲಿಂಗಾಧಾರಿತ ದೌರ್ಜನ್ಯದಲ್ಲಿ ಪ್ರಧಾನಲಿಂಗಿ ಪುರುಷ ಸಮುದಾಯ, ಎರಡನೆ ದರ್ಜೆಯ ಪ್ರಜೆಯೆಂದು ಗುರುತಿಸಲಾದ ಮಹಿಳಾ ಸಮುದಾಯ ಮೂರನೆ ದರ್ಜೆಯೆಂದು ಗುರುತಿಸಲಾಗುತ್ತಿರುವ ಹಿಜಡಾ, ಕೋಥಿ, ಪಂಥಿ ಇತ್ಯಾದಿಯನ್ನು ಒಳಗೊಳ್ಳಲಾಗುತ್ತದೆ. ಆದ್ದರಿಂದ ಲಿಂಗಾಧಾರಿತ ದೌರ್ಜನ್ಯವು ಈ ಮೂರು

ವಿಭಾಗಗಳವರ ಮೇಲೆ ನಡೆಯುವ ಸಾಧ್ಯತೆಯಿದೆ. ಆದರೆ ಪ್ರಸ್ತುತ ಅಧ್ಯಯನವು 'ಲಿಂಗಾಧಾರಿತ ದೌರ್ಜನ್ಯ'ದ ಮಹಿಳೆಯ ನೆಲೆಯನ್ನು ಕೇಂದ್ರಿಕರಿಸಿಕೊಂಡಿದೆ. ಸಮಾಜ ವ್ಯವಸ್ಥೆಯಲ್ಲಿ ಮೊದಲಿನಿಂದ-ಇಂದಿನವರೆಗಿನ ಹಲವು ಬಗೆಯ ಸಮಸ್ಯೆಗಳ ಸೃಷ್ಟಿಯ ಮೂಲ ಕಾರಣ ಸ್ತ್ರೀ-ಪುರುಷರ ಲಿಂಗಭಿನ್ನತೆಯೇ ಆಗಿದೆ. ಸಾಂಪ್ರದಾಯಿಕ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯನ್ನು ಲಿಂಗದ ಕಾರಣದಿಂದಲೇ ದುರ್ಬಲಳು, ಅಸಮರ್ಥಳೆಂದು ಇತ್ಯಾದಿಯಾಗಿ ಅಧೀನ ದರ್ಜೆಗೆ ತಳ್ಳಲಾಗಿದೆ. ಹೀಗೆ ಲಿಂಗದ ಕಾರಣದಿಂದಲೇ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಮಹಿಳಾ ದೌರ್ಜನ್ಯವೆಂದು ಹೇಳಬಹುದು.

"ಲಿಂಗಾಧಾರಿತ ದೌರ್ಜನ್ಯದ ಕುರಿತಾದ ಯಾವುದೇ ಕೃತ್ಯದ ಫಲಿತವು ಮಹಿಳೆಯ ಖಾಸಗಿ ಮತ್ತು ಸಾರ್ವಜನಿಕ ಬದುಕಿನಲ್ಲಿನ ಸ್ವಾತಂತ್ರ್ಯವನ್ನು ಅಪಹರಿಸುವುದು. ಹಾಗೂ ಲೈಂಗಿಕ, ಮಾನಸಿಕ, ದೈಹಿಕವಾಗಿ ಹಿಂಸಿಸುವುದನ್ನು ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವೆಂದು ಕರೆಯಲಾಗುತ್ತದೆ." [ಉಲ್ಲೇಖ: II and III CEDAW Report, 2006]

ಮಾತೃ ಪ್ರಧಾನತೆಯು ಪಿತೃ ಪ್ರಧಾನತೆಗೆ ಪಲ್ಲಟಿಸಿದಾಗಲೋ? ಮಹಿಳಾ ಲೈಂಗಿಕತೆ ಪುರುಷನಿಗೆ ಅಧೀನಗೊಂಡಾಗಲೋ? 'ಖಾಸಗಿ ಆಸ್ತಿ'ಯ ಪರಿಕಲ್ಪನೆಯು ಹುಟ್ಟಿಕೊಂಡಾಗಲೋ? ಪುರುಷನು ತನ್ನ ಜ್ಞಾನ ಬಲದಿಂದ ದಕ್ಕಿಸಿಕೊಂಡ ಅಧಿಕಾರವನ್ನು ಶಾಶ್ವತಗೊಳಿಸಿಕೊಳ್ಳಲು ಸೃಷ್ಟಿಸಿಕೊಂಡ ಸಾಮಾಜಿಕ ವ್ಯವಸ್ಥೆಯ ಮೇಲೆ ನಿರಂತರವಾಗಿ ಪುರುಷ ಸಮದಾಯ ತನ್ನ ನಿಯಂತ್ರಣವನ್ನೇ ಸಾಧಿಸಲು ಹಲವಾರು ಬಗೆಯ ಹುನ್ನಾರಗಳನ್ನು, ತಂತ್ರಗಾರಿಕೆಗಳನ್ನು ಮಾಡುತ್ತಲೇ ಇದ್ದಾನೆ. ಅದು ಮಹಿಳೆಯನ್ನು ಗೃಹದಲ್ಲೇ ಬಂಧಿಯಾಗಿಸುವುದು. ಜ್ಞಾನ ವಲಯಕ್ಕೆ ಮುಖಾಮುಖಿಯಾಗದಂತೆ ಅಂಚಿಗೆ ಸರಿಸುವುದು ಇತ್ಯಾದಿ. ಒಟ್ಟಾರೆಯಾಗಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಮೂಲಧ್ಯೇಯ ಮಹಿಳೆಯನ್ನು ನಿಯಂತ್ರಣದಲ್ಲಿರಿಸಿಕೊಳ್ಳುವುದೇ, ಅಧೀನದಲ್ಲಿರಿಸಿಕೊಳ್ಳುವುದೇ ಆಗಿದೆ.

ಲಿಂಗ ಅಸಮಾನತೆಯನ್ನು ರೂಢಿಸಿಕೊಂಡಿರುವ ಸಮಾಜದ ಪುರುಷರು ಮಹಿಳೆಯರನ್ನು ನಿರಂತರವಾಗಿ ತಮ್ಮ ಅಧೀನದಲ್ಲಿರುವಂತೆಯೇ ಮಾಡಿದೆ. ಅವಳ ಜೀವಿತದ ಬಗ್ಗೆ ಅವಳಿಗೆ ನಿರಂತರ ಅಸ್ಥಿರತೆ, ಆತಂಕ, ಅರಕ್ಷಿತ ನೆಲೆಯನ್ನು ಸೃಷ್ಟಿಸಿ, ಭವಿಷ್ಯದ ದಾರಿ ಕಾಣಿಸದ ಹಾಗೆ, ಅವಳ ಸುತ್ತಣ ಪರಿಸರದ ಅರಿವೇ ಅವಳಿಗೆ ಬರದಂತೆ, ಎಲ್ಲ ಸಂಗತಿಗಳನ್ನು ಮುಚ್ಚಿ ಹಾಕುವ ಕೆಲಸವನ್ನು ಸಮರ್ಥವಾಗಿ ನಿಭಾಯಿಸಿದೆ. ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವೂ ಸಹ ಸರಸ, ಸಾಮದಿಂದ ಮೊದಲುಗೊಂಡು, ಮರಣಾಂತಿಕ ಹಲ್ಲೆಯವರೆಗೂ ಭೇದ-ದಂಡದವರೆಗೂ ಕಂಡು ಬರುತ್ತದೆ. ಹೀಗೆ ಸ್ತ್ರೀ-ಪುರುಷ ಸಮುದಾಯಗಳಲ್ಲಿ ಸ್ತ್ರೀ ಸಂಕುಲವನ್ನು ಅಧೀನ ನೆಲೆಯದ್ದೆಂದು ನಿರೂಪಿಸಲಾಗಿರುವುದೇ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಕ್ಕೆ, ಇನ್ನಷ್ಟು ಪ್ರೇರಕ

ಸಂಗತಿಯಾಗಿದೆ. ಈ ನೆಲೆಯಲ್ಲಿ ಮಹಿಳೆಯ ವಿರುದ್ಧ ನಡೆಯುವ ದೌರ್ಜನ್ಯವನ್ನು ವಿವರಿಸಿಕೊಳ್ಳುತ್ತಾ ಹೋದಾಗ ಒಟ್ಟು ಸಮಾಜ ವ್ಯವಸ್ಥೆಯಲ್ಲಿ 'ಎರಡು' ಪ್ರಮುಖ ವಲಯಗಳು ಕಂಡುಬರುತ್ತವೆ:

೧. ಖಾಸಗಿ (ಕೌಟುಂಬಿಕ) ವಲಯ.

೨. ಸಾರ್ವಜನಿಕ ವಲಯ

ಸಾಮಾಜಿಕ ನೆಲೆಯಿಂದಲೇ ನಿರ್ವಚನಗೊಳ್ಳುವ ಮಹಿಳಾ ಬದುಕು, ಅಲ್ಲಿನ ನಿರ್ದೇಶನಗಳಡಿಯಲ್ಲಿಯೇ ಸಾಗುತ್ತಿದ್ದು, ಮಹಿಳಾ ಸಂಬಂಧಿತ ಯಾವುದೇ ಸಮಸ್ಯೆಗಳು ಕಾಣಿಸಿಕೊಂಡರೂ ಮುಖ್ಯವಾಗಿ ಅದು ಲೈಂಗಿಕತೆ ಗೃಹಿಣಿತ್ವದ ಸಂಗತಿಯನ್ನೇ ತಳಹದಿಯಾಗಿಸಿಕೊಂಡಿರುತ್ತದೆ. ಅವು ಮಹಿಳೆಯ ಕೌಟುಂಬಿಕ ಅಥವಾ ಸಾರ್ವಜನಿಕ ವಲಯದ ಸಮಸ್ಯೆಗಳಾಗಿರಬಹುದು. ಹೀಗೆ ಮಹಿಳೆಯು ನಾಲ್ಕು ಗೋಡೆಗಳ ಮಧ್ಯೆ ಬಂಧಿತಳಾಗಿದ್ದಾಗ ಅವಳ ಸಮಸ್ಯೆಗಳು ಕೌಟುಂಬಿಕ ನೆಲೆಗೆ ಮಾತ್ರ ಸೀಮಿತಗೊಂಡಿದ್ದವು. ಆದರೆ ಇದೇ ಸಮಾಜ ವ್ಯವಸ್ಥೆಯ ಏರು-ಪೇರುಗಳಲ್ಲಿ ಹುಟ್ಟಿಕೊಂಡ 'ಉದಾರವಾದಿ ಚಿಂತನೆ'ಯು ಮಹಿಳೆಯನ್ನು ಪುರುಷನು ತನ್ನ ಅನುಕೂಲ ಮತ್ತು ವ್ಯವಸ್ಥೆಯಲ್ಲಿ ತನ್ನ ಸ್ಥಾನ-ಮಾನದ ಪ್ರತೀಕವಾಗಿ, ಸಾರ್ವಜನಿಕ ವಲಯಕ್ಕೆ ಮುಖಾಮುಖಿಯಾಗಿಸಲು ಅವಕಾಶವನ್ನು ಕಲ್ಪಿಸಲಾಯಿತು. ಎರಡನೆ ಮಹಾಯುದ್ಧದ ನಂತರ, ಕೈಗಾರಿಕಾ ಕ್ರಾಂತಿ ಇತ್ಯಾದಿ ಸಂದರ್ಭದಲ್ಲಿ ಸಾರ್ವಜನಿಕ ರಂಗಕ್ಕೆ ಕಾಲಿರಿಸಿದ ಮಹಿಳಾ ಸಮುದಾಯ ತಾನು ಈವರೆಗೂ ಬದುಕಿರುವ ಭ್ರಮಾತ್ಮಕ ಬದುಕನ್ನು ಪ್ರಶ್ನಿಸುವ ಪ್ರಜ್ಞೆಯನ್ನು ಹೊಂದಿದ ಮೇಲೆ, ಸಾಂಪ್ರದಾಯಿಕ ಸಮಾಜ ವ್ಯವಸ್ಥೆಯ ಹುನ್ನಾರವನ್ನರಿಯತೊಡಗಿದರು. ಈ ಬಗೆಯ ಅವಳ ಸಾರ್ವಜನಿಕ ವಲಯದ ಪ್ರವೇಶವನ್ನು ನಿರಾಕರಿಸಿದ ಪುರುಷ ಸಂಸ್ಕೃತಿ, ಇಲ್ಲಿಯೂ ಸಹ ಅವಳು ತನ್ನ ಅವಶ್ಯಕತೆಗಾಗಿ, ತನ್ನ ಬದುಕಿನ ಸುತ್ತ ಗಿರಕಿ ಹೊಡೆಯುತ್ತಲೇ ಇರಬೇಕೆಂಬ ಮಹದಾಸೆಯನ್ನು ಹೊಂದಿದೆ. ವಿಪರ್ಯಾಸವೆಂದರೆ ಇದಕ್ಕೆ ಒಪ್ಪಿತವಾಗಿರುವಾಗಲು ಅವಳ ಮೇಲಿನ ದೌರ್ಜನ್ಯಗಳು ನಡೆಯದೆ ಇರುತ್ತಿರಲಿಲ್ಲವೆಂಬುದಕ್ಕೆ ಚರಿತ್ರೆಯಲ್ಲಿ ಸಾಕಷ್ಟು ಉದಾಹರಣೆಗಳು ದೊರೆಯುತ್ತವೆ. ಯಾವಾಗ ಮಹಿಳೆ ತನ್ನ 'ಅಸ್ತಿತ್ವ'ದ ಬಗೆಗೆ ಆಲೋಚಿಸಿ, ತನ್ನ ಸಾಧನೆಯ ದಿಕ್ಕಿನತ್ತ ಮುಖ ಮಾಡಿದಳೊ ಆಗ ಪುರುಷ ಸಂಸ್ಕೃತಿಯ ಬುನಾದಿಯು ಬಿರುಕು ಬಿಡುವ ಭಯದಿಂದ, ಅವಳ ಮೇಲಿನ ಆಕ್ರಮಣಗಳ ಪ್ರಮಾಣ ಇನ್ನಷ್ಟು ಹೆಚ್ಚಾಗತೊಡಗಿತು. ಈ ಬಗೆಯ ಏರು ಪೇರುಗಳು ಒಂದಲ್ಲಾ ಒಂದು ದಿನ ಸಂಘರ್ಷಕ್ಕೆ ನಾಂದಿ ಎನ್ನುವ ಹಾಗೆ ಘರ್ಷಣೆಗಳು ಆರಂಭವಾಗುವುದು ಸಹಜವೆಂಬ ಸೂಕ್ಷ್ಮ ಗ್ರಹಿಕೆಯೇ 'ಸಮಾಜವಾದಿ ರಾಮ ಮನೋಹರ ಲೋಹಿಯಾ' ಅವರು 20ನೇ ಶತಮಾನದಲ್ಲಿ ಕ್ರಾಂತಿಯು ಸಪ್ತಮುಖಿಯಾಗಿ ಪ್ರವಹಿಸುತ್ತದೆಂದು ಹೇಳುವಾಗ ಮೊದಲ ಅಂಶವೇ ಸ್ತ್ರೀ-ಪುರುಷರ ಸಮಾನತೆಗಾಗಿ" ಎಂದು ಹೇಳಿದ್ದಾರೆ. [ಉಲ್ಲೇಖ: ಸಮಾಜವಾದಿ ರಾಮ ಮನೋಹರ ಲೋಹಿಯಾ: ದೇಜಗೌ][೧೦]

ಕಾಲಾನುಕ್ರಮದಲ್ಲಿ ಹಲವಾರು ಕಾರಣಗಳಿಂದ ಸಾರ್ವಜನಿಕ ವಲಯಕ್ಕೆ ಮುಖಾಮುಖಿಯಾದ ಮಹಿಳೆ, ಈ ವಲಯದಲ್ಲಿ ಎದುರಿಸುತ್ತಿರುವ ದೌರ್ಜನ್ಯಗಳು, ಕೌಟುಂಬಿಕ ವಲಯದಲ್ಲಿನ ದೌರ್ಜನ್ಯಗಳ ವಿಸ್ತೃತ ರೂಪವೇ ಆಗಿದೆ. ಎರಡು ನೆಲೆಯಲ್ಲಿಯೂ ಸಹ ಮಹಿಳಾ ಬದುಕಿನ ಸಮಸ್ಯೆಗಳು 'ಲೈಂಗಿಕತೆ'ಯನ್ನೇ ಆಧರಿಸಿವೆ. ಹಾಗಾಗಿ ಕೌಟುಂಬಿಕ ವಲಯ ಮತ್ತು ಸಾರ್ವಜನಿಕ ವಲಯಗಳು ಮೇಲ್ನೋಟಕ್ಕೆ ಭಿನ್ನವೆನಿಸಿದರೂ, ಇಲ್ಲಿ ನಡೆಯುವ ದೌರ್ಜನ್ಯದ ಸ್ವರೂಪ, ಆಶಯ, ಪರಿಣಾಮ ಒಂದೆ ಆಗಿದೆ. ಆದ್ದರಿಂದ ಈ ಎರಡೂ ವಲಯಗಳೂ ಪ್ರತ್ಯೇಕವೂ ಹೌದು, ಪರಸ್ಪರ ಪೂರಕವೂ ಹೌದು. ಹೀಗೆ ವಿಸ್ತೃತ ವ್ಯಾಪ್ತಿಯನ್ನು ಹೊಂದಿರುವ ಮಹಿಳೆಯ ವಿರುದ್ಧ ನಡೆಯುವ ದೌರ್ಜನ್ಯವನ್ನು ಅಧ್ಯಯನದ ಅನುಕೂಲಕ್ಕಾಗಿ "ಸಾರ್ವಜನಿಕ ವಲಯಕ್ಕೆ" ಮಾತ್ರ ಸೀಮಿತಗೊಳಿಸಿಕೊಳ್ಳಲಾಗಿದೆ ಆದ್ದರಿಂದ, ಸಾರ್ವಜನಿಕ ವಲಯದ ಪರಿಕಲ್ಪನೆಯನ್ನು ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಳ್ಳುವ ಬಗೆಯನ್ನು ಅರಿಯುವುದಕ್ಕಾಗಿ ಸಾರ್ವಜನಿಕ ವಲಯವನ್ನು ವ್ಯಾಖ್ಯಾನಿಸಿಕೊಳ್ಳಲಾಗುತ್ತಿದೆ.

**ಸಾರ್ವಜನಿಕ ವಲಯ ಮತ್ತು ದೌರ್ಜನ್ಯ**

ಸಾಮಾಜಿಕ ವ್ಯವಸ್ಥೆಯಲ್ಲಿ ಸಾರ್ವಜನಿಕ ವಲಯವು ಪ್ರಮುಖವಾದ ಭಾಗ. ಈವರೆಗಿನ ಅಧ್ಯಯನಗಳಲ್ಲಿ ಸಾರ್ವಜನಿಕ ವಲಯವೆಂದರೆ ಪ್ರಮುಖವಾಗಿ ಆರ್ಥಿಕತೆಯ ಭಾಗವೆಂದು ವಿವರಿಸಲಾಗಿದೆ. ಈ ಹಿನ್ನೆಲೆಯಲ್ಲಿ ಸಾರ್ವಜನಿಕ ವಲಯದ ಖಚಿತವಾದ ವ್ಯಾಖ್ಯಾನವು ಕಂಡು ಬಂದಿಲ್ಲವೆನ್ನಬಹುದು. ಇದಕ್ಕೆ ನಿದರ್ಶನವಾಗಿ ಕೆಲವು ನಿಘಂಟುಗಳು ಮತ್ತು ಕೆಲವು ವ್ಯಾಖ್ಯಾನಗಳನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ಮೈಸೂರು ವಿಶ್ವ ವಿದ್ಯಾಲಯದ ನಿಘಂಟುವಿನಲ್ಲಿ public sector ಎಂಬುದಕ್ಕೆ ಸರ್ಕಾರಿ ವಲಯ, ಸಾರ್ವಜನಿಕ ವಲಯ, ರಾಷ್ಟ್ರ, ಸರ್ಕಾರದ ಹತೋಟಿಯಲ್ಲಿರುವ ಅರ್ಥವ್ಯವಸ್ಥೆ, ಉದ್ದಿಮೆ, ಮೊದಲಾದವು. ಕನ್ನಡ – ಕನ್ನಡ ನಿಘಂಟುವಿನಲ್ಲಿ ಸಾರ್ವಜನಿಕ ವಲಯವೆಂದರೆ ಎಲ್ಲ ಜನರಿಗೂ ಉಪಯುಕ್ತವಾದ ವಲಯವೆಂದು, ಡಿ.ಕೆ. ಭಾರದ್ವಾಜರ ನಿಘಂಟುವಿನಲ್ಲಿ ಬಹಿರಂಗವಲಯ, ಒಟ್ಟು ಜನತೆಗೆ ಸಂಬಂಧಿಸಿದ ವಲಯ, ಲೋಕೋಪಯೋಗಿ ವಲಯವೆಂದು, ಆಕ್ಸ್‌ಫರ್ಡ್ ನಿಘಂಟುವಿನಲ್ಲಿ: ಪ್ರಭುತ್ವದ ನಿಯಂತ್ರಣಕ್ಕೊಳಪಟ್ಟ ಆರ್ಥಿಕತೆಯ ಭಾಗವೆಂದು ಹೇಳಲಾಗಿದೆ, Business ನಿಘಂಟುವಿನಲ್ಲಿ ಸರ್ಕಾರಿ ಮಾರುಕಟ್ಟೆ/ ವ್ಯಾಪಾರ ಸ್ಥಳವೆಂದು, ವಿವಿಧ ನಿಘಂಟುಗಳಲ್ಲಿ ಅರ್ಥವನ್ನು ನೀಡಲಾಗಿದೆ. ಈ ಹಿನ್ನೆಲೆಯನ್ನು ಆಧರಿಸಿ ಸಾರ್ವಜನಿಕ ವಲಯದ ಕುರಿತ ಕೆಲವು ವ್ಯಾಖ್ಯಾನಗಳನ್ನು ನೋಡುವುದಾದರೆ, ಸಾರ್ವಜನಿಕ ವಲಯದ ವ್ಯಾಖ್ಯಾನ ಮತ್ತು ವಿವರಣೆಯನ್ನು Business Dictionmaryಯು ಹೀಗೆ ನೀಡಿದೆ. ಸಾರ್ವಜನಿಕ ವಲಯವೆಂದರೆ ಸರ್ಕಾರದಿಂದ ಒದಗಿಸಲ್ಪಟ್ಟ ಮೂಲಭೂತ ಸೇವೆಗಳೊಂದಿಗೆ ಆರ್ಥಿಕತೆಗೆ ಸಂಬಂಧಿಸಿಲ್ಪಟ್ಟ ಒಂದು ಭಾಗ. ಈ ಸಾರ್ವಜನಿಕ ವಲಯದ ಸಂಯೋಜನೆಯು ವಿವಿಧ ದೇಶಗಳಲ್ಲಿ ಭಿನ್ನವಾಗಿದೆ. ಆದರೆ ಬಹುತೇಕ ದೇಶಗಳ ಸಾರ್ವಜನಿಕ ವಲಯದಲ್ಲಿ ಸುರಕ್ಷಿತವಾಗಿ ಬದುಕಲು

ಪೋಲಿಸ್, ಮಿಲಿಟರಿ ಸಾರ್ವಜನಿಕ ರಸ್ತೆಗಳು. ಪ್ರಾಥಮಿಕ ಶಿಕ್ಷಣ ಮತ್ತು ಆರೋಗ್ಯ ರಕ್ಷಣೆಯಂತಹ ಕೆಲವು ಸೇವೆಗಳನ್ನು ಒಳಗೊಂಡಿದೆ. ಏಕ ವ್ಯಕ್ತಿ ಪರವಾಗಿ ಈ ಸೇವೆಗಳು ಮತ್ತು ಸಮಾನ ಅವಕಾಶಗಳನ್ನು ಬಳಸಿಕೊಳ್ಳುವರೋ(ಉದಾ:- ಸಾರ್ವಜನಿಕ ಶಿಕ್ಷಣ) ಹಾಗೂ ಇಲ್ಲಿ ಒದಗಿಸುವ ಸೇವೆಗಳ ಸಾಮರ್ಥ್ಯಕ್ಕನುಗುಣವಾಗಿ ಹಣ ಪಾವತಿಸದವರನ್ನು ತಕ್ಷಣಕ್ಕೆ ಅಥವಾ ಲಾಭದಾಯಕವಾದ ಕಾರಣಕ್ಕೆ ಒಟ್ಟು ಸಮಾಜದಿಂದ ಅವರನ್ನು ಹೊರಹಾಕಲ್ಪಡುವುದಿಲ್ಲ.

ಸಾರ್ವಜನಿಕ ವಲಯವು ಸ್ಥಳೀಯ ಸರ್ಕಾರಗಳು ಅಥವಾ ಪ್ರಭುತ್ವಗಳು, ರಾಷ್ಟ್ರಗಳಿಂದ ನಿಯಂತ್ರಣಕ್ಕೊಳಪಡುವ ಸಮಾಜದ ಭಾಗ. ವಿಶ್ವ ಸಂಸ್ಥೆಯಲ್ಲಿ ಸಾರ್ವಜನಿಕ ವಲಯವು ಒಟ್ಟಾಗಿ ಕಷ್ಟಕರವಾದ ಸೇವೆಗಳನ್ನು ಒಳಗೊಂಡಿದೆ. ಅವುಗಳೆಂದರೆ ರಾಷ್ಟ್ರೀಯ ರಕ್ಷಣೆ, ಮನೆ-ಭೂಮಿಯ ರಕ್ಷಣೆ, ತೆರಿಗೆ ವಿಧಿಸುವುದು, ವಿವಿಧ ಸಾಮಾಜಿಕ ಕಾರ್ಯಕ್ರಮಗಳನ್ನು ಒಳಗೊಂಡಿದೆ. ಉತ್ಪಾದಿಸಲ್ಪಟ್ಟ ಅಥವಾ ಒದಗಿಸಲ್ಪಟ್ಟ ಪ್ರತಿಯೊಂದು ಸರಕುಗಳು ಮತ್ತು ಸೇವೆಗಳನ್ನು ಒಳಗೊಂಡಿರುವ ಸಾರ್ವಜನಿಕ ವಲಯವು ಖಾಸಗಿ ವಲಯವನ್ನು ಅತಿಕ್ರಮಿಸಿವೆ. ಈ ಬಗೆಯ ವಿಸ್ತರಣೆಯು ದೇಶದಿಂದ-ದೇಶಕ್ಕೆ, ರಾಜ್ಯದಿಂದ-ರಾಜ್ಯಕ್ಕೆ, ಪ್ರಾಂತ್ಯದಿಂದ-ಪ್ರಾಂತ್ಯಕ್ಕೆ ಮತ್ತು ನಗರದಿಂದ-ನಗರಕ್ಕೆ ವಿವಿಧ ಬಗೆಯಲ್ಲಿ ಕಾಣುವುದು. ಈ ಅತಿವ್ಯಾಪ್ತಿಯು ಹಲವುಬಾರಿ ವಿಸ್ತೃತ ನಿರ್ವಹಣೆಗಳಾದ ನೀರಿನ ನಿರ್ವಹಣೆ, ಆರೋಗ್ಯ ರಕ್ಷಣೆ, ಕಾವಲು ಸೇವೆಗಳು ಮತ್ತು ದುರಾಕ್ರಮಣಕ್ಕೊಳಗಾದವರಿಗೆ, ನಿರಾಶ್ರಿತರಿಗೆ, ಆಶ್ರಯ ತಾಣಗಳನ್ನು ಒದಗಿಸುವುದು. ಕೆಲವೊಮ್ಮೆ ಈ ಸೇವೆಗಳನ್ನು ಒದಗಿಸುವವರು ಸಾರ್ವಜನಿಕ ವಲಯದಿಂದ, ಖಾಸಗಿವಲಯಕ್ಕೆ ಸ್ಥಳಾಂತರಿಸಲಾಗುತ್ತದೆ. ಇದು ಇತ್ತೀಚಿನ ದಿನಗಳಲ್ಲಿ ಜಗತ್ತಿನುದ್ದಕ್ಕೂ ಬೃಹತ್ ಪ್ರಮಾಣದಲ್ಲಿ ಆಕ್ರಮಿಸಿದ ಖಾಸಗೀಕರಣದಲ್ಲಿ ಕಾಣಬಹುದಾಗಿದೆ.

ಇನ್ನಿತರ ನಿರ್ದಶನಗಳಲ್ಲಿ ಈ ಸೇವೆಯು ಖಾಸಗಿ ವಲಯದಿಂದ ಸಾರ್ವಜನಿಕ ವಲಯಕ್ಕೆ ರೂಪಾಂತರಗೊಳ್ಳುವುದು ಸಾಮಾನ್ಯವಾಗಿದೆ. ಆದರೆ ಆರೋಗ್ಯ ರಕ್ಷಣೆಯಂತಹ ಒಂದು ವಲಯದಲ್ಲಿ ಸರ್ಕಾರಗಳು ಕೆಲವು ಸೇವೆಗಳನ್ನು ಒದಗಿಸಲ್ಪಡುವುದು ಅಥವಾ ಪ್ರಯೋಗಿಸಲ್ಪಡುವುದಕ್ಕೆ ಮೊದಲಿನಿಂದ ಆದ್ಯತೆಗಳು ಖಾಸಗೀಕರಣದಿಂದ ಒದಗಿಸಲ್ಪಟ್ಟಿದೆ. ಹಾಗೂ ಸರ್ಕಾರಗಳು ನಿರಂತರವಾಗಿ, ಖಾಸಗಿ ಕಾರ್ಪೋರೇಶನ್‌ಗಳಿಂದ ಸಾರ್ವಜನಿಕ ವಲಯಕ್ಕೆ ಒದಗಿಸಲಾದ ಸರಕುಗಳು ಮತ್ತು ಸೇವೆಗಳನ್ನು ಗುತ್ತಿಗೆ ಕೊಡುವ ಪ್ರಯತ್ನಮಾಡಿದೆ. ಉದಾ: ಕೈಗಾರಿಕೆ, ಕಟ್ಟಡಗಳು, ವಿಮಾನಗಳ ನಿರ್ವಹಣೆ, ಯಂತ್ರಾಂಶ, ಎಲೆಕ್ಟ್ರಾನಿಕ್ ಮತ್ತು ಸಂವಹನಗಳು, ಕಂಪ್ಯೂಟರ್‌ಗಳು, ರಸ್ತೆಗಳು ಅಣೆಕಟ್ಟುಗಳು ಮತ್ತು ಪುನಾರಚನೆಯ ವಲಯಗಳು ಇತ್ಯಾದಿ.

ಈ ನಿಘಂಟುವಿನಲ್ಲಿ ಸಾರ್ವಜನಿಕ ವಲಯವೆಂದರೆ ಆರ್ಥಿಕತೆಯ ಭಾಗವೆಂದೋ? ಪ್ರಭುತ್ವದ ನಿಯಂತ್ರಣಕೊಳಪಟ್ಟಿರುವ ಭಾಗವೆಂದೋ? ವ್ಯಾಖ್ಯಾನಿಸುವುದರೊಂದಿಗೆ ಇದರ ಒಳ ವಿವರಗಳಲ್ಲಿ ಇದು ಒಳಗೊಂಡಿರುವ ಸೇವೆಗಳನ್ನು ಮತ್ತು ಖಾಸಗೀಕರಣದ ಮಾಹಿತಿಯನ್ನು ನೀಡುವುದರೊಂದಿಗೆ ಲೋಕೋಪಯೋಗಿ ವಲಯವೆಂಬುದನ್ನು ದೃಢಪಡಿಸುತ್ತದೆ. ಈ ಹಿನ್ನೆಲೆಯಲ್ಲಿ

ಸಾರ್ವಜನಿಕ ವಲಯದ ಕುರಿತು ನಿಹಾಲ್ ಕಪ್ಪಗೋಡ ಅವರ ಹೇಳಿಕೆಯು ಗಮನಾರ್ಹ. ಅವರು ಸಾರ್ವಜನಿಕ ವಲಯವೆನ್ನುವುದು ಸರ್ಕಾರದಿಂದ, ಸರಕಾರಕ್ಕಾಗಿ ಸೇವೆಗಳು ಮತ್ತು ಸರಕುಗಳನ್ನು ಬಟವಾಡೆ ಮಾಡುವುದರೊಂದಿಗೆ, ಅದು ಸ್ಥಳೀಯ ಅಥವಾ ದೇಶಿಯ ಮತ್ತು ರಾಷ್ಟ್ರೀಯ ಎರಡರಲ್ಲಿ ಯಾವುದರೊಂದಿಗೂ ವ್ಯಾಪಾರ ನಡೆಸುವ ಆಡಳಿತಾತ್ಮಕ ಮತ್ತು ಆರ್ಥಿಕ ಭಾಗ. ಉದಾ: ಆಡಳಿತಾತ್ಮಕವಾಗಿ ರಚಿಸಿ ಆಯೋಜಿಸಲಾದ ನಗರ, ರಾಷ್ಟ್ರಗಳಲ್ಲಿನ ಪ್ರಮಾಣಕ್ಕನುಗುಣವಾಗಿ ಸಾಮಾಜಿಕ ಭದ್ರತೆಯನ್ನು ಒದಗಿಸುವುದು ಸಾರ್ವಜನಿಕ ವಲಯದ ಚಟುವಟಿಕೆಯಾಗಿದೆ. ಈ ಚಟುವಟಿಕೆಗಳನ್ನೊಳಗೊಂಡ ಸಾರ್ವಜನಿಕ ವಲಯವು ಹಲವಾರು ಬಗೆಯ ಸಂಘಟನೆಗಳನ್ನು ಹೊಂದಿರುವ, ನೇರವಾಗಿ ಸರ್ಕಾರದಿಂದ ದೃಢೀಕರಿಸಲ್ಪಟ್ಟ ತೆರಿಗೆಗಳಿಂದ ಸ್ಥಾಪಿಸಲ್ಪಟ್ಟ ಆಡಳಿತವನ್ನು ಬಟವಾಡೆ ಮಾಡುವ ಸಂಘಟನೆ ಇದಾಗಿದೆ. ಇಲ್ಲಿ ಸಾಧಾರಣವಾಗಿ ಅವಶ್ಯಕವಸ್ತು, ಯಶಸ್ಸಿನ ಪ್ರಮಾಣ ಮತ್ತು ಉತ್ಪಾದನಾ ನಿರ್ಧಾರಗಳು ಒಂದು ಮಿತಿಯಲ್ಲಿ ವ್ಯವಹಾರಕ್ಕೆ ಮುಖಾಮುಖಿಯಾಗುವುದಾಗಿದೆ.

ಸಾರ್ವಜನಿಕವಾಗಿ ಸರ್ಕಾರದ ಶಾಸನ ಸಮ್ಮತಿಯನ್ನು ಪಡೆದಿರುವ ಸಂಸ್ಥೆಗಳಲ್ಲಿ (ಕೆಲವು ಪ್ರಸಂಗಗಳಲ್ಲಿ ವಿಶೇಷವಾಗಿ ರೂಪಿಸಿ ಪ್ರಭುತ್ವದಿಂದ ಸಮ್ಮತಿಸಲ್ಪಟ್ಟ ಸಾಹಸೋದ್ಯಮಗಳು) ನವರು ಸ್ವತಂತ್ರವಾಗಿ ನೇರ ಆಡಳಿತಕ್ಕಿಂತ ಭಿನ್ನವಾದ, ಉತ್ತಮವಾದ ವ್ಯಾಪಾರೀಕರಣ ಮತ್ತು ನಿರೀಕ್ಷಿತ ವ್ಯಾಪಾರದ (ಆದಾಗ್ಯೂ ಸರ್ಕಾರದಿಂದಾಗಿ ಅವರಿಗಿರಬಹುದಾದ ಗುರಿಗಳ) ಪ್ರಮಾಣಕ್ಕನುಗುಣವಾಗಿ ಕಾರ್ಯ ನಡೆಸುವುದು ಮತ್ತು ಉತ್ಪಾದನೆಯ ನಿರ್ಧಾರಗಳು ಸಾಮಾನ್ಯವಾಗಿ ಸರ್ಕಾರದಿಂದ ಪಡೆಯಲಾಗಿದೆ. ಭಾಗಶಃ ಖಾಸಗಿಯಾಗಿ ಸಮ್ಮತಿಸಲ್ಪಟ್ಟ, ಸರ್ಕಾರದ ಶಾಸನ ಪಡೆದಿರುವ ಸಂಸ್ಥೆಗಳು ಬಟವಾಡೆ ಮಾಡಲಾಗುವುದರ ಜೊತೆಗೆ ಭಾಗಶಃ ಹೊರಗುತ್ತಿಗೆ, ಸಂಪೂರ್ಣ ಹೊರಗುತ್ತಿಗೆಯಿಂದಾದ ಅಥವಾ ಹೊರ ಒಪ್ಪಂದಗಳನ್ನು ಮಾಡಿಕೊಳ್ಳುವುದು ಖಾಸಗಿ ವಲಯದ ಕೆಲವು ಬಗೆಗಳಲ್ಲಿನ ನಿಯಂತ್ರಣ ಮತ್ತು ಜವಾಬ್ದಾರಿಯ ಮಿಶ್ರಣ. ಖಾಸಗಿ ವಲಯದ ಕಾರ್ಯಗಳೊಂದಿಗೆ ಮುಂದುವರೆದು ಸಾರ್ವಜನಿಕ ಒಡೆತನದ ಆಸ್ತಿಗಳು ಆ ಸೇವೆಗಿಂತ ಉತ್ತಮವಾದ ಭಾಗವೆಂದು ಸಾರ್ವಜನಿಕ ವಲಯದ ಮಾದರಿಯಲ್ಲಿ ಪರಿಗಣಿಸಲ್ಪಡಲಾಗಿದೆ.

ನಿಹಾಲ್ ಕಪ್ಪಗೋಡರವರ ವ್ಯಾಖ್ಯಾನವು ಸಾರ್ವಜನಿಕ ವಲಯ ಆದಾಯ ತರುವ ಉತ್ಪಾದನೆಗೆ ಸಂಬಂಧಿಸಿದ್ದು, ಇಲ್ಲಿ ಆರ್ಥಿಕ ಅಂಶಗಳೇ ಪ್ರಧಾನ ಕೇಂದ್ರ, ಸಾಮಾಜಿಕ ಭದ್ರತೆಯನ್ನೊದಗಿಸುವ ಕಾರ್ಯ ಸಾರ್ವಜನಿಕ ವಲಯದ್ದೆಂದು ಹೇಳುತ್ತಾ, ವ್ಯವಹಾರವನ್ನು ಪ್ರಮುಖವಾಗಿ ಪ್ರತಿಪಾದಿಸಿದ್ದಾರೆ, ಸರ್ಕಾರದ ಕೆಲಸಗಳನ್ನು ಸಾರ್ವಜನಿಕ ವಲಯದ ಸಂಘಗಳಿಗೆ ಬಟವಾಡೆ ಮಾಡುವುದು. ಹಾಗೂ ಗುತ್ತಿಗೆ ಆಧಾರದ ಒಪ್ಪಂದಗಳು ಸಾರ್ವಜನಿಕ ವಲಯಕ್ಕೆ. ಸಂಬಂಧಿಸಿದ್ದೆಂದು ಹೇಳುತ್ತಾರೆ. ಸಾರ್ವಜನಿಕ ವಲಯದಲ್ಲಿನ ಶ್ರಮಕ್ಕೆ ಪ್ರತಿಫಲವಾಗಿ ಆದಾಯ

ಬರುವುದ (ಅದು ಹಣದ ಅಥವಾ ಇನಿತರ ರೂಪದಲ್ಲಿ)ನ್ನು, ವ್ಯವಹಾರದ ನೆಲೆಯಲ್ಲಿರುವುದರತ್ತ ಈ ವ್ಯಾಖ್ಯಾನವು ಗಮನಹರಿಸುತ್ತದೆಯಾದರೂ ಇಲ್ಲಿ ಕೇವಲ ಆರ್ಥಿಕ ವ್ಯವಹಾರವನ್ನು ಮಾತ್ರ ಕೇಂದ್ರಿಕರಿಸಲಾಗಿದೆ.

ಒಟ್ಟಾರೆಯಾಗಿ ಈಗಾಗಲೇ ಗುರುತಿಸಿದಂತೆ ಸಾರ್ವಜನಿಕ ವಲಯವೆಂದರೆ ಕುಟುಂಬದಾಚೆಗಿನ ವಲಯ, ಸಾಧನಾವಲಯ, ಸರ್ಕಾರಿ ವಲಯ, ಲೋಕೋಪಯೋಗಿ ವಲಯವೆಂದು ಹೇಳಬಹುದು. ಈ ಅಂಶಗಳನ್ನಾಧರಿಸಿ ಪ್ರಸ್ತುತ ಅಧ್ಯಯನದಲ್ಲಿ ಸಾರ್ವಜನಿಕ ವಲಯವನ್ನು 'ವ್ಯವಹಾರಲೋಕ/ವಲಯ'ಎಂದು ಗ್ರಹಿಸಲಾಗಿದೆ. ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ವಿಶೇಷವಾಗಿ ಸಾರ್ವಜನಿಕ ವಲಯವೆಂಬುದು 'ಪುರುಷನ ವಲಯ'ವೆಂಬ ಅಲಿಖಿತ ಮುದ್ರೆಗಳಿವೆ. ಮೇಲ್ಪದರದ ಅಧ್ಯಯನಗಳನ್ನಾಧರಿಸಿ ಈ ಹೇಳಿಕೆಯನ್ನು ಹೇಳಲಾದರು, ಸಾರ್ವಜನಿಕ ವಲಯದ ಒಟ್ಟು ಸ್ವರೂಪವನ್ನು ಗಮನಿಸಿದರೆ ಇದೆಲ್ಲವೂ ಪುರುಷ ರೂಪಿಯಾಗಿಯೇ ಇರುವುದು ಗೋಚರಿಸುತ್ತದೆ. ಹಾಗೆಯೇ ಸಾಂಪ್ರದಾಯಿಕ ಸಮಾಜ ವ್ಯವಸ್ಥೆಯಲ್ಲಿ ಕೌಟುಂಬಿಕ ವಲಯ ಇರುವುದು ಗೋಚರಿಸುತ್ತದೆ. ಹಾಗೆಯೇ ಸಾಂಪ್ರದಾಯಿಕ ಸಮಾಜ ವ್ಯವಸ್ಥೆಯಲ್ಲಿ ಕೌಟುಂಬಿಕ ವಲಯವೂ ಸಹ ಹೆಣ್ಣಿನದಲ್ಲವೆಂಬುದು 70 ರ ದಶಕದ ಸ್ತ್ರೀವಾದಿ ಚಿಂತನೆಗಳು ದೃಢಪಡಿಸಿವೆ. ಸಾರ್ವಜನಿಕ ವಲಯದಲ್ಲಾಗಲಿ, ಕೌಟುಂಬಿಕ ವಲಯದಲ್ಲಾಗಲಿ, ಅರ್ಥಾತ್ ಒಟ್ಟು ಪ್ರಪಂಚದಲ್ಲಿ ಮಹಿಳೆಗೆ ತನ್ನದೇ ಆದ ಒಂದು ನೆಲೆಯಿಲ್ಲವೆಂಬುದು ಗುರುತಿಸಬಹುದು. ಇದನ್ನು ದಿನನಿತ್ಯವೂ ಅವಳ ಬದುಕಿನ ಮೇಲಾಗುವ ಅನ್ಯಾಯ, ಆಕ್ರಮಣಗಳಲ್ಲಿಯೇ ಕಾಣಬಹುದಾಗಿದೆ. ಹೀಗೆ ತನ್ನದಲ್ಲದ ವಲಯಕ್ಕೆ ಕಾಲಾನುಕ್ರಮದಲ್ಲಿ ಕಾಲಿರಿಸಿದ ಮಹಿಳೆ ಇಲ್ಲಿಯೂ ಸಹ ನಿರಂತರವಾಗಿ ಅತಂತ್ರ, ಅಭದ್ರತೆಗಳಿಂದಾಗಿ ದೌರ್ಜನ್ಯಕ್ಕೆ ಒಳಗಾಗುತ್ತಿರುವುದು ಹೊಸ ಸಂಗತಿಯಲ್ಲವಾದರೂ, ಇತ್ತೀಚಿನ ಸಂದರ್ಭಗಳಲ್ಲಿ ಮಹಿಳೆಯರ ಕುರಿತು ಅಧ್ಯಯನಕ್ಕೆ ಹೊಸ ರೂಪ ನೀಡುತ್ತದೆ.

ಈ ಹಿನ್ನೆಲೆಯಲ್ಲಿ ಸ್ತ್ರೀಕೇಂದ್ರಿತವಾಗಿ ಸಾರ್ವಜನಿಕ ವಲಯವನ್ನು ಅಧ್ಯಯನಕ್ಕೊಳ್ಳಪಡಿಸಿದರೆ, ಕೌಟುಂಬಿಕ ಸಂಗತಿಗಳು, ಸಾರ್ವಜನಿಕ ವಲಯದಲ್ಲಿ ಪಡೆದುಕೊಳ್ಳುವ ರೂಪ ಭಿನ್ನವಾಗುತ್ತವೆ. ಹಾಗೂ ಸಾರ್ವಜನಿಕ ವಲಯದ ಸಂಗತಿಗಳು– ಕೌಟುಂಬಿಕ ಸಂಗತಿಗಳ ಅಧಿಕಾರ ರಚನೆಯ ಸ್ವರೂಪವನ್ನು ಗಮನದಲ್ಲಿರಿಸಿ ಹೇಳುವುದಾದರೆ, ಸಾರ್ವಜನಿಕ ವಲಯದ ಬಹು ಮಟ್ಟಿನ ಗುಣಲಕ್ಷಣಗಳು ಕುಟುಂಬವಲಯದ ಗುಣಲಕ್ಷಣಗಳ ವಿಸ್ತರಣೆ ಎಂಬಂತೆ ಕಾಣುತ್ತವೆ. ಕುಟುಂಬದಲ್ಲಿನ ಶ್ರಮಕ್ಕೆ ಬರದಿರುವ ಆದಾಯವನ್ನು ಸಾರ್ವಜನಿಕ ವಲಯದಲ್ಲಿ ಪಡೆಯಲಾಗುತ್ತದೆ. ಮಹಿಳೆಯ ಬದುಕು ಕೌಟುಂಬಿಕ ಚೌಕಟ್ಟಿಗೆ ಸೀಮಿತಗೊಳಿಸಿ ಅವಳ ಗೃಹಕೃತ್ಯಗಳೆಲ್ಲವೂ ಅವಳ ದೈನಂದಿನ ಕರ್ತವ್ಯವೆಂದು ಪ್ರತಿಬಿಂಬಿಸಿ ಮಹಿಳೆಯನ್ನು ಅಂಚಿಗೆ ತಳ್ಳಲಾಗಿದೆ. ಉದಾ: ಕುಟುಂಬದಲ್ಲಿ ಮಹಿಳೆಯು ಮಾಡುವ ಊಟ, ಉಪಹಾರ, ಇತ್ಯಾದಿ ಕೆಲಸಗಳೆಲ್ಲವೂ ಅವಳ ಬದುಕಿನಲ್ಲಿ

ಆದಾಯ ರಹಿತ ದುಡಿಮೆಯಾಗಿದೆ. ಅದೇ ಅಡುಗೆ, ಕುಟುಂಬದ ಇನ್ನಿತರ ಕೆಲಸಗಳು ಸಾರ್ವಜನಿಕ ವಲಯದಲ್ಲಿ ಆದಾಯ ತರುವ ಮೂಲಗಳಾಗಿ ಪಲ್ಲಟಗೊಳಿಸಲಾಗಿದೆ. ಎಲ್ಲಿ? ಬಂಡವಾಳ ಹೂಡುವಿಕೆ ಮತ್ತು ಅದರಿಂದ ಬರುವ ಹಣದ ಅಥವಾ ಇತರೆ ರೂಪದ ಪ್ರತಿಫಲದ ಪ್ರಶ್ನೆಗಳು ಬರುತ್ತವೆಯೋ, ಅಲ್ಲಿ ಪುರುಷನ ಹಾಜರಾತಿಯಿದ್ದು, ಅದು ಪುರುಷ ಮೂಲದ ಉತ್ಪನ್ನವಾಗಿ, ಅವನ ಹಕ್ಕಾಗಿ ಪರಿವರ್ತಿತವಾಗುತ್ತದೆ. ಹೀಗೆ ಆದಾಯದ ಮೂಲವಾಗಿ, ಆರ್ಥಿಕತೆಗೆ ಸಂಬಂಧಿಸಿದ್ದಾಗಿ, ವ್ಯವಹಾರಿಕ ಜಗತ್ತಾಗಿ ರೂಪಿಸಿರುವ ಸಾರ್ವಜನಿಕ ವಲಯದಲ್ಲಿ ಮಹಿಳೆಯ ಭಾಗವಹಿಸುವಿಕೆಯು ಒಂದು ಹಂತದ ನಿರಾಕರಣೆಯಾಗಿದ್ದರೂ, ಕಾಲಾನಂತರದಲ್ಲಿ ಅವಳ ಪ್ರವೇಶ ಪ್ರಕ್ರಿಯೆಯು ಆರಂಭವಾದರೂ ಅದು ಇಲ್ಲಿಯೂ ಸಹ ಪುರುಷ ಬದುಕಿಗೆ ಪೂರಕವಾದ, ಕೌಟುಂಬಿಕ ವಲಯದ ವಿಸ್ತೃತ ರೂಪವೆಂಬಂತೆ, ಸಾರ್ವಜನಿಕ ವಲಯದಲ್ಲೂ ಸೇವಾವಲಯಕ್ಕೆ ಇಲ್ಲಿ ಸೀಮಿತಗೊಳಿಸಲಾಗಿದೆ.

ಆದರೆ ಪ್ರಸಕ್ತ ದಿನಗಳಲ್ಲಿ ಸಾರ್ವಜನಿಕ ವಲಯದಲ್ಲಿನ ಎಲ್ಲಾ ಕ್ಷೇತ್ರಗಳಲ್ಲೂ ಮಹಿಳೆ ಪಾಲ್ಗೊಳ್ಳುತ್ತಿರುವುದು ಸಂತಸದ ಸಂಗತಿಯೇ ಆಗಿದೆ. ಇದರಲ್ಲಿ ಕೆಲವು ಮಹಿಳೆಯರ (ಬೆರಳೆಣಿಕೆಗೂ ಸಿಗದಷ್ಟು) ಸಾಧನೆಗಳನ್ನು ಗಮನಿಸಿ ಒಟ್ಟು ಮಹಿಳಾ ಸಮುದಾಯವೇ ಸಬಲವಾಗಿದೆಯೆಂದು ಸಾರ್ವತ್ರೀಕರಿಸುವುದು ಪುರುಷ ಪ್ರಧಾನ ವ್ಯವಸ್ಥೆಯ ಸಂಚಾಗಿದೆ. ಸಾರ್ವಜನಿಕ ವಲಯದಲ್ಲಿ ಮನುಕುಲದ ಆರಂಭದಿಂದಲೂ ಮಹಿಳೆ ಪಾಲ್ಗೊಳ್ಳುತ್ತಿರುವುದು ಸಹಜ ಸಂಗತಿ, ಆದರೆ ಖಾಸಗಿ ಆಸ್ತಿಯ ಒಡೆತನ, ಬೀಜ–ಕ್ಷೇತ್ರ ನ್ಯಾಯ ಸಿದ್ಧಾಂತದಡಿಯಲ್ಲಿ ಮಹಿಳೆಯನ್ನು ಕೌಟುಂಬಿಕ ಚೌಕಟ್ಟಿಗೆ ಒಳಪಡಿಸಿದರೂ ಸಹ ಪುರುಷ ಬದುಕಿನ ಅವಶ್ಯಕತೆಗಾಗಿ ಮಹಿಳೆ ಸಾರ್ವಜನಿಕ ವಲಯ ಪ್ರವೇಶಿಸಿರುವುದು ಅಥವಾ ಸಾರ್ವಜನಿಕ ವಲಯದಲ್ಲಿರುವುದಕ್ಕೆ ಉದಾ: ಕೃಷಿಕ ಸಮಾಜದ ಮಹಿಳೆಯೆಂದು ಹೇಳಬಹುದು. ಆದರೆ ಈ ಎಲ್ಲ ಸಂದರ್ಭದಲ್ಲೂ ಅವಳ ಪ್ರವೇಶ ಪ್ರಕ್ರಿಯೆ ಮೊದಲುಗೊಂಡು ಎಲ್ಲಿ? ಹೇಗೆ? ಯಾವ ಸಂದರ್ಭ? ಎಂಥ? ಕೆಲಸಗಳನ್ನು ಮಾಡಬೇಕೆಂದು ಪುರಷನಿಂದಲೇ ನಿರ್ದೇಶಿಸಲಾಗುತ್ತದೆ.

ಇಂತಹ ಸನ್ನಿವೇಶಗಳಿಂದ ಜಾಗೃತಳಾದ ಮಹಿಳೆಯು ಪುರುಷನ ಅಗತ್ಯಕ್ಕನುಗುಣವಾಗಿ ಮುಂದುವರೆದು ಕೆಲಸಗಳನ್ನು ನಿರ್ವಹಿಸುತ್ತಿರುವಾಗ ಯಾವುದೇ ಆತಂಕ, ಅಡೆ–ತಡೆಗಳಿಲ್ಲ. ಪುರುಷ ಬದುಕಿನ ಸುತ್ತ ಗಿರಕಿ ಹೊಡೆಯುತ್ತಿರುವ ಅವಳ ಜೀವನ, ಅವಳ 'ಸ್ವ–ಅಸ್ತಿತ್ವ'ವು ಗೌಣವಾಗಿರುವುದನ್ನೂ ಅವಳ ಪ್ರಜ್ಞೆಗೆ ಬಾರದಂತೆ ಭ್ರಮಾತ್ಮಕತೆಯನ್ನು ಅವಳ ಬದುಕಿನುದ್ದಕ್ಕೂ ಸೃಷ್ಟಿಸಲಾಗಿದೆ. ಅವಳ ಕೆಲಸ ಮತ್ತು ಸಾಧನೆಯ ಮಧ್ಯೆ ಇರುವ ಭಿನ್ನತೆಯನ್ನು ಗುರುತಿಸಿದಂತಹ ಸ್ಥಿತಿಯಲ್ಲಿ ಅವಳನ್ನು ಇರಿಸಲಾಗಿದೆ. ಈ ಬಗೆಯ ಸಂಗತಿಗಳನ್ನು ಮೀರಿ ತಮ್ಮ ಸಾಧನೆಗಳತ್ತ ಮುಖ ಮಾಡಿದ ಮಹಿಳೆಯರು ಆ ನಿಟ್ಟಿನಲ್ಲಿ ಮುಂದುವರೆಯುವಲ್ಲಿ ಹೆಜ್ಜೆ–ಹೆಜ್ಜೆಗೂ ದೌರ್ಜನ್ಯವನ್ನು

ಅನುಭವಿಸುತ್ತಿದ್ದಾರೆ. ಉದಾ: ಕ್ರೀಡಾಪಟು ಸಾನಿಯಾ ಮಿರ್ಜಾ, ಮೊನಿಕಾ ವಿಟ್ಟಿಗ್ಗಾ, ಸೆರಿನಾ ವಿಲಿಯಮ್ಸ್ ಬಂಗಾಳದ ವಿವಾದಾತ್ಮಕ ಲೇಖಕಿ ತಸ್ಲೀಮಾ ನಸ್ರೀನ್, ರಾಜಕೀಯ ರಂಗದಲ್ಲಿರುವ ಶೋಭಾ ಕರಂದ್ಲಾಜೆ ಇತ್ಯಾದಿ. ಇಂತಹ ಮಹಿಳೆಯರ ಪಾಡೇ ಇಷ್ಟು ಕಷ್ಟಕರವಾದರೆ, ಇನ್ನು ದಿನನಿತ್ಯದ ಬದುಕಿನಲ್ಲಿ ಸಾರ್ವಜನಿಕ ವಲಯದಲ್ಲಿ ಸಾಧನೆಯ ಪಥದತ್ತ ಹೆಜ್ಜೆ ಹಾಕುತ್ತಿರುವ, ಹಾಕಬೇಕೆನ್ನುವ ಸಾಮಾನ್ಯ ಮಹಿಳೆಯ ಮೇಲಾಗುತ್ತಿರುವ ಹಿಂಸೆ-ದೌರ್ಜನ್ಯಗಳ ಸ್ವರೂಪವನ್ನು ಅರಿಯುವುದು ಮಹಾ ಪ್ರಬಂಧದ ಮೂಲ ಆಶಯವಾಗಿದೆ.

ಹೀಗೆ ಸಾರ್ವಜನಿಕ ವಲಯದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಪರಿಣಾಮವು ಸಾಮಾನ್ಯ ಸಂಗತಿಯಿಂದ ಸಾಧನೆಗಳ ಸಂದರ್ಭದಲ್ಲೂ, ವ್ಯಕ್ತಿಗತ ಅಭಿವೃದ್ಧಿಗಳ ಮೇಲೆ ಕರಾಳವಾದ ಛಾಯೆಯನ್ನು ಬೀರುತ್ತವೆ. ಮಹಿಳೆ ಸಾರ್ವಜನಿಕ ವಲಯಕ್ಕೆ ಮುಖಾಮುಖಿಯಾಗಬೇಕು. ಆದರೆ ಅಲ್ಲೆಲ್ಲಿಯೂ ಅವಳು ತನ್ನ ವೈಯಕ್ತಿಕ ಸಾಧನೆಗಳ ಬಗ್ಗೆ ಕಾಣುವ ಕನಸುಗಳು ಮಾತ್ರ ನಿಲ್ಲಬೇಕೆನ್ನುವುದೆ ಮೂಲಭೂತವಾಗಿ ದೌರ್ಜನ್ಯಕ್ಕೆಡೆ ಮಾಡಿಕೊಡುತ್ತದೆ. ಇದಕ್ಕಿರುವ ಕಾರಣ ಸಾರ್ವಜನಿಕ ವಲಯದ ಯಾವುದೇ ಉತ್ಪಾದನೆ, ಯಶಸ್ಸನ್ನು ಪುರುಷ ಸಮುದಾಯ, ಸ್ತ್ರೀ ಸಮುದಾಯದೊಂದಿಗೆ ಹಂಚಿಕೊಳ್ಳಲು ಇಷ್ಟಪಡದಿರಲು ಸಮಾಜ ವ್ಯವಸ್ಥೆಯ 'ಲಿಂಗಪೂರ್ವಾಗ್ರಹ'ಗಳೇ ಕಾರಣವಾಗಿವೆ. ಅದು ರಾಜಕೀಯ, ಉದ್ಯೋಗ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ ಯಾವುದೇ ವಲಯದಲ್ಲಿನ ಅಧಿಕಾರ ಸ್ಥಾನವನ್ನಾಗಲಿ ಹಂಚಿಕೊಳ್ಳಲು ಇಚ್ಛಿಸುವುದಿಲ್ಲ. ಮಹಿಳೆ ತನ್ನ ಬಗೆಗಿನ ವೈಯಕ್ತಿಕ ಆಸೆ-ಆಕಾಂಕ್ಷೆಗಳಿಲ್ಲದೆ ಕೇವಲ ಗಾಣದ ಎತ್ತಿನಂತೆ ಯಾವುದನ್ನು ಪ್ರಶ್ನಿಸದೆ ಕಾರ್ಯ ನಿರ್ವಹಿಸಿದರೆ ಅಲ್ಲಿ ಸಮಸ್ಯೆಗಳಿಲ್ಲವೆ ವಿನಃ ದೌರ್ಜನ್ಯವಿಲ್ಲವೆಂದಲ್ಲ. ಏಕೆಂದರೆ ಹಾಗೆ ದುಡಿಯುವುದು ಸಹ ಅವಳ ಇಚ್ಛೆಯನ್ನಾಧರಿಸಿದ್ದಲ್ಲ. ಹೀಗೆ ಮನಸ್ಸಿನ ವಿರುದ್ಧ ನಡೆಯುವ ಯಾವುದೇ ಕಾರ್ಯವು ದೌರ್ಜನ್ಯವೆಂದು ಹೇಳುವುದಾದರೆ, ಮಹಿಳೆಯ ಒಟ್ಟು ಬದುಕೇ ಅವಳಿಚ್ಛೆಗನುಗುಣವಾಗಿಲ್ಲ. ಜೊತೆಗೆ ಸಮಾಜ ನಿರ್ದೇಶಿಸಿದ ಬದುಕಿನ ಹೆಜ್ಜೆಗಳನ್ನು ಅವಳ ಬದುಕಿನ ಹೆಜ್ಜೆಗಳೆಂದು ಹಾಕಬೇಕಾಗಿರುವುದರಿಂದ, ಅವಳ ಮೇಲಿನ ದೌರ್ಜನ್ಯಗಳು ಹುಟ್ಟಿನಿಂದ -ಸಾಯುವವರೆಗೂ ಹಾಗೂ ಭ್ರೂಣದ ಹಂತದಿಂದಲೂ ಕೌಟುಂಬಿಕ-ಸಾರ್ವಜನಿಕ ಎರಡು ವಲಯಗಳಲ್ಲೂ ನಿರಂತರವಾಗಿ ನಡೆಯುತ್ತಿವೆ. ದೌರ್ಜನ್ಯದ ಮೂಲ ಆಶಯದಂತೆ, ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಆಶಯವು ಸಹ ಅಧೀನ ನೆಲೆಯ ಮಹಿಳೆ ಅಧೀನ ನೆಲೆಯಲ್ಲಿಯೇ ಮುಂದುವರಿಯಬೇಕೆನ್ನುವುದೇ ಆಗಿದೆ. ಹೀಗಿದ್ದಾಗಲೂ ಸಹಿತ ದೌರ್ಜನ್ಯವೆನ್ನುವುದು ಮಹಿಳೆ ಮನೆಯೊಳಗೆ-ಹೊರಗೆ, ಕೆಲಸಕ್ಕೆ ಹೋದಾಗ, ದಿನನಿತ್ಯ ಓಡಾಡುವಾಗ, ಗೃಹಿಣಿಯಾಗಿ ಮನೆಯಲ್ಲಿದ್ದಾಗ ಇತ್ಯಾದಿ ಸನ್ನಿವೇಶದಲ್ಲೂ, ಸಾಮಾಜಿಕವಾಗಿ ಮಹಿಳೆಯರಿಗಿರುವ ಎಲ್ಲ ನಿರ್ಬಂಧಗಳು ಪಾಲಿಸುತ್ತಿರುವಾಗಲೂ, ಪಾಲಿಸದೆ ಇರುವಾಗಲೂ ದೌರ್ಜನ್ಯವಾಗುತ್ತೆ. ಉದಾ: ಕುಡುಕ ಕುಡಿಯಲು ಕೊಡುವ ಕಾರಣದಂತೆಯೇ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಸ್ವರೂಪವು ಇದೆ.

ಹೀಗೆ ಸಾರ್ವಜನಿಕ ವಲಯದಲ್ಲಿ ಹಲವಾರು ಉಪವಲಯಗಳು ಕಂಡು ಬರುತ್ತವೆ. ರಾಜಕೀಯ, ಉದ್ಯೋಗ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ, ಆರೋಗ್ಯ ಇತ್ಯಾದಿ ವಲಯಗಳನ್ನು ಒಳಗೊಂಡಿದೆ. ಈ ಒಂದೊಂದು ವಲಯವು ಅಸಂಘಟಿತ, ಸಂಘಟಿತವೆಂಬ ಪ್ರಮುಖ ಉಪ ವಲಯಗಳಲ್ಲಿ ಹಲವಾರು ವಲಯಗಳು ಕಾಣಿಸಿಕೊಳ್ಳುತ್ತವೆ. ಉದಾ: ಆರ್ಥಿಕ ವಲಯ ಇಲ್ಲಿ ಕೃಷಿವಲಯ, ಕಟ್ಟಡ ನಿರ್ಮಾಣದ ಕೂಲಿಕಾರರ ವಲಯ, ಬೀಡಿಕಾರ್ಮಿಕರ ವಲಯ ಇತ್ಯಾದಿ. ಈ ವಲಯಗಳಲ್ಲಿ ಕಾಣಿಸುವ ಮಹಿಳೆಯರ ಆರ್ಥಿಕ, ಸಾಮಾಜಿಕ, ಕೌಟುಂಬಿಕ, ಸಾಂಸ್ಕೃತಿಕ ಸಮಸ್ಯೆಗಳು, ದೌರ್ಜನ್ಯಗಳು ಕಾಣಿಸಿಕೊಳ್ಳುತ್ತವೆ. ಹಾಗಾಗಿ ಈ ಬಗೆಯ ವಿಸ್ತೃತ ವ್ಯಾಪ್ತಿಯನ್ನು ಹೊಂದಿರುವ ಸಾರ್ವಜನಿಕ ವಲಯದಲ್ಲಿನ ರಾಜಕೀಯ ಮತ್ತು ಉದ್ಯೋಗ ವಲಯದ ಮಹಿಳೆಯರ ಮೇಲಾಗುವ ದೌರ್ಜನ್ಯಗಳನ್ನು ಮಾತ್ರ ಕ್ಷೇತ್ರಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ.

ರಾಜಕೀಯ ವಲಯವು ಒಟ್ಟು ಸಾಮಾಜಿಕ ವಲಯದಲ್ಲಿನ ಪ್ರಮುಖ ವಲಯ ಹಾಗೂ ಒಟ್ಟು ಪುರುಷ ಪ್ರಧಾನ ಚಿಂತನೆಗಳನ್ನು ಸ್ಥಾಪಿಸುವ ವಲಯವೆಂದು ಹೇಳಬಹುದು. ಮಹಿಳೆಯರು ಗೃಹ ಬಂಧನದಲ್ಲಿರುವುದರಿಂದ ಅವರು ಸಾರ್ವಜನಿಕ ಬದುಕಿನ ಅದರಲ್ಲೂ ರಾಜಕೀಯವನ್ನು ನಡೆಸಲು ಅಸಮರ್ಥರೆಂದು ಸ್ಥಾಪಿತ ಚಿಂತನೆಯೊಂದನ್ನು ರೂಪಿಸಿರುವುದರಿಂದ, ಇಂದಿಗೂ ಸಹ ಮಹಿಳಾ ಮೀಸಲಾತಿ (ರಾಜ್ಯಸಭೆ/ಲೋಕಸಭೆ)ಯ ವಿಷಯವೂ ಚರ್ಚೆಯಲ್ಲಿಯೇ ಸಾಗುತ್ತಿದೆಯೇ ವಿನಃ ಜಾರಿಗೆ ಬರುತ್ತಿಲ್ಲ. ಬದಲಾಗಿ ಮಹಿಳಾ ಮೀಸಲಾತಿಯ ವಿಷಯದಲ್ಲಿ ಮೇಲ್ನೋಟಕ್ಕೆ ಯಾವ ರಾಜಕೀಯ ಪಕ್ಷಗಳು ನಿರಾಕರಣೆಯನ್ನು ತೋರುತ್ತಿಲ್ಲ. ಆದರೆ ಈ ಮೀಸಲಾತಿಯು ಜಾರಿಗೆ ಬರದಂತೆ ಒಳ ಮೀಸಲಾತಿಯಂತಹ ತಂತ್ರಗಳನ್ನು ರೂಪಿಸಿ, ಮಹಿಳಾ ಮೀಸಲಾತಿಯನ್ನು ತಡೆ ಹಿಡಿಯಲಾಗುತ್ತದೆ. ಇಂತಹ ಮಹಿಳಾ ಮೀಸಲಾತಿಯನ್ನು ಗ್ರಾಮ ಪಂಚಾಯ್ತಿಗಳ ಮಟ್ಟದಲ್ಲಿ ೫೦% ಒದಗಿಸಲಾಗಿದ್ದರೂ. ಇದು ನೆಪಮಾತ್ರ ಅಥವಾ ನಾಮಮಾತ್ರ ಅಧಿಕಾರವಾಗಿದೆ. ಮಹಿಳೆಯರ ಹೆಸರಿನಲ್ಲಿ ಅವಳ ಪತಿಯೋ, ಗ್ರಾಮದ ಮುಖಂಡನೋ ಆಡಳಿತ ನಡೆಸುವುದು ಕಂಡುಬರುತ್ತಿದೆ. ಈ ನಿಟ್ಟಿನಲ್ಲಿ ಮಹಿಳೆಯರು ರಾಜಕೀಯವನ್ನು ನಡೆಸಲು ಅಸಮರ್ಥಳೆಂದು ಸಾಬೀತು ಪಡಿಸಲಾಗುತ್ತಿದೆ. ಈ ಬಗೆಯ ಅಧಿಕಾರಗಳನ್ನು ಕುರಿತು ಗ್ರಾಮ ಪಂಚಾಯತಿ / ಪಟ್ಟಣ ಪಂಚಾಯ್ತಿಯ ಅಧ್ಯಕ್ಷ ಅಥವಾ ಇತರೆ ಹುದ್ದೆಯಲ್ಲಿರುವ ಮಹಿಳೆಯರ ಮೇಲೆ ಆಕ್ರಮಣಗಳನ್ನು ಎಸಗಲಾಗುತ್ತದೆ, ಗ್ರಾಮ ಸಭೆಗಳಲ್ಲಿ ಅವಳು ಮಹಿಳೆಯೆನ್ನುವ ಕಾರಣದಿಂದಲೋ, ಜಾತಿಯಲ್ಲಿ ದಲಿತ ಅಥವಾ ಇನ್ನಿತರ ಕಾರಣದಿಂದ ಅವಳನ್ನು ಅಧ್ಯಕ್ಷ ಸ್ಥಾನವನ್ನು (ಸಭೆಯಲ್ಲಿ) ಅಲಂಕರಿಸುವುದಿಲ್ಲ. ಈ ರೀತಿಯ ಅವಮಾನಗಳಿಂದ ಅವಳ ಮೇಲೆ ದೌರ್ಜನ್ಯವನ್ನು ಎಸಗುವುದು. ಹಲವಾರು ಪ್ರಕರಣಗಳಲ್ಲಿ ಕಂಡುಬರುತ್ತದೆ. ಹೀಗೆ ಅಧಿಕಾರದ ಕೇಂದ್ರವನ್ನು ಮಹಿಳೆಗೆ ನಿರಾಕರಿಸುವಂತೆಯೇ ರಾಜಕೀಯ ವಲಯದಲ್ಲಿ ಮಹಿಳೆಯ ಅಧಿಕೃತ ಪ್ರವೇಶವನ್ನು ತಿರಸ್ಕರಿಸುವ ತಂತ್ರಗಾರಿಕೆಯ ಪರಿಣಾಮವೇ ದೌರ್ಜನ್ಯವಾಗುತ್ತದೆ. ಈ ಕೆಲವು ಅಂಶಗಳಾಧಾರಿತವಾಗಿ ಸಾರ್ವಜನಿಕ ವಲಯದ

ದೌರ್ಜನ್ಯವನ್ನು ಪ್ರತಿನಿಧಿಸುವ ರಾಜಕೀಯ ವಲಯದಲ್ಲಾಗುವ ದೌರ್ಜನ್ಯವನ್ನು ಅಧ್ಯಯನಕ್ಕೊಳಪಡಿಸಲಾಗಿದೆ.

ಇದೇ ಬಗೆಯಲ್ಲಿ ಏಂಗೆಲ್ಸ್‌ರ ವಿಚಾರಧಾರೆಯಂತೆ ಮಹಿಳೆ ಉತ್ಪಾದನಾ ವಲಯದಿಂದ ಹೊರಗಿದ್ದು, ಪುರುಷನ ಆಸ್ತಿಯಾಗಿರುವುದು ಒಟ್ಟು ಮಹಿಳಾ ಸಮಸ್ಯೆಯ ಮೂಲವೆಂಬುದನ್ನು ಪರಿಗಣಿಸಿ, ಇತ್ತೀಚಿನ ದಿನಗಳಲ್ಲಿ ಆರ್ಥಿಕ ಸಬಲೀಕರಣದ ಪ್ರತೀಕವಾಗಿ ' ಉದ್ಯೋಗ ವಲಯ' ದಲ್ಲಿ ಪಾಲ್ಗೊಳ್ಳುತ್ತಿದ್ದಾಳೆ. ಹೀಗೆ ಉದ್ಯೋಗ ವಲಯಕ್ಕೆ ಪ್ರವೇಶ ಪಡೆದ ಮಹಿಳೆ ಒಬ್ಬ ಸಾಮಾನ್ಯ ಗೃಹಿಣಿಗಿಂತಲೂ ಹೆಚ್ಚಿನ ರೀತಿಯ ಮಾನಸಿಕ – ಬೌದ್ಧಿಕ – ದೈಹಿಕ ಶ್ರಮವನ್ನು ಹಾಕಬೇಕಾಗುತ್ತಿದೆ. ಕುಟುಂಬದ ಒಳ – ಹೊರ ವಲಯಗಳನ್ನು ಅಚ್ಚುಕಟ್ಟಾಗಿ, ದಣಿವಿಲ್ಲದೆ, ನಿರಾಸಕ್ತಿಯಿಲ್ಲದೆ ನಿಭಾಯಿಸುವ ಮಹಿಳೆಯನ್ನು ಆಧುನಿಕ (ಸಬಲೀಕೃತ) ಮಹಿಳೆಯನ್ನಾಗಿ ವ್ಯವಸ್ಥೆ ಪ್ರತಿನಿಧಿಸುತ್ತಿದೆ. ಪುರುಷ ಪ್ರಧಾನ ವ್ಯವಸ್ಥೆಯ ಬದಲಾದ ಸ್ವರೂಪದ ಹೊಸ ಬಗೆಯ ಸಂಕೋಲೆಯೇ ಆಧುನಿಕ ಮಹಿಳೆಯ ಸುತ್ತ ಹೆಣೆಯಲಾಗುತ್ತದೆ. ಹಾಗಾದರೆ ಈ ಉದ್ಯೋಗಸ್ಥ ಮಹಿಳೆಯು ಆರ್ಥಿಕ ಸ್ವಾವಲಂಬನೆಯನ್ನು ಹೊಂದಿದ್ದಾಳೆಯೇ? ಅವಳ ಉದ್ಯೋಗ ಅವಳ ಅಸ್ತಿತ್ವ ರೂಪಿಕೆಗೆ, ಸಾಧನೆಗೆ ನಾಂದಿಯಾಗಿದೆಯೆ? ಎಂಬ ಪ್ರಶ್ನೆಗಳಿಗೆ ಸಕಾರಾತ್ಮಕ ಉತ್ತರಗಳು ದೊರೆಯುವುದು ಅತೀ ವಿರಳ ಸಾಧಾರಣವಾಗಿ ಉದ್ಯೋಗಸ್ಥ ಮಹಿಳೆಯು ಅವಳ ದುಡಿಮೆಯ ಮೇಲಿನ ಹಣದ ಸ್ವಾತಂತ್ರ್ಯವೂ ಅವಳಿಗಿಲ್ಲದಂತಹ ಸಂದರ್ಭಗಳು ಸಾಕಷ್ಟಿವೆ. ಎಂಬುದು ಹೊಸ ವಿಚಾರವಲ್ಲ.

'ಉದ್ಯೋಗ ವಲಯ'ದಲ್ಲಿರುವ ಮಹಿಳೆಯು ವಿಭಿನ್ನ ಬಗೆಯ ದೌರ್ಜನ್ಯಕ್ಕೆ ಬಲಿಯಾಗುತ್ತಿದ್ದಾಳೆ. ಉದ್ಯೋಗದಿಂದಾಗಿ ಅವಳು ಕುಟುಂಬದಲ್ಲಿನ ನೆಮ್ಮದಿ ಕಳೆದುಕೊಳ್ಳುವುದು, ಕುಟುಂಬದಲ್ಲಿನ ಸದಸ್ಯರ ಭಯದಿಂದ ಉದ್ಯೋಗವಲಯದಲ್ಲಿ ಮುಕ್ತವಾಗಿ ಬೆರೆಯಲು ಸಾಧ್ಯವಾಗದಂತಹ ಒತ್ತಡಗಳು, ಇಬ್ಬಗೆಯ ದುಡಿಮೆಯ ಹೊರೆ ಇತ್ಯಾದಿಗಳೆಲ್ಲವೂ ಅವಳು ಸಾರ್ವಜನಿಕ ವಲಯದಿಂದ–ಖಾಸಗಿವಲಯಕ್ಕೆ ಮರುಕಳಿಸಬೇಕೆಂಬುದೇ ಸಾಂಪ್ರದಾಯಿಕ ಸಮಾಜ ವ್ಯವಸ್ಥೆಯ ತಂತ್ರಗಾರಿಕೆ. ಈ ಕಾರಣಗಳಿಂದಾಗಿ ಮಹಿಳೆ ಸಾರ್ವಜನಿಕ ವಲಯದ ಉದ್ಯೋಗದ ವಲಯಗಳಲ್ಲಿ ಅನುಭವಿಸುವ ದೌರ್ಜನ್ಯದ ಸ್ವರೂಪ ಅವಳ ಒಟ್ಟು ಬದುಕಿನ ಮೇಲಾಗುವ ಕರಾಳ ಛಾಯೆಯಾಗಿದೆ. ಆರ್ಥಿಕ ಸ್ವಾವಲಂಬನೆಯನ್ನು ಒದಗಿಸಬೇಕಾದ ಉದ್ಯೋಗ ವಲಯ, ಅವಳ ಸಬಲೀಕರಣದ ಬದಲಾಗಿ ದೌರ್ಜನ್ಯಕ್ಕೆ ಗುರಿಯಾಗಿಸುವುದರ ಮೂಲಕ ಅವಳ ಅಸ್ತಿತ್ವವನ್ನು ಕುಬ್ಜಗೊಳಿಸಲಾಗುತ್ತಿದೆ. ಈ ಉದ್ಯೋಗವಲಯ ಸಂಘಟಿತ–ಅಸಂಘಟಿತ ವಲಯಗಳಲ್ಲಿ ವಿಭಜಿಸಿಕೊಂಡಾಗ ಅದರಲ್ಲಿಯೂ ಹತ್ತಾರು ಉಪವಲಯಗಳು ಕಂಡು ಬರುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ಮಹಿಳಾ ಪೋಲಿಸರ ಮೇಲಾಗುವ ದೌರ್ಜನ್ಯವನ್ನು ಅರಿಯುವ ಯತ್ನವನ್ನು ಮಾಡಲಾಗಿದೆ.

ದೇಶದ ಜನ ಸಮುದಾಯಕ್ಕೆ ರಕ್ಷಣೆಯನ್ನು ಒದಗಿಸುವ, ಅಧಿಕಾರಯುತವಾದ ಈ ಹುದ್ದೆಯಲ್ಲಿ ಸ್ವಯಂ ಮಹಿಳಾ ಪೋಲಿಸರು ಸುರಕ್ಷಿತರೆ? ಅವರ ಆಕಾಂಕ್ಷೆಗಳಿಗನುಗುಣವಾಗಿ ಜನ ಸಮುದಾಯಕ್ಕೆ ಅವರು ರಕ್ಷಣೆಯನ್ನೊದಗಿಸಬಲ್ಲರೆ? ಅದರಲ್ಲೂ ಜನಸಾಮಾನ್ಯ ಮಹಿಳೆಯರನ್ನು ಒಳಗೊಂಡು ಇತರೆ ಮಹಿಳೆಯರಿಗೆ ಉಂಟಾಗುತ್ತಿರುವ ಸಮಸ್ಯೆಗಳನ್ನು, ಆಕ್ರಮಣಗಳನ್ನು ಸಮರ್ಥವಾಗಿ ನಿಭಾಯಿಸಲಾಗುತ್ತಿದೆಯೆ? ಎಂಬಂಶಗಳ ಜೊತೆಜೊತೆಗೆ, ಈ ಉದ್ಯೋಗದಲ್ಲಿ ಅವರು ಎದುರಿಸುತ್ತಿರುವ ಸಮಸ್ಯೆಗಳು, ಅವುಗಳ ನಿವಾರಣೆಯ ಅಥವಾ ಸಾಮಾನ್ಯ ಸಂದರ್ಭಗಳಲ್ಲಿಯೂ ಅವರು ಮೊದಲು ಸುರಕ್ಷಿತರೆ? ಎಂಬ ಪ್ರಶ್ನೆಯೊಂದಿಗೆ ಅಧ್ಯಯನ ಸಾಗುತ್ತದೆ. ಸರ್ವೇ ಸಾಮಾನ್ಯವಾಗಿ ಈ ಉದ್ಯೋಗದಲ್ಲಿರುವ, ಮಹಿಳಾ ಪೊಲೀಸರ ಮೇಲಾಗುತ್ತಿರುವ, ದೌರ್ಜನ್ಯಗಳ ಕುರಿತು ಮಾಧ್ಯಮಗಳಲ್ಲಿ ಕಂಡು ಬಂದಿರುವ ಪ್ರಮಾಣ ತೀರ ಕಡಿಮೆ ಅಂದ ಮಾತ್ರಕ್ಕೆ ಇಲ್ಲಿ ದೌರ್ಜನ್ಯವೇ ಇಲ್ಲವೆಂದಲ್ಲ. ಈ ಒಂದು ಕುತೂಹಲದ ಪ್ರಶ್ನೆಯೊಂದಿಗೆ ಮಹಿಳಾ ಪೋಲಿಸರ ಮೇಲಾಗುವ ಆಕ್ರಮಣಗಳನ್ನು ಶೋಧಿಸುವ ಪ್ರಯತ್ನಕ್ಕೆ ಉದ್ಯೋಗ ವಲಯದ ಪ್ರಾತಿನಿಧಿಕ ಭಾಗವಾಗಿ ಮಹಿಳಾ ಪೋಲಿಸರನ್ನು ಆಯ್ದುಕೊಳ್ಳಲಾಗಿದೆ.

"ಸಂಘಟಿತ ವಲಯ"ದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಪ್ರಮಾಣ ಹೆಚ್ಚು ಗೋಚರಿಸುತ್ತಿಲ್ಲ ಎಂಬ ಊಹೆಯೊಂದಿಗೆ ಸಾರ್ವಜನಿಕ ವಲಯದಲ್ಲಿ ಎರಡು ವಲಯಗಳಾದ ರಾಜಕೀಯ ಮತ್ತು ಉದ್ಯೋಗ ವಲಯವನ್ನು ವಿಸ್ಕೃತ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದ್ದು, ಈ ವಲಯದಲ್ಲಿನ ಸಂಘಟಿತ ಮತ್ತು ಅಧಿಕಾರಯುಕ್ತವಾದ ಗ್ರಾಮ ಪಂಚಾಯ್ತಿ ಮತ್ತು ಮಹಿಳಾ ಪೋಲಿಸರನ್ನು ಕ್ಷೇತ್ರದ ಅಧ್ಯಯನಕ್ಕೆ ಒಳಪಡಿಸಲಾಗುತ್ತದೆ.

ಮಹಿಳೆಯರ ಮೇಲಿನ ದೌರ್ಜನ್ಯಗಳು ಬಹುತೇಕ ಏಕಾಂತದ ಸಂದರ್ಭಗಳಲ್ಲಿ, ಖಾಸಗಿ ಸ್ಥಳಗಳಲ್ಲಿ ನಡೆಯುವ ಸಂಭವಗಳು ಹೆಚ್ಚು. ಆ ಕಾರಣವಾಗಿ ಒಬ್ಬ ಅಸಂಘಟಿತ ವಲಯದಲ್ಲಿನ ಕೂಲಿಕಾರ್ಮಿಕ ಅಥವಾ ಇನ್ನಿತರಯಾವುದೇ ಮಹಿಳೆಯು ಅನುಭವಿಸುವ ದೌರ್ಜನ್ಯಕ್ಕೂ, ಸಂಘಟಿತವಲಯದಲ್ಲಿ ಒಬ್ಬ ಆಪ್ತ ಸಹಾಯಕಿಯೋ ಐಟಿ, ಬಿಟಿಯಲ್ಲಿ ಕಾರ್ಯನಿರ್ವಹಿಸುವ ಮಹಿಳೆಯೋ ಅನುಭವಿಸುವ ದೌರ್ಜನ್ಯದ ಸ್ವರೂಪಗಳಲ್ಲಿ ಸಾಕಷ್ಟು ಭಿನ್ನತೆಯಿದೆ. ಯಾವುದೇ ಒಂದು ಸಂಗತಿ – ಸಮಸ್ಯೆಯ ಕುರಿತು ಅರಿವಿಗೆ ಬರುವ ಮುನ್ನ ಅನುಭವಿಸುವುದು, ಅರಿವಿಗೆ ಬಂದ ನಂತರ ಅನುಭವಿಸುವ ಪ್ರಮಾಣ ಹೆಚ್ಚು. ಸಂಘಟಿತ ವಲಯದಲ್ಲಿನ ಮಹಿಳೆಯರು ಪ್ರಜ್ಞಾವಂತರಾಗಿ ಅನುಭವಿಸುವ ಮಾನಸಿಕ ದೌರ್ಜನ್ಯವು ಹೆಚ್ಚು ಪರಿಣಾಮಕಾರಿಯಾದುದಾಗಿದೆ. ಆ ಕಾರಣವಾಗಿ ಮೇಲೆ ಸೂಚಿಸಿದ ವಲಯಗಳನ್ನು ವಿಶೇಷವಾಗಿ ಅಧ್ಯಯನಕ್ಕೊಳಪಡಿಸಲಾಗಿದೆ.

**ಸಂಶೋಧನೆಯ ಪ್ರಾಕಲ್ಪನೆ:**

ಕೌಟುಂಬಿಕ ವಲಯದ ಹಿಂಸೆ–ದೌರ್ಜನ್ಯಗಳ–ವಿಸ್ತೃತರೂಪವೇ ಸಾರ್ವಜನಿಕ ವಲಯದ ಹಿಂಸೆ–ದೌರ್ಜನ್ಯಗಳಲ್ಲಿ ಕಾಣಬಹುದೆಂಬ ಪ್ರಾಕಲ್ಪನೆಯನ್ನಾಧರಿಸಿ ಪ್ರಸ್ತುತ ಅಧ್ಯಯನವು ಸಾಗುತ್ತದೆ.

ಈವರೆಗೂ ಕುಟುಂಬದಲ್ಲಾಗುತ್ತಿರುವ ಹಿಂಸೆ, ದೌರ್ಜನ್ಯಗಳು ಅದೃಶ್ಯವಾಗಿರುತ್ತಿದ್ದವು. ಕೌಟುಂಬಿಕ ವಲಯದ ಹಿಂಸೆ-ದೌರ್ಜನ್ಯಗಳ ಅಪ್ರಕಟಿತ ಸಂದರ್ಭಗಳಿಗೆ ಸಾಮಾಜಿಕ ಚಿಂತನೆಗಳು, ಸಾಂಸ್ಕೃತಿಕ ಆಚರಣೆ, ರೂಢಿ, ಸಂಪ್ರದಾಯಗಳೆಲ್ಲವು ಸಹ ಬಹು ಮುಖ್ಯ ಕಾರಣಗಳಾಗಿವೆ. ಪುರುಷಪರವಾಗಿ ಸಂರಚಿಸಲ್ಪಟ್ಟ ಈ ಅಲಿಖಿತ ನಿಯುವಮಾವಳಿಗಳೆಲ್ಲವುಗಳಿಂದಾಗಿ ಮಹಿಳೆಗೆ ಬಹಳ ರಕ್ಷಣೆಯನ್ನೊದಗಿಸುವ, ಗೌರವ ತರುವಂತಹ ಒಂದೇ ಒಂದು ಸ್ಥಳ 'ಕುಟುಂಬ' ವೆಂಬುದು ಮಿಥ್ಯಾಕಲ್ಪನೆಯಾಗಿದೆ. ಇನ್ನು ಗೌರವ, ರಕ್ಷಣೆ, ಭದ್ರತೆಗಳಿಗೆ ಅವಕಾಶವೆ ಇಲ್ಲವೆಂದು ಪ್ರಕಟವಾಗುವ ಭಾಗಗಳಲ್ಲಿ ದೌರ್ಜನ್ಯ – ಹಿಂಸೆಯ ಸ್ವರೂಪ ಭೀಕರವಾಗಿದೆ. ಸಾರ್ವಜನಿಕ ವಲಯದಲ್ಲಿನ ಎಲ್ಲ ಹಿಂಸೆ-ದೌರ್ಜನ್ಯಗಳು ಮೂರ್ತವಾಗಿವೆಯೆಂಬುದು ಸಹ ಪುರಷ ರೂಪಿ ವ್ಯವಸ್ಥೆಯಲ್ಲಿರುವ ಭೂಮಿ ಮತ್ತು ಒಡೆಯನ ಪರಿಕಲ್ಪನೆಯ ಹಿನ್ನೆಲೆಯಲ್ಲಿ ವಿಭಜಿತಗೊಂಡ ಸ್ತ್ರೀ ಪುರುಷ ಸಂಬಂಧಗಳಲ್ಲಿ ಯಾವುದೆ ನಿರ್ಬಂಧ, ಕಟ್ಟುಪಾಡಿಗೊಳಗಾಗದೆ ಯಾವುದೇ ಪುರುಷನು ಮಹಿಳಾ ಸಮುದಾಯದ ಮೇಲೆ ಆಕ್ರಮಣವೆಸಗಬಹುದೆಂಬ ಮೌಖಿಕ ಕಾನೂನಿನ ಹಿನ್ನೆಲೆಯಲ್ಲಿ ದೌರ್ಜನ್ಯ-ಹಿಂಸೆಯ ಆಕ್ರಮಣಗಳು ಕಾಣಿಸಿಕೊಳ್ಳುತ್ತವೆ.

ಕೌಟುಂಬಿಕ ವಲಯದಂತೆಯೇ ಸಾರ್ವಜನಿಕ ವಲಯದಲ್ಲಿನ ಕೆಲವು ಸ್ಥಳಗಳಾದ ದೇವಸ್ಥಾನ, ಸರ್ಕಾರಿ ಕಛೇರಿಗಳು, ಸಂಸ್ಥೆಗಳು, ಕಾರ್ಖಾನೆ ಇತ್ಯಾದಿಗಳನ್ನು ಸುರಕ್ಷಿತವೆಂದು ಬಿಂಬಿಸಲಾಗಿದೆ. ಕಾರ್ಖಾನೆಯನ್ನಾಧರಿಸಿ ವಿವರಿಸುವುದಾದರೆ, ಅಲ್ಲಿ ಕಟ್ಟಿಕೊಳ್ಳುವ 'ಯೂನಿಯನ್'ಗಳು ಸಾಮಾನ್ಯವಾಗಿ ಎಲ್ಲ ಕಾರ್ಮಿಕರ ಸಮಸ್ಯೆಯ ಪರಿಹಾರಗಳಿಗೆ, ಕೆಲವು ಸವಲತ್ತುಗಳಿಗಾಗಿ ರೂಪಿತವಾಗಿರುತ್ತದೆಯಾದರೂ ಇಲ್ಲಿ ಮಹಿಳಾ ಕಾರ್ಮಿಕರ ಸಮಸ್ಯೆಗಳು, ಅವಶ್ಯಕತೆಗಳು ನಿವಾರಣೆಯಾಗುವುದರತ್ತ ಯಾವುದೇ ಆಲೋಚನೆಗಳಾಗಲಿ, ಕಾಳಜಿಗಳಾಗಲಿ ಗೋಚರಿಸುವುದಿಲ್ಲ. ಇಂತಹ ಸನ್ನಿವೇಶಗಳಲ್ಲಿ ಮಹಿಳೆಯ ಸಮಸ್ಯೆಗಳು, ಅವಳ ಮೇಲಾಗುವ ದೌರ್ಜನ್ಯ-ಹಿಂಸೆಗಳು ಅಪ್ರಕಟಿತವಾಗಿಯೇ ಉಳಿಯುತ್ತವೆ. ಸಾರ್ವಜನಿಕ ವಲಯದಲ್ಲಿನ ಹಿಂಸೆ - ದೌರ್ಜನ್ಯಗಳ ಮೂರ್ತವಾಗಿರುವುದು ಮಾರ್ಕೆಟ್, ಪ್ರಯಾಣ ಇತ್ಯಾದಿ ಸಂದರ್ಭಗಳಲ್ಲಿ. ಆದ್ದರಿಂದ ಸಾರ್ವಜನಿಕ ಸ್ಥಳದಲ್ಲಾಗುವ ದೌರ್ಜನ್ಯ ಹಿಂಸೆಗಳು ಮೂರ್ತವಾಗಿದ್ದು, ಸಾರ್ವಜನಿಕ ಸ್ಥಳದಲ್ಲಿ ಕೆಲಸ ಮಾಡಲು ಪ್ರವೇಶಿಸುವ ಹೆಂಗಸರು ನಿಗದಿತ ವಲಯಗಳಿಗೆ ಒಳಪಡುತ್ತಾರೆ.

ಉದಾ: ಕಛೇರಿ, ಕಾರ್ಖಾನೆ, ರಾಜಕೀಯ ಪಕ್ಷಗಳು ಇತ್ಯಾದಿಗಳಲ್ಲಿ ಒಳಗಾಗುವ ಮಹಿಳೆಯರ ಮೇಲಿನ ದೌರ್ಜನ್ಯ-ಹಿಂಸೆಗಳು ಅಪ್ರಕಟವಾಗಿರುತ್ತವೆ. ಒಟ್ಟಿನಲ್ಲಿ ಕೌಟುಂಬಿಕ ವಲಯ ಮತ್ತು ಸಾರ್ವಜನಿಕ ವಲಯಗಳೆರಡರಲ್ಲೂ ಮಹಿಳೆಯ ಅಭದ್ರತೆ ಮತ್ತು ಅರಕ್ಷಿತತೆಯ ಪ್ರಶ್ನೆಯನ್ನಾಧರಿಸಿ ಪ್ರಸ್ತುತ ಅಧ್ಯಯನದ ಊಹಾತ್ಮಕ ಸಿದ್ಧಾಂತವನ್ನು ರೂಪಿಸಿಕೊಳ್ಳಲಾಗಿದೆ.

ಮಹಿಳೆಯರು ಇಂದಿಗೂ ಕೆಲವು ವಿಷಯಗಳಿಗೆ ಮುಖಾಮುಖಿಯಾಗುವುದು ಧರ್ಮಬಾಹಿರವಾದದ್ದೆಂದು ಪರಿಗಣಿತವಾಗಿದೆ. ಯಾವುದೇ ಮಹಿಳೆಯು ಅಂತಹ ವಿಷಯಗಳ

ಕುರಿತು ಮಾತನಾಡಲಿಚ್ಛಿಸಿದರೆ ಅವಳನ್ನು ಸಾಮಾಜಿಕ ನಿಂದೆಗೆ, ಕ್ರೂರವಾದ ಶಿಕ್ಷೆಗೆ ಗುರಿಪಡಿಸಲಾಗುತ್ತದೆ. ಈ ಬಗೆಯ ಕಾರಣಗಳಿಂದಾಗಿ ಇಂದಿಗೂ ಸಹ ಮಹಿಳೆಯರ ಅನುಭವಗಳನ್ನು ಹೊರತೆಗೆಯುವುದು ಕಷ್ಟದ ಕೆಲಸವೇ. ಕೆಲವೊಂದರಲ್ಲಿ ಸಾರ್ವಜನಿಕ ವಲಯವೂ ಸಹ ಮಹಿಳೆಯರ ಪ್ರವೇಶವನ್ನು ನಿರಾಕರಿಸಿದ್ದು, ಇವತ್ತಿಗೂ ಸಹ ಹಲವಾರು ಕುಟುಂಬ, ಸಮುದಾಯಗಳು ಈ ಬಗೆಯ ಚಿಂತನೆಯಾಚೆಗೆ ದಾಟಿಲ್ಲ. ಇಂತಹ ಸಂದಿಗ್ಧತೆಗಳಲ್ಲಿ 'ಲಿಂಗ ಸಂಬಂಧಿ' ವಿಷಯವನ್ನು ಅಧ್ಯಯನ ಮಾಡುವುದು ಅತ್ಯಂತ ಸಂಕೀರ್ಣವಾಗಿದೆ. ಸಾರ್ವಜನಿಕ ವಲಯದಲ್ಲಿನ ಮಹಿಳೆಯ ವಿರುದ್ಧ ನಡೆಯುವ ದೌರ್ಜನ್ಯವೂ ಇದಕ್ಕೆ ಹೊರತಾಗಿಲ್ಲ. ಹಾಗೂ ಈ ಬಗೆಯ ಅಧ್ಯಯನಗಳು ಹೆಚ್ಚು ಅವಶ್ಯಕವಾಗಿದೆ. ಈ ಒಟ್ಟು ಅಧ್ಯಯನದಲ್ಲಿ ಕೇವಲ ಸಾರ್ವಜನಿಕ ವಲಯದಲ್ಲಿನ ಸಮಸ್ಯೆಯನ್ನು, ದೌರ್ಜನ್ಯಗಳನ್ನು ಗುರುತಿಸುವುದಷ್ಟೇ ಅಲ್ಲದೆ, ಅದನ್ನು ನಿಭಾಯಿಸುವ ತಂತ್ರಗಾರಿಕೆ, ಸೂಕ್ತಪರಿಹಾರಗಳು, ಸಲಹೆಗಳು ಕಂಡುಕೊಳ್ಳುವ ನಿಟ್ಟಿನಲ್ಲಿ ಸಾಗಿದೆ. ಈ ಬಗೆಯಲ್ಲಿ ರೂಪಿಸಿಕೊಳ್ಳಲಾದ ವಿಷಯದ ಅಧ್ಯಯನಕ್ಕೆ ಕೆಲವು ಪ್ರಮುಖ ಉದ್ದೇಶಗಳಿವೆ.

### ೧.೨ ಅಧ್ಯಯನದ ಉದ್ದೇಶಗಳು

ಸಮಾಜ ವ್ಯವಸ್ಥೆಯ ಭಾಗವಾಗಿರುವ ಸಾರ್ವಜನಿಕವಲಯ ಸಾಕಷ್ಟು ವಿಶಾಲತೆಯನ್ನು ಹೊಂದಿದೆ. ಹಲವಾರು ಶ್ರೇಣೀಕರಣಗಳಿಂದ ಕೂಡಿದ ವ್ಯವಸ್ಥೆಯಲ್ಲಿ, ಅತ್ಯಂತ ಸಂಕೀರ್ಣವಾದ 'ಲಿಂಗ ಶ್ರೇಣೀಕರಣ'ವನ್ನು ಸಾರ್ವಜನಿಕ ವಲಯದಲ್ಲಿ ಹೇಗೆ ಕಟ್ಟಲ್ಪಟ್ಟಿದೆ ಹಾಗೂ ಗಟ್ಟಿಗೊಳಿಸಲಾಗಿದೆ ಎಂಬುದನ್ನು ಅರಿಯುವ ಪ್ರಮುಖ ಪ್ರಯತ್ನ ಈ ಅಧ್ಯಯನದಾಗಿದೆ. ಈ ಹಿನ್ನೆಲೆಯಲ್ಲಿ ಈವರೆಗೂ ನಡೆದ ಕೆಲವು ಅಧ್ಯಯನಗಳು, ಸಂಶೋಧನಾ ಬರಹಗಳು, ಪತ್ರಿಕಾ ಲೇಖನಗಳನ್ನು ಸಮೀಕ್ಷೆ ಮಾಡುವುದರ ಮೂಲಕ ಅಧ್ಯಯನದ ಉದ್ದೇಶಗಳನ್ನು ರೂಪಿಸಿಕೊಳ್ಳಲಾಗಿದೆ.

ಕೆಲವು ಅಧ್ಯಯನಗಳ ಸಮೀಕ್ಷೆಯನ್ನು ಆಧರಿಸಿ ಹೇಳುವುದಾದರೆ, "ಸಾರ್ವಜನಿಕ ವಲಯದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ"ದ ಕುರಿತಾಗಿ ಕನ್ನಡದಲ್ಲಿ ಸಮಗ್ರ ಅಧ್ಯಯನಗಳು ಕಂಡುಬಂದಿಲ್ಲ. ಪ್ರಸ್ತುತ ಸಂಶೋಧನಾ ವಿಷಯವು ಬಹಳಷ್ಟು ವಿಸ್ತಾರವಾದ ಕ್ಷೇತ್ರವಾಗಿದೆ. ಹಲವಾರು ಬಗೆಯ ಅಧ್ಯಯನಗಳನ್ನು ಮಾಡುವ ಸಾಧ್ಯತೆಗಳಿವೆ. ಈ ಸಂಬಂಧಿತ ಕೆಲವು ಬಿಡಿ ಲೇಖನಗಳು, ಕೃತಿಗಳು ಬಂದಿವೆ. ಉದಾ: ಮಹಿಳೆ, ಸಾಹಿತ್ಯ, ಸಂಸ್ಕೃತಿ – ಸಾ.ರಾ. ಅಬೂಬಕರ, ಮಹಿಳೆ ಮತ್ತು ಕಾನೂನು – ಡಾ. ಗೀತಾಕೃಷ್ಣಮೂರ್ತಿ ಇತ್ಯಾದಿ.

ಇವುಗಳ್ಯಾವುವು ಸಹಿತ ಖಚಿತವಾಗಿ "ಸಾರ್ವಜನಿಕ ವಲಯದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ"ದ ಒಟ್ಟು ಸ್ವರೂಪವನ್ನು ವಿವರಿಸುವಲ್ಲಿ ವಿಫಲವಾಗಿದೆ. ಈ ಅಂಶಗಳಡಿಯಲ್ಲಿ ಈ ಅಧ್ಯಯನ ಸಾಗುತ್ತಿದೆ.

ಈ ಮಹಾಪ್ರಬಂಧದಲ್ಲಿ ದೌರ್ಜನ್ಯವನ್ನು ಎರಡು ನೆಲೆಯನ್ನು ನಿರ್ವಚಿಸಲಾಗುತ್ತಿದೆ. ಅಧಿಕಾರವು ದೌರ್ಜನ್ಯದ ಸಹಚರಿ ಮತ್ತು ಅಸಮಾನ ಅಧಿಕಾರ ಸಂಬಂಧಗಳನ್ನು ನಿಭಾಯಿಸಲು

ದೌರ್ಜನ್ಯ-ಹಿಂಸೆಯು ಪ್ರಬಲ ಅಸ್ತ್ರವಾಗಿ ಉಪಯುಕ್ತವಾಗುತ್ತದೆ ಎಂಬುದರ ಪರ್ಯಾಲೋಚನೆ ಮಾಡುವುದು. ಹಾಗೆಯೇ ಈವರೆಗೂ ನಡೆದ ಸಂಶೋಧನೆಗಳಲ್ಲಿ ಸಂಶೋಧಕರು ದೌರ್ಜನ್ಯವನ್ನು ನೋಡಿರುವ ಮಾದರಿ (ಬಗೆ)ಯನ್ನು ಪರಿಶೀಲಿಸುವ ಉದ್ದೇಶವನ್ನು ಹೊಂದಿದೆ.

ಭಾರತದಲ್ಲಿನ ದೌರ್ಜನ್ಯ-ಹಿಂಸೆಯು ಬಹುತೇಕವಾಗಿ ಸಾಮಾಜಿಕ ಘಟನೆಯೆನ್ನುವುದಕ್ಕಿಂತಲೂ ಸುಮಾರು ಪಾಲು ಮಹಿಳೆಯರ ಘಟನೆಯಾಗಿದೆ ಎಂಬುದನ್ನು ಈ ವರೆಗೂ ನಡೆದ ಹಲವಾರು ಪುನರ್‌ವಿಮರ್ಶೆಗಳು ಹೊರಹಾಕಿವೆ. ಈ ಕಾರಣವಾಗಿಯೇ ಮಹಿಳೆಯರ ಮೇಲಿನ ದೌರ್ಜನ್ಯಗಳು ಸಹ ಮಹಿಳೆಯನ್ನು ನಿರ್ಲಕ್ಷಿಸಲಾಗಿದೆ. ಹಾಗೂ ಈ ದೌರ್ಜನ್ಯಗಳು ಅನೇಕ ಸಂದರ್ಭಗಳಲ್ಲಿ ಒಪ್ಪಿತವಾಗಿವೆಯಾದ್ದರಿಂದ, ದಿನೇ ದಿನೇ ಇದರ ಪ್ರಮಾಣವು ಹೆಚ್ಚುತ್ತಲೇ ಇದೆಯೆನ್ನಬಹುದು. ಈ ನಿಟ್ಟಿನಲ್ಲಿ ಸಾರ್ವಜನಿಕ ವಲಯದಲ್ಲಿ ನಡೆಯುವ ಮಹಿಳೆಯರ ವಿರುದ್ಧದ ದೌರ್ಜನ್ಯಗಳನ್ನು ಸಾಮಾಜಿಕ ಘಟನೆಯಾಗಿ ಪರಿಗಣಿಸುವ ಹಿನ್ನೆಲೆಯಲ್ಲಿ ಇದಕ್ಕೆ ಪರಿಹಾರಗಳನ್ನು ಕಂಡುಕೊಳ್ಳುವ ಉದ್ದೇಶವನ್ನು ಹೊಂದಿದೆ.

ಸಾರ್ವಜನಿಕ ವಲಯವನ್ನು ಮೂಲ ಆಕರವಾಗಿಸಿಕೊಂಡ ಈ ಸಂಶೋಧನೆಯು ಈ ಮೂಲಕ "ಲಿಂಗಾಧಾರಿತ ದೌರ್ಜನ್ಯ"ವನ್ನು ಅರ್ಥೈಸಿಕೊಳ್ಳುವ ಪ್ರಯತ್ನವನ್ನು ಮಾಡಲಾಗುವುದರಿಂದ, ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ಸ್ಥಿತಿ-ಗತಿಗಳನ್ನು ಅರಿಯುವುದರೊಂದಿಗೆ, ಇಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಗಳ ಪ್ರಮುಖ ಕಾರಣ, ಸ್ವರೂಪಗಳನ್ನು ತಿಳಿದುಕೊಳ್ಳುವ ಉದ್ದೇಶವನ್ನು ಹೊಂದಿದೆ.

ಸಮಾಜ ವ್ಯವಸ್ಥೆಯ ಪ್ರಮುಖ ಸಾಮಾಜಿಕ ಸಂಸ್ಥೆಗಳಲ್ಲಿ ಒಂದಾದ 'ಕುಟುಂಬ' ಸಂಸ್ಥೆಯು ಮಹಿಳೆಯ ಒಟ್ಟು ವ್ಯಕ್ತಿತ್ವವನ್ನು ಹೊಸಕಿ ಹಾಕುವಲ್ಲಿ ಪ್ರಮುಖವಾಗಿ ಕಾರ್ಯ ನಿರ್ವಹಿಸುತ್ತಿದ್ದು, ಮಹಿಳೆಯ ಸಮಸ್ಯೆಗಳು ಸಮಾಜದ ಗಮನಕ್ಕೆ ಬಾರದಂತೆ "ಮರ್ಯಾದೆ"ಯ ಮುಸುಕಿನಲ್ಲಿ ಮರೆಮಾಚಲ್ಪಟ್ಟಿದ್ದು ಪ್ರಚಲಿತ ದಿನಗಳಲ್ಲಿ ಹಲವಾರು ಕಾರಣಗಳಿಂದ ಸಾರ್ವಜನಿಕ ವಲಯಕ್ಕೆ ಮಹಿಳೆ ಕಾಲಿರಿಸಿದ ನಂತರ ಗೃಹಕೇಂದ್ರಿತ ಸಮಸ್ಯೆಗಳು ಬಹಿರಂಗಗೊಳ್ಳುವ ಜೊತೆಗೆ ಕೌಟುಂಬಿಕ ವಲಯದ ದೌರ್ಜನ್ಯ-ಹಿಂಸೆಯು ವಿಸ್ತೃತರೂಪವೇ ಸಾರ್ವಜನಿಕ ವಲಯದಲ್ಲಿ ಮುಂದುವರೆದಿರುವುದನ್ನು ಪರಿಶೀಲಿಸುವ ನಿಟ್ಟಿನಲ್ಲಿ ಕೌಟುಂಬಿಕ ಸಾರ್ವಜನಿಕ ವಲಯಗಳೆರಡರ ಸ್ಥೂಲ ಹೋಲಿಕೆಯ ಅಧ್ಯಯನವನ್ನು ನಡೆಸುವ ಉದ್ದೇಶವನ್ನು ಹೊಂದಿದೆ.

ಪುರುಷ ಪ್ರಧಾನ ವ್ಯವಸ್ಥೆಯೂ ನಿರಂತರವಾಗಿ ಮಹಿಳೆಯನ್ನು ಅಧೀನ ದರ್ಜೆಯಲ್ಲಿಯೇ ಶಾಶ್ವತವಾಗುಳಿಸುವ ನಿಟ್ಟಿನಲ್ಲಿ ವ್ಯವಸ್ಥೆಯ ಹಲವಾರು ಸಂಗತಿಗಳು ಸಹ ಪುರುಷಪರ- ಮಹಿಳಾ ವಿರೋಧಿಯಾಗಿಯೇ ರೂಪಿತವಾಗಿ ಬಳಕೆಯಲ್ಲಿವೆ ಎಂಬುದರಲ್ಲಿ ಎರಡು ಮಾತಿಲ್ಲ. ಅಂತೆಯೇ ಅಧಿಕಾರವು ಮಹಿಳಾ ಹಿತಾಸಕ್ತಿಯ ವಿರುದ್ಧ ಮತ್ತು ಪ್ರತಿಯಾಗಿ ಪುರುಷ ಹಿತಾಸಕ್ತಿಗನುಗುಣವಾಗಿ ಕೆಲಸ ಮಾಡುತ್ತದೆ ಎಂಬುದಕ್ಕೆ ಮಹಿಳಾ ಬದುಕಿಗೆ ಸುಭದ್ರತೆಯನ್ನು ಒದಗಿಸಲು ಪ್ರಭುತ್ವ-

ಅಧಿಕಾರಿ ವರ್ಗವು ಜಾರಿಗೊಳಿಸಲಾಗಿರುವ ಕಾನೂನುಗಳು ವಾಸ್ತವದಲ್ಲಿ ಮಹಿಳಾ ಸಬಲೀಕರಣಕ್ಕೆ ಸಹಾಯಕವಾಗಿವೆಯೇ? ಎಂದು ಪರಿಶೀಲಿಸಿದಾಗ ಇದರ ವೈಫಲ್ಯವೇ ಹೆಚ್ಚಿನ ಪ್ರಮಾಣದಲ್ಲಿ ಗೋಚರಿಸುತ್ತದೆ. ಆದ್ದರಿಂದ ಮಹಿಳೆಯರಿಗೆಂದೆ ರೂಪಿತವಾಗಿರುವ ಕಾನೂನುಗಳು ಮಹಿಳಾ ಬದುಕನ್ನು ಉತ್ತಮಪಡಿಸುವಲ್ಲಿ ಸಹಕಾರಿಯಾಗದಿರಲು ಇರುವ ಹುನ್ನಾರಗಳೇನು? ಅಧಿಕಾರವಲಯದಲ್ಲಿ, ನಿರ್ಣಾಯಕ ಹಂತಗಳನ್ನು ಕೈಗೊಳ್ಳುವಲ್ಲಿ ಪುರುಷನ ಪಾಲುದಾರಿಕೆಯು ಪ್ರಧಾನವಾಗಿರುವುದೆ? ಅಥವಾ ಮಹಿಳೆಯರು ಸಹ ಅಲ್ಲಲ್ಲಿ ಅಧಿಕಾರವಲಯದಲ್ಲಿ ಕಾಣಿಸಿಕೊಂಡರೂ ಅವರಲ್ಲಿಯೂ ಸಹ ನಿಲುವು ಮನೆ ಮಾಡಿರುವುದರಿಂದ ಬಹುತೇಕವಾಗಿ ಅವರು ಪುರುಷ ಸಂಸ್ಕೃತಿಯ ಉಪಕರಣವಾಗಿ ಕಾರ್ಯನಿರ್ವಹಿಸುತ್ತಿರುವುದರಿಂದ ಕಾನೂನುಗಳು ರೂಪಿಸುವಲ್ಲಿ ಹಾಗೂ ಜಾರಿಯಾಗುವಲ್ಲಿ ಸಾಫಲ್ಯ ಕಾಣುತ್ತಿಲ್ಲವೇ? ಎಂಬ ಅಂಶಗಳನ್ನು ತಿಳಿದುಕೊಳ್ಳುವ ಉದ್ದೇಶ ಹೊಂದಿದೆ.

ಸಮಸ್ತ ಮಹಿಳಾ ಬದುಕನ್ನು ಯಾವುದೇ ಸಂದರ್ಭ, ಸನ್ನಿವೇಶದಲ್ಲಿಯೂ ಪ್ರಧಾನವಾಗಿ ಲೈಂಗಿಕತೆ-ಗೃಹಿಣಿತ್ವದ ಅಂಶಗಳನ್ನೇ ಆಧಾರವಾಗಿಸಿಕೊಂಡು ದಮನಗೈಯ್ಯಲಾಗುತ್ತದೆ. ಅದೇ ರೀತಿಯಾಗಿ ಸಾರ್ವಜನಿಕ ವಲಯದಲ್ಲಿಯೂ ಸಹ ಹೊಸ-ಹೊಸ ಆಯಾಮಗಳಲ್ಲಿ ಸಮಸ್ಯೆಗಳು ತಲೆದೊರುತ್ತಿರುವುದು ಪ್ರತಿನಿತ್ಯದ ಬದುಕಿನಲ್ಲಿ ಕಾಣುತ್ತಿದ್ದೇವೆ. ಈ ತೆರನಾದ ಸಾಮಾಜಿಕ ದೌರ್ಜನ್ಯಗಳ ಕಾರಣದಿಂದಲೇ ಮಹಿಳೆಯರು ಕೆಲವು ಸಾಧನಾವಲಯಗಳಿಗೆ ಮುಖಾಮುಖಿಯಾಗಲು ಹಿಂಜರಿಯುತ್ತಿದ್ದಾರೆ. ಹಾಗೊಮ್ಮೆ ಮುಖಾಮುಖಿಯಾದರೂ ಅಲ್ಲಿ ಮುಂದಡಿಯಿಡದೆ ಹಿನ್ನಡೆಯುತ್ತಿದ್ದಾರೆಂಬುದನ್ನು ಪರಾಮರ್ಶಿಸುವ ಉದ್ದೇಶವು ಈ ಅಧ್ಯಯನದಲ್ಲಿ ಒಳಗೊಂಡಿದೆ.

### ೧.೩ ವ್ಯಾಪ್ತಿ

ಆಧುನಿಕ ಸಮಾಜದಲ್ಲಿ ಮಹಿಳೆ ಇಂದು ಆರೋಗ್ಯ, ಶಿಕ್ಷಣ, ಉದ್ಯೋಗ, ರಾಜಕೀಯ, ಆರ್ಥಿಕ, ಧಾರ್ಮಿಕ ಮೊದಲಾದ ವಲಯಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದಾಳೆ ಮತ್ತು ಇಲ್ಲಿನ ಅವಳ ಪ್ರವೇಶದ ಹಂತದಿಂದ ಮೊದಲಾಗಿ, ಅಲ್ಲಿಯೇ ನೆಲೆಗೊಳ್ಳದಂತೆ ಮಾಡಲು ಪಿತೃ ಸಂಸ್ಕೃತಿಯು ಹಲವಾರು ಬಗೆಯ ಆಯಾಮಗಳಲ್ಲಿ ದೌರ್ಜನ್ಯವನ್ನು ಪರಿಣಾಮಕಾರಿ ಅಸ್ತ್ರವಾಗಿ ಬಳಸಲಾಗುತ್ತಿದೆ. ನಿಯಂತ್ರಣದ ಪರಿಣಾಮಕಾರಿ ತಂತ್ರಗಾರಿಕೆಯೇ ದೌರ್ಜನ್ಯವಾದ್ದರಿಂದ ಮಹಿಳೆಯರ ಸಾರ್ವಜನಿಕ ರಂಗದ ಭಾಗವಹಿಸುವಿಕೆಯ ನಿರಾಕರಣೆಗಿಂತ, ಅಲ್ಲಿನ ಅವಳ ಸಾಧನೆಯ ಬದುಕನ್ನು ವ್ಯವಸ್ಥೆ ನಿಯಂತ್ರಣಕ್ಕೊಳಪಡಿಸುವಾಗ ಸರಸ, ಸಾಮದಿಂದ-ಭೇದ, ದಂಡದವರೆಗಿನ ಹಂತಗಳಲ್ಲಿ ದೌರ್ಜನ್ಯವನ್ನು ಎಸಗಲಾಗುತ್ತಿದೆ. ಅವಳ ಬದುಕಿನ ಅತಂತ್ರತೆಯನ್ನು-ಅಭದ್ರತೆಯನ್ನು ಸೂಚಿಸುತ್ತ, ಭವಿಷ್ಯದ ದಾರಿಯನ್ನು ಮುಚ್ಚುವ ನೆಲೆಯಲ್ಲಿ ಸಾಮಾಜಿಕ ವ್ಯವಸ್ಥೆ ಸಾರ್ವಜನಿಕ ವಲಯದ ಅವಳ ಪ್ರವೇಶವನ್ನು ಪುರುಷ ಬದುಕಿಗೆ ಮಾತ್ರ ಪೂರಕವಾಗಿ ನಿಲ್ಲಬೇಕೆನ್ನುವ ಆಶಯವನ್ನೇ ಹೊಂದಿದೆಯೇ ವಿನಃ ಅವಳ 'ಅಸ್ತಿತ್ವ' ರೂಪಿಕೆಯನ್ನು ನಿರಂತರವಾಗಿ ತಳ್ಳಿಹಾಕುತ್ತಲೇ ಇದೆ. ಪುರುಷನ ವಲಯವೆಂದೆ ಅಲಿಖಿತ ಮುದ್ರೆಯಿರುವ ಸಾರ್ವಜನಿಕ ವಲಯದಲ್ಲಿ ಮಹಿಳೆಯು

ಅಪರಿಮಿತ ದೌರ್ಜನ್ಯಕ್ಕೆ ಒಳಗಾಗುತ್ತಿದ್ದಾಳೆ. ಉದಾ:-12 ಅಕ್ಟೋಬರ್ 2007ರಲ್ಲಿ ಟೈಮ್ಸ್ ಆಫ್ ಇಂಡಿಯಾದಲ್ಲಿ ಸೂಚಿಸಲಾದ ಅತಿ 'ಹೆಚ್ಚು' ಮತ್ತು 'ಕಡಿಮೆ' ಪ್ರಮಾಣದಲ್ಲಿ ದೌರ್ಜನ್ಯ ನಡೆಯುವ ಸ್ಥಳಗಳ ಪಟ್ಟಿಯೊಂದು ಹೀಗಿದೆ.

| **ಹೆಚ್ಚಿನ ದೌರ್ಜನ್ಯ ನಡೆಯುವ ಪ್ರದೇಶಗಳು** | **ಅತಿ ಕಡಿಮೆ ದೌರ್ಜನ್ಯ ನಡೆಯುವ ಪ್ರದೇಶಗಳು** |
|---|---|
| ಬಿಹಾರ-59% | ಹಿಮಾಚಲ ಪ್ರದೇಶ-6% |
| ಮಧ್ಯಪ್ರದೇಶ-46% | ಜಮ್ಮುಕಾಶ್ಮೀರ-13% |
| ರಾಜಸ್ಥಾನ-46% | ದೆಹಲಿ- 16% |
| ಮಣಿಪುರ-44% | ಕೇರಳ-16% |
| ಉತ್ತರ ಪ್ರದೇಶ-42% | ಸಿಕ್ಕಿಂ-17% |
| ಪಶ್ಚಿಮ ಬಂಗಾಳ-40% | ಗೋವಾ-17% |

ಈ ಕೋಷ್ಟಕದಲ್ಲಿ ಬಿಹಾರ ಮೊದಲನೆ ಸ್ಥಾನದಲ್ಲಿದೆ. ಹಿಮಾಚಲಪ್ರದೇಶ ಕೊನೆಯ ಸ್ಥಾನದಲ್ಲಿದೆ. ಇದಲ್ಲದೆ ಇನ್ನೂ ಅನೇಕ ವರದಿಗಳಲ್ಲಿ ಪ್ರತಿ ನಿಮಿಷ-ನಿಮಿಷಕ್ಕೂ ನಡೆಯುವ ದೌರ್ಜನ್ಯಗಳ ಮಾಹಿತಿಯನ್ನು ಕಾಣಬಹುದಾಗಿದೆ. ಬದುಕಿನ ಭಾಗವೆನ್ನುವಂತೆಯೇ ನಡೆದಿರುವ ಮಹಿಳೆಯ ವಿರುದ್ಧದ ದೌರ್ಜನ್ಯಗಳು ಕೌಟುಂಬಿಕ-ಸಾರ್ವಜನಿಕ ವಲಯಗಳೆರಡರಲ್ಲೂ ಗಂಭೀರವಾಗಿಯೇ ನಡೆದಿದ್ದರೂ, ವ್ಯವಸ್ಥೆಯಲ್ಲಿ ಇದು ಪುರುಷನ ಹಕ್ಕಾಗಿ ಪರಿಗಣಿಸುತ್ತಿರುವುದು ದುರಂತವಾಗಿದೆ. ಮೇಲ್ನೋಟಕ್ಕೆ ಭಿನ್ನವೆನಿಸುವ ಎರಡು ವಲಯಗಳು ಪರಸ್ಪರ ಪೂರಕವಾಗಿವೆ. ಇಲ್ಲಿನ ದೌರ್ಜನ್ಯಗಳು ಸಹ ಒಂದೇ ಬಗೆಯ ಉದ್ದೇಶದ ಈಡೇರಿಕೆಗಾಗಿ ನಡೆಯುತ್ತಿವೆ. ಮಹಿಳೆಯರ ಸಬಲೀಕರಣಕ್ಕೆ ಪೂರಕವಾಗಿ ನಿಲ್ಲಬೇಕಾದ ಸಾರ್ವಜನಿಕ ವಲಯದಲ್ಲಿ ಹಲವಾರು ಸಲ ತನ್ನದಲ್ಲದ ಕಾರಣಕ್ಕೆ ದೌರ್ಜನಕ್ಕೆ ಬಲಿಯಾಗುತ್ತಿದ್ದಾಳೆ. ಈ ನಿಟ್ಟಿನಲ್ಲಿ ಸಾರ್ವಜನಿಕ ವಲಯವನ್ನು ಪ್ರತಿನಿಧಿಸಲು ರಾಜಕೀಯ-ಉದ್ಯೋಗ ವಲಯದ ದೌರ್ಜನ್ಯವನ್ನು ವಿವರ ಅಧ್ಯಯನಕ್ಕೊಳಪಡಿಸಲು ವ್ಯಾಪ್ತಿಯನ್ನು ಸೀಮಿತಗೊಳಿಸಲಾಗಿದೆ.

**ವಿಷಯದ ವ್ಯಾಪ್ತಿ:**

ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರ ಒಟ್ಟು ಬದುಕು ಲೈಂಗಿಕತೆಯನ್ನು ಅಂದರೆ ಅವಳ 'ದೇಹ' ಮತ್ತು ಅದರಿಂದ ಒದಗಿಸುವ 'ಸೇವೆ'ಯನ್ನು ಆಧರಿಸಿದೆ. ಅವಳ ಮೇಲೆ ನಡೆಯುವ ದೌರ್ಜನ್ಯಗಳ ಮೂಲವೂ ಸಹ 'ಲೈಂಗಿಕತೆ'ಯನ್ನೇ ಕೇಂದ್ರವಾಗಿರಿಸಿಕೊಂಡಿದೆ. ಲಿಂಗಾಧರಿತ ಕಾರಣದಿಂದಲೆ ಅಥವಾ ಜೈವಿಕ ಭಿನ್ನತೆಯನ್ನೆ ಆಧರಿಸಿ ಸಾಮಾಜಿಕ ರಚನೆಯಲ್ಲಿ ದಮನಿತಳಾಗಿ,

ಅಧೀನಳಾಗಿ ರೂಪಿತವಾದ ಮಹಿಳೆಯ ಮೇಲಿನ ದೌರ್ಜನ್ಯಗಳು ನಡೆಯುತ್ತಿರುವುದು ಹೊಸ ಸಂಗತಿಯೇನಲ್ಲ. ನಾಗರಿಕತೆಯು ಹೆಚ್ಚಿದಂತೆಲ್ಲ ಈ ಬಗೆಯ ಸಮಸ್ಯೆಗಳು ಭಿನ್ನವಾದ ಸ್ವರೂಪಗಳಲ್ಲಿ ಕಾಣಿಸಿಕೊಳ್ಳುತ್ತಿವೆ. ಇಂದು ಜಾಗತಿಕ ಮಟ್ಟದಲ್ಲಿ ಚರ್ಚಿತವಾಗುತ್ತಿರುವ ಪ್ರಸ್ತುತ ವಿಷಯವು ಬೃಹದಾದ ವ್ಯಾಪ್ತಿಯನ್ನು ಹೊಂದಿದೆ. ಭ್ರೂಣಾವಸ್ಥೆಯ ಹಂತದಿಂದಲೂ ಮರಣ ಶಯ್ಯೆಯವರೆಗೂ ಒಂದಲ್ಲಾ ಒಂದು ಬಗೆಯ ದೌರ್ಜನ್ಯಕ್ಕೆ ಬಲಿಪಶುವಾಗಿಸಲಾಗುತ್ತಿರುವ ಸಂಚುಗಳು ಸಾಂಪ್ರದಾಯಿಕ ಸಮಾಜ ವ್ಯವಸ್ಥೆಯಲ್ಲಿ ಕಾಣಬಹುದಾಗಿದೆ. ಮನುಕುಲದ ಜೀವನಾಡಿಯಂತೆ ಬೆರೆತು ಹೋಗಿರುವ ಮಹಿಳೆಯರ ವಿರುದ್ಧದ ದೌರ್ಜನ್ಯದ ಕುರಿತು ಪಾಶ್ಚತ್ಯ-ಭಾರತೀಯ ಚಿಂತಕರು ಚಿಂತನೆಗಳನ್ನು ನಡೆಸುತ್ತಿರುವುದು ಕಂಡು ಬರುತ್ತದೆಯಾದರೂ, 1960ರ ದಶಕದ ನಂತರ ಈ ವಿಷಯದ ಗಂಭೀರ ಚರ್ಚೆಗಳು ನಡೆಯುತ್ತಿವೆ. ಆದರೆ ಭಾರತದ ಸಂದರ್ಭವನ್ನು ಪರಿಗಣಿಸುವ ನೆಲೆಯಲ್ಲಿ ಹೇಳುವುದಾದರೆ ಈ ವಿಷಯದ ಸಮಗ್ರ ರೂಪದ ಚರ್ಚೆಯು, ಚಿಂತನೆಗಳು ಕಂಡುಬಂದಿಲ್ಲ. ಕನ್ನಡ ಸಂದರ್ಭಗಳಲ್ಲಂತೂ ಈ ವಿಷಯದ ಕುರಿತಾದ ಅಧ್ಯಯನಗಳು, ಚಿಂತನೆಗಳು, ಚರ್ಚೆಗಳು ತೀರಾ ಮಂದಗತಿಯಲ್ಲಿಯೇ ಇವೆ. ಸಾರ್ವಜನಿಕ ವಲಯಕ್ಕೆ ಸಂಬಂಧಿಸಿದಂತೆ ನಡೆದ ಬಿಡಿ ಚಿಂತನೆಗಳು ಸಹ ಈ ಶೀರ್ಷಿಕೆಯಡಿಯಲ್ಲಿ ಕಾಣಸಿಗುವುದಿಲ್ಲ. ಅಲ್ಲಿನ ಬಿಡಿ ಅಧ್ಯಯನಗಳಲ್ಲಿ ಮಹಿಳೆಯ ಕೌಟುಂಬಿಕ, ಆರ್ಥಿಕ ಇತ್ಯಾದಿ ಸ್ಥಿತಿಗತಿಗಳನ್ನು ವಿವರಿಸಲಾಗಿದೆಯೇ ಹೊರತು, ಅಲ್ಲಿನ ದೌರ್ಜನ್ಯಗಳು, ಅದರ ಸ್ವರೂಪವನ್ನು ಸ್ಪಷ್ಟವಾಗಿ ಚರ್ಚಿತವಾಗಿಲ್ಲವೆಂಬುದು ಅಧ್ಯಯನದ ಸ್ಥೂಲ ಸಮೀಕ್ಷೆಯನ್ನಾಧರಿಸಿ ಹೇಳಬಹುದಾಗಿದೆ. ಈ ಬಗೆಯ ಆಳವಾದ ಹರವನ್ನು ಹೊಂದಿರುವ ವಿಷಯವನ್ನು ಸಾರ್ವಜನಿಕ ವಲಯದ ಅಧಿಕಾರ ಕೇಂದ್ರಗಳೆಂದು ಪರಿಗಣಿಸಿ ರಾಜಕೀಯ-ಉದ್ಯೋಗವಲಯದಲ್ಲಿ, ಕೆಲವು ಪ್ರಕರಣ ಅಧ್ಯಯನದ ಹಿನ್ನೆಲೆಯಲ್ಲಿ 'ದೌರ್ಜನ್ಯ'ದ ಸ್ವರೂಪ ಆಯಾಮಗಳನ್ನು ಗುರುತಿಸುವಷ್ಟಕ್ಕೆ ಈ ವಿಷಯದ ವ್ಯಾಪ್ತಿಯನ್ನು ರೂಪಿಸಿಕೊಳ್ಳಲಾಗಿದೆ.

**ಅಧ್ಯಯನದ ವ್ಯಾಪ್ತಿ:**

ಮನುಷ್ಯ ಸಮಾಜದ ಹಿತವನ್ನು ಕಾಯಲು ಹೋರಾಡಿದ ಬುದ್ಧ, ಬಸವ, ಗಾಂಧಿ, ಕ್ರಿಸ್ತ, ಮಹಾವೀರ ಪ್ರತಿಯೊಬ್ಬರು ಸಹ ಹಿಂಸೆ-ದೌರ್ಜನ್ಯದ ಕುರಿತು ಚರ್ಚೆಗಳನ್ನು ಮಾಡಿದ್ದಾರೆ. ಇವುಗಳು ನಡೆಯದಿರುವುದೇ ಸುವ್ಯವಸ್ಥಿ ಸಮಾಜ ವ್ಯವಸ್ಥೆಯ ರೂಪಿಕೆ ಸಾಧ್ಯವೆಂದಿದ್ದಾರೆ. ತತ್ವಶಾಸ್ತ್ರಜ್ಞರು, ಸಮಾಜ ಸುಧಾರಕರು ಮತ್ತು ಆಡಳಿತಾರೂಢ ಪ್ರಭುತ್ವಗಳವರೆಗೆ ಮನುಷ್ಯ ಸಮಾಜದ ಉದ್ದೇಶದಿಂದ ದೌರ್ಜನ್ಯ-ಹಿಂಸೆಯನ್ನು ಚರ್ಚಿಸಿದಾಗಲೂ, ಸ್ತ್ರೀ ವಿಶಿಷ್ಟತೆಯನ್ನು ಯಾವ ಚಿಂತನೆಗಳು ಒಳಗೊಂಡಿಲ್ಲ, ಸಾಮಾನ್ಯೀಕರಿಸಿ ಹೇಳಲಾಗುವ ಯಾವುದೇ ಬಗೆಯ ಚಿಂತನೆಗಳಲ್ಲಿ ಮಹಿಳೆಯು ಒಳಗೊಂಡಿರುವುದಿಲ್ಲವೆಂಬುದಕ್ಕೆ ಸ್ತ್ರೀವಾದವು ಸಾಕಷ್ಟು ಆಧಾರಗಳೊಂದಿಗೆ ಚಿಂತನೆಗಳನ್ನು ಮಂಡಿಸಿದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ಸಮಾಜ ವ್ಯವಸ್ಥೆಯ ಒಳಗೆ ಹೆಣ್ಣು ಆಕ್ರಮಣಕ್ಕೊಳಗಾಗುವಂತಹ ದೌರ್ಜನ್ಯ-ಹಿಂಸೆಯ ಸಂದರ್ಭಗಳನ್ನು ಅರ್ಥಮಾಡಿಕೊಳ್ಳುವ

ಪ್ರಯತ್ನವಾಗಿದೆ. ದೌರ್ಜನ್ಯ-ಹಿಂಸೆಯನ್ನು ವಿವರಿಸಿಕೊಳ್ಳುತ್ತಾ ಹೋದಂತೆಲ್ಲ ಒಟ್ಟು ಸಮಾಜ ವ್ಯವಸ್ಥೆಯನ್ನು ವಿಭಜಿಸಿಕೊಳ್ಳಬೇಕಾಗುತ್ತದೆ.

ಸಮಾಜ ವ್ಯವಸ್ಥೆಯನ್ನು ಪ್ರಮುಖವಾಗಿ ಕೌಟುಂಬಿಕ ವಲಯ ಮತ್ತು ಸಾರ್ವಜನಿಕ ವಲಯವೆಂದು ವಿಭಾಗಿಸಲಾಗುತ್ತದೆ. ಈ ಒಳ ವಲಯ (ಕೌಟುಂಬಿಕ ವಲಯ)ವನ್ನು ಹೆಂಗಸಿನದೆಂದು, ಹೊರವಲಯ(ಸಾರ್ವಜನಿಕ ವಲಯ)ವನ್ನು ಗಂಡಸಿನ ವಲಯವೆಂಬುದು ಸಮಾಜ ವ್ಯವಸ್ಥೆಯಲ್ಲಿ ಇಂದಿಗೂ ರೂಢಿಗತವಾಗಿದೆ.

ಪ್ರಸ್ತುತ ಅಧ್ಯಯನವು ಸಾರ್ವಜನಿಕ ವಲಯವನ್ನು ಆಕರವಾಗಿ ಪರಿಗಣಿಸಿರುವುದರಿಂದ, ಸಾರ್ವಜನಿಕ ವಲಯವನ್ನು ವಿಸ್ತೃತ ಚರ್ಚೆಗೊಳಪಡಿಸುತ್ತಾ ಬಂದಂತೆ ಸಾರ್ವಜನಿಕವಲಯ ಸಾಮಾನ್ಯ ಸ್ಥಳ ಮತ್ತು ಕೆಲಸದ ಸ್ಥಳವೆಂದು ಉಪವಲಯಗಳಲ್ಲಿ ವಿಭಜಿಸಲಾಗುತ್ತದೆ.

ಕೌಟುಂಬಿಕ ವಲಯದಾಚೆಗಿನ ಎಲ್ಲ ಸ್ಥಳಗಳನ್ನು ಸಾರ್ವಜನಿಕ ವಲಯದ ಸಾಮಾನ್ಯ ಸ್ಥಳಗಳೆಂದು ಗುರುತಿಸಿಕೊಳ್ಳಲಾಗಿದೆ. ಉದಾ:-ಮಾರ್ಕೆಟ್,ರಸ್ತೆ ಇತ್ಯಾದಿಯೆಂದು ಹೇಳಬಹುದು. ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಗಳು ಸಾಮಾನ್ಯ ಸ್ಥಳಗಳಲ್ಲಿ ಹೆಚ್ಚು ಗೋಚರವಾಗುತ್ತವೆ. ದೌರ್ಜನ್ಯ ಹಿಂಸೆಯು ಕಣ್ಣಿಗೆ ಗೋಚರಿಸುವುದಷ್ಟೇ ಅಲ್ಲಿ ಹಾಗೂ ಗೋಚರಿಸಿದ್ದೆಲ್ಲವು ದೌರ್ಜನ್ಯ-ಹಿಂಸೆಯಾಗುವುದಿಲ್ಲ. ಈ ಬಗೆಯ ಸಾರ್ವಜನಿಕ ವಲಯದ ಸಾಮಾನ್ಯ ಸ್ಥಳಕ್ಕೆ ಕಾಲಿರಿಸುವ ಮಹಿಳೆಯು ಕೆಲವು ನಿಗದಿತ ಕೆಲಸದ ಸ್ಥಳಗಳಲ್ಲಿ ಸೀಮಿತಗೊಳ್ಳುತ್ತಾಳೆ ಅಂತಹವುಗಳನ್ನು ಸಾರ್ವಜನಿಕ ವಲಯವೆಂದು ಈ ಅಧ್ಯಯನದಲ್ಲಿ ಬಳಸಲಾಗುತ್ತಿದೆ.

ಈ ನಿಟ್ಟಿನಲ್ಲಿ ಸಾರ್ವಜನಿಕ ವಲಯದ ಒಂದು ಭಾಗವಾಗಿ ಕಾಣಿಸಿಕೊಳ್ಳುವ ಕೆಲಸದ ಸ್ಥಳದಲ್ಲಿ ಸಂಘಟಿತವಲಯ ಮತ್ತು ಅಸಂಘಟಿತವಲಯವೆಂದು ವಿಭಾಗಿಸಿಕೊಳ್ಳಲಾಗಿದೆ. ಒಟ್ಟು ಸಾರ್ವಜನಿಕ ವಲಯದ, ವಿವಿಧ ವಲಯಗಳಲ್ಲಿನ ದೌರ್ಜನ್ಯ-ಹಿಂಸೆಯ ಸ್ವರೂಪವನ್ನು ಗ್ರಹಿಸುವುದಾದರೂ ವಿಶೇಷವಾಗಿ ಸಂಘಟಿತ ವಲಯದ ದೌರ್ಜನ್ಯ-ಹಿಂಸೆಗಳು ನಡೆಯುವ ಪ್ರಕರಣಗಳನ್ನು ಉದ್ಯೋಗ ವಲಯ-ರಾಜಕೀಯವಲಯವನ್ನಾಧರಿಸಿ ಮಾತ್ರ ಆಯ್ಕೆ ಮಾಡಿಕೊಳ್ಳಲಾಗುತ್ತದೆ.

ದೌರ್ಜನ್ಯ-ಹಿಂಸೆಯ ಸ್ವರೂಪ ಇರುವ ಬಗೆಯನ್ನು ಗ್ರಹಿಸುವುದಾಗಿದೆ. ಒಟ್ಟು ಸಮಾಜದೊಳಗೆ ಪುರುಷ ಸಮುದಾಯವು-ಸ್ತ್ರೀ ಸಮುದಾಯದ ಮೇಲೆ ಆಕ್ರಮಣವೆಸಗುವ ಅಧಿಕಾರವನ್ನು ಹೊಂದಿದೆ. ಈ ಬಗೆಯಲ್ಲಿ ಸಾಮಾಜಿಕವಾಗಿ ದತ್ತವಾದ ಅಧಿಕಾರ ಪುರುಷನ ಕೇಂದ್ರದಲ್ಲಿರುವುದರಿಂದ, ಸಹಜವಾಗಿಯೇ ಅದು ಪುರುಷ ಸಮುದಾಯದ ಅಧೀನಕ್ಕೊಳಪಟ್ಟಿದೆ. ಈ ಮುಖ್ಯ ಅಂಶವನ್ನಾಧರಿಸಿ ದೌರ್ಜನ್ಯ-ಹಿಂಸೆಯ ಆಕ್ರಮಣದ ಪರಿಣಾಮಗಳು ಮಹಿಳೆಯ ಮೇಲೆ ಆಗುತ್ತಿರುವುದನ್ನು ವಿಭಾಗಿಸಿ ನೋಡಿದಾಗ, ಇವುಗಳು ಕಾಣಿಸುವ ಹಂತಗಳು ಬೇರೆಯಾದರೂ

ಸಹ ಮೂಲಭೂತವಾಗಿ ಸಾಮಾನ್ಯವಾದ ಚಹರೆಯನ್ನೇ ಹೊಂದಿವೆ. ಕೌಟುಂಬಿಕ ವಲಯದಲ್ಲಿನ ದೌರ್ಜನ್ಯ–ಹಿಂಸೆಗಳ ಅಗೋಚರವಾದ ಭಾಗಗಳು ಸಾರ್ವಜನಿಕವಲಯದಲ್ಲೂ ಕಾಣಬಹುದಾಗಿದೆ. ಉದಾ:–ಇತ್ತೀಚೆಗಷ್ಟೇ ಟಿ.ವಿ.9 ಚಾನೆಲ್‌ನಲ್ಲಿ ದಿ: ೩೦–೦೫–೨೦೦೯ರಂದು ಸಂಜೆ ೬ ಗಂಟೆಗೆ ಪ್ರಸಾರವಾದ ಬೆಂಗಳೂರಿನ 'ಉತ್ತಪ್ಪ' ಪ್ರಕರಣದಲ್ಲಿ ಅವರು ಅಲ್ಲಿನ ಮ್ಯಾನೇಜರ್ ನಿರ್ಮಲಾ ಮತ್ತು ಇತರ ಮಹಿಳೆಯರಿಗೆ ನೀಡುವ ಕಿರುಕುಳ, ಹಿಂಸೆಗಳನ್ನು ಕಾಣಬಹುದಾಗಿದೆ. ಬಹುತೇಕವಾಗಿ ಇದು ಸಹ ಕೌಟುಂಬಿಕ ವಲಯದಲ್ಲಿನ ದೌರ್ಜನ್ಯ–ಹಿಂಸೆಯಂತೆಯೇ ಸಾರ್ವಜನಿಕ ವಲಯದ ಸಂಘಟಿತ ವಲಯದಲ್ಲಿ ಅಪ್ರಕಟಿತ ಭಾಗವೆಂದು ಹೇಳಬಹುದು. ಹೀಗೆ ಮಹಿಳೆಯ ಮೇಲಿನ ಆಕ್ರಮಣಗಳ ಸ್ವರೂಪ ಒಂದೆಯಾದರೂ ವಿವರಗಳಲ್ಲಿ ಭಿನ್ನವಾಗಿದೆ. ಇಂತಹದರಲ್ಲಿ ಪ್ರಮುಖವಾಗಿ ದೇಹದ ಮೇಲಾಗುವ ಆಕ್ರಮಣವನ್ನು ಬಹುತೇಕ ಚಿಂತಕಿಯರು ಪ್ರತಿಪಾದಿಸಿದ್ದಾರೆ. ಬಹುಮುಖ್ಯವಾಗಿ ತೀವ್ರವಾದಿ ಸ್ತ್ರೀವಾದಿಗಳು ಪ್ರತಿಪಾದಿಸುವಂತೆ ಸಮಾಜವು ಮಹಿಳೆಯನ್ನು ಕೇವಲ ಒಂದು ದೇಹವಾಗಿ ಸ್ವೀಕರಿಸಿದೆ. ದೇಹ ಮತ್ತು ದೇಹದಿಂದ ಒದಗುವ ಸೇವೆಯಾಚೆಗೆ ಹೆಣ್ಣನ್ನು ಒಂದು ಜೀವಿಯೆಂದು ಸಹ ಪರಿಗಣಿಸದೆ. ಯಾವ ಪ್ರಮಾಣದಲ್ಲಾದರೂ ಅದನ್ನು ಬಳಸಿಕೊಳ್ಳಲಾಗುತ್ತದೆ. ಮಹಿಳಾ ಬದುಕನ್ನು ವ್ಯಾಖ್ಯಾನಿಸುತ್ತಾ ಹೋದಾಗ, ಎಲ್ಲಾ ಮೂಲದಲ್ಲಿರುವುದು ಸಹ ಇದೇ ಅಂಶವೆಂಬುದು ಸ್ಪಷ್ಟವಾಗುತ್ತದೆ. ಒಟ್ಟು ಸಮಾಜ ವ್ಯವಸ್ಥೆಯಲ್ಲಿಯೇ ಅವಳು ಈ ಕಾರಣದಿಂದಲೇ ಆಕ್ರಮಣಕ್ಕೊಳಪಡುತ್ತಾಳೆ. ಅರಕ್ಷಿತ, ಅಭದ್ರಳಾಗುತ್ತಾಳೆ.

ಇಂದಿಗೂ ಸಹ ತೀರಾ ಮುಂದುವರೆದ ದೇಶಗಳನ್ನು ಹೊರತುಪಡಿಸಿ ನಮ್ಮಂತಹ ದೇಶಗಳಲ್ಲಿ ಒಂಟಿಯಾಗಿ ಮಹಿಳೆಯೊಬ್ಬಳು ಕೆಲವು ಸಾರ್ವಜನಿಕ ಸ್ಥಳಗಳಿಗೆ ಪ್ರವೇಶಿಸುವ ಧೈರ್ಯ ಮಾಡುವುದಿಲ್ಲ, ಏಕೆಂದರೆ ಯಾರು ಸಹ ಅದನ್ನು ನೈತಿಕವಾಗಿ ವಿವರಿಸಿಲ್ಲ, ಆದರೆ ಆ ಸ್ಥಳ ಅವಳ ಪಾಲಿಗೆ ಸುರಕ್ಷಿತವಲ್ಲವೆಂಬುದು ಖಚಿತವಾಗಿದೆ. ಒಟ್ಟು ಸಾಮಾಜಿಕ ಅನುಭವವನ್ನು ಗ್ರಹಿಸಿ ಹೇಳುವುದಾದರೆ, ಹೆಣ್ಣಿಗೆ ಒಟ್ಟು ಸಮಾಜದಲ್ಲಿ ಎಲ್ಲಿಯೂ ರಕ್ಷಣೆ ಭದ್ರತೆಯಿಲ್ಲ. ಇರುವುದರಲ್ಲಿಯೇ ಪರಿಚಿತವಾಗಿರುವ ಕೆಲಸದ ಸ್ಥಳ ಇನ್ನೊಂದು ಮನೆ ಇವೆರಡೂ ಹೋಗಲೇಬೇಕಾದ, ಇರಲೇಬೇಕಾದ ಸ್ಥಳವೇ ವಿನಃ ಸುರಕ್ಷಿತವಾದುವೆಂದಲ್ಲ, ಅದರಲ್ಲೂ ಕುಟುಂಬದಾಚೆಗೆ ಹೋಗಲು ಆಗದಂತಹ ಪರಿಸ್ಥಿತಿ ಮಹಿಳೆಗಿದೆ. ಕಾರಣ ಸಾರ್ವಜನಿಕ ವಲಯ ಕೌಟುಂಬಿಕವಲಯಕ್ಕಿಂತ ಹೆಚ್ಚು ಭಯಾನಕವಾಗಿದೆ. ಈ ಅಭದ್ರತೆ ಅರಕ್ಷತೆಯು ಒಂಟಿ ಮಹಿಳೆಯ ಅನುಭವವಲ್ಲ. ಈ ಸಾಮಾಜಿಕ ಚಿಂತನಾ ವಿಧಾನದಲ್ಲಿ ಒಟ್ಟು ಮಹಿಳಾ ಬದುಕು ಅನುಭವಿಸುವ ಪ್ರಮುಖ ಸಂಗತಿಯಾಗಿದೆ. ಈ ನೆಲೆಯಲ್ಲಿ ಕೌಟುಂಬಿಕ ಮತ್ತು ಸಾರ್ವಜನಿಕ ವಲಯದಲ್ಲಿ ಮಹಿಳೆಯ ಮೇಲಾಗುವ ಕೌಟುಂಬಿಕ ಮತ್ತು ಸಾರ್ವಜನಿಕ ವಲಯದಲ್ಲಿ ಮಹಿಳೆಯ ಮೇಲಾಗುವ ದೌರ್ಜನ್ಯ, ಹಿಂಸೆಯ ಸ್ವರೂಪವನ್ನು ಗ್ರಹಿಸುತ್ತಾ, ಇವುಗಳಾಗದಂತೆ ತಡೆಯುವ ಕಾರಣಕ್ಕಾಗಿಯೇ ಮಹಿಳಾ ಹೋರಾಟಗಳು, ಚಿಂತನೆಗಳು ಪ್ರಸ್ತುತವಾಗಿ ಕೆಲಸ ಮಾಡುತ್ತಿವೆ. ಇವುಗಳ ಫಲಿತಗಳೇ ಮಹಿಳಾ ಕಾನೂನುಗಳು. ಉದಾ:–

ಮತದಾನದ ಹಕ್ಕು, ಆಸ್ತಿಹಕ್ಕು, ಕೌಟುಂಬಿಕ ದೌರ್ಜನ್ಯ ತಡೆ ಕಾಯ್ದೆ ಇತ್ಯಾದಿ. ಈ ಬಗೆಯ ಯಶಸ್ಸುಗಳನ್ನು ಮಹಿಳಾ ಚಿಂತನೆಗಳು, ಚಳುವಳಿಗಳು ಪಡೆದುಕೊಂಡಿವೆ. ಪುರುಷ ಪ್ರಧಾನವ್ಯವಸ್ಥೆಯೂ ಗಟ್ಟಿಯಾಗಿ ಬೇರೂರಿರುವ ಸಮಾಜದಲ್ಲಿ ಮಹಿಳಾ ಸಮುದಾಯವು ಪ್ರತಿಯೊಂದನ್ನು ಹೋರಾಡಿ ಪಡೆಯುವ ಅಗತ್ಯತೆ ಮತ್ತು ಅನಿವಾರ್ಯತೆಯಿದೆ. ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನವು ಸಾರ್ವಜನಿಕ ವಲಯವನ್ನು ಕೇಂದ್ರಿಕರಿಸಿರುವುದರಿಂದ ಇಲ್ಲಾಗುವ ದೌರ್ಜನ್ಯ ಹಿಂಸೆಗಳಿಂದಾಗಿ ಮಹಿಳೆಯ ಭದ್ರತೆ ಮತ್ತು ರಕ್ಷಣೆಗೊಸ್ಕರ ಹೊಸ ಬಗೆಯ ಚಿಂತನೆಗಳನ್ನು ಕಟ್ಟಿಕೊಳ್ಳಬೇಕಾಗಿದೆ. ಆದ್ದರಿಂದ ಸ್ಥೂಲವಾಗಿ ದೌರ್ಜನ್ಯ- ಹಿಂಸೆಗಳನ್ನು ಅಧ್ಯಯನಕ್ಕೊಳಪಡಿಸುತ್ತ ಸ್ತ್ರಿ ಕೇಂದ್ರಿತವಾಗಿ ಪುನರಾವಲೋಕನ ಮಾಡುವ ಜರೂರಿದೆ. ಹಾಗೂ ಮಹಿಳೆಯರಿಗೋಸ್ಕರವೇ ಜಾರಿಯಾಗಿರುವ ಕಾನೂನು ಕಾಯ್ದೆಗಳನ್ನು ಸಾಂಧರ್ಬಿಕ ಚರ್ಚೆಗೊಳಪಡಿಸಲಾಗುತ್ತದೆ. ಅದರಲ್ಲೂ ವಿಶೇಷವಾಗಿ ಕೌಟುಂಬಿಕ ದೌರ್ಜನ್ಯ ತಡೆಕಾಯ್ದೆ ಮತ್ತು ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳ ನಿರ್ಮೂಲನ ಕಾಯ್ದೆಗಳನ್ನು ಮುಖಾಮುಖಿಯಾಗಿಸುವುದರೊಂದಿಗೆ ವಿವರವಾಗಿ ಅಧ್ಯಯನಕ್ಕೊಳಪಡಿಸುವ ಮೂಲಕ, ಇವುಗಳ ರೂಪಿಕೆಯ ಉದ್ದೇಶಗಳು ಈಡೇರಿಸುವಿಕೆಯಲ್ಲಿ ಪರಿಣಾಮಕಾರಿಯಾಗಿವೆಯೇ? ಈ ಬಗೆಯ ಪ್ರಯತ್ನಗಳಿಗೆ ಸಮಾಜ ಪ್ರತಿಕ್ರಿಯಿಸುವ ರೀತಿ, ಒಡ್ಡುವ ಪ್ರತಿರೋಧದ ಸ್ವರೂಪವನ್ನು ಗ್ರಹಿಸುವ ಪ್ರಯತ್ನ ಈ ಅಧ್ಯಯನದ ಮೂಲಕ ಮಾಡಲಾಗುತ್ತದೆ.

ಈ ಎರಡು ಕಾಯ್ದೆಗಳನ್ನು ಅಧ್ಯಯನಕ್ಕೊಳಪಡಿಸಿದಾಗ, ಪ್ರಮುಖವಾಗಿ ಗಮನಹರಿಸುವ ಎರಡು ಅಂಶಗಳೆಂದರೆ, ಈ ಕಾಯ್ದೆಗಳ ವೈಫಲ್ಯತೆಗೆ ಕಾರಣಗಳ ಶೋಧ, ಇನ್ನೊಂದು ಕೌಟುಂಬಿಕ ವಲಯದಲ್ಲಿನ ದೌರ್ಜನ್ಯದ ತಡೆ ಕಾಯ್ದೆಯಂತೆ ಸಾರ್ವಜನಿಕ ವಲಯದ ದೌರ್ಜನ್ಯ ತಡೆಯಲು ಕಾಯ್ದೆಗಳಿಲ್ಲವೆಂಬುದನ್ನು ಪ್ರಸ್ತಾಪಿಸುವುದು, ಆ ಬಗೆಯ ಹೊಸ ಚಿಂತನೆಗಳು, ಕಾಯ್ದೆಗಳ ರೂಪಿಕೆಗೆ ಹಾಕಬೇಕಾದ ಹೆಜ್ಜೆಗಳನ್ನು ಈ ಅಧ್ಯಯನದ ಮೂಲಕ ಕಂಡುಕೊಳ್ಳಲಾಗುತ್ತದೆ.

ಹೀಗೆ ಒಟ್ಟು ಸಾರ್ವಜನಿಕ ವಲಯದ ಮಹಿಳೆಯ ವಿರುದ್ಧದ ದೌರ್ಜನ್ಯಗಳ ಕುರಿತ ತಾತ್ತ್ವಿಕ ಚರ್ಚೆ, ಇವುಗಳಿಗೆ ಪೂರಕವಾಗಿ, ಅಧ್ಯಯನದ ಪ್ರಮುಖ ಕುರುಹುಗಳನ್ನು ರಾಜಕೀಯ – ಉದ್ಯೋಗ ವಲಯದಲ್ಲಿನ ಎರಡು ಕ್ಷೇತ್ರಗಳಾದ ಗ್ರಾಮಪಂಚಾಯ್ತಿ ಮಹಿಳೆ ಮತ್ತು ಮಹಿಳಾ ಪೋಲಿಸರನ್ನು ವಿವರವಾದ ಸಮೀಕ್ಷೆಗಳಿಗೆ, ಸಂಗ್ರಹಿಸಿದ ಮಾಹಿತಿಯ ಸಮೇತ ಅಧ್ಯಯನ ಮಾಡುವ ಪ್ರಯತ್ನವಾಗಿದೆ.

**೧.೪ ಅಧ್ಯಯನದ ಗುರಿ:**

ಗಾಂಧಿ ಕಂಡ ಕನಸಿನಂತೆ ಮಹಿಳೆಯೊಬ್ಬಳೇ ಮಧ್ಯರಾತ್ರಿಯಲ್ಲಿ ಓಡಾಡುವ ಸ್ವಾತಂತ್ರ್ಯ ಪಡೆದಾಗಲೇ ಸ್ವಾತಂತ್ರ್ಯವೆಂದು ಹೇಳಿದಂತೆಯೇ ಸಾರ್ವಜನಿಕ ವಲಯದಲ್ಲಿ ಮಹಿಳೆಯು ನಿರ್ಭಿಡೆಯಿಂದ ವ್ಯವಹರಿಸುವಂತಾಗಬೇಕು.

ಗಾಂಧೀಜಿಯವರು ಇದನ್ನು ಆಗಿನ ಸಂದರ್ಭದಲ್ಲಿ ರೂಪಕಾತ್ಮಕವಾಗಿ ಹೇಳಿರುವ ಹೇಳಿಕೆಯನ್ನು ಆಧರಿಸಿ. ಇದನ್ನು ಮಹಿಳಾ ಬದುಕಿಗೆ ವಿಶೇಷವಾಗಿ ಅನ್ವಯಿಸಿ ನೋಡುವ ಜರೂರಿದೆ. ಮಹಿಳೆಯನ್ನು ಮಾನವ ಸಹಜ ಜೀವಿಯಾಗಿ ಪರಿಗಣಿಸಬೇಕೆಂಬುದು ಸ್ತ್ರೀವಾದಿ ಚಿಂತಕರ ಆಕಾಂಕ್ಷೆಯಾಗಿದೆ. ಈ ನೆಲೆಯಲ್ಲಿ ಒಟ್ಟು ಸಮಾಜವ್ಯವಸ್ಥೆಯಲ್ಲಿ ಅತಂತ್ರತೆಯಿಂದ ಬದುಕುತ್ತಿರುವ ಮಹಿಳೆಯು, ಪುರುಷನಂತೆಯೇ ಎಲ್ಲೆಡೆಯಲ್ಲಿಯೂ ಸಹ ನಿರ್ಭೀತಿಯಿಂದ, ಮುಕ್ತವಾಗಿ ವ್ಯವಹರಿಸುವುದಕ್ಕೆ ಸಾಧ್ಯವಾಗಬೇಕು. ವ್ಯವಹಾರಲೋಕವೆಂದೇ ಒಪ್ಪಿತವಾದ ಸಾರ್ವಜನಿಕ ವಲಯದಲ್ಲಿ ಮಹಿಳೆಯು ನಿರಾಂತಕವಾಗಿ ವ್ಯವಹರಿಸಲು ಸಾಧ್ಯವಾಗಬೇಕೆಂಬುದು ಅಧ್ಯಯನದ ಪ್ರಮುಖ ಗುರಿಯಾಗಿದೆ. ಮಾನವತಾವಾದದ ಚಿಂತನೆಯನ್ನು ಆಶಿಸುವ ಸ್ತ್ರೀವಾದಿಗಳು ಮಹಿಳೆಯ ಬದುಕು ಸುಸಂಗತಗೊಳಿಸಬೇಕೆಂಬ ತುಡಿತವನ್ನು ಹೊಂದಿದ್ದಾರೆ. ಶತಮಾನಗಳಿಂದಲೂ ಮಹಿಳೆಯ ದಮನವು ಸಾಮಾಜಿಕತೆಯಲ್ಲಿ ಬೇರುಬಿಟ್ಟಿರುವ ಅಸಮಾನ ಚಿಂತನೆಗಳ ಫಲಿತವಾಗಿದೆ.

ಸಾರ್ವಜನಿಕ ವಲಯವನ್ನು ಆಕರವಾರಿಗಿಸಿಕೊಂಡ ಪ್ರಸ್ತುತ ಸಂಶೋಧನೆಯು ಸಾಮಾಜಿಕತೆಯಲ್ಲಿ ಮಹಿಳೆಯು ನಿರ್ಭಿಡೆಯ ಬದುಕನ್ನು ಸಾಗಿಸಲು ಸಹಾಯಕವಾಗಬೇಕೆಂಬ ಆಶಯವನ್ನು ಹೊಂದಿದೆ.

**ಕ್ಷೇತ್ರಕಾರ್ಯದ ವ್ಯಾಪ್ತಿ:**

ಸಾರ್ವಜನಿಕ ವಲಯದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಅಧ್ಯಯನಕ್ಕಾಗಿ, ಎಲ್ಲ ವಲಯಗಳನ್ನು ಸ್ಥೂಲವಾಗಿ ಅಧ್ಯಯನ ಮಾಡಲಾಗಿದ್ದು. ರಾಜಕೀಯ ಮತ್ತು ಉದ್ಯೋಗ ವಲಯವನ್ನು ವಿಸ್ತೃತ ಚರ್ಚೆಗೊಳಪಡಿಸಲಾಗಿದೆ. ಈ ವಲಯದಲ್ಲಿನ ದೌರ್ಜನ್ಯಗಳನ್ನು ಅಧ್ಯಯನ ಮಾಡಲು ಪ್ರಾತಿನಿಧಿಕವಾಗಿ ಗುಲಬರ್ಗಾ ಮತ್ತು ಜೇವರ್ಗಿ ತಾಲ್ಲೂಕಿನ ಗ್ರಾಮ ಪಂಚಾಯ್ತಿಯ ಅಧ್ಯಕ್ಷ – ಉಪಾಧ್ಯಕ್ಷ ಮಹಿಳೆಯರನ್ನು ರಾಜಕೀಯ ವಲಯದ ದೌರ್ಜನ್ಯವನ್ನು ವಿವರಿಸಿಕೊಳ್ಳಲು ಕ್ಷೇತ್ರ ಕಾರ್ಯದ ವ್ಯಾಪ್ತಿಗೆ ಸೀಮಿತಗೊಳಿಸಲಾಗಿದೆ. ಇಲ್ಲಿನ ಪ್ರಕರಣ ಅಧ್ಯಯನಗಳನ್ನು ಜಾತಿ, ವರ್ಗ, ಪ್ರದೇಶ, ವಯೋಮಿತಿಯನ್ನಾಧರಿಸಿ ಗುಂಪುಗಳಲ್ಲಿ ವಿಭಾಗಿಸಿಕೊಳ್ಳಲಾಗಿದೆ. ಈ ಬಗೆಯಲ್ಲಿ ಎರಡು ವಲಯಗಳನ್ನೊಳಗೊಂಡು ಸುಮಾರು ೫೦ ಪ್ರಕರಣಗಳನ್ನು ಆಯ್ದುಕೊಳ್ಳಲಾಗಿದೆ. ಇವುಗಳು ನೇರ ಸಂದರ್ಶನ, ಅವಲೋಕನ, ಅರಚಿತ–ರಚಿತ ಪ್ರಶ್ನಾವಳಿಗಳು ಇತ್ಯಾದಿ ವಿಧಾನಗಳಿಂದ ಮಾಹಿತಿ ಪಡೆಯಲಾಗುತ್ತದೆ. ಇದಲ್ಲದೆ ಪೋಲಿಸ್ ವ್ಯವಸ್ಥೆ(ಠಾಣೆ), ನ್ಯಾಯಾಲಯ, ಮಾಧ್ಯಮಗಳಲ್ಲಿ ಬರುವ ಪ್ರಕರಣಗಳನ್ನು ಪೂರಕವಾಗಿ ಅಧ್ಯಯನಕ್ಕೊಳಪಡಿಸಲಾಗಿದೆ.

**೧.೫ ಅಧ್ಯಯನದ ವೈಧಾನಿಕತೆ**

ಸಾಮಾಜಿಕ ವ್ಯವಸ್ಥೆಯಲ್ಲಿ "ಪುರುಷ ಪ್ರಧಾನತೆ"ಯೆಂಬುದು ಏಕಕಾಲಕ್ಕೆ ರಚನೆಯಾಗದೆ, ಪ್ರಜ್ಞಾಪೂರ್ವಕವಾಗಿ ಸಂರಚಿಸಲಾಗಿದೆ. ನಿರಂತರವಾಗಿ ಇದು ಅಸಮಾನತೆ, ತಾರತಮ್ಯವನ್ನು

ಮುಂದುವರಿಸಿಕೊಂಡೆ ಸಾಗುತ್ತಿದೆ. ಈ ತೆರನಾದ ಪ್ರಕ್ರಿಯೆಗೆ ಒಳಗಾದ ಹಲವು ಸಮುದಾಯಗಳಲ್ಲಿ "ಮಹಿಳಾ ಸಮುದಾಯವು" ಒಂದಾಗಿದೆ. ಶತಮಾನಗಳಿಂದಲೂ ವಿವಿಧ ರೀತಿಯಲ್ಲಿ ಅಧೀನ ಸ್ತರಕ್ಕೆ ತಳ್ಳಲಾದ ಮಹಿಳೆಯನ್ನು ಕೇಂದ್ರವಾಗಿಸಿಕೊಂಡು ಯಾವುದೇ ಜ್ಞಾನವಲಯಗಳು ಚಿಂತನೆಗೆ ತೊಡಗಿಲ್ಲ. ಸಾಂಪ್ರದಾಯಿಕ ಸಂಶೋಧನಾ ವಿಧಿ-ವಿಧಾನಗಳು ಸಹ "ಲಿಂಗ ನಿರಪೇಕ್ಷ"ವೆಂದು ಹೇಳಿದರೂ, ಅದು ತನ್ನಷ್ಟಕ್ಕೆ ಲಿಂಗಭೇದದ ನೆಲೆಯಲ್ಲಿ ತನ್ನ ಚಿಂತನಾಕ್ರಮವನ್ನು ಬೆಳೆಸಿಕೊಂಡು ಬಂದಿದೆ. ಬಹುತೇಕ ಎಲ್ಲ ಸಂಶೋಧನೆಗಳು ಸಹಿತ ಸಾಂಪ್ರದಾಯಿಕ ಸಂಶೋಧನಾ ವಿಧಾನಗಳಿಂದ ಪ್ರಭಾವಿತವಾಗಿವೆ.

'ವಸ್ತುನಿಷ್ಠ' ಸಂಶೋಧನಾ ವಿಧಾನವನ್ನೇ ಅವಲಂಬಿಸಿದ ಸಾಂಪ್ರದಾಯಿಕ ಸಂಶೋಧನಾ ವೈಧಾನಿಕತೆಯೂ ವ್ಯಕ್ತಿಗತ ಅನುಭವಗಳನ್ನು ಸಮ್ಮಿಲನಗೊಳಿಸುವುದನ್ನು ಶಾಶ್ವತವಾಗಿ ನಿರಾಕರಿಸುತ್ತದೆ. ಉದಾ: ಮನಶ್ಶಾಸ್ತ್ರದ ಪಿತಾಮಹನೆಂದೆ ಪ್ರಖ್ಯಾತರಾದ ಸಿಗ್ಮಂಡಫ್ರಾಯ್ಡರ ಮನೋವಿಶ್ಲೇಷಣಾ ಸಿದ್ಧಾಂತವು ಮಾನವ ಸಮಾಜದಲ್ಲಿನ ವ್ಯಕ್ತಿಗಳ ಮನಃಸ್ಥಿತಿಯನ್ನು ಕುರಿತು ಸಂಶೋಧಿಸಲಾಗಿದೆ. ಸಾಂಪ್ರದಾಯಿಕ ಚಿಂತನಾ ವಿಧಾನಗಳಿಂದ ಪ್ರಭಾವಿತನಾದ ಫ್ರಾಯ್ಡನು 'ಶಿಶ್ನಕೇಂದ್ರಿತ' ಚಿಂತನೆಯನ್ನು ಬೆಳೆಸಿದನು. ಈ ಚಿಂತನೆಯು ಮಹಿಳಾ ಮನೋಲೋಕವನ್ನು ಅರ್ಥೈಸಿಕೊಳ್ಳುವಲ್ಲಿ ವಿಫಲವಾಯಿತಲ್ಲದೆ, ಇರುವ ಮಹಿಳಾ ಅಧೀನತೆಯನ್ನು ಇನ್ನಷ್ಟು ಗಟ್ಟಿಗೊಳಿಸುವಲ್ಲಿ ಪೂರಕವಾಯಿತು.

ಸ್ತ್ರೀವಾದಿ ಚಿಂತಕಿಯರಾದ ಕೆರೆನ್‌ಹಾರ್ನಿ, ಈಗ್ಲಿ ಮೊದಲಾದವರು ಈ ಚಿಂತನೆಯನ್ನು ಪರಾಮರ್ಶಿಸುವ ಕಾರ್ಯದಲ್ಲಿ ತೊಡಗಿಕೊಂಡಾಗ ಇದರಲ್ಲಿನ ಲೋಪ-ದೋಷಗಳನ್ನು ಶೋಧಿಸಿದರು. ಫ್ರಾಯ್ಡ್ ನಿರೂಪಿಸಿರುವಂತೆ ಹೆಂಗಸರಿಗೆ 'ಶಿಶ್ನೆಈರ್ಷೆ' ಇರುವುದಾದರೆ, ಅದಕ್ಕೆ ಪ್ರತಿಯಾಗಿ ಗಂಡಸಿಗೆ 'ಗರ್ಭಈರ್ಷೆ'ಯಿರುವುದನ್ನು ಪ್ರತಿಪಾದಿಸಿದರು. ಈ ಮೂಲಕ ಮಹಿಳಾ ಮನಸ್ಸಿನ ಮೇಲಾಗುವ ಸಾಮಾಜಿಕತೆಯ ಪರಿಣಾಮಗಳನ್ನು ಬೆಳಕಿಗೆ ತಂದರು. ಸಾಂಪ್ರದಾಯಿಕ ಸಂಶೋಧನೆಗಳಲ್ಲಿ ೧೦೦ ಪ್ರಕರಣಗಳನ್ನು ಅಧ್ಯಯನಕ್ಕೊಳಪಡಿಸಿದಾಗ, ಅದರಲ್ಲಿನ ೯೦ ಪ್ರಕರಣಗಳು ಸಮಾನ ನಿಲುವಿಗೆ ಪೂರಕವಾಗಿದ್ದು, ಉಳಿದ ೧೦ ಪ್ರಕರಣಗಳು ಭಿನ್ನವಾಗುಳಿಯುವುದನ್ನು ಕೈಬಿಡಲಾಗುತ್ತದೆ. ಆದರೆ ಈ ಭಿನ್ನತೆಯನ್ನೇ ಆಧಾರವಾಗಿಸಿಕೊಂಡು, ಸ್ತ್ರೀವಾದಿಗಳು 'ವಸ್ತುನಿಷ್ಠ' ವಿಧಾನಗಳಿಂದಾಗುವ ಅಪಾಯಗಳನ್ನು ಕಂಡುಕೊಂಡಿದ್ದಾರೆ.

ಸಾಂಪ್ರದಾಯಿಕ ಸಂಶೋಧನೆಗಳೆಲ್ಲವೂ ಸಹ 'ಲೈಂಗಿಕತಾವಾದಿ'ಯಲ್ಲದ ಸಂಶೋಧನೆಗಳೆಂದು ಹೇಳಲಾಯಿತಾದರೆ, ವಾಸ್ತವದಲ್ಲಿ ಇವುಗಳು ಕಟ್ಟಾ ಪ್ರಧಾನ ಲಿಂಗೀಯ ಪರವಾದ ಸಂಶೋಧನೆಗಳೇ ಆಗಿವೆ. ಈ ಏಕಲಿಂಗೀಯ ಚಿಂತನೆಗಳನ್ನೇ ಸಾರ್ವತ್ರೀಕರಣಗೊಳಿಸಲಾಯಿತು. ಈ ಹಿನ್ನೆಲೆಯಲ್ಲಿ ಬೆಳೆದು ಬಂದ ದೌರ್ಜನ್ಯ- ಹಿಂಸೆಯ ಚಿಂತನೆಗಳು 'ಪುರುಷ ಕೇಂದ್ರಿತ' ಚಿಂತನೆಗಳಾಗಿಯೇ ಉಳಿದುಕೊಂಡಿವೆ. ಆದ್ದರಿಂದ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ

ದೌರ್ಜನ್ಯ- ಹಿಂಸೆಯನ್ನು ಗ್ರಹಿಸಿಕೊಳ್ಳಲು ಸ್ತ್ರೀವಾದಿ ಚಿಂತಕರು ರೂಪಿಸಿದ ವಿಧಾನಗಳನ್ನು ಅಳವಡಿಸಿಕೊಂಡು ಅಧ್ಯಯನವನ್ನು ನಡೆಸಲಾಗುತ್ತಿದೆ.

**ಸ್ತ್ರೀವಾದಿ ಸಂಶೋಧನಾ ವೈಧಾನಿಕತೆ:**

ಸಾಂಪ್ರದಾಯಿಕ ಸಂಶೋಧನಾ ವಿಧಾನಗಳು ಸ್ತ್ರೀವಾದಿ ಸಂಶೋಧನೆಗಳಿಗೆ ಅಳವಡಿಸಿಕೊಂಡಾಗ, ಅಪೇಕ್ಷಿತ ಫಲಿತಗಳನ್ನು ಪಡೆಯುವಲ್ಲಿ ವಿಫಲವಾಗುವುದರಿಂದ, ಈ ತಾತ್ವಿಕ ತಳಹದಿಯನ್ನು ಅನುಸರಿಸಿ ರೂಪಿತವಾಗುವ ಕಾನೂನುಗಳು ಸಹ ಮಹಿಳಾ ಬದುಕನ್ನು ಸುಸಂಗತಗೊಳಿಸುವಲ್ಲಿ ಸಫಲವಾಗುವುದಿಲ್ಲ. ಈ ನಿಟ್ಟಿನಲ್ಲಿ ಸ್ತ್ರೀವಾದಿಗಳು ಸಾಕಷ್ಟು ಬಗೆಯ ಅಧ್ಯಯನಗಳನ್ನು ನಡೆಸಿ 'ಸ್ತ್ರೀವಾದಿ ಸಂಶೋಧನಾ ವೈಧಾನಿಕತೆ'ಯ ಚೌಕಟ್ಟೊಂದನ್ನು ರೂಪಿಸಿ ಸ್ತ್ರೀಕೇಂದ್ರಿತ ಚಿಂತನೆಗಳು ಯಶಸ್ವಿಯಾಗುವಲ್ಲಿ ಸಹಕಾರಿಯಾಗಿದ್ದಾರೆ. ಹಾಗಾಗಿ ಈ ವೈಧಾನಿಕತೆಯಲ್ಲಿ ಸೂಚಿಸಿರುವ ಲಿಂಗಸೂಕ್ಷ್ಮತೆ, ಲೈಂಗಿಕ ದ್ವಿಧಾಭಾವ, ಲಿಂಗ ಪಾತ್ರಗಳ ಸಂಶೋಧನಾ ವಿಧಾನಗಳನ್ನು ಅಳವಡಿಸಿಕೊಳ್ಳುವ ಅಗತ್ಯತೆಯು ಪ್ರಸ್ತುತ ಅಧ್ಯಯನಕ್ಕೆ ಇದೆ.

ಹಲವಾರು ಶತಕಗಳಿಂದಲೂ ಬೆಳೆದು ಬಂದ ಜ್ಞಾನಶಾಖೆಗಳಲ್ಲಿ ಚಿಂತನೆಗಳು ನಡೆದು ಬಂದಿರುವುದಾದರೂ ಅಲ್ಲೆಡೆಯಲ್ಲಿಯೂ ಸಹಿತ ಮಹಿಳೆಯನ್ನು ಒಂದು 'ವಸ್ತು'ವೆಂದು ಪರಿಗಣಿಸಿದೆಯೇ ವಿನಃ ವಿಷಯವಾಗಿ, ವ್ಯಕ್ತಿಯಾಗಿ ಪರಿಗಣಿಸುವ ಗೋಜಿಗೆ ಹೋಗದಿರುವುದೇ ಮಹಿಳಾ ಬದುಕಿನ ನೈಜವಾದ ಸಮಸ್ಯೆಯನ್ನು ಗುರುತಿಸುವಲ್ಲಿ ಮತ್ತು ಸಮಾನತೆಯ ತಳಹದಿಯನ್ನಾಧರಿಸಿದ ಚಿಂತನೆಗಳು ರೂಪಿತವಾಗುವಲ್ಲಿ ವೈಫಲ್ಯವನ್ನು ಹೊಂದಿವೆಯಲ್ಲದೆ ಹೆಚ್ಚಿನ ಪ್ರಮಾಣದ ಲೈಂಗಿಕತಾವಾದಿ, ಏಕಪಕ್ಷೀಯ ಚಿಂತನೆಗೆ ಮುಂದಾಗಿವೆ. ಈ ಹಿನ್ನೆಲೆಯಲ್ಲಿ ನಡೆದಿರುವ ದೌರ್ಜನ್ಯ-ಹಿಂಸೆಯ ಕುರಿತು ನಡೆದಿರುವ ಸಂಶೋಧನೆಗಳು ಕೇವಲ ಆಕ್ರಮಣಕಾರಿ ನೆಲೆಯಲ್ಲಿ ಮತ್ತು ಪುರುಷ ದೃಷ್ಟಿಕೋನದ ಒಂದೇ ಬಗೆಯ ಆಯಾಮದಲ್ಲಿ ವಿವರಿಸಲಾಗಿದೆ. ಹೀಗೆ ಸಾಂಪ್ರದಾಯಿಕ ಸಂಶೋಧನೆಯ ಪ್ರಭಾವಕ್ಕೆ ಒಳಗಾದ ಸಾಕಷ್ಟು ಚಿಂತನೆಗಳು ಹೇರಳವಾಗಿ ದೊರೆಯುತ್ತವೆ.

ಜೀವಿತದುದ್ದಕ್ಕೂ ಮಹಿಳೆಯ ಬದುಕು, ಅವಳ ಅಭಿವ್ಯಕ್ತಿಯನ್ನು ಸಾಮಾಜಿಕ ಸಂದರ್ಭಗಳು ನಿಯಂತ್ರಿಸುತ್ತಲೇ ಬಂದಿವೆ. ಹಾಗಾಗಿ ಮಹಿಳಾ ಬದುಕಿನ ಸಂಗತಿಯನ್ನು ಕುರಿತು ಸಾಂಪ್ರದಾಯಿಕ ಸಂಶೋಧನಾ ವಿಧಾನವನ್ನು ಆಧರಿಸಿ ನಡೆಯುವ ಸಂಶೋಧನೆಗಳಿಗೆ ಪರಿಹಾರವೂ ಸತ್ಯವೆನ್ನುವಂತೆಯೆ ಕಾಣುತ್ತದೆ. ಆದ್ದರಿಂದ ಸ್ತ್ರೀವಾದಿ ಸಂಶೋಧನೆಯನ್ನು ಕೈಗೆತ್ತಿಕೊಂಡವರಿಗೆ ಅಭಿವ್ಯಕ್ತಿಯಲ್ಲಿ ಸಿಗುವ ಮೇಲ್ಪದರದ ಸತ್ಯಗಳಾಚೆಗೆ ಇರುವ ಸಂಗತಿಯನ್ನು ಶೋಧಿಸುವ ಮೂಲಕ ಸಮಸ್ಯೆಯ ಆಳವಾದ ಬೇರುಗಳನ್ನು ಶೋಧಿಸುವುದರತ್ತ ಸಾಗಬೇಕಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ಸಾರ್ವಜನಿಕ ವಲಯದಲ್ಲಿನ ಮಹಿಳೆಯ ವಿರುದ್ಧ ನಡೆಯುವ ದೌರ್ಜನ್ಯವನ್ನು

ವಿವರಿಸಲು ವಿವಿಧ ಬಗೆಯ ಪ್ರಕರಣಗಳನ್ನು ಅಧ್ಯಯನ ಮಾಡುವ ಅಗತ್ಯತೆಯಿದೆ. ಇಂತಹ ಪ್ರಕರಣಗಳ ಅಧ್ಯಯನದಲ್ಲಿ ಅದರಲ್ಲೂ ತೀರಾ ವೈಯಕ್ತಿಕವೆನಿಸುವಂತಹ ಸಮಾಜದಲ್ಲಿ ಗೌಪ್ಯತೆಯನ್ನು ಕಾಪಾಡಿಕೊಳ್ಳಬೇಕೆಂದು ಹೇರಿರುವ ಹಲವು ವಿಷಯ ವಿವರಗಳು, ಸಾಮೂಹಿಕ ವಾತಾವರಣದಲ್ಲಿರುವ ಅನಾನುಕೂಲಗಳಿಂದ ಹೆಚ್ಚು ಮುಸುಕಿನಲ್ಲಿ ಉಳಿದುಕೊಳ್ಳುವುದರಿಂದ ಖಚಿತವಾದ ಉತ್ತರಗಳು ದೊರೆಯುವುದಿಲ್ಲ. ಯಾರಿಗೆ ಭವಿಷ್ಯದ ಬಗೆಗೆ ಅತಂಕ ಭಯ–ಗೊಂದಲಗಳು ಇರುವುದಿಲ್ಲವೋ ಅವರು ಮಾತ್ರ ಎಂತಹುದೆ ಸಂಗತಿಯನ್ನು ಸ್ಪಷ್ಟವಾಗಿ ಹೊರಹಾಕಲು ಸಾಧ್ಯ. ಈ ನಿಟ್ಟಿನಲ್ಲಿ ಮಹಿಳಾ ಬದುಕಿನಲ್ಲಿ ನಿರಂತರವಾಗಿ ಅಭದ್ರತೆ–ಅರಕ್ಷತೆಯ ಸಂಗತಿಗಳೇ ಹೆಚ್ಚಾಗಿರುವುದರಿಂದ, ಸಮಸ್ಯೆಯ ನೈಜ ಸ್ವರೂಪ ಮರೆಮಾಚಲಾಗುತ್ತದೆ. ಆ ಕಾರಣವಾಗಿ ಸ್ತ್ರೀವಾದಿ ಸಂಶೋಧನೆಯ ವೈಯಕ್ತಿಕ ವಿವರಗಳನ್ನಾಧರಿಸಿ 'ವ್ಯಕ್ತಿನಿಷ್ಠ' ವಿಧಾನದಿಂದ ಒಟ್ಟು ಸಮುದಾಯಕ್ಕೆ ಅನ್ವಯಿಸುವ ಸಾಮಾಜಿಕ ಸಮಸ್ಯೆಯನ್ನು ಅರ್ಥೈಸಿಕೊಳ್ಳುವ ಧ್ಯೇಯವನ್ನು ಹೊಂದಿದೆ. ಆದರೆ 'ವಸ್ತುನಿಷ್ಠ' ವಿಧಾನವನ್ನು ಸಂಪೂರ್ಣವಾಗಿ ನಿರಾಕರಿಸದೆ, ಅಂಕಿ–ಸಂಖ್ಯೆಗಳ ದಾಖಲಾತಿ ಸಂದರ್ಭಗಳು ಇತ್ಯಾದಿಯಲ್ಲಿ ಬಳಸಲಾಗುತ್ತದೆ. ಪ್ರಮುಖವಾಗಿ 'ವ್ಯಕ್ತಿನಿಷ್ಠ'ತೆಯನ್ನು ಈ ಅಧ್ಯಯನವು ಆಧರಿಸಿದೆ.

"ವೈಯಕ್ತಿಕತೆಯೆ ನಮ್ಮ ರಾಜಕಾರಣ" ಎಂಬ ಮೂಲಧ್ಯೇಯವನ್ನು ಹೊಂದಿರುವ ಸ್ತ್ರೀವಾದಿಗಳು ವ್ಯಕ್ತಿಗತ ರಾಜಕಾರಣದ ಧೋರಣೆಯನ್ನಾಧರಿಸಿ ಅಲ್ಲಿ ಮಹಿಳಾ ಸಮುದಾಯದ ಭಾಗವಾಗಿ ಈ ಚಿಂತನೆ ಬೆಳೆಸಲಾಗುತ್ತಿದೆಯೇ ವಿನಃ ವ್ಯಕ್ತಿಗತ ಬದುಕಿನ ವಿವರಗಳನ್ನು, ಖಾಸಗಿತನವನ್ನು ಬಯಲಿಗೆಳೆಯುವ ಉದ್ದೇಶವಲ್ಲ. ಆದರೆ ಪುರುಷ ರಾಜಕಾರಣದ ಪ್ರತಿಯಾಗಿ ಮಹಿಳಾ ರಾಜಕಾರಣವನ್ನು ನಿಲ್ಲಿಸುವ ಅನಿವಾರ್ಯತೆಯನ್ನು ಸ್ಪಷ್ಟಪಡಿಸಲಾಗಿದೆ. ಪ್ರಸ್ತುತ ಸಂಶೋಧನೆಯುದ್ದಕ್ಕೂ ಮಹಿಳಾಪರ ಚಿಂತನೆಗಳನ್ನು ನಡೆಸಿದರೂ ಅಂತಿಮವಾಗಿ ಇದು "ಲೈಂಗಿಕತಾವಾದಿಯಲ್ಲದ ಸಂಶೋಧನಾ" ವಿಧಾನವನ್ನು ಅಳವಡಿಸಿಕೊಳ್ಳಲಾಗುತ್ತಿದೆ. ಸಾಧಾರಣವಾಗಿ ಈ ವಿಧಾನವು ಕೇವಲ ಸ್ತ್ರೀವಾದಿ ಅಧ್ಯಯನಗಳಿಗೆ ಮಾತ್ರ ನೈಜವಾದ 'ವಸ್ತುನಿಷ್ಠ' ಅಧ್ಯಯನಗಳು ನಡೆಯಲು ಸಾಧ್ಯವಾಗುತ್ತದೆ.

ಸಮಸ್ತ ಮಹಿಳಾ ಸಮುದಾಯವು ಭಿನ್ನವಾದ ಜಾತಿ, ವರ್ಗ, ವರ್ಣ ಜನಾಂಗಗಳಲ್ಲಿ ಸಮ್ಮಿಲಿತವಾದ್ದರಿಂದ, ಆಯಾ ವರ್ಗಗಳ ಒತ್ತಡಗಳಿಗೆ ಅನುಗುಣವಾಗಿ ಮಹಿಳಾ ಅನುಭವವು ಭಿನ್ನವಾಗಿರುವುದನ್ನು ಗುರುತಿಸಲು ಸ್ತ್ರೀವಾದಿ ಸಂಶೋಧನಾ ವಿಧಾನಗಳು ಹೆಚ್ಚು ಸಹಕಾರಿಯಾಗಿವೆ. ಪ್ರಸ್ತುತ ಸಂಶೋಧನೆಯಲ್ಲಿ ಪ್ರಜ್ಞಾಪೂರ್ವಕ ವ್ಯಕ್ತಿನಿಷ್ಠತೆ ಮತ್ತು ವೈಜ್ಞಾನಿಕ ವಸ್ತು ನಿಷ್ಠತೆಯನ್ನು ಅಳವಡಿಸಿಕೊಳ್ಳಲಾಗುತ್ತದೆ. ಸಾಂಪ್ರದಾಯಿಕ ಚಿಂತನೆಗಳಿಂದ ಮುಂದೆ ಹೋಗಿ ವ್ಯಾಖ್ಯಾನಗಳ, ಅಂಕಿ–ಅಂಶಗಳ ಜೊತೆ ಜೊತೆಗೆ ಮಹಿಳಾ ಸಮುದಾಯದ ಅನುಭವಗಳನ್ನು ಸಂಗ್ರಹಿಸಿ ವಿಶ್ಲೇಷಿಸಿಕೊಳ್ಳಲಾಗುತ್ತದೆ. ಹಾಗೂ ಈವರೆಗೂ ಪ್ರಧಾನಧಾರೆಯ ಚಿಂತನೆಗಳಲ್ಲಿ ಮರೆಮಾಚಲಾದ

ಮಹಿಳಾ ಮನೋವೃತ್ತಿ, ವರ್ತನೆಗಳನ್ನು ತಳಹದಿಯಾಗಿಸಿಕೊಂಡು ಈ ಅಧ್ಯಯನದ ಸಂಶೋಧನೆಯಲ್ಲಿ ತೊಡಗಿಕೊಳ್ಳಲಾಗುತ್ತದೆ.

ಅಸಮಾನ ಅಧಿಕಾರ ಸಂಬಂಧಗಳಾದ ಅಥವಾ ಅಸಹನೆಯ ಪ್ರತೀಕವಾಗಿ ಜನ್ಮ ತಳೆಯುವ ದೌರ್ಜನ್ಯ-ಹಿಂಸೆಗಳು ಈ ರೀತಿಯ ಅಸಮಾನತೆಯನ್ನು ನಿಭಾಯಿಸುವಲ್ಲಿ ಹೇಗೆ ಅಸ್ತ್ರವಾಗಿ ಬಳಸಲಾಗುತ್ತಿದೆಯೆಂಬುದನ್ನು ಕೈಬಿಡಲಾಗಿದೆಯೊ ಅದನ್ನು ಶೋಧಿಸುತ್ತಾ ನೈಜವಾಗಿ ಮಹಿಳೆಯನ್ನು ಅಧೀನ ಸ್ಥರದಲ್ಲಿರಿಸಿದ ಎಲ್ಲ ಆಯಾಮಗಳನ್ನು ನೋಡಲಾಗುತ್ತದೆ. ಹಾಗೂ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯ ವಿರುದ್ಧ ದೌರ್ಜನ್ಯಗಳು ನಡೆಯುತ್ತವೆ ಎಂಬುದು ವಾಸ್ತವದ ಸಂಗತಿಯಾಗಿದ್ದು, ದೌರ್ಜನ್ಯಕ್ಕೊಳಪಡಿಸುವವರ ಮತ್ತು ಒಳಗಾಗುವರನ್ನು ಪ್ರಮುಖವಾಗಿ ಗಮನದಲ್ಲಿರಿಸಿಕೊಂಡು ಸಂಶೋಧನೆಗೆ ತೊಡಗಿಸಿಕೊಳ್ಳಲಾಗಿದೆ.

**೧.೬ ಅಧ್ಯಯನದ ಮಹತ್ವ:**

ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವು ಜಾಗತಿಕ ಮಟ್ಟದಲ್ಲಿ ಚರ್ಚಿತವಾಗುತ್ತಿರುವ ಪ್ರಮುಖವಾದ ವಿಷಯವಾಗಿದೆ. ನಾಗರಿಕತೆಯು ಬೆಳೆದಂತೆಲ್ಲ ಮಹಿಳೆಯರ ಮೇಲೆ ಆಕ್ರಮಣಗಳು ಗಣನೀಯ ಪ್ರಮಾಣದಲ್ಲಿ ಹೆಚ್ಚಾಗುತ್ತಿವೆ. ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಸಾಮಾಜಿಕ ವ್ಯವಸ್ಥೆಯ ಎರಡು ಭಾಗಗಳಾಗಿ ವಿಭಾಗಿಸಿ ಚರ್ಚಿಸಬಹುದಾಗಿದೆ. ಪ್ರಸ್ತುತ ವಿಷಯದ ಕುರಿತು ಚಿಂತನೆಗಳು ಕನ್ನಡದಲ್ಲಿ ನಡೆದಿರುವುದು ತೀರಾ ವಿರಳವೆಂದೆ ಹೇಳಬಹುದು. ಅಲ್ಲದೆ ಮಹಿಳೆಯರ ಮೇಲಿನ ಹಲ್ಲೆಗಳನ್ನು ಕುರಿತು ಅಲ್ಲಲ್ಲಿ ಬಿಡಿ ಅಧ್ಯಯನಗಳು ಕಂಡುಬರುತ್ತವೆಯಾದರೂ, ಸಮಗ್ರವಾದ ಅಧ್ಯಯನಗಳು ಕಾಣಸಿಗುವುದಿಲ್ಲ.

ಕೌಟುಂಬಿಕ ವಲಯದ ದೌರ್ಜನ್ಯವನ್ನು ಕುರಿತಂತೆ ಕೆಲವು ಅಧ್ಯಯನಗಳು, ಕಾಯ್ದೆಗಳು ಜಾರಿಯಾಗಿವೆ. ಆದರೆ ಸಾರ್ವಜನಿಕ ವಲಯದಲ್ಲಿ ಮಹಿಳೆಯರ ವಿರುದ್ದ ನಡೆಯುವ ದೌರ್ಜನ್ಯಗಳು, ಹಾಗೂ ಅವುಗಳನ್ನು ನಿವಾರಿಸುವಲ್ಲಿ ಸಮಗ್ರವಾದ ಕಾನೂನುಗಳು ಜಾರಿಗೊಂಡಿಲ್ಲ. ಕೆಲಸದ ಸ್ಥಳದಲ್ಲಿ ನಡೆಯುವ ಲೈಂಗಿಕ ಕಿರುಕುಳ ನಿಷೇಧದ ಕಾಯ್ದೆಗಳನ್ನು ಉದಾಹರಿಸಬಹುದಾದರೂ ಸಾರ್ವಜನಿಕ ವಲಯವು ಕೇವಲ ಕೆಲಸದ ಸ್ಥಳವನ್ನು ಮಾತ್ರ ಒಳಗೊಂಡಿಲ್ಲವಾಗಿದೆ. ಹಾಗೂ ಕೆಲಸದ ಸ್ಥಳದಲ್ಲಿ ಮತ್ತು ಸಾರ್ವಜನಿಕ ಸ್ಥಳದಲ್ಲಿ ಲೈಂಗಿಕ ಕಿರುಕುಳದಾಚೆಗೂ ಹಲವಾರು ಬಗೆಯ ದೌರ್ಜನ್ಯಗಳಿಗೆ ಮಹಿಳೆಯರು ಒಳಗಾಗುತ್ತಿದ್ದಾರಾದ್ದರಿಂದ ಈ ಕಾಯ್ದೆಯು ಮಹಿಳೆಯ ವಿರುದ್ಧದ ಎಲ್ಲ ದೌರ್ಜನ್ಯಗಳನ್ನು ನಿವಾರಿಸುವ ಕಾನೂನಾಗಿ ಸಹಾಯಕ್ಕೆ ಬರುವುದಿಲ್ಲ. ಈ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಪ್ರಸ್ತುತ ವಿಷಯವು ಮಹತ್ವದ ಸಂಗತಿಯಾದ್ದರಿಂದ ಸಂಶೋಧನೆಗೆ ಆಯ್ದುಕೊಳ್ಳಲಾಗಿದೆ.

೧.೭ ಅಧ್ಯಾಯಗಳ ವಿಭಾಗೀಕರಣ:

ಮಹಾ ಪ್ರಬಂಧವನ್ನು ಒಟ್ಟು ಐದು ಅಧ್ಯಾಯಗಳಲ್ಲಿ ವಿಭಾಗೀಕರಿಸಲಾಗಿದೆ. ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ವ್ಯಾಪ್ತಿ, ಗುರಿ, ವೈಧಾನಿಕತೆ, ಮಹತ್ವವನ್ನು ಕುರಿತದ್ದಾಗಿದೆ. ಹಾಗೂ ಅಧ್ಯಯನದ ಸಮಗ್ರ ಸ್ವರೂಪವನ್ನು ಸ್ಥೂಲವಾಗಿ ವಿವರಿಸಲಾಗಿದೆ.

ಅಧ್ಯಾಯ ಎರಡು: ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ- ಹಿಂಸೆಯ ಸ್ವರೂಪ ಮತ್ತು ಗ್ರಹಿಕೆ ಎಂಬುದಾಗಿದೆ. ಇಲ್ಲಿ ದೌರ್ಜನ್ಯ ಹಿಂಸೆಯ ಕುರಿತ ಚಿಂತನೆಗಳ ಸಮೀಕ್ಷೆಯನ್ನು ಮಾಡಲಾಗಿದೆ, ಈ ಕುರಿತ ಸ್ತ್ರೀವಾದಿ ಚಿಂತನೆಗಳನ್ನು ಮತ್ತು ಸ್ತ್ರೀವಾದಿ ಸಿದ್ಧಾಂತಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ವಿವಿಧ ಆಯಾಮಗಳನ್ನು ಚರ್ಚಿಸಲಾಗಿದೆ. ಕೌಟುಂಬಿಕ ವಲಯ ಸಾರ್ವಜನಿಕ ವಲಯದಲ್ಲಿನ ಹಿಂಸೆ ದೌರ್ಜನ್ಯಗಳನ್ನು ಚರ್ಚಿಸಲಾಗಿದ್ದು, ಕೌಟುಂಬಿಕ ಹಿಂಸೆ ತಡೆಕಾಯ್ದೆ ಮತ್ತು ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳ ನಿಷೇಧ ಕಾಯ್ದೆಯನ್ನು ಸ್ತ್ರೀವಾದಿ ವಿಶ್ಲೇಷಣೆಗೊಳಪಡಿಸಲಾಗಿದೆ. ಕೊನೆಯಲ್ಲಿ ಈ ಎರಡು ಕಾಯ್ದೆಯನ್ನು ಮುಖಾಮುಖಿಯಾಗಿಸಲಾಗಿದೆ.

ಅಧ್ಯಾಯ ಮೂರು: ವಿವಿಧ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ ಎಂಬ ಶಿರ್ಷಿಕೆಯಡಿಯಲ್ಲಿ ಆರೋಗ್ಯ ವಲಯ, ಆರ್ಥಿಕವಲಯ, ಧಾರ್ಮಿಕವಲಯ, ಶೈಕ್ಷಣಿಕ ವಲಯ, ರಾಜಕೀಯ ವಲಯ, ಉದ್ಯೋಗ ವಲಯಗಳಲ್ಲಿನ ಸ್ವರೂಪವನ್ನು ಗ್ರಹಿಸುವುದರೊಂದಿಗೆ ಈ ಎಲ್ಲ ವಲಯಗಳಲ್ಲಿಯೂ ಸಮರೂಪವಾಗಿ ಕಾಣುವ ಯಾಜಮಾನ್ಯ ಮತ್ತು ಅಧೀನ ನೆಲೆಯ ಸ್ವರೂಪವನ್ನು ಅರ್ಥೈಸಿಕೊಳ್ಳಲಾಗಿದೆ. ಒಟ್ಟು ಸಾರ್ವಜನಿಕ ವಲಯಗಳಲ್ಲಿನ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಉದ್ದೇಶ ಒಂದೆಯಾಗಿದ್ದು, ಸ್ವರೂಪಗಳಲ್ಲಿ ಭಿನ್ನವಾಗಿ ಕಾಣಿಸಿಕೊಳ್ಳುತ್ತದೆ ಎಂಬುದನ್ನು ಸ್ಪಷ್ಟಪಡಿಸಲಾಗಿದೆ.

ಅಧ್ಯಾಯ ನಾಲ್ಕು: 'ಕ್ಷೇತ್ರ ಕಾರ್ಯ ಕೇಂದ್ರಿತ ವರದಿ' ಎಂದು ರೂಪಿಸಿಕೊಳ್ಳಲಾಗಿದ್ದು, ಕ್ಷೇತ್ರಕಾರ್ಯದ ಉದ್ದೇಶ ಮತ್ತು ಸ್ವರೂಪ, ಪ್ರಸ್ತುತ ಸಂಶೋಧನೆಯಲ್ಲಿ ಅದರ ಅಗತ್ಯತೆಯನ್ನು ವಿವರಿಸುತ್ತಾ, ಪ್ರಕರಣ ಅಧ್ಯಯನಗಳನ್ನು ವಿಶೇಷವಾಗಿ ಬಳಸಿಕೊಳ್ಳಲಾಗಿದ್ದು ಇಡೀ ಸಾರ್ವಜನಿಕ ವಲಯದ ಸಮೀಕ್ಷೆ ಮಾಡಲಾಗಿದೆ. ಪ್ರಕರಣ ಅಧ್ಯಯನಗಳನ್ನು ಗ್ರಾಮಪಂಚಾಯ್ತಿ ಅಧ್ಯಕ್ಷ ಉಪಾಧ್ಯಕ್ಷರನ್ನು ರಾಜಕೀಯ ವಲಯಕ್ಕೆ, ಉದ್ಯೋಗ ವಲಯದ ಮಹಿಳಾ ಪೋಲಿಸರನ್ನು ಅಧ್ಯಯನ ಮಾಡಲಾಗಿದೆ. ಈ ಕ್ಷೇತ್ರಕಾರ್ಯದಲ್ಲಿ ಮುಖ್ಯವಾಗಿ ಎದುರಾದ ಸಮಸ್ಯೆಗಳೇನು? ಅವುಗಳನ್ನು ನಿವಾರಿಸುವಲ್ಲಿ ಸ್ತ್ರೀವಾದಿ ಸಂಶೋಧನಾ ವೈಧಾನಿಕತೆಯ ಯಾವ ವಿಧಾನಗಳು ಹೆಚ್ಚು ಉಪಯುಕ್ತವೆನಿಸಿ ಈ ಸಂಶೋಧನೆಯಲ್ಲಿ ಬಳಸುವುದರೊಂದಿಗೆ ಅಪೇಕ್ಷಿತ ಫಲಿತಗಳನ್ನು ಪಡೆಯಲಾಗಿದೆ. ಈ ಹಿನ್ನೆಲೆಯಲ್ಲಿ ಆಯ್ಕೆ ಮಾಡಿಕೊಂಡ ಪ್ರಕರಣಗಳನ್ನು ಜಾತಿ, ವರ್ಗ, ಪ್ರದೇಶ, ವಯಸ್ಸಿನ ಸೂಚಕಗಳನ್ನಾಧರಿಸಿ ಒಟ್ಟು ಪ್ರಕರಣಗಳನ್ನು ಲೈಂಗಿಕ, ಆರ್ಥಿಕ, ಶೈಕ್ಷಣಿಕ ಮತ್ತು ಇತರೆ

ದೌರ್ಜನ್ಯಗಳೆಂದು ಗುಂಪುಗಳನ್ನಾಗಿಸಿಕೊಂಡು ಒಟ್ಟು ಇಪ್ಪತ್ತು ಪ್ರಕರಣಗಳನ್ನು ವಿಶ್ಲೇಷಣೆಗೊಳಪಡಿಸಿ ಕ್ಷೇತ್ರಕಾರ್ಯ ಕೇಂದ್ರಿತ ವರದಿಯನ್ನು ಸಿದ್ಧಪಡಿಸಲಾಗಿದೆ.

ಅಧ್ಯಾಯ ಐದರಲ್ಲಿ : ಸಮಾರೋಪದಲ್ಲಿ ಸಾರ್ವಜನಿಕ ವಲಯದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಶೋಧವೇ ಮೊದಲು ಹೇಗೆ ಸಮಸ್ಯೆಯಾಯಿತು. ನಂತರ ಸಮಸ್ಯೆಯನ್ನು ಎದುರಿಸುವುದು ಹೇಗೆ ಎಂಬುದು ಇನ್ನೊಂದು ಸಮಸ್ಯೆಯಾಯಿತು ಎನ್ನುವುದನ್ನು ಚರ್ಚಿಸುತ್ತ, ಸಂಶೋಧನೆಯ ಪ್ರಾಕಲ್ಪನೆಯು ಪ್ರಬಂಧವಾಗಿಸಿಕೊಂಡ ಬಗೆ, ಈ ಅಧ್ಯಯನ ಕ್ರಮದ ವಿಶ್ಲೇಷಣೆ, ಮಹಿಳಾ ಹೋರಾಟದ ಸ್ವರೂಪ, ಪ್ರಸ್ತುತ ಅಧ್ಯಯನದಿಂದ ಕಂಡುಕೊಳ್ಳಲಾದ ಹೊಸ ಆಯಾಮಗಳನ್ನು ವಿವರಿಸುತ್ತ, ಈ ಅಂಶಗಳನ್ನಾಧರಿಸಿ ಕೌಟುಂಬಿಕ ವಲಯದಲ್ಲಿ ಕೌಟುಂಬಿಕ ಹಿಂಸೆ ತಡೆಕಾಯ್ದೆ ತರಲು ಹೇಗೆ ಸ್ತ್ರೀವಾದಿ ಚಿಂತಕರು ಹೋರಾಟಗಾರರು ಒತ್ತಾಯಿಸಿದರು, ಹಾಗೆಯೇ ಸಾರ್ವಜನಿಕ ವಲಯದಲ್ಲಿಯೊ ಕಾಯ್ದೆ ತರಬೇಕಾದ ಅಗತ್ಯತೆಯನ್ನು ವಿವರಿಸಲಾಗುತ್ತದೆ. ಅಧ್ಯಯನದ ಫಲಿತಗಳನ್ನು ಮಿತಿಗಳನ್ನು ಹಾಗೂ ಅಧ್ಯಯನದ ಮುಂದಿನ ಸಾಧ್ಯತೆಗಳನ್ನು, ಸಲಹೆಗಳನ್ನು ನೀಡಲಾಗಿದೆ. ಕೊನೆಯದಾಗಿ ಅನುಬಂಧದಲ್ಲಿ ಪರಾಮರ್ಶನ ಗ್ರಂಥಗಳನ್ನು ಪ್ರಕರಣಗಳನ್ನು, ವಕ್ತೃ ವಿವರಗಳನ್ನು, ಪದಕೋಶಗಳನ್ನು ದಾಖಲಿಸಲಾಗಿದೆ.

---

**ಅಡಿಟಿಪ್ಪಣಿಗಳು:**

೧ women and voilence, A country Report. Veena poonacha 1995, Pg. No.
೨ Same Book Pg. No. 02
೩ ಆಧುನಿಕ ಕನ್ನಡ ನಾಟಕಗಳಲ್ಲಿ ಪ್ರಭುತ್ವ ಯಜಮಾನ್ಯತೆ ಹಾಗೂ ಅಧಿಕಾರ ಕೇಂದ್ರಗಳ ಪ್ರತಿನಿಧೀಕರಣ ವಸ್ತು ನಿಷ್ಠ ಅಧ್ಯಯನ, ಟಿ. ವೆಂಕಟೇಶಮೂರ್ತಿ, ೨೦೦೫, ಪು.ಸಂ. ೨೦
೪ ರಾಜಕೀಯ ಹಕ್ಕು ಬಾಧ್ಯತೆಗಳ ತಳಹದಿ, ಭಾಗ್ಯಶ್ರೀ ಮಲ್ಲಿಕಾರ್ಜುನ, ೨೦೦೭
೫ ಅಧಿಕಾರ ಮೀಮಾಂಸೆ, ಬಟ್ರಂಡ್ ರಸೆಲ್, ೨೦೦೭, ಪು.ಸಂ. ೨೦-೨೧
೬ ವಸಾಹತೋತ್ತರ ಚಿಂತನೆ, ಸಿ.ಎನ್. ರಾಮಚಂದ್ರನ್, ೨೦೦೨, ಪು.ಸಂ. ೨೧
೭ ಅದೇ ಪುಸ್ತಕ ಪು.ಸಂ. ೨೨
೮ ಆಧುನಿಕ ಕನ್ನಡ, ನಾಟಕಗಳಲ್ಲಿ ಪ್ರಭುತ್ವ ಯಜಮಾನ್ಯತೆ ಹಾಗೂ ಅಧಿಕಾರ ಕೇಂದ್ರಗಳ ಪ್ರತಿನಿಧೀಕರಣ ವಸ್ತು ನಿಷ್ಠ ಅಧ್ಯಯನ, ಟಿ. ವೆಂಕಟೇಶಮೂರ್ತಿ, ೨೦೦೫, ಪು.ಸಂ. ೨೧
೯ Second and Third CEDAW Report, 2006 Pg. No. 187
೧೦ ಸಮಾಜವಾದಿ ರಾಮ ಮನೋಹರ ಲೋಹಿಯಾ, ದೇಜಗೌ, ೧೯೮೯, ಪು.ಸಂ. ೫೭

ಅಧ್ಯಾಯ ಎರಡು

# ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ : ಸ್ವರೂಪ ಮತ್ತು ಗ್ರಹಿಕೆ

೨.೧ ದೌರ್ಜನ್ಯ - ಹಿಂಸೆಯ ಕುರಿತ ಚಿಂತನೆಗಳ ಸಮೀಕ್ಷೆ

೨.೨. ದೌರ್ಜನ್ಯ - ಹಿಂಸೆಯ ಕುರಿತ ಸ್ತ್ರೀವಾದಿ ಚಿಂತನೆಗಳು

೨.೩. ಸ್ತ್ರೀವಾದಿ ಸಿದ್ಧಾಂತಗಳಲ್ಲಿ ಈ ಕುರಿತ ವಿವಿಧ ಆಯಾಮಗಳು

೨.೪. ಕೌಟುಂಬಿಕ ವಲಯದಲ್ಲಿ ಹಿಂಸೆ ಮತ್ತು ದೌರ್ಜನ್ಯ

೨.೫. ಸಾರ್ವಜನಿಕ ವಲಯದಲ್ಲಿ ಹಿಂಸೆ ಮತ್ತು ದೌರ್ಜನ್ಯ

೨.೬. ಕೌಟುಂಬಿಕ ಹಿಂಸೆ ತಡೆ ಕಾಯ್ದೆ : ಸ್ತ್ರೀವಾದಿ ವಿಶ್ಲೇಷಣೆ

೨.೭. ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳ ನಿಷೇಧ ಕಾಯ್ದೆ : ಸ್ತ್ರೀವಾದಿ ವಿಶ್ಲೇಷಣೆ

೨.೮. ಎರಡು ಕಾಯ್ದೆಗಳ ಮುಖಾಮುಖಿ

## ಅಧ್ಯಾಯ ೨

# ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ : ಸ್ವರೂಪ ಮತ್ತು ಗ್ರಹಿಕೆ

ಸಾಂಪ್ರದಾಯಿಕ ಸಾಮಾಜಿಕ ಸಂರಚನೆಯಲ್ಲಿ ಮಹಿಳಾ ಬದುಕು ಪುರುಷ ರೂಪಿ ಕಟ್ಟುಪಾಡಿನಲ್ಲಿಯೇ ಸಾಗುತ್ತದೆ. ಅವಳ ನಡೆ-ನುಡಿ, ಸ್ವಭಾವ ಇತ್ಯಾದಿಯೆಲ್ಲವೂ ಸಾಮಾಜಿಕತೆಯ ಹಿನ್ನೆಲೆಯನ್ನು ಆಧರಿಸಿಯೇ ಇವೆ. ಹೀಗೆ ಸಮಾಜ ಮತ್ತು ಮಹಿಳಾ ಬದುಕು ಒಂದನ್ನೊಂದು ತಳುಕು ಹಾಕಿಕೊಂಡಿವೆ. ಈ ಬಗೆಯ ಸಾಮಾಜಿಕ ವ್ಯವಸ್ಥೆಯಲ್ಲಿ ನಿರಂತರವಾಗಿ ಪುರುಷ ಬದುಕಿನ ಸುತ್ತ ಗಿರಕಿ ಹೊಡೆಯುತ್ತಿರುವ ಮಹಿಳೆಯ ಬದುಕು ಸುಸಂಗತವಾಗಿಲ್ಲವೆಂಬುದನ್ನು ಸಾಕಷ್ಟು ಅಧ್ಯಯನಗಳು ಖಚಿತಪಡಿಸಿವೆ. ಪ್ರಸ್ತುತ ಸಂಶೋಧನೆಯು ಮಹಿಳಾ ಬದುಕನ್ನು ಕೇಂದ್ರೀಕರಿಸಿ, ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಗಳನ್ನು ಗ್ರಹಿಸುವ, ಸಾಮಾಜಿಕ ಸಂದರ್ಭಗಳಲ್ಲಿ ಅವು ಪಡೆಯುವ ರೂಪಗಳನ್ನು ಸ್ತ್ರೀವಾದಿ ನೆಲೆಯಲ್ಲಿ ಚರ್ಚಿಸುವ ಯತ್ನವಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸಕ್ತ ಅಧ್ಯಾಯದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ವ್ಯಾಖ್ಯಾನ, ಸ್ವರೂಪ ಹಾಗೂ ಈ ಕುರಿತು ಬೆಳೆದು ಬಂದ ಚಿಂತನೆಗಳ (ಸಿದ್ಧಾಂತ) ಸ್ಥೂಲ ರೂಪ ಮತ್ತು ಇವುಗಳ ನಿವಾರಣೆಗೆ ಜಾರಿಯಾಗಿರುವ ಕಾನೂನುಗಳು ಮಹಿಳಾ ಬದುಕನ್ನು ಬದಲಿಸುವಲ್ಲಿ ಸಹಾಯಕವಾಗಿಯೇ ಎಂಬುದಕ್ಕೆ ಕೆಲವು ಕಾನೂನುಗಳನ್ನು ಸಾಂದರ್ಭಿಕ ಚರ್ಚೆಗೆ ತರಲಾಗುತ್ತದೆ. ಕೌಟುಂಬಿಕ ವಲಯದ ದೌರ್ಜನ್ಯದ ವಿಸ್ತೃತ ರೂಪವೇ ಸಾರ್ವಜನಿಕ ವಲಯದಲ್ಲೂ ಪ್ರತಿಫಲಿತಗೊಳ್ಳುವುದರಿಂದ, ಕೌಟುಂಬಿಕ ದೌರ್ಜನ್ಯ ತಡೆ ಕಾಯ್ದೆ ಮತ್ತು ಕೆಲಸದ ಸ್ಥಳದಲ್ಲಿ ನಡೆಯುವ ಲೈಂಗಿಕ ಕಿರುಕುಳ ನಿಷೇಧ ಕಾಯ್ದೆಗಳೆರಡನ್ನು ವಿಶೇಷವಾಗಿ ಚರ್ಚೆಗೆತ್ತಿಕೊಳ್ಳಲಾಗುತ್ತಿದೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳಾ ಸಮುದಾಯವು ಪುರುಷ ಸಮುದಾಯದ ಆಸ್ತಿಯಾಗಿದೆ. ಹಾಗಾಗಿ ಈ ಅಧ್ಯಯನವು ಸಾರ್ವಜನಿಕ ವಲಯದ್ದೆಂದು ಹೇಳುವಾಗಲೂ ಸಹ ಕೌಟುಂಬಿಕ ವಲಯವನ್ನು ಪ್ರಸ್ತಾಪಿಸಲು ಕಾರಣ, ಕುಟುಂಬದಲ್ಲಿ ಕಾಣಿಸಿಕೊಳ್ಳುವ ಯಜಮಾನ - ಅಧೀನ ನೆಲೆಯ ಸ್ವರೂಪ ಸಾರ್ವಜನಿಕ ವಲಯದಲ್ಲೂ ಮುಂದುವರೆದಿದೆ. ಯಾಜಮಾನ್ಯತೆಯ ನಿರಂತರ ಮುಂದುವರಿಕೆಗಾಗಿ ಮೊದಲ ಹಂತದಲ್ಲಿಯೇ ಇಲ್ಲಿನ ಮಹಿಳೆಯ ಪ್ರವೇಶವನ್ನು ನಿರಾಕರಿಸುತ್ತದೆ. ಈ ನಿರಾಕರಣೆಯೇ ಮೊದಲ ಹಂತದ ದೌರ್ಜನ್ಯ. ಹೀಗಿರುವಾಗಲೂ ಮಹಿಳೆ ಈ ಪ್ರವೇಶವನ್ನು ಪಡೆದಾಗ ಅಲ್ಲಿ ಅವಳ

ಭದ್ರತೆ ಮತ್ತು ರಕ್ಷಣೆಗಳ ಕಾರಣಗಳಿಂದಾಗಿ ದೌರ್ಜನ್ಯಕ್ಕೊಳಗಾಗುತ್ತಿದ್ದಾಳೆ. ಇಂತಹ ಭಯ, ಆತಂಕಗಳಲ್ಲಿ ಮಹಿಳೆ ತನ್ನ ಮೇಲೆ ಆಗುತ್ತಿರುವ ಆಕ್ರಮಣಗಳನ್ನು ಅನಾವರಣಗೊಳಿಸಲಾಗದಂತಹ ಸ್ಥಿತಿಯಲ್ಲಿದ್ದಾಳೆ. ಎರಡು ವಲಯಗಳಲ್ಲೂ ಕಾಣಿಸಿಕೊಳ್ಳುವ ರಹಸ್ಯ ಲೋಕದ ಸಂಗತಿಗಳು ಪ್ರಕಟವಾಗದಿರಲು ಸಂಪ್ರದಾಯ, ಆಚರಣೆ, ಸಂಸ್ಕೃತಿ, ನಡೆ-ನುಡಿ ಇತ್ಯಾದಿ ಕಾರಣಗಳಿವೆ. ಇಂಥದೊಂದು ಸಾಂಸ್ಕೃತಿಕ ಚಿಂತನೆಯು ಬಲವಾಗಿ ಬೇರೂರಿರುವುದರಿಂದ ಸ್ವತಃ ತಂದೆಯೆ ತನ್ನ ಮಗಳ ಮೇಲೆ ಅತ್ಯಾಚಾರ ಮಾಡಿದರೆ, ಗಂಡ-ಹೆಂಡತಿಯ ಮೇಲೆ ಬಲಾತ್ಕಾರ ಮಾಡಿದರೆ, ಬಹುತೇಕ ಅದು ಪ್ರಕಟವಾಗುವುದಿಲ್ಲ. ಪ್ರಕಟವಾದರೂ ಅದಕ್ಕೆ ಶಿಕ್ಷೆಗಳಾಗಲಿ, ಕಾನೂನಿನ ಕ್ರಮಗಳಾಗಲಿ ಇಲ್ಲ. ಈವರೆಗೆ ಮಹಿಳೆಯರ ಸುರಕ್ಷಿತ ತಾಣ ಕೌಟುಂಬಿಕ ವಲಯವೆಂದು ಹೇಳಲಾಗುತ್ತಿದೆಯೋ ಆ ಸ್ಥಳವೂ ಸಾಕಷ್ಟು ಭಯಾನಕ, ಅಪಾಯಕಾರಿ ಮತ್ತು ಅಭದ್ರತೆಯ ಬೀಡಾಗಿದೆ ಎಂಬುದಕ್ಕೆ ಸಾಕಷ್ಟು ಚಿಂತನೆಗಳು ಸಾಕ್ಷಿಯಾಗಿವೆ. ಈ ಬಗೆಯ ಚಿಂತನೆ-ಚಳುವಳಿಗಳ ಫಲಿತವಾಗಿ 'ಕೌಟುಂಬಿಕ ದೌರ್ಜನ್ಯ ತಡೆ ಕಾಯ್ದೆ' ಜಾರಿಯಾಗಿದೆ. ಅದರ ಸಾಫಲ್ಯ-ವೈಫಲ್ಯಗಳ ಪ್ರಶ್ನೆಗಿಂತಲೂ ಇಂತಹ ವಲಯದಲ್ಲಿ ನಡೆಯುವ ದೌರ್ಜನ-ಹಿಂಸೆ, ಆಕ್ರಮಣ ಇತ್ಯಾದಿಗಳನ್ನು ತಡೆಯಲು ಈ ಕಾನೂನು ಒಂದು ಅಸ್ತ್ರವಾಗಿ ಈ ವಲಯದಲ್ಲಿ ಸೂಚಿಸಬಹುದು. ಕೊನೆ ಪಕ್ಷ ಇದನ್ನು ಉಪಯೋಗಿಸುವ ಪ್ರಯತ್ನಗಳಾದರೂ ಮಾಡಬಹುದು. ಈ ಕಾಯ್ದೆಯ ಹಿನ್ನೆಲೆಯಲ್ಲಿ ಸಾರ್ವಜನಿಕ ವಲಯದ ಅಧ್ಯಯನಕ್ಕೆ ಪ್ರವೇಶಿಸುವುದಾದರೆ, ಸಾರ್ವಜನಿಕ ವಲಯದಲ್ಲಿಯೂ ಸಹ ಇಂತಹ ಪ್ರಕಟಿತ - ಅಪ್ರಕಟಿತ ಸಂದರ್ಭಗಳಿವೆ. ಇದಕ್ಕೆ ಕಾರಣಗಳಾಗಿ ಕುಟುಂಬದೊಳಗಿರುವ ಸಂಗತಿಗಳೇ ಕಾಣಿಸಿಕೊಳ್ಳುತ್ತವೆ. ಸಾರ್ವಜನಿಕ ವಲಯದಲ್ಲಿ ಮಹಿಳೆ ಕುಟುಂಬಕ್ಕಿಂತ ಹೆಚ್ಚಿನ ಪ್ರಮಾಣದ ಅಭದ್ರತೆಯನ್ನು, ಭಯ, ಆತಂಕಗಳನ್ನು ಎದುರಿಸಬೇಕಾಗುತ್ತದೆ. ಇಲ್ಲಿ ನಡೆಯುವ ಹಲವು ಬಗೆಯ ಆಕ್ರಮಣಗಳಿಗೆ ಮಹಿಳೆ ನಿರಂತರವಾಗಿ ಬಲಿಯಾಗುತ್ತಿದ್ದಾಳೆ. ಆದರೆ ಸಾರ್ವಜನಿಕ ವಲಯದಲ್ಲಿನ ಈ ಬಗೆಯ ಆಕ್ರಮಣಗಳನ್ನು ಎದುರಿಸಲು ಸೂಕ್ತವಾದ ಕಾನೂನುಗಳು ಜಾರಿಗೊಂಡಿಲ್ಲವಾದರೂ ಸ್ತ್ರೀವಾದಿಗಳ ಸುದೀರ್ಘ ಪ್ರಯತ್ನದಿಂದ 'ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳ ತಡೆ ಕಾಯ್ದೆ' ಜಾರಿಯಾಗಿದೆ. ಆದರೆ ಇದು ಕೆಲಸದ ಸ್ಥಳಕ್ಕೆ ಸೀಮಿತಗೊಳಿಸಿರುವುದೇ ಪ್ರಮುಖ ಪ್ರಶ್ನೆಯಾಗಿರುವುದಿಂದ ಈ ಕಾನೂನುಗಳನ್ನು ಇಲ್ಲಿ ವಿಶ್ಲೇಷಣೆಗೊಳಪಡಿಸಲಾಗುತ್ತಿದೆ.

**೨.೧. ದೌರ್ಜನ್ಯ - ಹಿಂಸೆಯ ಕುರಿತ ಚಿಂತನೆಗಳ ಸಮೀಕ್ಷೆ**

ಸಂಶೋಧನಾಶಾಸ್ತ್ರದಲ್ಲಾಗಲಿ, ಪುರಾತತ್ವಗಳಲ್ಲಾಗಲಿ ಕ್ರಿ.ಪೂ. ೩೦,೦೦೦ಕ್ಕಿಂತ, ಮೊದಲು ಲಿಂಗತಾರತಮ್ಯದ ಸುಳಹುಗಳು ಕಾಣಿಸುವುದಿಲ್ಲ. ಅಲ್ಲಿ ಸ್ತ್ರೀ-ಪುರುಷರ ಬದುಕು ಭಿನ್ನವಾದ ಅಸ್ತಿತ್ವದಲ್ಲಿ ನೆಲೆಗೊಂಡಿದೆಯಾದರೂ ಸಂಘಗಳಾಗಲಿ, ದಬ್ಬಾಳಿಕೆಗಳ ಕುರಿತಾಗಲಿ ದಾಖಲೆಗಳಿಲ್ಲ. ಕ್ರಿ.ಪೂ. ೩೫,೦೦೦ದಿಂದ ಅಲ್ಲಿ ಲಿಂಗತ್ವದ ಪರಿಕಲ್ಪನೆಯ ಕುರಿತು ಆಧಾರಗಳು ಲಭ್ಯವಿವೆ (ಉಲ್ಲೇಖ: ವಯೊಲೆನ್ಸ್ ಅಗೆನಸ್ಟ್ ವುಮೆನ್, ನ್ಯೂ ಮೂವಮೆಂಟ್ಸ್ ಆ್ಯಂಡ್ ನ್ಯೂ ಥೇರಿಸ್ ಇನ್ ಇಂಡಿಯಾ - ೩೫).[೧]

ಫ್ರಾನ್ಸ್‌ನ ಕೆಲವು ಚಿತ್ರಗಳಲ್ಲಿ ಗರ್ಭಿಣಿ ಮಹಿಳೆ, ಫಲವಂತಿಕೆಗಳು, ಮಾತೃದೇವತೆಗಳ ಚಿತ್ರಗಳು ಕಾಣಿಸಿಕೊಳ್ಳುತ್ತವೆ. ಆದರೆ ಇಲ್ಲಿ ಯಾವುದೇ ಲಿಂಗತ್ವ ಭಿನ್ನತೆಯ ಆಧಾರಗಳಿಲ್ಲ, ಭಿನ್ನತೆಯಿರುವುದು ಸ್ತ್ರೀ-ಪುರುಷರ ಪರಿಕಲ್ಪನೆಯಲ್ಲಿ. ಹಾಗೂ ಕ್ರಿ.ಪೂ. ೧೦,೦೦೦-೮೦೦೦ದ ಕುರಿತು ಸ್ಥಾಪಿತ ಕೃಷಿಕ ಸಮಾಜದಲ್ಲಿ ದೌರ್ಜನ್ಯವನ್ನು ನಿಯಂತ್ರಿಸಲು 'ಉತ್ಪಾದನೆ' ಎಂಬುದಕ್ಕೆ ಆಧಾರಗಳಿಲ್ಲ (ಉಲ್ಲೇಖ: ವಯೊಲೆನ್ಸ್ ಅಗೆನಸ್ಟ್ ವುಮೆನ್, ನ್ಯೂಮೂವಮೆಂಟ್ಸ್ ಆ್ಯಂಡ್ ನ್ಯೂ ಥೇರಿಸ್ ಇನ್ ಇಂಡಿಯಾ-೩೬).[೨] ವರ್ಗಶೋಷಣೆ ಅಥವಾ ಪುರುಷ ಪ್ರಧಾನತೆಯಾಗಲಿ, ಸುದೀರ್ಘ ಅವಧಿಯವರೆಗೂ ಪ್ರಸ್ತಾಪವಾಗಿಲ್ಲ. ಕುಟುಂಬ ಸಂಬಂಧಗಳಲ್ಲಿನ ಆರ್ಥಿಕ ಭಿನ್ನತೆಯೊಂದಿಗೆ ಮಹಿಳೆಯರು ತಮ್ಮ ಇಚ್ಛೆಗನುಗುಣವಾಗಿ ಪೌರೋಹಿತ್ಯ ನಡೆಸುವುದಾಗಲಿ, ಇತ್ಯಾದಿಯಾಗಲಿ ಯಾವುದೇ ಭಿನ್ನತೆಯಿರಲಿಲ್ಲ ಹಾಗೂ ಮಾತೃಪ್ರಧಾನತೆಯ ಕುರುಹುಗಳಾಗಲಿ, ದಬ್ಬಾಳಿಕೆಗಳಾಗಲಿ ಕಾಣಿಸಿಕೊಂಡಿಲ್ಲ. ಖಾಸಗಿ ಉದ್ದೇಶಕ್ಕಾಗಿ ಉತ್ಪಾದನೆ ಅಥವಾ ಉಳಿತಾಯಗಳು ಮೀಸಲಿಡುತ್ತಿದ್ದರೂ ಸಹ ಶೋಷಣೆ, ದಬ್ಬಾಳಿಕೆ, ಪುರುಷ ಪ್ರಧಾನತೆ ಇತ್ಯಾದಿಗಳ ಅಗತ್ಯತೆಯು ಇರದಿರುವುದು ಗಮನಾರ್ಹ. ಕೃಷಿಕ ಸಮಾಜ ಆರಂಭಿಕ ಸಾವಿರಾರು ವರ್ಷಗಳಲ್ಲಿ ನೆಮ್ಮದಿಯಿಂದ ಕೂಡಿತ್ತು.

ಮೆಸೆಪೋಟೊಮಿಯದ ಪ್ರಭುತ್ವವು ಜನ್ಮತಳೆದ ನಂತರದಲ್ಲಿ ಮಹಿಳೆಯರ ಮೇಲೆ ಪುರುಷ ಪ್ರಧಾನತೆಯನ್ನು ಕಾಣಬಹುದಾಗಿದೆ (ಉಲ್ಲೇಖ : ಕ್ರಿಯೇಶನ್ ಆಫ್ ಪೆಟ್ರಿಯಾರ್ಕಿ-೧).[೩] ಕುಟುಂಬದ ಮುಖ್ಯಸ್ಥನಾಗಿ ಪುರುಷನ ನಿಯಂತ್ರಣವು ಆರಂಭವಾಯಿತು. ವಿಶೇಷವಾಗಿ ಮಹಿಳೆಯರು ಗುಲಾಮಗಿರಿಯನ್ನು ಅನುಭವಿಸುವಂತಾಗಿರುವುದು ಈ ಅವಧಿಯಲ್ಲಿಯೇ. ಪಿತೃಸ್ಥಾನೀಯತೆ, ಪಿತೃವಂಶೀಯತೆಗಳಲ್ಲಿ ಹೆಂಡತಿ-ಮಕ್ಕಳ ಮೇಲೆ ನಿಯಂತ್ರಣವು ಸ್ಥಾಪಿತವಾಯಿತು. ಹೆಂಡತಿ, ಯಜಮಾನಿ, ವೇಶ್ಯೆಯರ ಮಧ್ಯದ ನಿರ್ಧಾರಾತ್ಮಕ ಭಿನ್ನತೆಯಾಯಿತು. ಹೀಗೆ ಕುಟುಂಬ ಮತ್ತು ಸಾರ್ವಜನಿಕ ವಲಯಗಳಲ್ಲಿ ಹಂತ ಹಂತವಾಗಿ ಹಿಂಸೆ - ದೌರ್ಜನ್ಯಗಳು ಅಸ್ತಿತ್ವಕ್ಕೆ ಬಂದವು. ಇವುಗಳಿಗೆ ಪೂರಕವಾಗಿ ಧರ್ಮ, ಸಂಪ್ರದಾಯಗಳಲ್ಲಿ ಪುರುಷ ಪ್ರಧಾನತೆಯು ನೆಲೆಯೂರಿತು. ಖಾಸಗಿ ಆಸ್ತಿ, ಭೂ ಒಡೆತನ ಅಥವಾ ಇತರೆ ಉತ್ಪಾದನೆಯ ಅರ್ಥ, ಈ ರಾಜ್ಯಗಳಲ್ಲಿ ಮಹತ್ವವಾಗಿ ರೂಪು ತಳೆದವು. ಇಲ್ಲಿ ಭೂಮಿಯನ್ನು ಹೊಂದಿರುವವರು ಅಥವಾ ದಕ್ಷತೆಯನ್ನು ಹೊಂದಿರುವವರು ಎಂಬ ಪ್ರತ್ಯೇಕ ಆಧಾರಗಳಿಲ್ಲ. ಯಾವ ವರ್ಗ ಅಧಿಕಾರವನ್ನು ಆಧರಿಸುತ್ತದೆಯೆ, ಆಸ್ತಿಯ ಮೇಲಿನ ಸ್ವಾಧೀನವು ಅವರದೆ ಆಗಿರುತ್ತದೆ. ಇದು ಸಹ ಒತ್ತಡಗಳಿಂದಾಗಿದೆಯೆಂಬುದಕ್ಕೆ ಆಧಾರಗಳಿಲ್ಲ. ಏಂಗೆಲ್ಸ್ ಮಾದರಿಗೆ ಪ್ರತಿಯಾಗಿ ಗುಲಾಮಗಿರಿ, ಊಳಿಗಮಾನ್ಯಶಾಹಿ, ಬಂಡವಾಳಶಾಹಿ, ಸಮಾಜವಾದಿ ವಿಭಾಗಗಳು ಇತಿಹಾಸದ ಘಟ್ಟಗಳಾದವು. 'ಉತ್ಪಾದನೆಯ ತಿರುವು' ಉದ್ದೇಶಿಸಲ್ಪಟ್ಟ ಮಾದರಿಗಳಿಗೆ ಪ್ರತಿಯಾಗಿ ಮೊದಲ ಬಗೆಯ ಶೋಷಣಾತ್ಮಕ ಸಮಾಜಕ್ಕೆ ಗಟ್ಟಿ ಸಾಕ್ಷಿಗಳಾಗಿ ಕಾಣಸಲ್ಪಡುತ್ತವೆ. ಮುಂದುವರೆದಂತೆಲ್ಲ ರಾಜ್ಯಗಳು, ಪ್ರಭುತ್ವಗಳು 'ವರ್ಗ ಪ್ರಭುತ್ವ'ದಿಂದ ಆಳ್ವಿಕೆಗೊಳಪಟ್ಟವು. ನಗರಗಳು-ರಾಜ್ಯಗಳು

ಪೂಜಾರಿಗಳು, ರಾಜರುಗಳಿಂದ ಆಳಲ್ಪಟ್ಟವು. ಹೀಗೆ ಸೃಷ್ಟಿಸಲ್ಪಟ್ಟ ಹಿಂಸೆ - ದೌರ್ಜನ್ಯಗಳು ಪುರುಷ ಪ್ರಧಾನತೆಯಿಂದ ಹೆಚ್ಚು ಗಟ್ಟಿಯಾಗತೊಡಗಿದವು. ಕುಟುಂಬ, ಪ್ರಭುತ್ವಗಳಲ್ಲಿ ಕಾಣಿಸಿಕೊಂಡ ದೌರ್ಜನ್ಯವು ಶಾಸನಾಧಿಕಾರದ ಕೇಂದ್ರವಾಗಿ ಮಾರ್ಪಟ್ಟಿತ್ತು. ಇದು ಎಲ್ಲ ಬಗೆಯ ದಬ್ಬಾಳಿಕೆಗಳಲ್ಲೂ ದೃಗೋಚರವಾಗಿದೆ. ಆರ್ಥಿಕ ಶೋಷಣೆ ಮತ್ತು ಪುರುಷ ಪ್ರಧಾನತೆಯು ಆರಂಭವಾಗಿದ್ದುದು ಸ್ವಯಂಚಾಲಿತವಾಗಲಿ, ತಕ್ಷಣಕ್ಕಾದದ್ದಾಗಲಿ ಅಲ್ಲವೆಂಬುದು ಉತ್ಪದನಾ ಒತ್ತಡಗಳೊಂದಿಗೆ ಮತ್ತು ಇತಿಹಾಸದ ಅಭಿವೃದ್ಧಿಯುದ್ದಕ್ಕೂ ಸಾಪೇಕ್ಷವಾಗಿದೆ.

ಐತಿಹಾಸಿಕ ಕಾಲಘಟ್ಟಗಳಲ್ಲಿ ಹಂತ-ಹಂತವಾಗಿ ಬೆಳೆದು ಬಂದ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಮೂಲವು ಪುರುಷ ಪ್ರಧಾನತೆಯೇ ಆಗಿದೆ. ಈ ಸಂಗತಿಗಳಾಧಾರದ ಹಿನ್ನೆಲೆಯಲ್ಲಿ ಪ್ರಸಕ್ತ ವಿಷಯವು ೭೦ರ ದಶಕದ ಕೊನೆಯಿಂದ ಹೆಚ್ಚು ಗಂಭೀರ ಚರ್ಚೆಗೊಳಪಟ್ಟಿತು. ಸ್ತ್ರೀವಾದಿ ಚಿಂತನಾಕ್ರಮದಿಂದ ರೂಪಿತವಾದ ಬಹು ಬಗೆಯ ಸಿದ್ಧಾಂತಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ಸೂಕ್ಷ್ಮ ಪ್ರಸ್ತಾಪಗಳು ಕಾಣಬಹುದು.

**೨.೨. ದೌರ್ಜನ್ಯ - ಹಿಂಸೆಯ ಕುರಿತ ಸ್ತ್ರೀವಾದಿ ಚಿಂತನೆಗಳು**

೭೦ ರ ದಶಕದಲ್ಲಿ ಬೆಳೆದು ಬಂದ ಸ್ತ್ರೀವಾದಿ ಚಿಂತನಾ ಕ್ರಮವು ಜಾತಿ, ವರ್ಗ, ವರ್ಣಾಧಾರಿತ ನೆಲೆಗಳಲ್ಲಿ ಚರ್ಚಿತವಾಗುತ್ತಿರುವ ದೌರ್ಜನ್ಯ-ಹಿಂಸೆಗಳಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯಗಳನ್ನು ಚರ್ಚೆಗೊಳಪಡಿಸಲಾಗಿಲ್ಲವೆಂಬುದು ಗ್ರಹಿಸಿಕೊಂಡಿತು. ಉದಾ:- ದೌರ್ಜನ್ಯ-ಹಿಂಸೆಗಳ ಕುರಿತು ಸುಧಾರಣಾವಾದಿಗಳು, ಚಿಂತಕರೆನಿಸಿರುವ ಬುದ್ಧ, ಗಾಂಧಿ, ರಸೆಲ್ ಮೊದಲಾದವರೆಲ್ಲರೂ ಸಹ ದೌರ್ಜನ್ಯ-ಹಿಂಸೆಗಳನ್ನು ಕುರಿತು ಚಿಂತನೆಗಳನ್ನು ರೂಪಿಸಿದ್ದಾರೆ. ಮನುಷ್ಯತ್ವದ ನೆಲೆಯನ್ನಾಧರಿಸಿ ರೂಪಿತವಾದ ಈ ಯಾವುದೇ ಚಿಂತನೆಗಳಲ್ಲಿ ಮಹಿಳೆಯನ್ನು ವಿಶೇಷವಾಗಿ ಎಂಬಂತೇನೂ ಪ್ರಸ್ತಾಪಿಸಿಲ್ಲ. ಈ ಚಿಂತನೆಗಳು ಮನುಷ್ಯರು ಮನುಷ್ಯರನ್ನು ಹಿಂಸಿಸಬಾರದು. ಇದು ಮಹಾಅಪರಾಧವೆನ್ನುವಂತೆ ದೊಡ್ಡ ತತ್ವಶಾಸ್ತ್ರಜ್ಞರಿಂದ ಹಿಡಿದು, ಸಮಾಜ ಸುಧಾರಕರು ಮತ್ತು ಆಡಳಿತಾರೂಢ ಪ್ರಭುತ್ವಗಳವರೆಗೆ ಸಾಮಾನ್ಯವಾಗಿ ಎಲ್ಲರೂ ಸಹ ಒಂದಲ್ಲಾ ಒಂದು ಸಂದರ್ಭದಲ್ಲಿ ಈ ಬಗೆಯ ಚಿಂತನೆಯನ್ನು ಮಾಡಿದ್ದಾರೆ. ಹೀಗೆ ಮಾಡುವ ಸನ್ನಿವೇಶಗಳಲ್ಲೆಲ್ಲೂ ಸಹ ಹೆಂಗಸಿನ ವಿಶಿಷ್ಟ ಸಮಸ್ಯೆಗಳು ಕೇಂದ್ರಕ್ಕೆ ಬಂದಿಲ್ಲವಾಗಿವೆ. ಆದ್ದರಿಂದ ೭೦ರ ದಶಕದಲ್ಲಿ ಬಂದ ಸ್ತ್ರೀವಾದಿ ಚಿಂತನಾ ಕ್ರಮದಿಂದ ಈ ಅಂಶಗಳು ಬೆಳಕಿಗೆ ಬಂದಿವೆ. ಹೀಗೆ ವರ್ಗ, ಜಾತಿ, ವರ್ಣ, ಜನಾಂಗಗಳ ನೆಲೆಯಿಂದ ದೌರ್ಜನ್ಯ-ಹಿಂಸೆಯನ್ನು ಗಮನಿಸಿದಾಗ ಮಹಿಳೆ ಅದೃಶ್ಯವಾಗುತ್ತಾಳೆ. ಪರಿಣಾಮವಾಗಿ 'ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ' ಎಂಬ ಪರಿಕಲ್ಪನೆಯನ್ನು ಸ್ತ್ರೀವಾದಿ ಚಿಂತನೆಗಳು ಹುಟ್ಟು ಹಾಕಿದ ನಂತರ ಶತಮಾನಗಳಿಂದಲೂ ಚರ್ಚಿತವಾಗುತ್ತಿರುವಂತೆ ಜಾತಿ, ವರ್ಗ, ವರ್ಣಗಳಂತೆಯೇ 'ಲಿಂಗಾಧಾರಿತ' ನೆಲೆಯಲ್ಲೂ ದೌರ್ಜನ್ಯದ ಚರ್ಚೆಗಳಾಗಬೇಕೆಂದು ಪ್ರತಿಪಾದಿಸಿತು. ತದನಂತರದಲ್ಲಿ 'ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವು' ಪರಿಕಲ್ಪನೆಯಾಗಿ ಗ್ರಹಿಸುವುದು ಪ್ರಾರಂಭವಾಯಿತು.

ಈ ಬಗೆಯ ಚಿಂತನೆಗನುಗುಣವಾಗಿ ಚರಿತ್ರೆಯನ್ನು ಅವಲೋಕಿಸಿದಾಗ ಮನುಷ್ಯ ಸಂತತಿಯ ಆರಂಭದಿಂದಲೂ ಮಹಿಳೆಯ ವಿರುದ್ಧ ನಡೆಯುವ ದೌರ್ಜನ್ಯದ ಸಮಸ್ಯೆಯು ಹೊಸದಾಗಿಲ್ಲವೆಂಬುದು ತಿಳಿದು ಬರುತ್ತದೆ. ಭಾರತೀಯ ಸಾಮಾಜಿಕ ವ್ಯವಸ್ಥೆಯನ್ನಾಧರಿಸಿ ಹೇಳುವುದಾದರೆ, ಇಲ್ಲಿ ಬೆಳೆದು ಬಂದ ಕೌಟುಂಬಿಕ, ಸಾಮಾಜಿಕ ಪರಿಸರದಲ್ಲಿ ಮಹಿಳಾ ಬದುಕು ದಮನಗೊಂಡಿರುವುದಕ್ಕೆ ಹಲವಾರು ದಾಖಲೆಗಳು ಸಿಗುತ್ತವೆ. ಆದರೆ ಇದನ್ನು ಒಂದು ಸಾಮಾಜಿಕ ಸಮಸ್ಯೆಯಾಗಿ ಸ್ವೀಕರಿಸದಿರುವುದಕ್ಕೆ ಆಧಾರಗಳು ಕಂಡು ಬರುವುದಿಲ್ಲ. ಸುದೀರ್ಘ ಕಾಲದವರೆಗೂ ನಮ್ಮ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯರು ದೌರ್ಜನ್ಯಕ್ಕೊಳಗಾಗುತ್ತಿರುವಂತಹ ಕಟುಸತ್ಯವನ್ನು ಹೊರ ಹಾಕದಿರುವುದು ಮಹಿಳಾ ಬದುಕಿನ ಬಗ್ಗೆ ಪುರುಷ ಸಂಸ್ಕೃತಿಗಿರುವ ನಿರ್ಲಕ್ಷ್ಯವೂ ಹೌದು. 'ಪುರುಷ ರಾಜಕಾರಣ'ವು ಹೌದೆನ್ನಬಹುದು.

ಸಾಮಾನ್ಯವಾಗಿ ಲಿಂಗಾಧಾರಿತ ನೆಲೆಯಲ್ಲಿ ಬೆಳೆದು ಬಂದ ಚಿಂತನೆಗಳು ಯಾವುದೇ ವ್ಯಕ್ತಿಯಿಂದ ಕೌಟುಂಬಿಕ ಮತ್ತು ಸಾರ್ವಜನಿಕ ವಲಯದಲ್ಲಿ ಪ್ರತ್ಯಕ್ಷ-ಪರೋಕ್ಷವಾಗಿ ಮಹಿಳೆಯ ಇಚ್ಛೆಗೆ ವಿರುದ್ಧವಾಗಿ, ಒತ್ತಾಯ ಪೂರ್ವಕವಾಗಿ ನಡೆಯುವ ಬೌದ್ಧಿಕ, ಮಾನಸಿಕ, ಭಾವನಾತ್ಮಕ, ದೈಹಿಕ ಹಿಂಸೆಯನ್ನು 'ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ'ವೆಂದು ಗ್ರಹಿಸಲಾಗಿದೆ. ಭಾರತೀಯ ಸಂವಿಧಾನ ಮತ್ತು ಈವರೆಗೂ ಈ ಸಂಬಂಧಿತ ಜಾರಿಯಾದ ಕಾನೂನುಗಳು ಈ ವ್ಯಾಖ್ಯಾನವನ್ನು ತಾತ್ತ್ವಿಕವಾಗಿ ಒಪ್ಪಿಕೊಂಡು ನಡೆದಿವೆ.

ಆಳವಾಗಿ ಬೇರೂರಿರುವ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಪುರುಷನ ಮೇಲಾಳ್ತನವು ಸ್ವೀಕಾರಾರ್ಹವಾಗಿರುವುದರಿಂದ, ಮಹಿಳೆಯರ ವಿರುದ್ಧದ ಹಿಂಸಾತ್ಮಕ ಕ್ರಿಯೆಗಳೆಲ್ಲವೂ ಸಹ ಸಾಮಾಜಿಕತೆಯಲ್ಲಿ 'ಹಿಂಸೆ'ಯೆಂದು ನೋಡುವುದಿಲ್ಲ. ಸ್ವತಃ ಮಹಿಳೆಯರು ಸಹ ಇದನ್ನು ಬದುಕಿನ ಭಾಗವೇನೋ? ಎಂಬಂತೆ ಸ್ವೀಕರಿಸಿ, ಪೋಷಿಸುತ್ತಾ ಜೀವನ ಸಾಗಿಸುವಂತಿರುವುದು ಸಾಮಾಜಿಕ ಅಂತರ್ಗತಗೊಳಿಸುವಿಕೆಯಿಂದಲೇ ಆಗಿದೆ. ಇದಕ್ಕೆ ಧರ್ಮ, ಸಂಸ್ಕೃತಿ, ಇತ್ಯಾದಿಗಳ ಚಹರೆಯನ್ನು ರೂಪಿಸಲಾಗಿದೆ. ಹೀಗಾಗಿಯೇ ಎಲ್ಲ ಗುಂಪುಗಳು ಮತ್ತು ಸಮುದಾಯಗಳಲ್ಲಿ ಪುರುಷರು ಮಹಿಳೆಯ ಮೇಲೆ ಎಸಗುವ ದೌರ್ಜನ್ಯದ ಘಟನೆಗಳನ್ನು ಇಂದಿಗೂ ದೌರ್ಜನ್ಯವೆಂದು ವ್ಯಾಖ್ಯಾನಿಸುವುದು ಕಷ್ಟಕರ ಸಂಗತಿಯಾಗಿದೆ. ಸಾಮಾಜಿಕ ನೀತಿ-ನಿಯಮ, ನಂಬಿಕೆಗಳು, ಕುಟುಂಬ, ಸಮುದಾಯ, ಗುಂಪುಗಳಿಂದ-ಗುಂಪಿಗೆ ಭಿನ್ನವಾಗಿವೆ. ಈ ಕಾರಣದಿಂದ ಸಾಮಾನ್ಯ ಹಂತದಿಂದಲೂ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಗ್ರಹಿಸಿಕೊಳ್ಳಬೇಕಾಗಿದೆ.

ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಕುರಿತು ಚರ್ಚಿಸುವಾಗ, ಇದು ಕೇವಲ ಪುರುಷರು ಮಾತ್ರ ಎಸಗುತ್ತಾರೆಯೆ? ಎನ್ನುವ ಪ್ರಶ್ನೆ ಸಾಕಷ್ಟು ಸಂಘರ್ಷವನ್ನುಂಟು ಮಾಡುತ್ತದೆ. ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಸ್ತ್ರೀ-ಪುರುಷರಿರ್ವರಿಂದಲೂ ನಡೆಯುತ್ತದೆಯಾದರೂ

ಪ್ರಮಾಣದಲ್ಲಿ ವ್ಯತ್ಯಾಸವನ್ನು ಗಮನಿಸಿದಾಗ ಪುರುಷರು ಎಸಗುವ ಪ್ರಮಾಣ ಎಣಿಕೆಗೆ ಸಿಗದಷ್ಟೆ ಎಲ್ಲೆ ಮೀರಿದೆಯೆಂಬುದು ಸಹಜವಾದ ಸಂಗತಿಯಾಗಿದೆ. ಅದರಲ್ಲೂ ಮಹಿಳೆಯರು ಮಹಿಳೆಯರ ಮೇಲೆ ದೌರ್ಜನ್ಯ ಎಸಗುವ ಕಾರಣಗಳು ಸಹ ಪುರುಷ ಮೂಲದಿಂದಲೇ ಹುಟ್ಟುತ್ತವೆ. ಉದಾ:- ಹೆಣ್ಣಿಗೆ ಹೆಣ್ಣೆ ಶತ್ರುವೆಂದು ಹೇಳುತ್ತಾ 'ಅತ್ತೆ-ಸೊಸೆ' ಸಂಬಂಧದ ಹಿನ್ನೆಲೆಯಲ್ಲಿ ಅತ್ತೆ-ಸೊಸೆಯ ಮೇಲೆ ಎಸಗುವ ದೌರ್ಜನ್ಯವನ್ನು ಸಾಕಷ್ಟು ಸಂದರ್ಭಗಳಲ್ಲಿ ಪ್ರತಿಪಾದಿಸಲಾಗುತ್ತದೆ. ಈ ತೆರನಾದ ಶತೃತ್ವಕ್ಕೆ ಈ ಎರಡು ಪಾತ್ರಗಳಲ್ಲಿನ ಮಹಿಳೆಯರಿಗಿರುವ ಅಭದ್ರತೆ, ಆತಂಕಗಳೇ ಕಾರಣ ಮತ್ತು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಕುಟುಂಬದಲ್ಲಿ 'ಅತ್ತೆ'ಗೆ ದಕ್ಕಿರುವ 'ಅಧಿಕಾರ' ಪುರುಷ ಮಾದರಿಯಲ್ಲೆ ನಿಭಾಯಿಸುವಂತಿರುವ ಸಾಮಾಜೀಕರಣ ಮತ್ತು ಅಧೀನ ನೆಲೆಯ ಹೆಣ್ಣಿನ ಮೇಲಿನ ಆಕ್ರಮಣಕ್ಕೆ ಕಾರಣವಾಗುತ್ತದೆ. ಆದರೆ ಇದೇ ಸಮಾಜ ವ್ಯವಸ್ಥೆಯಲ್ಲಿ 'ಗಂಡಿಗೆ ಗಂಡೆ ಶತ್ರು'ವಾಗಿರುವ ಸಾಕಷ್ಟು ಉದಾಹರಣೆಗಳು ಕಂಡು ಬರುತ್ತದೆ. ಉದಾ:- ಪ್ರೇಯಸಿಗಾಗಿ ಆಕೆಯ ಗಂಡನ ಕೊಲೆ ಎಂದು ದಿನ ಪತ್ರಿಕೆಗಳಲ್ಲಿ ಇಂತಹವುಗಳನ್ನು ಸಾಕಷ್ಟು ಪ್ರಮಾಣದಲ್ಲಿ ಕಾಣಬಹುದು. ಆದರೆ ಇಲ್ಲಿ ಅಪರಾಧಿಯ ಸ್ಥಾನದಲ್ಲಿ ಮಹಿಳೆಯನ್ನಿರಿಸಿ ನೋಡಲಾಗುತ್ತದೆ. ಹೀಗೆ ಸಂಗತಿಗಳು ಸ್ತ್ರೀ-ಪುರುಷರ ಸಂದರ್ಭಗಳಲ್ಲಿ ವಿಭಿನ್ನವಾಗಿ ತಿರುಚಲ್ಪಡುತ್ತವೆ ಮತ್ತು ಬಹುತೇಕವಾಗಿ ವ್ಯವಸ್ಥೆಯಲ್ಲಿ ಇವುಗಳು ಪರಿಗಣನೆಗೆ ಬರುವುದಿಲ್ಲ. ಹೆಣ್ಣಾಗಿರುವ ಕಾರಣದಿಂದಲೇ ಈ ಎರಡು ಸಂದರ್ಭಗಳಲ್ಲಿನ ಪರಿಣಾಮ ಹೆಣ್ಣಿನ ಮೇಲಿನ ಆಕ್ರಮಣವೇ ಆಗಿದೆಯೆಂಬುದು ಮುಖ್ಯವಾಗಿ ಗ್ರಹಿಸಬೇಕಾದ ಸಂಗತಿ.

ಇತ್ತೀಚಿನ ಜಾಗತಿಕ ಸಂಗತಿಗಳಲ್ಲಿ ಲಿಂಗಾಧಾರಿತ ದೌರ್ಜನ್ಯವು ಸಹ ಪ್ರಮುಖವಾದ ಸಂಗತಿಯಾಗಿದೆ. ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ವಲಯಗಳಿಗೂ ವಿಸ್ತರಿಸುವ ಈ ಅಂಶವು ಮಹಿಳಾ ಹಕ್ಕುಗಳನ್ನು ಮತ್ತು ಅಂತಸ್ತಿನ ಸಂದರ್ಭದಲ್ಲಿಟ್ಟು ನೋಡಿದಾಗ ಲಿಂಗಾಧಾರಿತ ದೌರ್ಜನ್ಯವು ಮಹಿಳೆಯನ್ನು ನಿಯಂತ್ರಣಕ್ಕೊಳಪಡಿಸುವ ಸಂಗತಿಯೆಂಬುದು ಸರ್ವೇಸಾಮಾನ್ಯ ಸಂಗತಿಯಾಗಿದೆ. ಸಂಸ್ಕೃತಿಗೆ ಸಂಬಂಧಿತವಾದ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವು ರಾಷ್ಟ್ರೀಯ ಮಟ್ಟಗಳಾಚೆಗೂ ದಾಖಲೆಗಳಾಗಿವೆ. CEDAW ಒಡಂಬಡಿಕೆಯಲ್ಲಿ ಸ್ತ್ರೀವಾದಿ ಚಳುವಳಿಗಳಿಗೆ ಸಂಯುಕ್ತ ಸಂಸ್ಥಾನದ ಮೂಲಕ ಕೆಲವು ಅವಕಾಶಗಳನ್ನು ಒದಗಿಸಿದೆ. ಈ ಹಿನ್ನೆಲೆಯಲ್ಲಿ ರಾಜ್ಯದ ಅಂಕಿ-ಅಂಶಗಳ ಪ್ರಕಾರ ಶೇಕಡಾ ೧೮ ಪ್ರತಿಶತ ಮಹಿಳೆಯರು ಲೈಂಗಿಕ ಕಿರುಕುಳಕ್ಕೆ ಒಳಗಾಗಿರುವುದು ಕಂಡು ಬರುತ್ತದೆ. ಇಂತಹ ಸ್ಥಿತಿಯು ಅಭಿವೃದ್ಧಿ ಹೊಂದಿದ ದೇಶಗಳೆಂದು ಗುರುತಿಸಲ್ಪಡುವ ದೇಶಗಳಲ್ಲಿಯೂ ಕೂಡ ಮಹಿಳೆಯ ವಿರುದ್ಧ ನಡೆಯುವ ದೌರ್ಜನ್ಯದ ಕುರಿತು ಖಚಿತವಾದ ದಾಖಲೆಗಳು ಮತ್ತು ಅಂಕಿ-ಅಂಶಗಳನ್ನು ಸ್ಪಷ್ಟವಾಗಿ ಒದಗಿಸಿಲ್ಲ. ಯುಎಸ್‌ನ ವರದಿಯಂತೆ. ಪ್ರತಿವರ್ಷವು ಮೂರರಿಂದ ನಾಲ್ಕು ಮಿಲಿಯನ್‌ನಷ್ಟು ಮಹಿಳೆಯರು ವಿವಿಧ ಬಗೆಯ ದೌರ್ಜನ್ಯಕ್ಕೊಳಗಾಗುತ್ತಾರೆ. ಪ್ರಪಂಚದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಸ್ವೀಡನ್ ದೇಶ ಪ್ರಥಮ ಸ್ಥಾನದಲ್ಲಿದೆ.

ವರದಿಯಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವು ಮೂಲಭೂತವಾದ ಮಾನವ ಹಕ್ಕುಗಳ ವಿರೋಧಾಭಾಸವಾಗಿದ್ದು, ಅದು ಕೇವಲ ಮಹಿಳೆಯ ಸ್ಥಾನಮಾನಕ್ಕಷ್ಟೆ ಧಕ್ಕೆ ತರುವುದಿಲ್ಲ. ಅವಳ ಸಮಗ್ರ ಬದುಕನ್ನು ಕಲುಷಿತಗೊಳಿಸುತ್ತದೆ. ತತ್ಪರಿಣಾಮವಾಗಿ ಅವಳ ಉತ್ಪಾದನೆ ಮತ್ತು ಕಾರ್ಯ ಸಮರ್ಥತತೆಯನ್ನು ಕುಗ್ಗಿಸುತ್ತದೆ. ಇಷ್ಟಾದರೂ ಸಹ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವು ದೈಹಿಕ, ಬೌದ್ಧಿಕ ಮತ್ತು ಭಾವನಾತ್ಮಕ ಹಿಂಸೆಯನ್ನು ಒಳಗೊಂಡಿದ್ದು ಬಹು ವಿಧದ ದೌರ್ಜನ್ಯಗಳಲ್ಲಿ ಅದು ಬದುಕಿನ ಸಾಮಾನ್ಯ ಸಂಗತಿಯೆನ್ನುವ ಮೂಲಕ ಕಡೆಗಣಿಸಲ್ಪಟ್ಟಿದೆ. ಧರ್ಮ, ಸಂಸ್ಕೃತಿ, ಸಾಂಪ್ರದಾಯಿಕ ನಂಬಿಕೆಗಳ ಪಾಲುದಾರಿಕೆಯಿಂದ ಅನೇಕ ವಿಧದ ದೌರ್ಜನ್ಯಗಳು ಕ್ಷಮಾರ್ಹವೆಂದು, ಅವುಗಳು ಅಪರಾಧಗಳೇ ಅಲ್ಲವೆಂದಾಗಿದೆ. ಹೀಗೆ ದೌರ್ಜನ್ಯವು ಪ್ರಮುಖವಾಗಿ ಕುಟುಂಬದ ಒಳ ಮತ್ತು ಹೊರ ಬದುಕಿನ ಎಲ್ಲ ಹಂತಗಳಲ್ಲೂ ಸಹ ಜೀವಂತವಾಗಿರುವುದನ್ನು ಗುರುತಿಸಿದ ನ್ಯಾಷನಲ್ ಕ್ರೈಮ್ಸ್ ರಿಕಾರ್ಡ್ಸ್ ಬ್ಯೂರೊ ಸಲ್ಲಿಸುವ ೧೯೯೮ರ ವರದಿಯಂತೆ, ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಅಪರಾಧಗಳ ಸಂಖ್ಯೆಯ ಬೆಳವಣಿಗೆಯು ೨೦೧೦ರ ವೇಳೆಗೆ ದೇಶದ ಜನಸಂಖ್ಯೆಗಿಂತಲೂ ಹೆಚ್ಚಾಗುತ್ತದೆ ಎಂದು ಹೇಳಲಾಗಿದೆ (ಸೇನ್ ಆ್ಯಂಡ್ ಶಿವಕುಮಾರ್, ೨೦೦೧). ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಲಿಂಗಾಧಾರಿತ ತಾರತಮ್ಯವೇ ಮೂಲ ಕಾರಣವಾಗಿದೆ. ಈ ರೀತಿಯ ಕೃತ್ಯಗಳು ಸಮಾಜ ವ್ಯವಸ್ಥೆಯಲ್ಲಿನ ಸ್ತ್ರೀ-ಪುರುಷರ ಅಸಮಾನ ಸಂಬಂಧಗಳನ್ನು ಹೊರಹಾಕುತ್ತವೆ. ಹಾಗಾಗಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವೆಂದರೆ ಲಿಂಗಾಧಾರಿತ ದೌರ್ಜನ್ಯಕ್ಕೆ ಸಂಬಂಧಿಸಿದ ಯಾವುದೇ ಕೃತ್ಯದ ಪರಿಣಾಮವಾಗಿದೆ. ಒತ್ತಾಯ ಪೂರ್ವಕವಾಗಿ - ಅವಳ ಇಚ್ಛಾನುಸಾರವೆನುವಂತೆ ಅವಳ ಸ್ವಾತಂತ್ರ್ಯವನ್ನು ಅಪಹರಿಸಲು, ಅವಳ ಖಾಸಗಿ - ಸಾರ್ವಜನಿಕ ಬದುಕಿನ ಮೇಲೆ ನಿಯಂತ್ರಣ ಸಾಧಿಸುವುದು, ಅವಳ ಅಭಿವೃದ್ಧಿಯ ಮೂಲ, ಮೂಲಭೂತ ಚಟುಟಿಕೆ, ಚಲನಶೀಲತೆಯ ಮೇಲೆ ಶಾಶ್ವತ ನಿರ್ಬಂಧಗೊಳಿಸುವುದು. ಹೀಗೆ ಹಿಂಸಾತ್ಮಕ ಕೃತ್ಯಗಳ ಮೂಲಕ ಭಯವನ್ನು ಸೃಷ್ಟಿಸಿ, ನಿಯಂತ್ರಣಕ್ಕೆಳೆದುಕೊಳ್ಳುವ ಪರಿಣಾಮಕಾರಿ ತಂತ್ರಗಾರಿಕೆಯೇ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ. ಈ ಬಗೆಯ ದೌರ್ಜನ್ಯಗಳು ವಾಸ್ತವವಾಗಿ ಮಹಿಳೆಯ ಸಾಧನೆಯಲ್ಲಿ - ಅಭಿವೃದ್ಧಿಯಲ್ಲಿ ತೊಡಕುಂಟು ಮಾಡಲು ಬಳಸುವ ಅಸ್ತ್ರವಾಗಿದೆ. ಈ ಕ್ರಮವನ್ನು ಮಹಿಳೆಯರ ಮಾನವ ಹಕ್ಕುಗಳ ಉಲ್ಲಂಘನೆಯೆಂದು ಹೇಳಬಹುದು.

ಇಡೀ ಮಹಿಳಾ ಅಸ್ತಿತ್ವವನ್ನೇ ಇಲ್ಲವಾಗಿಸುವ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಕುರಿತು ಸಾಕಷ್ಟು ಚಿಂತನೆಗಳು ನಡೆದರೂ ಸಹಿತ ಇದನ್ನು ಗುರುತಿಸುವಲ್ಲಿ ಮತ್ತು ಅದನ್ನು ನಿವಾರಿಸುವಲ್ಲಿ ಪ್ರಯತ್ನಗಳು ಮಂದಗತಿಯಲ್ಲಿಯೇ ನಡೆದಿವೆಯೆನ್ನಬಹುದು. ಉದಾ: ೧೯೬೫ರಲ್ಲಿ ಜಾರಿಯಾದ ವರದಕ್ಷಿಣೆ ನಿಷೇಧ ಕಾಯಿದೆಯು ಹಲವಾರು ತಿದ್ದುಪಡಿಗೊಳಗಾದರೂ, ಮಹಿಳೆಯ ಬದುಕಿನಲ್ಲಿ ಇಂದಿಗೂ ಅಂತಹ ಬದಲಾವಣೆಗಳು ಕಂಡು ಬಂದಿಲ್ಲ. ಜೊತೆಗೆ ಮಹಿಳೆಯ ಇತರ ಎಲ್ಲಾ ಸಮಸ್ಯೆಗಳು ಸಹ ಇದರಡಿಯಲ್ಲಿ ಮುಚ್ಚಿ ಹಾಕಲಾಗುತ್ತಿದೆ. ಈ ಬಗೆಯ ಹಲವಾರು ಮಹಿಳಾ ಕಾನೂನುಗಳು

ಸ್ತ್ರೀವಾದಿ ಹೋರಾಟದ ಫಲದಿಂದ ಪಡೆಯಲಾಗಿದೆಯಾದರೂ ಮಹಿಳಾ ಬದುಕಿನ ಹಲವಾರು ಸಮಸ್ಯೆಗಳಿಗೆ ಪರಿಹಾರ ಕೊಡುವಲ್ಲಿ ವಿಫಲವಾಗುತ್ತಿವೆ. ಕಾನೂನುಗಳ ಪರಿಗಣನೆಯು ತರ್ಕಬದ್ಧವಾದ ಉತ್ತರಗಳನ್ನು ಹೇಳುವ ಮಟ್ಟಿಗೆ ಸೀಮಿತವಾಗಿವೆ. ಆದರೆ ಜೀವನ ತರ್ಕವನ್ನು ಆಧರಿಸಿ ರೂಪಿತಗೊಂಡಿಲ್ಲ. ಮಹಿಳೆಯರ ವಾಸ್ತವದ ಬದುಕಿಗೆ ಕಾನೂನುಗಳು ಇತ್ಯಾತ್ಮಕವಾದ ಪ್ರತಿಕ್ರಿಯೆ ನೀಡುವ ಜರೂರಿದೆ.

ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಸಮಸ್ಯೆಯ ಕುರಿತು ಈಗಾಗಲೇ ಸಾಕಷ್ಟು ಚಿಂತನೆಗಳು ಬೆಳೆದು ಬಂದಿವೆ. ಜಾಗತಿಕ ಮಟ್ಟದಲ್ಲಿ ಚರ್ಚೆಯಾಗುತ್ತಿರುವ ಈ ಸಂಗತಿಯನ್ನು ಕುರಿತು ಮಾನವಶಾಸ್ತ್ರ, ಅಪರಾಧಶಾಸ್ತ್ರ, ಮನಃಶಾಸ್ತ್ರ ಮತ್ತು ಸಮಾಜಶಾಸ್ತ್ರದಂತಹ ವಿವಿಧ ಸಾಂಪ್ರದಾಯಿಕ ಜ್ಞಾನಶಿಸ್ತುಗಳಲ್ಲಿ ಚಿಂತನೆ ನಡೆದಿವೆಯಾದರೂ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಸ್ವರೂಪ ಮತ್ತು ಪರಿಮಾಣಗಳನ್ನು ಖಚಿತವಾಗಿ ವ್ಯಾಖ್ಯಾನಿಸುವುದು, ಗುರುತಿಸುವುದು ಕಷ್ಟಕರ ಸಂಗತಿಯಾಗಿದೆ. ಸಮಸ್ಯೆಯ ಪರಿಹಾರಗಳ ರೂಪಿಕೆಯ ಪೂರ್ವಭಾವಿಯಾಗಿ ಅದರ ವ್ಯಾಖ್ಯಾನ, ಸ್ವರೂಪ, ಲಕ್ಷಣಗಳನ್ನು ಅರ್ಥೈಸಿಕೊಳ್ಳುವ ಮೂಲಕ ಚಿಂತನೆಯನ್ನು ರೂಪಿಸುವುದು ಅವಶ್ಯಕವಾದುದಾಗಿದೆ. ಈವರೆಗೆ ಈ ಕುರಿತು ನಡೆದ ಚಿಂತನೆಗಳ ಸ್ಥೂಲ ಪರಿಶೀಲನೆಯ ಮೂಲಕ ಅಲ್ಲಿನ ಲೋಪ-ದೋಷಗಳೇನು? ವಾಸ್ತವ ಬದುಕಿನಲ್ಲಿ ಅನ್ವಯಿಸಿಕೊಳ್ಳಲು ಇರುವ ಅಡೆ-ತಡೆಗಳೇನೆಂಬುದನ್ನು ಕಂಡುಕೊಳ್ಳಬೇಕಾಗಿದೆ. ಈ ನಿಟ್ಟಿನಲ್ಲಿ ವಿವಿಧ ವ್ಯಾಖ್ಯಾನಗಳನ್ನು ಚರ್ಚೆಗೆತ್ತಿಕೊಳ್ಳುವ ಮೂಲಕ ಇಲ್ಲಿ ಮುಖ್ಯವಾಗಿ ದೌರ್ಜನ್ಯಕ್ಕೊಳಪಡಿಸುವವರು - ದೌರ್ಜನ್ಯಕ್ಕೊಳಗಾಗುವವರೀರ್ವರ ಸ್ಥಿತಿಯನ್ನು ಹೆಚ್ಚು ಗಮನದಲ್ಲಿರಿಸಿಕೊಂಡು ವಿಷಯವನ್ನು ಚಿಂತನೆಗೊಳಪಡಿಸಿದಾಗ ಇದನ್ನು ಪರಿಹರಿಸುವತ್ತ ಕೆಲ ಸಾಧ್ಯತೆಗಳನ್ನು ಕಂಡುಕೊಳ್ಳಬಹುದು.

ಬಹುತೇಕ ಚಿಂತಕರು ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಭಾವನಾತ್ಮಕ, ದೈಹಿಕ, ಲೈಂಗಿಕ ಮತ್ತು ಮೌಖಿಕ ದೌರ್ಜನ್ಯವೆಂದು ೪ ಆಯಾಮಗಳಲ್ಲಿ ವಿವರಿಸಿದ್ದಾರೆ. ಹೀಗೆ ಸಂಶೋಧಕರಿಂದ-ಸಂಶೋಧಕರಿಗೆ, ಒಂದು ಜ್ಞಾನಶಿಸ್ತಿನಿಂದ - ಇನ್ನೊಂದು ಜ್ಞಾನಶಿಸ್ತಿಗೆ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ವ್ಯಾಖ್ಯಾನಗಳು ಒಳಗೊಳ್ಳುವ ಆಯಾಮಗಳು ಭಿನ್ನವೆಂದು ಹೇಳಲಾಗುತ್ತದೆ. ಬಹುತೇಕ ವ್ಯಾಖ್ಯಾನಗಳು ಈ ನಾಲ್ಕು ಆಯಾಮಗಳನ್ನು ಒಳಗೊಂಡಿಲ್ಲವೆಂಬುದು ಚಿಂತಕರ ಅಭಿಪ್ರಾಯವಾಗಿದೆ. ಹಾಗಾಗಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ವ್ಯಾಖ್ಯಾನವು ದೈಹಿಕ ಹಿಂಸೆಯ ಜೊತೆಗೆ ಮಾನಸಿಕ ಹಿಂಸೆಯ ಕಾರಣ - ಪರಿಣಾಮಗಳು ಒಳಗೊಳ್ಳಬೇಕು. ಅವುಗಳೆಂದರೆ ಊಟದ ವ್ಯಾಧಿ ಅಥವಾ ಆತ್ಮಹತ್ಯೆ ಭಾವನೆಗಳು, ಪೋಸ್ಟಸ್ಟ್ರೋಮೆಟಿಕ್ ಸ್ಟ್ರೆಸ್ ಡಿಸಾರ್ಡರ್(PTSD)ಗಳು ಈ ವ್ಯಾಖ್ಯಾನದ ವಲಯದೊಳಗೆ ಮುಖಾಮುಖಿಯಾಗಬೇಕಿದೆ. ಹೀಗಾಗಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ವ್ಯಾಖ್ಯಾನವು ಬಳಸುವ ಆಯಾಮಗಳನ್ನು ಪರಿಗಣನೆಗನುಗುಣವಾಗಿ ಅದರ ಪ್ರಮಾಣ ಭಿನ್ನವಾಗುತ್ತದೆ. ಈ ಅಂಶಗಳನ್ನು ಒಳಗೊಂಡಿರುವ ಕೆಲವು ವ್ಯಾಖ್ಯಾನಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

"ಲಿಂಗಾಧಾರಿತ ದೌರ್ಜನ್ಯದ ಕುರಿತಾದ ಯಾವುದೇ ಕೃತ್ಯದ ಫಲಿತವು, ಮಹಿಳೆಗೆ ಲೈಂಗಿಕ, ದೈಹಿಕ, ಮಾನಸಿಕವಾಗಿ ಹಿಂಸಿಸುವುದು, ಸ್ವಾತಂತ್ರ್ಯವಿಲ್ಲದಂತೆ ನರಳಿಸುವುದು, ಅವಳ ಖಾಸಗಿ ಮತ್ತು ಸಾರ್ವಜನಿಕ ಬದುಕಿನಲ್ಲಿ ಸ್ವಾತಂತ್ರ್ಯ ಪಡೆಯಲಾಗದೆ ಕೊರಗುವುದನ್ನು ದೌರ್ಜನ್ಯವೆಂದು ಹೇಳಲಾಗುತ್ತದೆ. ತನ್ನ ಕುಟುಂಬ ಮತ್ತು ಸಮುದಾಯದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಅರ್ಥೈಸಿಕೊಳ್ಳಲು ಒಂದು ಮಿತಿಯೆನ್ನುವುದಿಲ್ಲ. ಹುಟ್ಟಿನಿಂದ - ಸಾಯುವವರೆಗೂ ಅವಳು ವಿಭಿನ್ನವಾದ ದೌರ್ಜನ್ಯಗಳಿಗೆ ಬಲಿಯಾಗುತ್ತಲೇ ಇದ್ದಾಳೆ. ಉದಾ:- ದೈಹಿಕ, ಲೈಂಗಿಕ ಮತ್ತು ಮಾನಸಿಕ ಹಿಂಸೆಗೆ ಸಂಬಂಧಿಸಿದಂತೆ ಕುಟುಂಬ ಮತ್ತು ಸಮುದಾಯಗಳಲ್ಲಿ ಮಹಿಳೆಯ ಮೇಲೆ ಆಕ್ರಮಣವೆಸಗುವುದು. ಗಂಡನೇ ಹೆಂಡತಿಯ ಮೆಲೆ ಬಲಾತ್ಕಾರ ಮಾಡುವುದು, ಜನನಾಂಗಗಳನ್ನು ಊನ ಮಾಡುವುದು, ಹೆಣ್ಣು ಶಿಶುಗಳ ಲೈಂಗಿಕ ದುರುಪಯೋಗ, ಹಿಂಸಿಸುವುದು, ಗಂಡನಲ್ಲದೆ ಬೇರೆಯವರಿಂದಾಗುವ ದೌರ್ಜನ್ಯ. ಶಿಕ್ಷಣ ಸಂಸ್ಥೆಗಳಲ್ಲಿ ಅಥವಾ ಇನ್ನಿತರ ಯಾವುದೇ ವಲಯಗಳಲ್ಲಿ, ಕೆಲಸದ ಸ್ಥಳಗಳಲ್ಲಿ ಲೈಂಗಿಕ ಕಿರುಕುಳ ನೀಡುವುದು, ಲೈಂಗಿಕ ಕ್ರಿಯೆಗೆ ಒತ್ತಾಯಪಡಿಸುವುದು, ಸಮ್ಮತಿಸದಿದ್ದಾಗ ಹೆಣ್ಣುಮಕ್ಕಳನ್ನು ಸಾಗಿಸಿ ಒತ್ತಾಯ ಪೂರ್ವಕವಾಗಿ ವೇಶ್ಯಾವಾಟಿಕೆಗೆ ತಳ್ಳುವುದು ಇತ್ಯಾದಿ ಬಗೆಯ ದೌರ್ಜನ್ಯವನ್ನು ದೌರ್ಜನ್ಯದ ಅಪರಾಧಗಳನ್ನು ಪ್ರಭುತ್ವವು ಮನ್ನಿಸುತ್ತದೆ. ಪ್ರಭುತ್ವದ ಮೂಲಕವೇ ಪೋಷಿಸಲಾಗುತ್ತದೆ. ಅಸಮಾನವಾದ ಅಧಿಕಾರ ಸಂಬಂಧಗಳಿರುವುದರಿಂದ ಪುರುಷನು-ಸ್ತ್ರೀಯ ಮೇಲೆ ದಬ್ಬಾಳಿಕೆ ನಡೆಸಲು ಮತ್ತು ತಾರತಮ್ಯವೆಸಗಲು ಮೂಲ ಕಾರಣವಾಗಿದೆ. ಬಲವಂತವಾಗಿ ಅವಳನ್ನು ಅಧೀನತೆಯ ಸ್ಥಾನಕ್ಕೆ ನೂಕುವುದೇ ಅವಳ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ದಾರಿಯಾಗಿದೆ" ಎಂಬುದು ವಿಶ್ವಸಂಸ್ಥೆಯ ವ್ಯಾಖ್ಯಾನವಾಗಿದೆ (ಉಲ್ಲೇಖ : ವಯಲೆನ್ಸ್ ಆ್ಯಂಡ್ ಪ್ರೊಟೆಕ್ಟಿವ್ ಮೇಜರ್ಸ್, ಫಾರ್ ವುಮೆನ್ ಡೆವಲಪ್‌ಮೆಂಟ್ ಆ್ಯಂಡ್ ಎಂಪವರಮೆಂಟ್).[೪]

ಈ ವ್ಯಾಖ್ಯಾನದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಪ್ರಮುಖವಾಗಿ ಕುಟುಂಬ-ಸಾರ್ವಜನಿಕ ವಲಯಗಳೆರಡನ್ನು ಆಧರಿಸಿ ವಿವರಿಸಲಾಗಿದೆ. ಆದರೆ ಹುಟ್ಟಿನಿಂದ-ಸಾಯುವವರೆಗಿನ ವಿಭಿನ್ನ ಬಗೆಯ ದೌರ್ಜನ್ಯಕ್ಕೆ ಮಹಿಳೆಯು ಬಲಿಯಾಗುತ್ತಿರುವುದನ್ನು ಹೇಳುವಾಗ, ಜನನ ಪೂರ್ವದ ಸಂಗತಿಯ (ಭ್ರೂಣಹತ್ಯೆಯ) ಪ್ರಸ್ತಾಪ ಕಾಣಿಸುವುದಿಲ್ಲ ಹಾಗೂ ಈ 'ಕೆಲಸದ ಸ್ಥಳ' - 'ಲೈಂಗಿಕ ಕಿರುಕುಳ'ದ ಪ್ರಸ್ತಾಪ ಕಾಣಿಸುತ್ತಿರುವುದು. ಈ ಅಧ್ಯಾಯದಲ್ಲಿ ಬಹುಮುಖ್ಯವಾಗಿ ಕೆಲಸದ ಸ್ಥಳದಲ್ಲಿ ನಡೆಯುವ ಲೈಂಗಿಕ ಕಿರುಕುಳ ತಡೆ ಕಾಯ್ದೆಯ ಚರ್ಚೆಗೆ ಆಧಾರವಾಗಿ ನಿಲ್ಲುತ್ತದೆ.

"ಸಮಾಜದಲ್ಲಿನ ಸ್ತ್ರೀ-ಪುರುಷರ ಮಧ್ಯದ ಅಸಮಾನ ಅಧಿಕಾರ ಸಂಬಂಧಗಳ ಕಾರ್ಯಾಚಾರಣೆಯನ್ನು ನಿಭಾಯಿಸಲು, ಲಿಂಗಾಧಾರಿತವಾಗಿ ನಡೆಯುವ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವು ಉಪಯುಕ್ತ ಅಸ್ತ್ರವಾಗಿದೆ. ಎಲ್ಲ ಅಧಿಕಾರಗಳಲ್ಲೂ ಮಹಿಳೆಯ ಸ್ಥಾನಮಾನಕ್ಕಿಂತ ಪುರುಷನು ಶ್ರೇಷ್ಠನೆಂದು, ಪುರುಷ ಪ್ರಧಾನತೆಯ ಮೂಲಕ ಪ್ರತಿಬಿಂಬಿಸಲ್ಪಟ್ಟ ಸಿದ್ಧಾಂತಕ್ಕನುಗುಣವಾಗಿ ಪುರುಷ

ಮಹಿಳೆಯ ಮೇಲೆ ನಿಯಂತ್ರಣ ಮತ್ತು ದಬ್ಬಾಳಿಕೆಯನ್ನು ನಡೆಸುತ್ತಾನೆಂಬುದಕ್ಕೆ ಸಮಾಜದಲ್ಲಿನ ವಿಭಿನ್ನ ಮಾರ್ಗಗಳಲ್ಲಿ ಇದನ್ನು ಸ್ಪಷ್ಟಪಡಿಸಲಾಗಿದೆ. ಈ ಬಗೆಯ ದೌರ್ಜನ್ಯಕ್ಕೆ ಪುರುಷ ಪ್ರಧಾನತೆಯ ಹೆಜ್ಜೆಗಳೇ ಕಾರಣವಾಗಿವೆ"" (ಉಲ್ಲೇಖ: ವುಮೆನ್ ಆ್ಯಂಡ್ ವಯೊಲೆನ್ಸ್ : ಎ ಕೆಂಟ್ರಿ ರಿಪೋರ್ಟ್ - ಡಾ. ಮೈತ್ರೇಯಿ ಕೃಷ್ಣರಾಯ್). ಮೈತ್ರೇಯಿ ಕೃಷ್ಣರಾಜ್‌ರವರು ಅಧೀನ-ಪ್ರಧಾನತೆಯ ಏಣಿಶ್ರೇಣೀಕರಣವನ್ನು ಹೊಂದಿರುವ ಪುರುಷ ಪ್ರಧಾನ ವ್ಯವಸ್ಥೆಯೇ ಮಹಿಳೆಯ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಆಧಾರವೆಂದು ಸೂಚಿಸುತ್ತಾರೆ.

ಪುರುಷ ಪ್ರಧಾನ ವಿಚಾರಧಾರೆಯೊಳಗೆ ಮಹಿಳೆಯ ಮೇಲೆ ನಡೆಯುವ ದೈಹಿಕ, ಲೈಂಗಿಕ ಮತ್ತು ಮಾನಸಿಕ ಇತ್ಯಾದಿ ದೌರ್ಜನ್ಯಗಳಿಗೆ ಸಮಾಜ ವ್ಯವಸ್ಥೆಯಲ್ಲಿ ಅಲಿಖಿತ ಸಮ್ಮತಿಯನ್ನು ನೀಡಲಾಗಿದೆ. ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ ಕೇವಲ ಖಾಸಗಿ ವಲಯಕ್ಕೆ ಮಾತ್ರ ಸೀಮಿತವಾಗಿಲ್ಲವಾದ್ದರಿಂದ ಒಟ್ಟು ಸ್ತ್ರೀ-ಪುರುಷ ಸಂಬಂಧಗಳುದ್ದದ ಚೌಕಟ್ಟಿನಲ್ಲಿರಿಸಿ ನೋಡಬಹುದಾಗಿದೆ.

ಹೀಗೆ ವಿಶಾಲವ್ಯಾಪ್ತಿಯನ್ನು ಹೊಂದಿರುವ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಕುರಿತ ಚಿಂತನೆ ಸಂಶೋಧನಾ ಸಾಹಿತ್ಯದಲ್ಲಿ ಸಾಕಷ್ಟು ಕಾಣಬಹುದಾಗಿದೆ. ದೈಹಿಕ, ಮಾನಸಿಕ, ಬೌದ್ಧಿಕ, ಆರ್ಥಿಕ ದುರಾಕ್ರಮಣ, ಲೈಂಗಿಕ ಹಿಂಸೆ ಇತ್ಯಾದಿಗಳನ್ನು ಕಾಲ, ಸಂದರ್ಭ, ಸನ್ನಿವೇಶಗಳಿಗನುಗುಣವಾಗಿ ಈ ಸಂಗತಿಯನ್ನು ವ್ಯಾಖ್ಯಾನಿಸಿದ್ದಾರೆ. ಒಟ್ಟು ವ್ಯಾಖ್ಯಾನಗಳನ್ನು ಎರಡು ಗುಂಪುಗಳಲ್ಲಿ ವಿಭಾಗಿಸಿ ನೋಡಿದಾಗ ಸಾಂಪ್ರದಾಯಿಕ ಚಿಂತಕರ ವ್ಯಾಖ್ಯಾನಗಳಲ್ಲಿನ ಒಟ್ಟು ಸ್ವರೂಪವು ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಪ್ರಕೃತಿಯೇ ಮಾಡಿದ ಅನ್ಯಾಯವು ಕಾರಣವೆಂದು ಹೇಳಲಾಗುತ್ತದೆ. ಸಾಂಪ್ರದಾಯಿಕ ಸಂಶೋಧನಾ ವಿಧಿವಿಧಾನಗಳನ್ನು ಅಳವಡಿಸಿಕೊಂಡು ಅಧ್ಯಯನ ನಡೆಸುವಲ್ಲಿ ಪ್ರಧಾನ ಲಿಂಗೀಯ ಪರವಾದ ಫಲಿತಗಳೇ ಬಂದಿವೆಯೆಂಬುದನ್ನು ಸ್ತ್ರೀವಾದಿಗಳು ಪ್ರತಿಪಾದಿಸಿದ್ದಾರೆ. ವಸ್ತುನಿಷ್ಠತೆಯನ್ನೇ ಪ್ರಮುಖವಾಗಿ ಪರಿಗಣಿಸುವ ಸಾಂಪ್ರದಾಯಿಕ ಚಿಂತನೆಗಳಲ್ಲಿ ಸಂಕುಚಿತ ಮತ್ತು ಮೇಲ್ಮೆಯ ಅಂಶಗಳನ್ನು ಮಾತ್ರ ಗ್ರಹಿಸಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ವ್ಯಾಖ್ಯಾನಿಸಿದ್ದಾರೆ. ಇಂತಹ ಲೈಂಗಿಕತಾವಾದಿ ತಾತ್ತ್ವಿಕತೆಯನ್ನು ಆಧರಿಸಿ ರೂಪಿತವಾಗಿರುವ ಕಾನೂನುಗಳು ಸಹ ಮಹಿಳಾ ಬದುಕನ್ನು ಸುಧಾರಿಸುವಲ್ಲಿ ಯಶಸ್ವಿಯಾಗುವುದಕ್ಕಿಂತ, ಹೆಚ್ಚು ವೈಫಲ್ಯಗಳೇ ಆಗಿವೆ. ಅಲ್ಲದೆ ಮಹಿಳೆಯ ಬುದುಕು ಸಾಮಾಜಿಕತೆಯ ಮೂಲದಿಂದ ನಿರ್ವಚನಗೊಳ್ಳುವುದರಿಂದ, ವಾಸ್ತವದ ಗ್ರಹಿಕೆ ಮತ್ತು ಸಾಮಾಜಿಕತೆಯ ಹಿನ್ನೆಲೆಯನ್ನಾಧರಿಸಿಯೇ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಗ್ರಹಿಸಿ ಸಿದ್ಧಾಂತಗಳನ್ನು ರೂಪಿಸುವ ಜರೂರಿದೆ.

**೨.೩. ಸ್ತ್ರೀವಾದಿ ಸಿದ್ಧಾಂತಗಳಲ್ಲಿ ಈ ಕುರಿತ ವಿವಿಧ ಆಯಾಮಗಳು**

೧೯೬೦ರ ಕೊನೆ ಮತ್ತು ೧೯೭೦ರ ದಶಕದ ಪ್ರಾರಂಭದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವು ನಿಧನವಾಗಿ ಅಲ್ಲಲ್ಲಿ ಕೇಳಲ್ಪಟ್ಟು ಮುಂಬರುವ ದಿನಗಳಲ್ಲಿ ಗಂಭೀರವಾದ ಸಾಮಾಜಿಕ

ಸಮಸ್ಯೆಯಾಯಿತು. ಈ ಹಿಂದೆ ಮಹಿಳೆಯರ ವಿರುದ್ಧ ದೌರ್ಜನ್ಯಗಳು ಇರಲೇ ಇಲ್ಲವೆಂದಲ್ಲ. ಮಹಿಳೆಯರು ಮನೆಯೊಳಗಿನ ನಾಲ್ಕು ಗೋಡೆಯ ಮಧ್ಯದಲ್ಲಿರುವುದರಿಂದ ಅವಳ ಮೇಲೆ ನಡೆಯುವ ದೌರ್ಜನ್ಯ - ಹಿಂಸೆಗಳು ಅದರೊಳಗೆ ಅಡಕವಾಗಿದ್ದವು. ಗೃಹಬಂಧನದಿಂದ ಹೊರಬಂದ ಮಹಿಳೆ ಯಾವಾಗ ಸಾಮಾಜಿಕ ಬದುಕಿಗೆ ಮುಖಾಮುಖಿಯಾಗಲು ಪ್ರಾರಂಭಿಸಿದಳೊ, ಅಂದಿನಿಂದ ಅವಳ ಬದುಕಿನ ಬಹುಪಾಲು ಸಂಗತಿಗಳು ಅನಾವರಣಗೊಂಡವು. ಮಹಿಳೆಯರ ವಿರುದ್ಧ ನಡೆಯುವ ಹಿಂಸೆ - ದೌರ್ಜನ್ಯವನ್ನು ಅರ್ಥೈಸಿಕೊಳ್ಳಲು ಸುದೀರ್ಘ ಚಿಂತನೆಯನ್ನು ನಡೆಸುವ ಮೂಲಕ ಆಧಾರವನ್ನು ರೂಪಿಸಿಕೊಳ್ಳಲು, ಆಗಾಗ್ಗೆ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯ ದಮನದ ಕೆಲವು ಆಯಾಮಗಳನ್ನು ತಿಳಿದುಕೊಳ್ಳುವುದು ಸೂಕ್ತ ಸಂಗತಿಯಾಗಿದೆ. ಆರಂಭದಲ್ಲಿ ಮಹಿಳೆಯ ವಿರುದ್ಧ ನಡೆಯುವ ದೌರ್ಜನ್ಯವನ್ನು ಆರ್ಥಿಕ ಶೋಷಣೆ, ಲೈಂಗಿಕತೆ, ಜಾತಿ-ವರ್ಗ-ಗ್ರಾಮ-ನಗರ ಮತ್ತು ಸಂಸ್ಕೃತಿ ಇತ್ಯಾದಿಗಳ ಮಧ್ಯದ ಸಂಬಂಧಗಳನ್ನು ಸ್ಥೂಲವಾಗಿ ಪರೀಕ್ಷೆಗೊಳಪಡಿಸಬೇಕಾಗಿದೆ. ಮಹಿಳೆಯ ದಮನವಾಗಿಸಲು ಆರ್ಥಿಕ ಶೋಷಣೆಯ ಪಾತ್ರವು ದೌರ್ಜನ್ಯದಲ್ಲಿ ಮುಖ್ಯವಾಗಿ ಗುರುತಿಸಲಾಗಿದೆ. ಈ ಮೂಲಕ ಮಹಿಳೆಯನ್ನು ನಿಯಂತ್ರಣದಲ್ಲಿರಿಸಿಕೊಳ್ಳುವ ಪ್ರಯತ್ನ. ಆರ್ಥಿಕ ಅವಲಂಬನೆ ಹಾಗೂ ಶೋಷಣೆಯಿಂದಾಗಿ ಮಹಿಳಾ ಸಮುದಾಯ ಅಧಿಕಾರವನ್ನು ಪಡೆಯುವಲ್ಲಿ ಮತ್ತು ಹಿಂಸೆ - ದೌರ್ಜನ್ಯಗಳನ್ನು ಪ್ರತಿಭಟಿಸುವಲ್ಲಿ ಅಸಮರ್ಥರಾಗುವುದರಿಂದ ಇದನ್ನು ಪ್ರಮುಖವಾಗಿ ಪ್ರತಿನಿಧಿಸಲಾಗಿದೆ.

ಮಹಿಳೆಯ ಒಟ್ಟು ಸಮಸ್ಯೆಗಳ ಮೂಲ ಲೈಂಗಿಕತೆಯೇ ಆಗಿದೆ. ಸಾಮಾಜಿಕವಾಗಿ ಕಟ್ಟಲ್ಪಟ್ಟ ಲೈಂಗಿಕತೆಯ ವ್ಯಾಖ್ಯಾನ ಅವಳ ಅಸ್ತಿತ್ವದ ದಮನವನ್ನೇ ಬಯಸುತ್ತದೆ. ಇಂದಿಗೂ ರೂಢಿಯಲ್ಲಿರುವ ವಿವಿಧ ಬಗೆಯ ದೌರ್ಜನ್ಯಗಳತ್ತ ಗಮನಹರಿಸಿದಾಗ ಬಹುಪಾಲು ಸಂಗತಿಗಳಲ್ಲಿ ಲೈಂಗಿಕತೆಯ ಪ್ರಶ್ನೆ ಪ್ರಮುಖವಾಗಿ ಬೆಳಕಿಗೆ ಬರುತ್ತದೆ. ಮಹಿಳೆಯ ಸಮಗ್ರ ಚಹರೆಯನ್ನೇ ಲೈಂಗಿಕತೆ ಅಂದರೆ ಅವಳ ದೇಹ ಮತ್ತು ಅದರಿಂದ ಲಭ್ಯವಾಗುವ ಸೇವೆಯನ್ನೇ ಆಧರಿಸಿರುವುದರಿಂದ ಎಲ್ಲ ಬಗೆಯ ಒತ್ತಡ-ದಬ್ಬಾಳಿಕೆ ಮತ್ತು ದೌರ್ಜನ್ಯಗಳಲ್ಲಿ ಇದು ಕಾಣಿಸುವುದು.

ಎಲ್ಲ ಜಾತಿ-ವರ್ಗ-ವರ್ಣಗಳಲ್ಲಿ ಮಹಿಳೆಯೂ ಸೇರಿಕೊಂಡಿರುವುದರಿಂದ, ಆಯಾ ಬಗೆಯ ಪರಿಸರಕ್ಕನುಗುಣವಾಗಿ ಅಲ್ಲಿನ ಹಿಂಸೆ - ದೌರ್ಜನ್ಯದ ಸ್ವರೂಪವು ಕಾಣಿಸಿಕೊಳ್ಳುತ್ತದೆ. ಉದಾ:- ಒಬ್ಬ ಸುಶಿಕ್ಷಿತ ಮಹಿಳೆ ಮತ್ತು ಅನಕ್ಷರಸ್ಥ ಮಹಿಳೆ ಇರ್ವರನ್ನು ಹೋಲಿಸಿದಾಗ ಇಬ್ಬರ ಮೇಲೂ ಹಿಂಸೆ-ದೌರ್ಜನ್ಯಗಳಾಗುತ್ತಿರುವುದಕ್ಕೆ ಉದ್ದೇಶ ಒಂದೇ ಆಗಿದೆ, ಆದರೆ ಸ್ವರೂಪದಲ್ಲಿ ಭಿನ್ನತೆಗಳಾಗುತ್ತವೆ. ಹಾಗಾಗಿ ಆಯಾಯ ಪರಿಸ್ಥಿತಿ, ಸನ್ನಿವೇಶಗಳಿಗನುಗುಣವಾಗಿ ಮಹಿಳೆಯರ ವಿರುದ್ಧ ನಡೆಯುವ ಹಿಂಸೆ - ದೌರ್ಜನ್ಯವನ್ನು ವಿವರಿಸಿಕೊಳ್ಳಬೇಕಾಗುತ್ತದೆ. ಈ ಎಲ್ಲ ಅಂಶಗಳಿಗೂ ಪೂರಕವಾಗಿ ಸಂಸ್ಕೃತಿ, ರೂಢಿ, ಆಚರಣೆಗಳು ಕಾಣಿಸಿಕೊಳ್ಳುತ್ತವೆ. ಈ ನಿಟ್ಟಿನಲ್ಲಿ ಮೊದಲು ಮಹಿಳೆಯರ ವಿರುದ್ಧ ನಡೆಯುವ

ದೌರ್ಜನ್ಯದ ಚರ್ಚೆಯನ್ನು ಪ್ರಾರಂಭಿಸಿದವರು 'ತೀವ್ರವಾದಿ ಸ್ತ್ರೀವಾದಿ'ಗಳು. ವಿವಾಹ ಮತ್ತು ಕುಟುಂಬ ಸಂಸ್ಥೆಗಳೇ ಮಹಿಳಾ ಶೋಷಣೆಯ ಕೇಂದ್ರಬಿಂದುವೆಂದು ತಮ್ಮ ಸಿದ್ಧಾಂತದಲ್ಲಿ ಪ್ರತಿಪಾದಿಸಿದರು.

**ತೀವ್ರವಾದಿ ಸ್ತ್ರೀವಾದ ಮತ್ತು ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ - ಹಿಂಸೆ**

ಅರವತ್ತರ ದಶಕದ ಉತ್ತರಾರ್ಧ ಮತ್ತು ಎಪ್ಪತ್ತರ ದಶಕದ ಪ್ರಾರಂಭದಲ್ಲಿ ಸ್ತ್ರೀವಾದದ ಎರಡನೆ ಅಲೆಯೆಂದೆ ತೀವ್ರವಾದಿ ಸ್ತ್ರೀವಾದವನ್ನು ಗುರುತಿಸಲಾಗುತ್ತದೆ. ಈ ಸ್ತ್ರೀವಾದವು ಪುರುಷನನ್ನು ಶತ್ರುವೆಂದೇ ಪರಿಭಾವಿಸಿತ್ತೆಂಬ ಆರೋಪವು ಇದೆ. ಮೊಟ್ಟಮೊದಲು ಮಹಿಳಾ ಶೋಷಣೆಯ ಪ್ರಶ್ನೆಯನ್ನು ಹುಟ್ಟು ಹಾಕಿರುವುದೇ ತೀವ್ರವಾದಿ ಸ್ತ್ರೀವಾದಿಗಳು, ವರ್ಗ, ಜನಾಂಗ ಮೂಲವಾದ ದೌರ್ಜನ್ಯಕ್ಕಿಂತ ಲೈಂಗಿಕ ದಮನವು ಮೊದಲನೆಯದು. "ಲೈಂಗಿಕ ದಾಸ್ಯ ಮತ್ತು ಒತ್ತಾಯದ ತಾಯ್ತನಗಳ ಆಕರವಾದ ಕುಟುಂಬವೇ ಹೆಣ್ಣಿನ ಶೋಷಣೆಯ 'ಕೀಲಿಕೈ' ಎಂಬುದನ್ನು ಪ್ರತಿಪಾದಿಸಿತು. ಕುಟುಂಬವೆಂಬುದು ಮಹಿಳೆಯ ರಕ್ಷಣೆಯ ತಾಣವೆಂಬುದು ಭ್ರಮಾತ್ಮಕ ಕಲ್ಪನೆ. ವ್ಯಾಲರಿ ಸೊಲಾಸಿಸ್, ಜೋರಿನ್ ಮುಂದುವರೆದಂತೆ ಮೇರಿಡಾಲಿ ಮತ್ತು ಸೂಸನ್ ಗ್ರಿಫೆನ್‌ರು "ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಲಿಂಗದ ಕಾರಣದಿಂದಾಗಿಯೇ ಹೆಣ್ಣು ದಮನಕ್ಕೊಳಗಾಗಿದ್ದಾಳೆ. ಪುರುಷ ಸಮುದಾಯ ಈ ಶ್ರೇಷ್ಠತೆಯನ್ನು ಬಳಸಿಕೊಂಡು ತನ್ನತನ ಮತ್ತು ಅಧಿಕಾರಗಳನ್ನು ಗಟ್ಟಿಗೊಳಿಸಿಕೊಂಡಿದೆ"[೬] ಎನ್ನುವುದು ಈ ಚಿಂತಕಿಯರ ಅಭಿಮತ (ಉಲ್ಲೇಖ : ಸ್ತ್ರೀವಾದಿ ಪ್ರವೇಶಿಕೆ). ಈ ಬಗೆಯ ತಂತ್ರಗಾರಿಕೆಯಿಂದ ಪಡೆಯಲಾದ ಅಧಿಕಾರವನ್ನು ನಿರಂತರವಾಗಿ ಉಳಿಸಿಕೊಳ್ಳಲು ಪುರುಷ ಪ್ರಧಾನ ವ್ಯವಸ್ಥೆ 'ಸ್ತ್ರೀತ್ವ'ವನ್ನು ಹತ್ತಿಕ್ಕಲು ಹಿಂಸೆ, ದಬ್ಬಾಳಿಕೆ, ದೌರ್ಜನ್ಯದಂತಹ ಅಸ್ತ್ರಗಳನ್ನು ಬಳಸುವ ಮುಖೇನ ತನ್ನ ಸ್ಥಾನವನ್ನು ಭದ್ರವಾಗಿಸಿಕೊಳ್ಳಲು ಪ್ರಯತ್ನಿಸುತ್ತಿದೆ. ಮೇರಿಡಾಲಿಯವರು ತಮ್ಮ 'ಗೈನಕಾಲಜಿ' (Gynecology) ಪುಸ್ತಕದಲ್ಲಿ ಎಲ್ಲ ವಿಧವಾದ ಪರಿಸರ ವಿನಾಶಗಳು, ಪುರುಷಾಧಿಪತ್ಯದ ಹಿಂಸಾತ್ಮಕ ಅಧಿಕಾರದ ವಿವಿಧ ರೂಪಗಳೆಂದು ಮಹಿಳೆಯರ ಮೇಲಿನ ದೌರ್ಜನ್ಯವನ್ನು ಪ್ರಸ್ತಾಪಿಸುತ್ತಾರೆ.



ಉತ್ಪಾದನಾ ವ್ಯವಸ್ಥೆಯಲ್ಲಿ ಲಿಂಗಾಧಾರಿತ ಶ್ರಮವಿಭಜನೆಯ ಕಾರಣಗಳನ್ನು ಗುರುತಿಸುವುದರ ಬದಲು ಪುರುಷಪ್ರಧಾನ ಸಂರಚನೆಯಲ್ಲಿ ಶೋಧಿಸುವುದು ಸೂಕ್ತ. ನಿಜವಾದ ಸ್ತ್ರೀತ್ವವನ್ನು ಸಾಂಪ್ರದಾಯಿಕ ಸಮಾಜ ವ್ಯವಸ್ಥೆಯಲ್ಲಿ ತಿರುಚಲ್ಪಟ್ಟಿದೆ. ಪ್ರಾಕೃತಿಕವಾಗಿ ದತ್ತವಾದ, ಜೈವಿಕ ಭಿನ್ನತೆಯನ್ನಾಧರಿಸಿದ ಸ್ತ್ರೀ-ಪುರುಷರ ಮಧ್ಯದ ಭಿನ್ನತೆಗಳನ್ನು ನಿರಾಕರಿಸಿ, ಇವುಗಳನ್ನು ಮೀರುವುದರೊಂದಿಗೆ ಬಹುಮುಖ್ಯವಾಗಿ "ಶಿಶ್ನಯೋನಿ ಕೇಂದ್ರಿತ ಚಿಂತನೆ"ಯ ಆದರ್ಶತ್ತ ಮುಖ ಮಾಡುತ್ತದೆ (ಉಲ್ಲೇಖ: ವಯಲೈನ್ಸ್ ಅಗೆಸ್ಟ್ ವುಮೆನ್).[೬] ತೀವ್ರವಾದಿ ಸ್ತ್ರೀವಾದದ ಒಟ್ಟು ಇತಿಹಾಸವನ್ನು ಗಮನಿಸಿ ಹೇಳುವುದಾದರೆ, ಈ ಚಿಂತನೆಯ ಎಲ್ಲ ನಿಲುವುಗಳಲ್ಲೂ ಸಹ ಲೈಂಗಿಕತೆ ಮತ್ತು ಲೈಂಗಿಕ ದಬ್ಬಾಳಿಕೆಗೆ ಹೆಚ್ಚು ಒತ್ತು ಕೊಡಲಾಗಿದೆ. ಅಲ್ಲದೆ ಕೌಟುಂಬಿಕ ವಲಯದ ದೌರ್ಜನ್ಯದ ಮುಖ್ಯವಾದ ಎಳೆಗಳನ್ನು ಹೊರಹಾಕುತ್ತದೆ. 'ತಾಯ್ತನ' ಮತ್ತು 'ಶಿಶುವಿನ ಪಾಲನೆ-ಪೋಷಣೆ'(ಕುಟುಂಬದ)ಯು ಮಹಿಳೆಯ ಸಾಧನೆಗಳಿಗೆ

ಅಡ್ಡಿಯೆಂದು ಭಾವಿಸಿರುವ ಈ ಸ್ತ್ರೀವಾದವು, ಆಧುನಿಕ ವಿಜ್ಞಾನ ತಂತ್ರಜ್ಞಾನಗಳು ಮಹಿಳೆಯ ಸಾಧನೆಯ ಹಾದಿಯಲ್ಲಿ ಸಕಾರಾತ್ಮಕ ಸಂಗತಿಯಾಗಿ, ಮೇಲೆ ಸೂಚಿಸಿದ ಹೊರೆಗಳಿಂದ ಮುಕ್ತವಾಗಿಸುತ್ತದೆ ಎಂದು ಹೇಳಲಾಗುತ್ತದೆ. ಮುಂದಿನ ಅಧ್ಯಾಯದಲ್ಲಿನ ಆರೋಗ್ಯ ವಲಯದ ಹಿಂಸೆ - ದೌರ್ಜನ್ಯವನ್ನು ವಿವರಿಸುವಲ್ಲಿ ಇದನ್ನು ಸಾಂದರ್ಭಿಕ ಚರ್ಚೆಗೆತ್ತಿಕೊಳ್ಳಲಾಗುತ್ತದೆ. ನಂತರದಲ್ಲಿ ಮಾರ್ಕ್ಸ್‌ವಾದದ ನೆಲೆಯಲ್ಲಿ ಹಿಂಸೆ - ದೌರ್ಜನ್ಯದ ಚಿಂತನೆಯನ್ನು ಅವಲೋಕಿಸಬೇಕಾಗಿದೆ.

**ಮಾರ್ಕ್ಸ್‌ವಾದ ಮತ್ತು ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ**

ಹೆಣ್ಣಿನ ಆರ್ಥಿಕ ಪರಾಧೀನತೆಯನ್ನು ತಳಹದಿಯನ್ನಾಗಿಸಿಕೊಂಡು ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಮಾರ್ಕ್ಸ್‌ವಾದವು ವಿವರಿಸುತ್ತದೆ. ಉತ್ಪಾದನಾ ವಲಯದಿಂದ ಮಹಿಳೆಯನ್ನು ಹೊರಹಾಕಿರುವುದು, ಅಧಿಕ ಅವಲಂಬನೆಯನ್ನುಂಟು ಮಾಡಲು ಈ ನೆಲೆಯಿಂದ ಮಹಿಳೆಯ ಸಂಪೂರ್ಣ ಬದುಕಿನ ಮೇಲೆ ಹಕ್ಕು ಸಾಧಿಸುವ ಯತ್ನ ಪುರುಷ ಸಂಸ್ಕೃತಿಯ ಚಿಂತನೆಯಾಗಿದೆ. "ಪ್ರಭುತ್ವವು ವರ್ಗ ಶೋಷಣೆಯ ಸಾಧನವಾದರೆ, ಕುಟುಂಬವು ಸ್ತ್ರೀಯನ್ನು ಶೋಷಿಸಲು ಪುರುಷನ ಸಾಧನವಾಯಿತು" ಎಂದು ಫೆಡ್ರಿಕ್ ಏಂಗೆಲ್ಸ್ ಹೇಳುತ್ತಾರೆ (ಉಧೃತ : ಸ್ತ್ರೀವಾದಿ ಪ್ರವೇಶಿಕೆ).[೮] "ಸಾಮುದಾಯಿಕ ಬಗೆಯ ಪುರುಷ ಪ್ರಧಾನ ಕುಟುಂಬಗಳಲ್ಲಿ ಹೆಂಡತಿಯು ಸರ್ವರಿಗೂ ದಾಸಿಯಾದರೆ, ಏಕಪತ್ನಿತ್ವದ ಪದ್ಧತಿ ಬೆಳೆದು ಬಂದ ಮೇಲೆ ಮಹಿಳೆಯು ಪುರುಷನ ವೈಯಕ್ತಿಕ ದಾಸಿಯಾಗಿ ಮುಂದುವರಿದಳು" (ಉಲ್ಲೇಖ: ಸ್ತ್ರೀವಾದಿ ಪ್ರವೇಶಿಕೆ).[೯] ಮಹಿಳೆಯ ಎಲ್ಲ ಸಮಸ್ಯೆಗಳನ್ನು ದುಡಿಮೆ, ಉತ್ಪಾದನಾವಲಯದಲ್ಲಿರಿಸಿ ನೋಡುವ ಏಂಗೆಲ್ಸ್ ಅವರು ಆಕೆಯ ಶಾರೀರಿಕ ದೌರ್ಬಲ್ಯವೇ ಶೋಷಣೆಯ ಮೂಲವಾಗಿ ಪ್ರತಿನಿಧಿಸುತ್ತಾರೆ. ಸಾಮುದಾಯಿಕ ಆಸ್ತಿ, ಖಾಸಗಿ ಆಸ್ತಿಯಾಗಿ ಮಾರ್ಪಟ್ಟ ಕ್ಷಣದಿಂದಲೇ ಹೆಣ್ಣಿನ ಹಿಂಸೆಯ ಕ್ಷಣವೂ ಪ್ರಾರಂಭವಾಯಿತು. ಯಾವುದೇ ಬಗೆಯ ಕುಟುಂಬಗಳಲ್ಲಿಯೂ ಹೆಣ್ಣು ಪುರುಷನ ಆಸ್ತಿಯೆಂಬುದು ಖಚಿತಪಡಿಸಿದ್ದಾರೆ. "ಅವಳ ಶೋಷಣೆಯ ವಿಮುಕ್ತಿಗೆ ಸ್ತ್ರೀ ಸಮುದಾಯ ಮತ್ತೆ ಸಾರ್ವಜನಿಕ ಕೈಗಾರಿಕೆಯೊಳಗೆ ಪ್ರವೇಶಿಸಬೇಕೆಂದಾಗಿದೆ" (ಉಧೃತ : ಸ್ತ್ರೀವಾದಿ ಪ್ರವೇಶಿಕೆ).[೧೦]

ಒಟ್ಟಿನಲ್ಲಿ ಮಾರ್ಕ್ಸ್‌ವಾದಿಗಳು 'ಉತ್ಪಾದನಾ ವಲಯ' ಮತ್ತು 'ಖಾಸಗಿ ಆಸ್ತಿಯ' ಮೇಲೆ ಪ್ರಮುಖವಾಗಿ ಗಮನ ಹರಿಸುತ್ತಾರೆ. ಮಹಿಳೆಯರ ಒಟ್ಟಾರೆ ದಮನಕ್ಕೆ, ಇವುಗಳನ್ನೇ ಕಾರಣಗಳನ್ನಾಗಿ ಸ್ಪಷ್ಟಪಡಿಸುತ್ತಾರೆ. ಸಾಂಪ್ರದಾಯಿಕ ಮಾರ್ಕ್ಸ್‌ವಾದವು ಕೆಲವು ಸಂಗತಿಗಳನ್ನು ಹೊರಹಾಕುತ್ತದೆ. ವರ್ಗ ಹೋರಾಟದ ತಳದಿಯಲ್ಲಿ ರೂಪಿತವಾದ ಮಾರ್ಕ್ಸ್‌ವಾದವು ಮಹಿಳೆಯ ಶೋಷಣೆಗಳತ್ತ ಖಚಿತವಾಗಿ ಗಮನಹರಿಸುವಲ್ಲಿ ಸಾಕಷ್ಟು ಪುರುಷ ಪ್ರಧಾನತೆಯ ಸಂಗತಿಗಳು ಅಡ್ಡಿಯಾಗಿದ್ದವೆಂಬುದನ್ನು ಮಾರ್ಕ್ಸ್‌ರ ಬರಹಗಳಲ್ಲಿ ಕಾಣಿಸುತ್ತದೆ ಹಾಗೂ ಏಂಗೆಲ್ಸ್‌ರ ಕೃತಿಯಲ್ಲಿ ಉತ್ಪಾದಕತ್ವದ ಪಾತ್ರದಲ್ಲಿ ಮಹಿಳೆಯರ ಕೌಟುಂಬಿಕ ಕೆಲಸಗಳನ್ನು ಹೇಳಿದ್ದಾರೆ. ಆದರೆ ಬಂಡವಾಳಶಾಹಿಯ ಶೋಷಣಾತ್ಮಕ ಸಂಬಂಧಗಳನ್ನು, ತೊಡಕುಗಳನ್ನು ಅವರು ವಿಶ್ಲೇಷಿಸಲಿಲ್ಲ. ಮಹಿಳಾ ದುಡಿಮೆಗಾರರು, ದುಡಿಯುವ ವರ್ಗದ ಒತ್ತಡಗಳು,

ಅವರು ಗಂಡಂದಿರ ನಿಯಂತ್ರಣದಿಂದ ಸ್ವತಂತ್ರರಲ್ಲ. ಮಹಿಳೆಯರ ಮೇಲಿನ ಆಕ್ರಮಣದ ಕುರಿತು ಸಾಮಾನ್ಯವಾಗಿ ಗುರುತಿಸಲಾದ ದೌರ್ಜನ್ಯದ ಎಲ್ಲ ಬಗೆಯು ಕೇವಲ ಆರ್ಥಿಕತೆಯ ಮೂಲವಲ್ಲ. ಇದು ಖಾಸಗಿ ಆಸ್ತಿಯ ಹೆಚ್ಚಿನ ಒತ್ತಡವಾಗಿದೆ. ಆಸ್ತಿಹಕ್ಕಿನ ರಕ್ಷಣೆಯ ಅಗತ್ಯತೆಯ ಭಾಗವಾಗಿ ಅಲ್ಲಿ ದೌರ್ಜನ್ಯವು ಹುಟ್ಟಿಕೊಂಡಿತು. ಸಾಂಪ್ರದಾಯಿಕ ಸಮಾಜದಲ್ಲಿನ ಸ್ವರೂಪ ಮತ್ತು ಆಯಾಮಗಳಲ್ಲಿ ಹಿಂಸಾತ್ಮಕ ಹೋರಾಟಗಳು ಸ್ವಯಂ ರಕ್ಷಣೆಗಾಗಿ ಮಾನವ ಸಮಾಜದಲ್ಲಿ ದೌರ್ಜನ್ಯವನ್ನು ಒತ್ತಾಯಪೂರ್ವಕವಾಗಿ ಸ್ವೀಕರಿಸಲಾಯಿತು. ವಿವಿಧ ಸಾಮಗ್ರಿಗಳ ಸ್ವರೂಪದಿಂದ ಪರಿವರ್ತಿಸಲ್ಪಟ್ಟ ಸಮಾಜದ ಅಭಿವೃದ್ಧಿ ಹಂತಗಳಲ್ಲಿ ಖಾಸಗಿ ಆಸ್ತಿಯ ಮೂಲವಸ್ತುವನ್ನು ಪರಿಚಯಿಸಲ್ಪಟ್ಟಿದ್ದರಿಂದಾಗಿ ತಾರತಮ್ಯ ಮತ್ತು ಶೋಷಣೆಯಿಂದಾದ ಒತ್ತಡಗಳು, ದೌರ್ಜನ್ಯಗಳು ತುತ್ತತುದಿಗೇರಿದವು. ಸಾಂಪ್ರದಾಯಿಕ ಮಾರ್ಕ್ಸ್‌ವಾದವು ಮಹಿಳೆಯ ಸ್ವಾತಂತ್ರಕ್ಕಾಗಿ ಒಟ್ಟು ಶೋಷಣಾತ್ಮಕ ವ್ಯವಸ್ಥೆಯ ವಿರುದ್ಧದ ಹೋರಾಟ. ಸ್ತ್ರೀಪುರುಷರ ಮಧ್ಯದಲ್ಲಿ ಸಾಮಾನ್ಯವಾಗಿ ಅಲ್ಲಿ ಸಮಾನತೆಯಿತ್ತೆನ್ನುವಾಗಲೂ, ಅಲ್ಲಿನ ಲಿಂಗಧಾರಿತ ಶ್ರಮವಿಭಜನೆಯು ಪುರುಷರು "ಉತ್ಪಾದಕರು" ಮತ್ತು ಮಹಿಳೆಯರು "ಮರುತ್ಪಾದಕರು" (ಕುಟುಂಬದಲ್ಲಿ). ಆದಾಗ್ಯೂ ಪುನರುತ್ಪಾದಕತೆಯು ಹೆಚ್ಚು ನಿರ್ಣಯಾತ್ಮಕವಾಗಿದ್ದು, ಮಹಿಳೆಗೆ ಉನ್ನತ ಸ್ಥಾನಮಾನವಿತ್ತು. ಮುಂದುವರೆದು 'ಲೈಂಗಿಕತೆ'ಯ ನಿರ್ಬಂಧವಿರಲಿಲ್ಲ. ಹುಟ್ಟುವ ಮಗುವಿಗೆ ತಂದೆಯ ಚಹರೆಯಿಲ್ಲದಕ್ಕೆ ಮಾತೃ ಹಕ್ಕು ಪ್ರಬಲವಾಗಿತ್ತು. ನಾಗರಿಕತೆಯು ಬೆಳೆದಂತೆಲ್ಲ ಬೀಜ-ಕ್ಷೇತ್ರ-ನ್ಯಾಯದ ಪರಿಕಲ್ಪನೆಯಲ್ಲಿ ಮಹಿಳೆಯು ಪುರುಷ ಸಂಸ್ಕೃತಿಯ ಸ್ವತ್ತುಗಳು. ಈ ಸಂದರ್ಭದಲ್ಲಿ ಜನ್ಮತಳೆದ ವರ್ಗ ಸಂಘರ್ಷಗಳಲ್ಲಿ ಪುರುಷ ಪ್ರಧಾನ ಕುಟುಂಬ ಮತ್ತು ಪ್ರಭುತ್ವದ ಬೆಳವಣಿಗೆಗಳು ಒಂದೇ ಪ್ರಕ್ರಿಯೆಯಲ್ಲಿ ಕಾಣತೊಡಗಿದವು. ಮೊದ ಮೊದಲು ಆರ್ಥಿಕ ಶೋಷಣೆಯ ಫಲಿತವಾಗಿ ಕಂಡುಬಂದಿರುವ ದೌರ್ಜನ್ಯವು ವರ್ಗ ವಿಭಜನೆಗಳನ್ನು ಹೆಚ್ಚಿಸಿತು. ಇಲ್ಲಿ ಕಂಡು ಬಂದ 'ಖಾಸಗಿ ಖಾಸ್ತಿ'ಯ ಪರಿಕಲ್ಪನೆಯು ಗಟ್ಟಿಯಾಗುತ್ತಾ ಬಂದಂತೆಲ್ಲ ಸ್ತ್ರೀಯರ ವಿರುದ್ಧದ ಹಿಂಸೆ - ದೌರ್ಜನ್ಯಕ್ಕೆ ನಾಂದಿಯಾಯಿತು.

**ಸಮಾಜವಾದಿ ಸ್ತ್ರೀವಾದ ಮತ್ತು ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ**

"ಜೀತದ ಅನುಭವವನ್ನು ಮೊಟ್ಟಮೊದಲು ಅನುಭವಿಸಿದ ಮಾನವ ಜೀವಿಯೆಂದರೆ ಮಹಿಳೆ. ಪುರುಷ ಜೀತದಾಳು ಹುಟ್ಟುವ ಮೊದಲೇ ಮಹಿಳೆ ಜೀತದಾಳಾಗಿದ್ದಳು" (ಉದ್ಧೃತ : ಸ್ತ್ರೀವಾದಿ ಪ್ರವೇಶಿಕೆ)[10] ಅಗಸ್ಟ್‌ಬೆಬೆರ್ ವುಮೆನ್ ಆ್ಯಂಡ್ ಸೋಶಿಯಲಿಜಮ್ ಕೃತಿಯಲ್ಲಿ ಗುರುತಿಸಿದ್ದಾನೆ. ಈ ಹಿನ್ನೆಲೆಯಲ್ಲಿ ಅಗಸ್ಟ್ ಬೆಬೆಲ್‌ನು ಮಹಿಳೆಯು ಕೇವಲ ಬಂಡವಾಳಶಾಹಿಯಿಂದ, ಉತ್ಪಾದನಾ ವಲಯದಾಚೆಗಿರುವುದರಿಂದ ಹಿಂಸೆ - ದೌರ್ಜನ್ಯಕ್ಕೆ ಬಲಿಯಾಗುತ್ತಾಳೆಂಬುದನ್ನು ತಿರಸ್ಕರಿಸುತ್ತಾನೆ. ಸಮಾಜವಾದ ಬರದೆ ಲಿಂಗ ಸಮಾನತೆ ಅಸಾಧ್ಯವೆಂಬುದಕ್ಕೆ ಒತ್ತು ಕೊಡುತ್ತಾನೆ. ಮಹಿಳೆಯೊಬ್ಬಳು ಸೋವಿಯತ್ ರಷಿಯಾದ ಸಮಾಜ ಕಲ್ಯಾಣ ಇಲಾಖೆಯ ಮಂತ್ರಿಯಾಗಿ, ವಿದೇಶೀ ರಾಯಭಾರಿಯಾಗಿರುವುದು ಚಾರಿತ್ರಿಕ ಮಹತ್ವ ಘಟನೆಯನ್ನಾಗಿಸಿದ ಅಲೆಗ್ಸಾಂಡರ್ ಕೊಲಂಬೈಯವರು ಬೆಬಲ್ ಚಿಂತನೆಗೆ ಪೂರಕವಾಗಿದ್ದಾರೆ. ಹಾಗೆಯೇ ತಾಯಿಯಾಗಿ, ಹೆಣ್ಣಾಗಿ ಶತಮಾನದುದ್ದಕ್ಕೂ ದೌಜನ್ಯದ

ಬಲಿಪಶುವಾಗಿದ್ದಾಳೆಂದು ಹೇಳುತ್ತಾರೆ. ಸಮಾಜವಾದಿ ಸ್ತ್ರೀವಾದಿಗಳು, ಚರಿತ್ರೆಯನ್ನು ಹೆಣ್ಣಿನ ಆರ್ಥಿಕ ಮತ್ತು ಭೌತಿಕ ದಾಸ್ಯದ ಚರಿತ್ರೆಯೆಂದೆ ವಿಶ್ಲೇಷಿಸುತ್ತಾರೆ. ಸಾಂಪ್ರದಾಯಿಕ ಮಾರ್ಕ್ಸ್‌ವಾದವು ಕಡೆಗಣಿಸಿರುವ ಕೆಲವು ಮಹಿಳಾ ಸಂಗತಿಗಳನ್ನು ಪ್ರಸ್ತಾಪಿಸುತ್ತಾ ಶೀಲಾರೊಬಾತಮ್ ಮಹಿಳೆ ಕುಟುಂಬ ಮತ್ತು ಕೆಲಸದ ಸ್ಥಳಗಳಲ್ಲಿ ವಿಶಿಷ್ಟ ಅನುಭವವನ್ನು ಉತ್ಪಾದನಾ ಸಂಬಂಧದಲ್ಲಿ ಪಡೆಯುತ್ತಾಳೆಂದು ಹೇಳುತ್ತಾರೆ. "ಮಿಶೆಲ್ ಬ್ಯಾರೆಟ್" ತನ್ನ "ವಿಮೆನ್ಸ್ ಅಪ್ರೆಶನ್ ಟುಡೆ" ಕೃತಿಯಲ್ಲಿ ಅಸಮಾನತೆಗೆ ಉತ್ಪಾದನೆ ಮತ್ತು ಸಂತಾನೋತ್ಪಾದನೆಯೇ ಕಾರಣವಾಗಿವೆಯೆಂದು ಹೇಳುವುದರೊಂದಿಗೆ, ವಿಭಕ್ತ ಕುಟುಂಬಗಳೆ ವಿಶೇಷವಾಗಿ ಆರ್ಥಿಕ ಅಧಿಕಾರದ ಮೂಲಕ ಮಹಿಳೆಯರ ಮೇಲೆ ದಬ್ಬಾಳಿಕೆ ನಡೆಸಲು ಪುರುಷನಿಗೆ ಅನುಕೂಲ ಕಲ್ಪಿಸಿಕೊಡುತ್ತದೆ. ಸಾಮಾಜಿಕ ಸಂಸ್ಥೆಯಲ್ಲೊಂದಾದ ಕುಟುಂಬದಲ್ಲಿನ ಲಿಂಗ ತಾರತಮ್ಯದ ವಿಚಾರಧಾರೆಯು ಲಿಂಗಾಧಾರಿತ ಶ್ರಮವಿಭಜನೆಗೆ ವಿಸ್ತರಿಸುತ್ತದೆಯಾದ್ದರಿಂದ ಕೆಲಸದ ಸ್ಥಳಗಳಲ್ಲಿ ಮತ್ತು ಮನೆಯಲ್ಲಿ ಹೆಣ್ಣಿನ ಪಾತ್ರಗಳು ದಮನಕ್ಕೊಳಗಾಗುತ್ತವೆಯೆಂದು ವಿವರಿಸಿದ್ದಾರೆ.

ಸಮಾಜವಾದಿ ಸ್ತ್ರೀವಾದವು 'ಪಿತೃಪ್ರಧಾನತೆ'ಯೆ ಎಲ್ಲ ಬಗೆಯ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಮೂಲ ಆಧಾರವಾಗಿದೆ. ಈ ಸಂಬಂಧ ಮೂಲದಿಂದ ಜನಿಸುವ, ಗುರುತಿಸಿಕೊಳ್ಳುವ ಯಾವುದೇ ಸಂಗತಿಯು ಸಹ ಮಹಿಳೆಯರ ವಿರುದ್ಧ ದೌರ್ಜನ್ಯಕ್ಕೆ ಪ್ರೇರಣೆಯಾಗಿದೆಯೆಂಬ ನಿಲುವನ್ನು ತಳೆಯುತ್ತದೆ.

ಆರಂಭದಲ್ಲಿ ಬಂದಿರುವ ಸ್ತ್ರೀವಾದಿ ಸಿದ್ಧಾಂತಗಳು ಮೊದಲಿನಿಂದಲೂ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಗಳನ್ನು ಪ್ರಸ್ತಾಪಿಸುತ್ತಲೆ ಬಂದಿವೆ. ಪ್ರತಿಯೊಂದು ಸಿದ್ಧಾಂತವು ಸಹ ಮಹಿಳೆಯ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಒಂದೊಂದೆ ಅಂಶಗಳನ್ನು ಕಾರಣವಾಗಿಸಿ ಅದರತ್ತ ಹೆಚ್ಚಿನ ಗಮನಹರಿಸಿರುವುದು ಸ್ಪಷ್ಟವಾಗಿದೆ. ಆದರೆ ಸಮಾಜವಾದಿ ಸ್ತ್ರೀವಾದಿ ಸಿದ್ಧಾಂತವು ಮಾತ್ರ ಮಾತೃಪಿತೃಪ್ರಧಾನತೆಯೆ ಎಲ್ಲ ಬಗೆಯ ಮಹಿಳೆಯ ಮೇಲಿನ ಆಕ್ರಮಣಕ್ಕೂ ಮೂಲ ತಳಹದಿಯೆಂಬುದನ್ನು ಸ್ಪಷ್ಟಪಡಿಸುತ್ತದೆ. ತೀರ ಇತ್ತೀಚೆಗೆ ಕಾಣಿಸಿಕೊಳ್ಳುತ್ತಿರುವ ಅಭಿವೃದ್ಧಿ ಸಿದ್ಧಾಂತಗಳಲ್ಲಿ ಮಹಿಳೆಯ ವಿರುದ್ಧ ನಡೆಯುವ ದೌರ್ಜನ್ಯವನ್ನು ೧೫ ಸಿದ್ಧಾಂತಗಳಲ್ಲಿ ಗುರುತಿಸಲಾಗಿದೆ. ಈ ಸಿದ್ಧಾಂತಗಳನ್ನು ಮೂರು ಹಂತಗಳಲ್ಲಿ ವಿಭಾಗಿಸಿಕೊಳ್ಳಲಾಗಿದೆ. ಅಂತರ್ ವ್ಯಕ್ತಿಗತ ಸಿದ್ಧಾಂತ (Intral Individual Theory). ಮನೋ ಸಾಮಾಜಿಕ ಸಿದ್ಧಾಂತ (Socio Psychological Theory). ಸಮಾಜೋ ಸಾಂಸ್ಕೃತಿಕ ಸಿದ್ಧಾಂತ (Socio Cultural Theory) ಎಂದು Gellel and Strausರವರು ೧೯೭೩ರಲ್ಲಿ ಪ್ರಸ್ತಾಪಿಸಿದರು. ನಂತರ ಇದೇ ವರ್ಷದಲ್ಲಿ Barnett, Mileer - Perrim and Perrim ಎನ್ನುವವರು ಮೈಕ್ರೊ ಓರಿಯೆಂಟೆಡ್ ಮತ್ತು ಮ್ಯಾಕ್ರೊ ಓರಿಯೆಂಟೆಡ್ ಥೇರಿಸ್ ಎಂದು ಅದೇ ವಿಶೇಷ ಲಕ್ಷಣಗಳನ್ನು ಹೊಂದಿರುವುದನ್ನು ಈ ಸಿದ್ಧಾಂತಗಳಡಿಯಲ್ಲಿ ಪ್ರತಿಪಾದಿಸುತ್ತಾರೆ. ಈ ಬಗೆಯನ್ನು ಬಹುತೇಕ ಚಿಂತಕರು ಬಳಸಿದ್ದಾರೆ. ಇತ್ತಿಚೀನ ದಿನಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಮಾದರಿಗಳು

ಬಹುಮುಖಿ ಆಯಾಮಗಳಲ್ಲಿ ಬಳಕೆಯಾಗುತ್ತಿರುವುದು ನಿಶ್ಚಿತವಾಗಿದ್ದು, ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿದೆ. ಈ ಅಧ್ಯಯನದಲ್ಲಿ ಮೈಕ್ರೊ ಓರಿಯೆಂಟೆಡ್ ಸಿದ್ಧಾಂತವು ಒಳಗೊಂಡಿರುವ ಸಾಮಾಜಿಕ ಕಲಿಕಾ ಸಿದ್ಧಾಂತ ಮತ್ತು ಮ್ಯಾಕ್ರೊ ಓರಿಯೆಂಟೆಡ್ ಥೇರಿಸ್ ಒಳಗೊಂಡಿರುವ ಸ್ತ್ರೀವಾದಿ ಸಿದ್ಧಾಂತವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಲಾಗುತ್ತಿದೆ.

**ಸಾಮಾಜಿಕ ಕಲಿಕಾ ಸಿದ್ಧಾಂತ**

ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಚೌಕಟ್ಟನ್ನು ವ್ಯಾಖ್ಯಾನಿಸುವಲ್ಲಿ ಸಾಮಾಜಿಕ ಕಲಿಕಾ ಸಿದ್ಧಾಂತವು ಹೆಚ್ಚು ಜನಪ್ರಿಯತೆಯನ್ನು ಪಡೆದಿದೆ. ದೌರ್ಜನ್ಯಕ್ಕೆ ತೆರೆದುಕೊಂಡವರು ಮತ್ತು ಅನುಭವಿಸಿದವರೀರ್ವರ ವೈಯಕ್ತಿಕ ಕಲಿಕೆಯು ಹೇಗೆ ಅವರ ವರ್ತನೆಗಳುದ್ದಕ್ಕೂ ಸೂಚಿಸುತ್ತವೆಯೆಂಬುದನ್ನು ಮುಖ್ಯವಾಗಿ ಪರಿಗಣಿಸುತ್ತದೆ. ಈ ಮಾದರಿ ಪರಿಕಲ್ಪನೆಯ ದೃಷ್ಟಿಕೋನದ ಪ್ರಭಾವದಿಂದ ಅಪರಾಧಿಯ ವರ್ತನೆಗಳನ್ನು ನೋಡುವ ಕೆಲಸ ಮೊದಲಿನಿಂದಲೂ ನಡೆದಿದೆ. ಸಾಮಾಜಿಕ ಕಲಿಕಾ ಸಿದ್ಧಾಂತವು ಶಾಸ್ತ್ರೀಯವಾದ ಮತ್ತು ಪ್ರಮುಖ ಪರಿಕಲ್ಪನೆಗಳನ್ನು ಬಳಸಲು ಈಗಾಗಲೇ ಮನೋವೈಜ್ಞಾನಿಕ ಜ್ಞಾನಶಿಸ್ತಿನಿಂದ ನಿರ್ಬಂಧಿತವಾಗಿದೆ. ಉತ್ತೇಜನ ಮತ್ತು ಜವಾಬ್ದಾರಿಗಳ ಸಂಯೋಜನೆಯಲ್ಲಿ ಕಲಿಕೆಯು ಸಾಗುತ್ತದೆ. ಈ ಕಲಿಕೆಯು ಸಂಭವಿಸಿದಂತೆಲ್ಲಾ ವರ್ತನೆಗಳು ಭದ್ರವಾಗುತ್ತವೆ. ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಈ ಸಿದ್ಧಾಂತವನ್ನು ಅನ್ವಯಿಸುವುದಾದರೆ, ದೌರ್ಜನ್ಯವು ತಲೆಮಾರುಗಳಿಂದಲೂ ಎಲ್ಲೆಡೆಯೂ ಸಂಚರಿಸುತ್ತಲೇ ಇದೆ. ಹಾಗೂ ಇದು ಕುಟುಂಬದೊಳಗಿನ ಸಾಮಾಜೀಕರಣದ ಚೌಕಟ್ಟಿನೊಳಗೆ ಕಲಿಯಲ್ಪಡುತ್ತದೆ. ಕುಟುಂಬವೇ ಇದರ ಪ್ರಾಥಮಿಕ ಮಧ್ಯವರ್ತಿಯೆಂದು ಹೇಳಲಾಗುತ್ತದೆ. ಕುಟುಂಬ ಮೂಲದಿಂದ ವಿಶೇಷವಾಗಿ ಯಾರು ದೌರ್ಜನ್ಯವನ್ನು ಅನುಭವಿಸಿದ್ದಾರೊ ಮತ್ತು ನಡೆವ ದೌರ್ಜನ್ಯಗಳಿಗೆ ಸಾಕ್ಷಿಯಾಗಿದ್ದಾರೊ, ಅವರು ಈ ದೌರ್ಜನ್ಯದ ವ್ಯೂಹ ರಚನೆಯನ್ನು ಸ್ಥೂಲವಾಗಿಯೂ ಅರಿತಿರುತ್ತಾರೆ. 'ಸ್ವಕೇಂದ್ರಿತ' ಚಿಂತನೆಯನ್ನು ಹೊಂದಿದ ಜೀವಿ ತನ್ನದನ್ನು ಈಡೇರಿಸಿಕೊಳ್ಳಲು ಹಿಂಸೆ - ದೌರ್ಜನ್ಯವನ್ನು ಅಸ್ತ್ರವಾಗಿ ಬಳಸುತ್ತಾನೆ. ಸ್ಪೌಸ್ ಮತ್ತು ಸಂಯೋಜಕರು ಪ್ರತಿಯೊಂದು ತಲೆಮಾರುಗಳು ಸಹ ಸಮಾಜ ನಿರ್ಮಿತ ಕೌಟುಂಬಿಕ ವ್ಯವಸ್ಥೆಯಲ್ಲಿ ಒಡನಾಡುವುದರಿಂದ, ದೌರ್ಜನ್ಯದ ನಿರಂತರ ಪ್ರಕ್ರಿಯೆಗಳನ್ನು ಸಾಮಾನ್ಯ ಸಂಗತಿಗಳೆಂಬತೆ ಕಲಿಯುತ್ತಾರೆ. ಕೌಟುಂಬಿಕ ಪಾತ್ರಗಳಲ್ಲಿ ಬರುವ ಯಜಮಾನ-ಅಧೀನ ನೆಲೆಯ ಪಾತ್ರಗಳಲ್ಲಿ ಸಹಜವೆನ್ನುವಂತೆ ಕಂಡು ಬರುವ ದೌರ್ಜನ್ಯವು ಸ್ವೀಕಾರಾರ್ಹವೆಂದು ಸಮ್ಮತಿಸಲ್ಪಡುವುದರಿಂದ ಕುಟುಂಬವೇ ದೌರ್ಜನ್ಯದ ತರಬೇತಿ ಕೇಂದ್ರವಾಗಿ ನಿಲ್ಲುತ್ತದೆ.

ಸಾಮಾಜಿಕ ಕಲಿಕಾ ಸಿದ್ಧಾಂತದ ಪ್ರಮುಖ ಪ್ರತಿಪಾದಕರಾದ ಅಲ್ಬರ್ಟ್ ಬಂಡುರಾ ಅವರು ದೌರ್ಜನ್ಯವನ್ನು ಪ್ರಾಥಮಿಕವಾಗಿ ಮೂರು ಮೂಲಗಳಿಂದ ಕಲಿಯಲಾಗುತ್ತದೆಯೆಂದು ಸೂಚಿಸುತ್ತಾರೆ.

೧. ಕುಟುಂಬ

೨. ಸಂಸ್ಕೃತಿ ಮತ್ತು ಉಪ ಸಂಸ್ಕೃತಿ

೩. ಮಾಧ್ಯಮ

ಇತ್ತೀಚಿನ ದಿನಗಳಲ್ಲಿ ಮಾಧ್ಯಮವು ವಿಶೇಷವಾದ ಪಾತ್ರವನ್ನು ವಹಿಸುತ್ತಿದೆ. ಮಾಧ್ಯಮದಲ್ಲಿ ಬಿಂಬಿಸಲಾಗುತ್ತಿರುವ ದೌರ್ಜನ್ಯದ ಚಟುವಟಿಕೆಗಳನ್ನು ಪುನರಾವರ್ತಿಸುವ ಮೂಲಕ ನೋಡುಗರನ್ನು ಗುರಿಯಾಗಿಸಿಕೊಂಡಿದೆಯಲ್ಲದೆ, ವೈಚಾರಿಕತೆಯಿಂದ ಹಿಂಸಾತ್ಮಕ ಕ್ರಿಯೆಗಳಿಗೆ ಬದ್ಧವಾಗಿರುವಂತೆ ಸ್ಪಷ್ಟವಾಗಿ ಚಿತ್ರಿಸಲಾಗುತ್ತದೆ. ಮಹಿಳೆಯರ ಸ್ಥಿರ ಮಾದರಿ ಪಾತ್ರಗಳನ್ನು ಮತ್ತು ಮಹಿಳಾ ವಿಷಯಗಳಿಗೆ ಸಂಬಂಧಿಸಿದಂತೆ ಮಿಥ್ಯಾ ಕಲ್ಪನೆಗಳನ್ನು ಸುದೀರ್ಘ ಕಾಲದವರೆಗೆ ಮುಂದುವರಿಸುತ್ತಿದೆ. ಉದಾ:- ಪುರುಷರಿಬ್ಬರ ಮಧ್ಯದ ಯಾವುದೋ ಕಲಹದಿಂದಾದ ದ್ವೇಷವನ್ನು ತೀರಿಸಿಕೊಳ್ಳಲು ಅವರಿಗೆ ಸಂಬಂಧಿಸಿದ ಹೆಂಗಸಿನ ಮೇಲೆ ಆಕ್ರಮಣವೆಸಗುವುದು, ಅತ್ಯಾಚಾರವೆಸಗುವುದು, ಅವಹೇಳನ ಮಾಡುವುದು, ವಾಸ್ತವದಲ್ಲಿಯೂ ಇತ್ಯಾದಿ. ಇದನ್ನು ಜಾತಿ, ಧರ್ಮ, ಕೋಮುಗಲಭೆಗಳಲ್ಲಿ ಕಾಣಬಹುದು, ಗೋಧ್ರಾಹತ್ಯೆಯಂತಹ ಗಲಭೆಗಳಲ್ಲಿ ಮಹಿಳೆಯರ ಮೇಲಾದ ಆಕ್ರಮಣಗಳು ಈ ಸಂಗತಿಯನ್ನು ಹೆಚ್ಚು ಖಚಿತಪಡಿಸುತ್ತದೆ.

ಸಾಮಾಜಿಕ ಕಲಿಕಾ ಸಿದ್ಧಾಂತವು ಬಹುಪಾಲು ಜನರ ಒಪ್ಪಿಗೆಯನ್ನು ಪಡೆದಿದೆಯಾದರೂ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಸಂಗತಿಗಳನ್ನು ಹೆಚ್ಚು ವಿಶೇಷಣಾತ್ಮಕವಾಗಿ ಪ್ರತಿಪಾದಿಸುವುದಿಲ್ಲ. ಬಾಲ್ಯದಲ್ಲಿ ಹಿಂಸೆಯನ್ನು ಅನುಭವಿಸಿದವರು, ಸಾಕ್ಷಿಯಾದವರೆಲ್ಲರೂ ಹಿಂಸಾತ್ಮಕವಾಗಿರುತ್ತಾರೆಂದು ಸೂಚಿಸಿರುವುದರಿಂದ ಈ ಸಿದ್ಧಾಂತವು ಅತೃಪ್ತಿಕರವೆಂದು ಹೇಳಲಾಗುತ್ತದೆ. ಕಾಫ್‌ಮೆನ್ ಎನ್ನುವ ಚಿಂತಕರು ಹೆಚ್ಚು ತಲೆಮಾರುಗಳೊಳಗೆ ದೌರ್ಜನ್ಯವು ಸಂಚರಿಸುವುದು ಕೇವಲ ೩೦ ಪ್ರತಿಶತ ಮಾತ್ರ ಮತ್ತು ೨/೩ರರಷ್ಟು ಜನರು ಹಿಂಸೆಯನ್ನು ಯಾರು ಅನುಭವಿಸಿರುವವರೋ, ಸಾಕ್ಷಿಯಾಗಿರುವವರೋ ಅವರು ಸುದೀರ್ಘ ಅವಧಿಯವರೆಗೆ ದೌರ್ಜನ್ಯವನ್ನು ಸೂಚಿಸುವುದಿಲ್ಲವೆಂದು ಹೇಳಿದ್ದಾರೆ. ಸಾಮಾಜಿಕ ಕಲಿಕಾ ಸಿದ್ದಾಂತದ ದೃಷ್ಟಿಕೋನದುದ್ದಕ್ಕೂ ಅವರ ಸಿದ್ಧಾಂತದಿಂದ ಎಲ್ಲ ಬಗೆಯ ದೌರ್ಜನ್ಯವನ್ನು ಪರಿಗಣಿಸಿ ಕಾರಣಗಳನ್ನು ಒದಗಿಸಿಲ್ಲವೆಂದು ಸೂಚಿಸುತ್ತದೆ. ಬಹುಮುಖ್ಯವಾದ ಹೊಣೆಗಾರಿಕೆಯ ಅಂಶವನ್ನು ಇದು ಉಳಿಸಿಕೊಂಡಿದೆ.

ಸಾಮಾಜಿಕ ಕಲಿಕಾ ಸಿದ್ಧಾಂತವು ಬಲಿಪಶುಗಳಾದವರು ಮತ್ತು ಅಪರಾಧಿಗಳ ಮಧ್ಯದ ಸಂಭಾಷಣೆಯನ್ನಾಧರಿಸಿ ಅವರು ದೌರ್ಜನ್ಯದ ಮುಂದುವರಿಕೆಯಲ್ಲಿ ಹೇಗೆ ಕೊಡುಗೆಯಾಗಿದ್ದಾರೆಂಬುದನ್ನು ಪರಿಶೀಲಿಸಲು ಬಳಸಬಹುದಾಗಿದೆ (Walker, 1984).[೨] ಉದಾ:- ಕಲಿಕೆಯಲ್ಲಿ 'ಅಸಹಾಯಕತೆ' ಎಂಬ ಪದ ಬಳಕೆಯ ಚರ್ಚೆಯನ್ನಾಧರಿಸಿ ಮಹಿಳೆಯರು ಯಾಕೆ? ದುರಾಚಾರದ ಸಂಬಂಧಗಳನ್ನು ಬಿಟ್ಟು ಬರುವುದು ಕಷ್ಟಕರವಾಗುತ್ತದೆ. ಇಲ್ಲಿ Walker ಅವರ ಪ್ರತಿಪಾದನೆಯೆಂದರೆ ಮಹಿಳೆಯರು ಅಸಂಬದ್ಧ ದುರಾಚಾರದ ಸಂಗತಿಗಳ ವರ್ತನೆಗಳನ್ನು ನಿಯಂತ್ರಿಸುವ ಪ್ರಯತ್ನ ಮಾಡುವುದಿಲ್ಲ ಅಥವಾ ಅವರನ್ನು ತ್ಯಜಿಸುವುದಿಲ್ಲವೇಕೆ? ಎಂಬುದಕ್ಕೆ ಉತ್ತರವಾಗಿ ಕಲಿಕೆಯಲ್ಲಿನ 'ಅಸಹಾಯಕತೆ'ಯ ಅನುಭವಗಳನ್ನು ಹೇಳುತ್ತಾರೆ. ಅಸಹಾಯಕತೆಯ ಆಲೋಚನೆಯೇ ಹಿಂಸಾತ್ಮಕ ಸಂಬಂಧಗಳೊಂದಿಗೆ

ಜೀವಿಸುತ್ತಾಳೆಂಬ ಪ್ರಶ್ನೆ ಸಾಮಾನ್ಯವಾಗಿ ಕೇಳಲಾಗುತ್ತದೆ. ಇದಕ್ಕೆ ಫಲಿತವೆನ್ನುವಂತೆ ಮಹಿಳೆಯು ಸಂಪೂರ್ಣವಾಗಿ ಅವಳ ಸಾಮಾಜಿಕ ಸಂದರ್ಭವನ್ನು ಆರೋಪಿಸುತ್ತಾಳೆ. ಕೆಲವು ವಕೀಲರು ಈ ಸಂಬಂಧಿತ ಸಂಗತಿಗಳನ್ನು ಆಧರಿಸಿ ತಕ್ಷಣಕ್ಕೆ ಪ್ರತಿಕ್ರಿಯಿಸುವುದೆಂದರೆ ಈ ಕ್ಷೇತ್ರದಲ್ಲಿನ ಸ್ತ್ರೀವಾದಿ ಚಿಂತಕರು ಮತ್ತು ಚಳುವಳಿಗಾರರು ಈ ಒಟ್ಟು ಆರೋಪವನ್ನು ಒಬ್ಬ ಮಹಿಳೆಯ ಬದಲಾಗಿ ಪುರುಷ ಪ್ರಧಾನ ಸಾಮಾಜಿಕ ಸಂರಚನೆಯ ಮೇಲೆ ಹೇರಲು ಪ್ರಯತ್ನಿಸುತ್ತಾರೆಂದು ಹೇಳಿದ್ದಾರೆ. ಇನ್ನಿತರ ವಿಮರ್ಶೆಗಳು, ಹೀಗೆ ಕಲಿಸಲಾಗುವ ಅಸಹಾಯಕತೆಯನ್ನು ವಿವರಿಸುವ ಗೋಜಿಗೆ ಹೋಗದೆ ಸಾಕಷ್ಟು ಮಹಿಳೆಯರು ಹಿಂಸಾತ್ಮಕ ಸಂಗತಿಗಳಿಂದ, ಸಂಬಂಧಗಳಿಂದ ಹೊರಬಂದು ಸಮರ್ಥವಾಗಿ ಬದುಕುತ್ತಿರುವ ಉದಾಹರಣೆಗಳನ್ನು ಮುಂದಿಡುತ್ತವೆ. ಇಲ್ಲಿ ವಕೀಲರು ಸ್ತ್ರೀವಾದಿ ಚಿಂತಕರು ಮತ್ತು ಚಳುವಳಿಗಾರರನ್ನು ಆರೋಪಿಸುವುದನ್ನಾಧರಿಸಿದರೆ, ಯಾವುದೋ ಬೆರಳೆಣಿಕೆಯ ಸಂಗತಿಗಳನ್ನು ಒಟ್ಟು ಮಹಿಳಾ ಸಮುದಾಯಕ್ಕೆ ಅನ್ವಯಿಸುವುದು ಸೂಕ್ತವಲ್ಲ. ಹಾಗೆಯೆ ಮಹಿಳಾ ಸಾಧನೆಯ ಕುರಿತು ಹೇಳುವಾಗ ಕಲ್ಪನಾ ಚಾವ್ಲಾ, ಸಾನಿಯಾ ಮಿರ್ಜಾ, ಇಂದಿರಾಗಾಂಧಿಯನ್ನು ಪ್ರತಿನಿಧಿಸುವ ಮೂಲಕ ಒಟ್ಟು ಮಹಿಳೆಯರ ಸಾಧನೆಯನ್ನು ಅಳತೆ ಮಾಡುವುದು ಸರಿಯಾದ ಕ್ರಮವಲ್ಲ. ಆ ಮಹಿಳೆಯರಿಗೆ ದೊರೆತಿರುವ ಪರಿಸರ, ಕಲಿಕೆಯನ್ನಾಧರಿಸಿ ಅವಳ ವ್ಯಕ್ತಿತ್ವ ರೂಪಿಕೆಯಾದುದು ಎಂಬುದು ಗಮನಾರ್ಹ ಸಂಗತಿ. "ಕಲಿಸ್ಪಡುವ ಅಸಾಹಯಕತೆಯ ಪರಿಕಲ್ಪನೆಯು ಮಹಿಳೆಯನ್ನು ನಿಷ್ಕ್ರಿಯಳೆಂದು ಬಿಂಬಿಸುವುದಾಗಿದೆ ಮತ್ತು ಒಂಟಿ ಮಹಿಳೆಯ ಕ್ರಿಯಾಶೀಲತೆಯ ಸಹಾಯದತ್ತ ಶೋಧನೆ ಆರಂಭವಾಗಬೇಕೆಂಬುದು Bowker ಅವರ ಪ್ರತಿಪಾದನೆಯಾಗಿದೆ."[೨೦]

ವ್ಯಕ್ತಿಯ ವ್ಯಕ್ತಿತ್ವಗಳ ರೂಪಿಕೆಯಲ್ಲಿ ಸಾಮಾಜಿಕ ಕಲಿಕಾ ಸಿದ್ಧಾಂತವು ಬಹುಮುಖ್ಯ ಪಾತ್ರವನ್ನು ವಹಿಸುತ್ತದೆ. ಹಾಗಾಗಿಯೇ ಮಹಿಳೆಯರ ವಿರುದ್ಧ ಎಸಗುವ ಆಕ್ರಮಣಗಳನ್ನು ಮತ್ತು ಸಾಮಾಜಿಕ ಕಲಿಕೆಯನ್ನಾಧರಿಸಿ ಪ್ರತಿಪಾದಿಸುವ ಈ ಚಿಂತನೆಯು ಪ್ರಸ್ತುತ ಅಧ್ಯಯನಕ್ಕೆ ಹೆಚ್ಚು ಪೂರಕವಾಗಿ ನಿಲ್ಲುತ್ತದೆ.

## ಸ್ತ್ರೀವಾದಿ ಸಿದ್ಧಾಂತ

ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಕುರಿತು ಸ್ತ್ರೀವಾದಿ ವಿಶ್ಲೇಷಣೆಯೆಂದರೆ ಪುರುಷ ಪ್ರಧಾನ ಸಂಸ್ಕೃತಿಯಲ್ಲಿ ಲಿಂಗಸಂಬಂಧಿಯಾಗಿ ಸಂರಚನೆಗೊಂಡ ಅಧಿಕಾರದ ಸಂಬಂಧಗಳ ಮಧ್ಯದಲ್ಲಿ ಮಹಿಳೆಯನ್ನು ಕೇಂದ್ರವಾಗಿರಿಸಿಕೊಂಡು ಅಧ್ಯಯನ ಮಾಡುವುದು ಹಾಗೂ ಪುರುಷ ಪ್ರಧಾನ ಸಮಾಜದ ಸಂರಚನೆಯ ಐತಿಹಾಸಿಕ ಹಿನ್ನೆಲೆಯನ್ನು ಮತ್ತು ಸಾಮಾಜೀಕರಣದಲ್ಲಿ ಅಂತರ್ಗತಗೊಳಿಸಲಾಗುವ ಸ್ತ್ರೀ-ಪುರುಷರ ಸ್ಥಿರ ಮಾದರಿ ಪಾತ್ರಗಳು ಅಥವಾ ಲಿಂಗ ನಿರ್ದಿಷ್ಟ ಪಾತ್ರಗಳೇ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಇರುವ ಕಾರಣಗಳ ಪ್ರಧಾನ ಲಕ್ಷಣಗಳಲ್ಲಿ ಒಂದಾಗಿದೆ. ಇದನ್ನೇ ಸಂಶೋಧಕರು ಸಾಂಪ್ರದಾಯಿಕ ವಿವಾಹಗಳಲ್ಲಿ ಪುರುಷ ಪ್ರಧಾನತೆಯು ಉಳಿಸಿಕೊಂಡು ಬಂದಿರುವ ತಂತ್ರಗಾರಿಕೆಯೆಂದು

ಹೇಳಿದ್ದಾರೆ. ಈ ದೌರ್ಜನ್ಯದ ಕುರಿತ ಸ್ತ್ರೀವಾದಿಗಳ ವಿವರಣೆಯೆಂದರೆ ಪುರುಷ ಪ್ರಧಾನತೆ ಮತ್ತು ಸಾಂಸ್ಕೃತಿಕ ಸಿದ್ಧಾಂತಗಳ ಮಧ್ಯೆ ಇರುವ ಸಂಬಂಧದತ್ತ ಹೆಚ್ಚು ಗಮನಹರಿಸುತ್ತದೆ. ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಮೂಲವೆಂದರೆ, ಸಾಮಾಜಿಕ ಸಂರಚನೆಯಲ್ಲಿ ಮಹಿಳೆಗೆ ದತ್ತವಾದ ಅಧೀನ ಸ್ಥಾನಮಾನ. ಈ ಅಧೀನತೆಯು ಸಾಂಪ್ರದಾಯಿಕ ಕುಟುಂಬ ಮತ್ತು ಸಂಸ್ಕೃತಿಯ ಪೂರ್ವಾರ್ಜಿತವಾಗಿದೆ. ಈ ಹಿನ್ನೆಲೆಯಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಸ್ಪಷ್ಟಗೊಳಿಸಬೇಕಾದರೆ ಪುರುಷ ಪ್ರಧಾನ ವ್ಯವಸ್ಥೆಯ ಐತಿಹಾಸಿಕ ಹಿನ್ನೆಲೆಯಿಂದ ಮತ್ತು ಅದಕ್ಕೆ ಅಡ್ಡಿಯಾಗಿರುವ ಸಾಂಸ್ಕೃತಿಕ ಕಾರಣಗಳಿಂದ ಹೊರಬರುವ ಅಗತ್ಯತೆಯನ್ನು ಹೇಳುತ್ತದೆ. ಮಹಿಳೆಯರನ್ನು ದಮನಗೊಳಿಸುವ ಪುರುಷಾಧಿಕಾರ ಮತ್ತು ಅದನ್ನು ಸಮರ್ಥಿಸುವ ಸಾಮಾಜಿಕ ನಿಯಂತ್ರಣವು ದೌರ್ಜನ್ಯದ ವಿಧಾನಗಳಲ್ಲೊಂದಾಗಿದೆ. ದೌರ್ಜನ್ಯವಿಲ್ಲದ ಸ್ಥಳ ನಿರ್ಮಾಣವಾಗುವುದು ಕೇವಲ ಸಮಾನತಾ ಪ್ರತಿಪಾದಕ ಸಮಾಜಗಳಲ್ಲಿ, ಸ್ತ್ರೀವಾದಿ ದೃಷ್ಟಿಕೋನವನ್ನಿರಿಸಿಕೊಂಡು ಹೊರಟಿರುವ ಬೇರೆ ಬೇರೆ ಸಂಶೋಧನೆಗಳು ಹೇಳುವಂತೆ 'ದಾಂಪತ್ಯ ವಿಷಯ ಸಂಬಂಧಿತ ದೌರ್ಜನ'ಗಳನ್ನು ಎದುರಿಸುತ್ತಿರುವುದರ ಮೂಲವು ವಿವಾಹಗಳಲ್ಲಿರುವ ಅಸಮಾನತೆ ಮತ್ತು ಸಹ ಸಂಬಂಧಗಳಲ್ಲಿಯೇ ನಡೆಯುವ ವಿವಾಹಗಳೇ ಕಾರಣವೆಂದು ಸಲಹೆ ಮಾಡಿದ್ದಾರೆ. ಅಸಮಾನ ಸಾಮಾಜಿಕ ವ್ಯವಸ್ಥೆಯಲ್ಲಿ ಅತ್ಯಾಚಾರದ ಹೊಣೆಯು ಪುರುಷನದೇ ಆದರೂ, ಅದನ್ನು ಮರೆಮಾಚುವುದರೊಂದಿಗೆ, ಅದರ ಪರಿಣಾಮ ಮತ್ತು ಆರೋಪಗಳಿಂದ ಅದರ ಹೊಣೆಗಾರಿಕೆಯನ್ನು ಮಹಿಳೆಗೆ ಹೇರಲಾಗಿದೆ. ಇವೆಲ್ಲದರ ಪರಿಣಾಮವಾಗಿ ಸ್ತ್ರೀವಾದಿ ಚಿಂತನೆಗಳು, ಅತ್ಯಾಚಾರ ಕೇವಲ ಲೈಂಗಿಕ ತೃಪ್ತಿಯಷ್ಟೇ ಅಲ್ಲ. ಅದು ಕೇವಲ ಪ್ರಾಥಮಿಕ ಉದ್ದೇಶವಷ್ಟೇ. ಅತ್ಯಾಚಾರದ ನೈಜತೆಯೆಂದರೆ ಒಂದು ವಸ್ತುವಿನ ಮೇಲೆ ನಿಯಂತ್ರಣ ಸಾಧಿಸುವುದು ಹಾಗೂ ದಬ್ಬಾಳಿಕೆಗೊಳಪಡಿಸುವುದು ಎಂಬ ನಿಲುವನ್ನು ತಾಳಿದ್ದಾರೆ.

ಪುರುಷ ಪ್ರಧಾನ ಪರಿಕಲ್ಪನೆಯೇ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಮೂಲ ಕಾರಣ ಮತ್ತು ಜವಾಬ್ದಾರಿ. ಅದು ನಾಶವಾಗದಂತೆ ನಿತ್ಯ ದಮನವನ್ನು ಪ್ರೋತ್ಸಾಹಿಸಿ ಪ್ರಭಾವಗೊಳಿಸುವಂತೆ ಮಹಿಳೆಯರನ್ನು ರೂಪಿಸಲಾಗುತ್ತಿಯೆಂಬುದು ಸ್ತ್ರೀವಾದದ ವಿವರಣೆಯಾಗಿದೆ.

ಡ್ಯೂಮ್ ಎನ್ನುವ ಚಿಂತಕರು ಪುರುಷ ಪ್ರಧಾನತೆಯ ಪರಿಕಲ್ಪನೆಗನುಗುಣವಾಗಿ, ಸಮಾಜ ವ್ಯವಸ್ಥೆಯಲ್ಲಿ ಪುರುಷ ದಬ್ಬಾಳಿಕೆ ಹಾಗೂ ವಿಶೇಷ ಪ್ರಯೋಜನಗಳನ್ನು ಒದಗಿಸುವುದು ಬಹಳ ಸಾಮಾನ್ಯವಾದಂತಹ ಸಂಗತಿ. ಪುರುಷ ಪ್ರಧಾನತೆಯ ಪರಿಕಲ್ಪನೆಯಿಂದ ಮುಂದುವರೆದು ಅದನ್ನಾಧರಿಸಿ ರಚಿತವಾಗುವ ಪುರುಷ ಪ್ರಧಾನ ಸಂರಚನೆಯೇ ದೌರ್ಜನ್ಯಕ್ಕೆ ಮೂಲ ಕಾರಣವೆಂದು ಅಭಿಪ್ರಾಯ ಪಡುತ್ತಾರೆ (ಉಲ್ಲೇಖ: ಎ ರಿಸೋರ್ಸ್ ಹ್ಯಾಂಡ್ ಬುಕ್ ಆಫ್ ವೈಯಲೆನ್ಸ್ ಅಗೆಸ್ಟ್ ವುಮೆನ್).[೧೪]

ಒಟ್ಟಾರೆಯಾಗಿ ಈ ಎರಡು ಸಿದ್ಧಾಂತಗಳು ಪುರುಷ ಪ್ರಧಾನತೆ ಮತ್ತು ಅಲ್ಲಿನ ಸಾಮಾಜಿಕ ಕಲಿಕೆಯನ್ನು ಆಧರಿಸಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ವಿಸ್ತರಿಸುತ್ತವೆ. ಈ ಸಿದ್ಧಾಂತಗಳ

ತಳಹದಿಯನ್ನಾಧಾರಿಸಿ ಕೌಟುಂಬಿಕ ವಲಯದ ದೌರ್ಜನ್ಯ-ಸಾರ್ವಜನಿಕ ವಲಯದಲ್ಲಿ ವಿಸ್ತೃತವಾಗುತ್ತದೆಯೆಂಬುದಕ್ಕೆ, ಕೌಟುಂಬಿಕ ದೌರ್ಜನ್ಯದ ಸ್ವರೂಪವನ್ನು ಇಲ್ಲಿ ಚರ್ಚೆಗೆತ್ತಿಕೊಳ್ಳಲಾಗಿದೆ.

**೨.೪. ಕೌಟುಂಬಿಕ ವಲಯದಲ್ಲಿ ಹಿಂಸೆ ಮತ್ತು ದೌರ್ಜನ್ಯ**

ಯಾಜಮಾನ್ಯ ಮತ್ತು ಅಧೀನ ನೆಲೆಯನ್ನು ಪ್ರತಿಷ್ಠಾಪಿಸುವ ಕೌಟುಂಬಿಕ ವಲಯ ಸಮಾಜದ ಪ್ರಮುಖವಾದ ಭಾಗ. ಮಹಿಳೆಯ ಬದುಕಿನ ರಕ್ಷಣಾ ಕೇಂದ್ರವೆಂದು ಭ್ರಮೆಯನ್ನು ಸೃಷ್ಟಿಸಲಾದ ಕೌಟುಂಬಿಕ ವಲಯ, ವ್ಯಕ್ತಿಯ ವ್ಯಕ್ತಿತ್ವ ರೂಪಿಕೆಯ ತಳಹದಿ. ಮಹಿಳೆಯ ಲೈಂಗಿಕತೆಯನ್ನು ಅಧೀನಗೊಳಿಸಲೆಂದೇ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ರೂಪಿತಗೊಂಡ ಈ ಸಂಸ್ಥೆಯು 'ಲಿಂಗ ತಾರತಮ್ಯ'ವನ್ನು ಹುಟ್ಟು ಹಾಕುವುದರೊಂದಿಗೆ ಅದನ್ನು ಸ್ಥಿರೀಕರಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಅಲೆಮಾರಿ ಸಮುದಾಯಗಳಲ್ಲಿ ವಾಸಿಸುತ್ತಿರುವ ಸ್ತ್ರೀ-ಪುರುಷರು ಕಾಲಾನಂತರದಲ್ಲಿ ಕುಟುಂಬ ವ್ಯವಸ್ಥೆಗೆ ಸೀಮಿತಗೊಂಡರು. ನಾಗರಿಕತೆಯು ಬೆಳೆದಂತೆಲ್ಲಾ ಸಾಮಾಜಿಕ ವ್ಯವಸ್ಥೆಯು ಸಂಪೂರ್ಣವಾಗಿ ಪುರುಷನ ಕಪಿಮುಷ್ಠಿಯಲ್ಲಿ ಸೇರಿ ಮಹಿಳೆಗೆ ಹಕ್ಕುಗಳನ್ನು ನಿರಾಕರಿಸಿ, ಬಾಧ್ಯತೆಯನ್ನು ಮಾತ್ರ ಒದಗಿಸಲಾಯಿತು. ೬೦ರ ದಶಕದಿಂದಿಚೆಗೆ ಬೆಳೆದು ಬಂದ ಸ್ತ್ರೀವಾದಿ ಚಿಂತನಾಕ್ರಮವು ಮಹಿಳಾ ಬದುಕನ್ನು ಕೇಂದ್ರೀಕರಿಸಿಕೊಂಡು ಸಮಾಜ ವ್ಯವಸ್ಥೆಗೆ ಮುಖಾಮುಖಿಯಾಗಲಾರಂಭಿಸಿದಳು. ಸಮಾಜದ ಬಹುಪಾಲು ಸಂಗತಿಗಳಲ್ಲಿ ಅದೃಶ್ಯಗೊಳಿಸಲಾದ ಮಹಿಳೆಯ ಅಸ್ತಿತ್ವದ ಶೋಧನೆಯು ಪ್ರಾರಂಭವಾದಾಗಲೆ, ಕುಟುಂಬವು ರಕ್ಷಣೆಯನ್ನೊದಗಿಸುವ ಮತ್ತು ಮಹಿಳೆಯದೇ ವಲಯವೆಂದು ಶತಮಾನಗಳ ಕಾಲ ಭ್ರಮೆಯನ್ನು ಸೃಷ್ಟಿಸಲಾಗಿದೆಯೆಂಬ ಸತ್ಯವನ್ನು ತೀವ್ರವಾದಿ ಸ್ತ್ರೀವಾದಿಗಳು ಅನಾವರಣಗೊಳಿಸಿದರು.

ನಂತರದಲ್ಲಿ ಹಲವಾರು ಚಿಂತನೆಗಳು ಬೆಳೆದು ಬಂದರೂ ಕೌಟುಂಬಿಕ ದೌರ್ಜನ್ಯವನ್ನು ಗಂಭೀರವಾದ ಸಮಸ್ಯೆಯನ್ನಾಗಿ ಪರಿಗಣಿಸಿರುವುದು ತೀರಾ ಇತ್ತೀಚಿನ ಸಂದರ್ಭಗಳಲ್ಲಿ. 'ಕುಟುಂಬ'ವೆನ್ನುವುದು ತೀರಾ ಖಾಸಗಿಯಾದ ವಲಯ, ಇಲ್ಲಿನ ಸಂಗತಿಗಳು ಹೊರಗೆಡಹುವುದೇ ಅಪರಾಧ. ಅದರಲ್ಲೂ ಸಂಸ್ಕೃತಿ, ಮರ್ಯಾದೆ ಕಾಪಾಡುವ ನೆಪದಲ್ಲಿ ವಿಶೇಷವಾಗಿ ಮಹಿಳೆಯ ಮೇಲೆ ಈ ಹೊಣೆಯನ್ನು ಹೊರಿಸಲಾಗಿದೆ. ಹಾಗಾಗಿ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆ ನಿರಂತರವಾಗಿ ದಮನವನ್ನು ಅನುಭವಿಸುತ್ತಿದ್ದರೂ ಅದನ್ನು ಹೊರಹಾಕುವಂತಹ ಸಾಹಸಕ್ಕೆ ಮುಖಮಾಡುವುದಿಲ್ಲ. ಪ್ರಾಚೀನ ಸಮಾಜ ವ್ಯವಸ್ಥೆಯಲ್ಲಿನ ಮಹಿಳಾ ಬದುಕಿಗೆ ಹೋಲಿಸಿದರೆ ಇವತ್ತಿನ ಮಹಿಳೆಯ ಬದುಕು ಬಹುಪಾಲು ಉತ್ತಮವೆನ್ನುವುದು ಸಂಶಯಾಸ್ಪದ ಸಂಗತಿಯೆ. ಶತಮಾನಗಳಿಂದಲೂ ಆಳವಾಗಿ ಬೇರು ಬಿಟ್ಟಿರುವ ಪುರುಷ ಪ್ರಧಾನ ಸಂಸ್ಕೃತಿಯು ಕಾಲ ಕಳೆದಂತೆ ತನ್ನ ಸ್ವರೂಪವನ್ನು ಬದಲಿಸುತ್ತಿದೆಯೇ ವಿನಃ ನಶಿಸಿ ಹೋಗುತ್ತಿಲ್ಲ. ಹಾಗಾಗಿ ಆಧುನಿಕ ಸಮಾಜದ ವ್ಯವಸ್ಥೆಯಲ್ಲಿ ರೂಪು ತಳೆಯುತ್ತಿರುವ ಕುಟುಂಬಗಳಲ್ಲಿಯೂ ಸಹ ಗಣನೀಯವಾದ ಬದಲಾವಣೆಗಳೇನು ಕಂಡು ಬರುವುದಿಲ್ಲ.

ಆಧುನಿಕ ಮಹಿಳೆಯ ಪರಿಕಲ್ಪನೆಯೇ ಪಿತೃ ಸಂಸ್ಕೃತಿ ರೂಪಿಸಿದ ಹೊಸ ಮಾದರಿಯ ಸಂಕೋಲೆಯಾಗಿದೆ. ಸಮಾಜ ವ್ಯವಸ್ಥೆಯಲ್ಲಿನ ಹಲವು ಬಗೆಯ ದೌರ್ಜನ್ಯಗಳಲ್ಲಿ ಕೌಟುಂಬಿಕ ಹಿಂಸೆಯು ಅತ್ಯಂತ ಸಂಕೀರ್ಣವಾದುದು. ಅಧಿಕಾರ ಮತ್ತು ಅಧಿಕಾರ ಹೀನತೆಯ ಮಧ್ಯೆ ಬಹು ಮುಖ್ಯವಾಗಿ ಕಾಣುವ ಹಿಂಸೆ - ದೌರ್ಜನ್ಯಗಳು ಕೌಟುಂಬಿಕ ಸಂಬಂಧಗಳಲ್ಲಿನ ಅಧಿಕಾರ ಸಂರಚನೆಯಲ್ಲಿ ಹೆಚ್ಚು ಸ್ಪಷ್ಟವಾಗಿ ಕಾಣಬಹುದಾಗಿದೆ. ಭಾರತೀಯ ಸಂಸ್ಕೃತಿಯಲ್ಲಿ ಕುಟುಂಬ ವ್ಯವಸ್ಥೆಯು ವಿಭಕ್ತ-ಅವಿಭಕ್ತ ಕುಟುಂಬಗಳ ಮಾದರಿಯಲ್ಲಿದೆ. ನಗರೀಕರಣ, ಜಾಗತೀಕರಣ, ಖಾಸಗೀಕರಣಗಳ ಪ್ರಭಾವದಿಂದ ವಿಭಕ್ತ ಕುಟುಂಬಗಳ ಸಂಖ್ಯೆಯು ಏರುತ್ತಲೇ ಇವೆ. ಆದರೆ ಸ್ತ್ರೀಕೇಂದ್ರಿತವಾಗಿ ಕುಟುಂಬಗಳನ್ನು ಪರಿಶೀಲಿಸುವುದಾದರೆ ಯಾವುದೇ ಬಗೆಯ ಕುಟುಂಬ ವ್ಯವಸ್ಥೆಯೂ ಮಹಿಳೆಯ 'ಅಸ್ತಿತ್ವ' ರೂಪಿಕೆಗೆ ಸಹಕಾರಿಯಾಗಿಲ್ಲ. ಪ್ರಧಾನ ಲಿಂಗೀಯ ಚಿಂತನೆಗಳು. ಸಮಾಜ ವ್ಯವಸ್ಥೆಯಲ್ಲಿರುವುದರಿಂದ, ಅಧೀನ ಲಿಂಗೀಯವಾಗಿಸಿರುವ ಮಹಿಳೆ ನಿರಂತರವಾಗಿ ಅದೇ ಸ್ಥಾನದಲ್ಲಿ ಮುಂದುವರೆಯುವಂತೆ ರೂಪಿಸಿರುವ ವ್ಯವಸ್ಥೆಯು ಕುಟುಂಬದಲ್ಲಿದೆ. ಮಹಿಳೆಯು ಕೇವಲ ದೇಹ ಮತ್ತು ಅದರಿಂದೊದಗುವ ಸೇವೆಯನ್ನಾಧರಿಸಿಯೇ, ನಿರ್ವಚನಗೊಳ್ಳುವುದರಿಂದ, ಸಮಾಜ ವ್ಯವಸ್ಥೆಯಲ್ಲಿ ಅವಳ ಅವಿಧೇಯತೆಯನ್ನು ಸಹಿಸುವುದಿಲ್ಲ. ಆದರೆ ಈ ವಿಧೇಯತೆಯನ್ನು ಅನುಸರಿಸಿ, ಎಲ್ಲ ಬಗೆಯ ನಿರ್ಬಂಧಗಳನ್ನು ಒಪ್ಪಿ ನಡೆಯುತ್ತಿರುವಾಗಲೂ ಅವಳ ಬದುಕು ನಿರಾಳತೆಯಿಂದ ಕೂಡಿಲ್ಲ. ಇತರರ ಬದುಕಿಗೆ ಪೂರಕವಾಗಿ, ಅವರು ಸೂಚಿಸಿದಂತೆ ಬದುಕುವುದು ಸಹ ದೌರ್ಜನ್ಯದ ವ್ಯಾಖ್ಯಾನವನ್ನು ಪ್ರವೇಶಿಸುವುದರಿಂದ, ಮಹಿಳೆಯ ಬದುಕಿನ ಯಾವುದೇ ಅಂಶವು ಸಹ ಅವಳ ಇಚ್ಛೆಯನ್ನು ಆಧರಿಸಿದ್ದಲ್ಲ. ಅವಳ ಇಚ್ಛೆಯನ್ನು ಅರಿಯುವ ಪ್ರಶ್ನೆಯೂ ಸಹ ಪರಿಗಣನೆಗೆ ಬರುವುದಿಲ್ಲ. ಹೀಗಾಗಿ ಕೌಟುಂಬಿಕ, ಸಾರ್ವಜನಿಕ ಅಥವಾ ಒಟ್ಟು ಸಮಾಜ ವ್ಯವಸ್ಥೆಯಲ್ಲಿ ಅವಳ ಅಸ್ತಿತ್ವವು ದಮನವಾಗಿದೆ. ಪ್ರಪಂಚದಲ್ಲಿನ ಯಾವುದೇ ಮಹಿಳೆಯೂ ಸಹ ಕೌಟುಂಬಿಕ ಹಿಂಸೆಯ ಅನುಭವದಾಚೆಗೆ ಉಳಿದಿಲ್ಲವೆಂಬುದು ಸ್ಪಷ್ಟ.

ಸಾಮಾನ್ಯವಾಗಿ ಕುಟುಂಬದ ಚೌಕಟ್ಟಿನೊಳಗೆ ಲಿಂಗದ ಕಾರಣಕ್ಕಾಗಿಯೇ ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯವನ್ನು ಕೌಟುಂಬಿಕ ಹಿಂಸೆಯೆಂದು ಕರೆಯಬಹುದು. ಸಮಾಜ ವ್ಯವಸ್ಥೆಯಲ್ಲಿನ ಜಾತಿ, ವರ್ಗ, ವರ್ಣ ಎಲ್ಲ ಬಗೆಯ ಸೂಚಿತಗಳಲ್ಲಿಯೂ ಕಾಣಿಸಿಕೊಳ್ಳುವ ಮಹಿಳೆಯು ಕುಟುಂಬದಲ್ಲಿ ಅನುಭವಿಸುತ್ತಿರುವ ಹಿಂಸೆ - ದೌರ್ಜನ್ಯ ಸಂದರ್ಭಗಳು ಸಾಕಷ್ಟು ಕ್ರೂರವಾಗಿವೆ. ಮೊಟ್ಟ ಮೊದಲಿಗೆ ಕೌಟುಂಬಿಕ ಹಿಂಸೆ ವ್ಯಾಖ್ಯಾನವು ಯುನೈಟೆಡ್ ನೇಷನ್ಸ್ ರಚಿಸಿರುವ ಕೌಟುಂಬಿಕ ಹಿಂಸೆಯ ಮಾದರಿ ಶಾಸನ CEADWದ ವ್ಯಾಖ್ಯಾನವನ್ನು ಆಧರಿಸಿದೆ. ೧೯೯೯ರ ವರದಿ ಪ್ರಕಾರ ಕೌಟುಂಬಿಕ ಹಿಂಸೆ ಎಂದರೆ ಕೌಟುಂಬಿಕ ದೌರ್ಜನ್ಯದಲ್ಲಿ ಲಿಂಗತ್ವದ ಆಧಾರದ ಮೇಲೆ ದೈಹಿಕವಾಗಿ, ಮಾನಸಿಕವಾಗಿ ಮತ್ತು ಕುಟುಂಬದ ಮಹಿಳೆಯ ಮೇಲೆ ಮನೆಯ ಸದಸ್ಯರೆ ನಡೆಸುವ ಹಿಂಸೆ. ಇದು ಸಣ್ಣ ಬಡಿತದಿಂದ ಹಿಡಿದು ಕ್ರೂರವಾದ ದೈಹಿಕ ಹೊಡೆತ, ಅಪಹರಣ, ಬೆದರಿಕೆಯೊಡ್ಡುವುದು, ಬೈಗುಳ, ಆಸ್ತಿನಾಶ, ಲೈಂಗಿಕ ಕಿರುಕುಳ, ಬಲತ್ಕಾರ ವರದಕ್ಷಿಣೆ ಮತ್ತು ಅದಕ್ಕೆ ಸಂಬಂಧಪಟ್ಟಂತಹ ಹಿಂಸೆ, ಮನೆಯ

ಕೆಲಸಗಾರರ ಮೇಲಿನ ಆಕ್ರಮಣಗಳನ್ನು ಕೂಡಾ 'ಕೌಟುಂಬಿಕ ದೌರ್ಜನ' ಎಂದು ಅರ್ಥೈಸಲಾಗಿದೆ (ಉಲ್ಲೇಖ: ಕೌಟುಂಬಿಕ ಹಿಂಸೆ ಮತ್ತು ಮಹಿಳೆ).[೧೫] ಈ ವ್ಯಾಖ್ಯಾನವು ದೈಹಿಕ, ಮಾನಸಿಕ ಹಿಂಸೆಯನ್ನು ಮಾತ್ರ ಒಳಗೊಂಡಿದ್ದರೂ ಸಹಿತ ದೈಹಿಕ ಹಿಂಸೆಯತ್ತ ಹೆಚ್ಚಿನ ಗಮನವನ್ನು ಹರಿಸಿದೆಯೆಂಬುದು ಸ್ಪಷ್ಟವಾಗುತ್ತದೆ. ಮನೆಯ ಕೆಲಸಗಾರರ ಮೇಲೆ ನಡೆಯುವ ದೌರ್ಜನ್ಯವು ಸಾರ್ವಜನಿಕ ವಲಯದ ವ್ಯಾಪ್ತಿಯಲ್ಲಿ ಬರುತ್ತದೆಯಾದ್ದರಿಂದ ಕೌಟುಂಬಿಕ ಹಿಂಸೆಯಲ್ಲಿ ಸೇರಿಸುವುದು ಅಸಮರ್ಪಕವಾಗಿದೆ.

ಇಂಟರ್‌ನ್ಯಾಷನಲ್ ಕೌನ್ಸಿಲ್ ಫಾರ್ ರಿಸರ್ಚ್ ಆನ್ ವುಮೆನ್ (ICRW ೨೦೦೦) ಕೌಟುಂಬಿಕ ದೌರ್ಜನ್ಯವೆಂದರೆ, ಮಹಿಳೆಯ ವಿರುದ್ಧವಾಗಿ ಮೌಖಿಕ, ದೈಹಿಕ ಮತ್ತು ಮಾನಸಿಕ ಆಕ್ರಮಣಗಳನ್ನು ಒಳಗೊಂಡಿದೆ. ವಿಶೇಷವಾಗಿ ಇಲ್ಲಿ ಕುಟುಂಬದಲ್ಲಿರುವ ವೃದ್ಧ ಮಹಿಳೆಯರನ್ನು ಸಹ ಈ ವ್ಯಾಖ್ಯಾನದಲ್ಲಿ ಸೇರಿಸಲಾಗಿದೆ (ಉಲ್ಲೇಖ: ಎ ಡಿಫಿಕಲ್ಟ್ ಮ್ಯಾಚ್ ಆಫ್ ಡೊಮೆಸ್ಟಿಕ್ ವಯಲೈನ್ಸ್)[೧೬] ದೇವ್ ಮತ್ತು ಸೋಲಂಕಿ ಎನ್ನುವವರು ಇದನ್ನು "ವೈವಾಹಿಕ ಸಂಬಂಧಗಳಿಂದ ಅಥವಾ ಗಂಡನಿಂದಾಗಿ ಮಹಿಳೆಯ ವಿರುದ್ಧ ನಡೆಯುವ ಯಾವುದೇ ಕೃತ್ಯವು ಸಹ ಕೌಟುಂಬಿಕ ಹಿಂಸೆಯೇ ಆಗಿದೆ" ಎಂದು ಅಭಿಪ್ರಾಯಪಟ್ಟಿದ್ದಾರೆ. ವೈವಾಹಿಕ ಸಂಬಂಧಗಳು ಮತ್ತು ಗಂಡನನ್ನು ಮಾತ್ರ ಕೌಟುಂಬಿಕ ವ್ಯಾಪ್ತಿಯಲ್ಲಿರುವುದನ್ನು ಪರಿಗಣಿಸಿ ವ್ಯಾಖ್ಯಾನಿಸಲಾಗಿದೆ. ಕೌಟುಂಬಿಕ ಹಿಂಸೆಯಲ್ಲಿ ಕುಟುಂಬವೆಂದರೆ ಹುಟ್ಟಿದ ಮನೆ ಮತ್ತು ಗಂಡನ ಮನೆಯೆರಡನ್ನು ಸಹ ಪರಿಗಣನೆಗೆ ತೆಗೆದುಕೊಳ್ಳುವುದಿಲ್ಲ. ಗಂಡನ ಮನೆಯನ್ನು ಮಾತ್ರ ಕುಟುಂಬವೆಂದು, ಅಲ್ಲಿ ಮಾತ್ರ ಮಹಿಳೆಯ ಹಿಂಸೆಗೊಳಗಾಗುತ್ತಾಳೆಂಬ ಸೀಮಿತತೆಯನ್ನು ಸಾಕಷ್ಟು ಚಿಂತನೆಗಳು ಕಲ್ಪಿಸಿವೆ. ಪಿತೃ ಚಿಂತನೆಗಳ ಪ್ರಭಾವದಿಂದಾಗಿ ಮಹಿಳಾ ಸಂಬಂಧಿ ಚರ್ಚೆಯ ಪ್ರಸ್ತಾಪದಲ್ಲಿ 'ಕುಟುಂಬ'ವೆಂಬುದನ್ನು ಕೇವಲ ಗಂಡನ ಮನೆಯನ್ನಷ್ಟೇ ಪರಿಗಣಿಸುತ್ತಿರುವುದು ವಿಪರ್ಯಾಸ. ಈ ಬಗೆಯ ವ್ಯಾಖ್ಯಾನಗಳಿಂದಾಗಿ ಹುಟ್ಟಿದ ಮನೆಗಳಲ್ಲಿ ತಂದೆಯಿಂದಲೇ ಆಗುವ ಅತ್ಯಾಚಾರಗಳು ಅಥವಾ ಇತರರಿಂದ ಇತರೆ ಬಗೆಯಲ್ಲಾಗುವ ಹಿಂಸೆಗಳು ಆಧಾರವಿದ್ದರೂ ಮುಚ್ಚಿ ಹೋಗುತ್ತಿವೆ. ಅಲ್ಲದೆ ಈ ವ್ಯಾಖ್ಯಾನವು ದೈಹಿಕ ಹಿಂಸೆ ಮತ್ತು ಮಾನಸಿಕ ಹಿಂಸೆಯನ್ನು ಮಾತ್ರ ಕೌಟುಂಬಿಕ ಹಿಂಸೆಯೆಂದು ಪರಿಗಣಿಸಿದೆ. ಹಾಗಾಗಿ ಇದು ಸಂಪೂರ್ಣ ಬಗೆಯ ಕೌಟುಂಬಿಕ ಹಿಂಸೆಯನ್ನು ವ್ಯಾಖ್ಯಾನಿಸುವಲ್ಲಿ ಅಸ್ಪಷ್ಟವಾಗಿದೆ.

ಮಾಲವಿಕ ಕಾರ್ಲೆಕರ್ ಅವರು ಶ್ರೇಣೀಕೃತ ಸಮಾಜ ವ್ಯವಸ್ಥೆಯನ್ನು ಶೋಷಣಾತ್ಮಕ ಲಿಂಗ ಸಂಬಂಧಗಳನ್ನು ಆಧರಿಸುವುದರೊಂದಿಗೆ, ಪುರುಷ ಪ್ರಧಾನತೆ ಮತ್ತು ನಿಯಂತ್ರಣದ ಒಟ್ಟು ದೃಷ್ಟಿಕೋನದ, ಲಕ್ಷಣಗಳು, ಚರ್ಚೆಗಳು ಕುಟುಂಬದ ಸದಸ್ಯರಿಗನುಗುಣವಾಗಿ ಸಾಮಾಜಿಕೃತ ವ್ಯವಸ್ಥೆಯಲ್ಲಿ ದೌರ್ಜನ್ಯವನ್ನು ಒಂದು ಆಯುಧವೆಂದು ಹೇಳುತ್ತಾರೆ ಮತ್ತು ಕೌಟುಂಬಿಕ ಹಿಂಸೆಯನ್ನು ವ್ಯಾಖ್ಯಾನಿಸುವಾಗ ಹುಟ್ಟಿದ ಮನೆ-ಗಂಡನ ಮನೆಯಲ್ಲಿನ ಮಹಿಳೆಯ ಮೇಲೆ ಅವಳ ಸಂಬಂಧಿಕರು ಎಸಗುವ ದೌರ್ಜನ್ಯವನ್ನು ಕೌಟುಂಬಿಕ ಹಿಂಸೆಯಡಿಯಲ್ಲಿ ಹೇಳುತ್ತಾರೆ. ಆದರೆ ಇವರು ಕುಟುಂಬದಲ್ಲಿ

ಬಹು ಪ್ರಮಾಣದಲ್ಲಿ ನಡೆಯುವುದು ಮಾನಸಿಕ ಹಿಂಸೆ ಮಾತ್ರ. ಉದಾ:- ಸ್ಕಿಜೋಫ್ರೆನಿಯಾ, ಹಿಸ್ಟಿರಿಯಾ, ಖಿನ್ನತೆ ಮೊದಲಾದಂತಹ ಕಾಯಿಲೆಗಳು ಮಹಿಳೆಯರಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುವುದು ಮಾನಸಿಕ ಅನಾರೋಗ್ಯದಿಂದಲೇ ಎನ್ನುತ್ತಾರೆ. ದಾವರ್ ಅವರು ಸಹ ಮಹಿಳೆಯ ಬದುಕಿನ ಸಂದರ್ಭಗಳನ್ನು ಅವರ ಮಾನಸಿಕ ಅನಾರೋಗ್ಯದಿಂದ, ದೈಹಿಕ ಅನಾರೋಗ್ಯಕ್ಕೂ ಸಂಬಂಧವನ್ನು ಕಲ್ಪಿಸುತ್ತಾರೆ. ಇವೆರಡರ ಮಧ್ಯದ ಅವಿನಾಭಾವವಾದ ನಂಟಿದೆಯೆಂಬ ನಿಲುವನ್ನು ತಳೆದಿದ್ದಾರೆ.

ಕೌಟುಂಬಿಕ ದೌರ್ಜನ್ಯವು ಪುರುಷ ಸಂಸ್ಕೃತಿಯಲ್ಲಿ ಹಲವು ಕಾರಣಗಳಿಂದ ರೂಪು ತಳೆಯುತ್ತಿದೆ. ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಸಮಾಜ ವ್ಯವಸ್ಥೆಯಲ್ಲಿನ ಸ್ತ್ರೀ-ಪುರುಷರ ಮಧ್ಯದ ಅಸಮಾನ ಅಧಿಕಾರ ಹಂಚಿಕೆಯೆ ಮೂಲ ತಳಹದಿಯಾಗಿದೆ. ಕೌಟುಂಬಿಕ ದೌರ್ಜನ್ಯ ಇದಕ್ಕೆ ಹೊರತಾಗಿಲ್ಲ. ಸಾಂಪ್ರದಾಯಿಕ ಚಿಂತನೆಗಳಲ್ಲಿ ಮಹಿಳೆಯನ್ನು ಸಹಜೀವಿಯಾಗಿ ಪರಿಗಣಿಸದೆ ಇರುವುದೊಂದಿಗೆ, ಅವಳನ್ನು ನಿರಂತರವಾಗಿ ಎರಡನೆಯ ದರ್ಜೆಯ ಪ್ರಜೆಯಾಗಿಯೇ ನೋಡಲಾಗಿದೆ. ಜೈವಿಕ ಭಿನ್ನತೆಯನ್ನು ಸಾಮಾಜಿಕತೆಯಲ್ಲಿ ಲಿಂಗ ಅಸಮಾನತೆಗೆ ತಿರುಚಲ್ಪಟ್ಟಿದೆ. ಈ ಕಾರಣವಾಗಿ ಪುರುಷರೂಪಿ ಸಮಾಜ ವ್ಯವಸ್ಥೆಯಲ್ಲಿ ಅಧೀನಲಿಂಗಿಯಾಗಿಯೇ ಮಹಿಳೆಯನ್ನು ಪರಿಗಣಿಸಿದೆಯಾದ್ದರಿಂದ, ಅವಳ ಆರ್ಥಿಕ ಅವಲಂಬನೆ, ಪುರುಷ ಕೀಳರಿಮೆ, ಸಾಮಾಜೀಕರಣ, ಸ್ಥಿರ ಮಾದರಿ ಪಾತ್ರಗಳು ಸ್ಥೀರಿಕರಣ, ಲೈಂಗಿಕತೆ ಮತ್ತು ಚಲನಶೀಲತೆಯ ಮೇಲಿನ ನಿರ್ಬಂಧ, ಕೌಟುಂಬಿಕ ಮೌಲ್ಯಗಳು ಮತ್ತು ಸಂಸ್ಕೃತಿಯ ಹೊಣೆ ಇತ್ಯಾದಿ ಹಲವರು ಕಾರಣಗಳನ್ನು ಪಟ್ಟಿಮಾಡಬಹುದಾದರೂ ಇವೆಲ್ಲವುಗಳ ಉದ್ದೇಶ ಒಂದೇ ಅಸಮಾನ ಅಧಿಕಾರ ಹಂಚಿಕೆಯಿಂದ, ಸಾಮಾಜಿಕವಾಗಿ ದತ್ತವಾಗಿರುವ ಅಧಿಕಾರವನ್ನು ಭದ್ರವಾಗಿರಿಸಿಕೊಳ್ಳುವಿಕೆಯೇ ಆಗಿದೆ.

ಮೇಲ್ನೆಲೆಯಲ್ಲಿ ಭಿನ್ನವಾಗಿ ಕಾಣುವ ಕೌಟುಂಬಿಕ ವಲಯ ಮತ್ತು ಸಾರ್ವಜನಿಕ ವಲಯಗಳು ಪರಸ್ಪರ ಪೂರಕವಾಗಿವೆ. ಎರಡು ವಲಯಗಳಲ್ಲಿಯೂ ಸಹ ಮಹಿಳೆಯ ಅಭದ್ರತೆ ಮತ್ತು ರಕ್ಷಣೆಯ ಪ್ರಶ್ನೆಯೇ ಪ್ರಮುಖವಾದುದಾಗಿದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಗಿರುವ ಆಯ್ಕೆಗಳು ಬೆಂಕಿ ಅಥವಾ ಬಾಣಲೆಗೆಂಬಂತಾಗಿದೆ. ಹಾಗಾಗಿ ಎರಡೂ ವಲಯಗಳಲ್ಲಿನ ದೌರ್ಜನ್ಯದ ಸ್ವರೂಪವು ಭಯಾನಕವಾದ್ದರಿಂದ, ಇರುವುದರಲ್ಲಿಯೇ ಉತ್ತಮವೆಂದು ಕೌಟುಂಬಿಕ ವಲಯವನ್ನು ಆರಿಸಿಕೊಳ್ಳುವಂತಾಗುತ್ತಿದೆ. ಕುಟುಂಬ ವಲಯದಲ್ಲಿ ಕೇವಲ ಕೆಲವು ಪುರುಷರ ಅಧೀನಕ್ಕೆ, ಆಕ್ರಮಣಕ್ಕೆ ಒಳಗಾಗುವ ಹೆಣ್ಣು, ಸಾರ್ವಜನಿಕ ವಲಯದಲ್ಲಿ ಸಮಸ್ತ ಪುರುಷ ಸಮುದಾಯದ ಆಕ್ರಮಣಕ್ಕೆ ಒಳಗಾಗುವ ಸಂದರ್ಭಗಳಿರುತ್ತವೆಯಾದ್ದರಿಂದ, ಕೌಟುಂಬಿಕ ವಲಯವು ಇರುವುದರಲ್ಲಿಯೆ ಸ್ವಲ್ಪ ಸುರಕ್ಷಿತವೆಂದು ಹೇಳಬಹುದು.

ಈ ಪ್ರಮಾಣದಲ್ಲಿನ ಸಂದಿಗ್ಧತೆಯನ್ನು ಹೊಂದಿರುವ ಕೌಟುಂಬಿಕ ದೌರ್ಜನ್ಯದ ಪರಿಹಾರಗಳನ್ನು, ಸುಧಾರಣೆಗಳನ್ನು ಮಹಿಳಾ ಸಮುದಾಯ ನಿರಂತರವಾಗಿ ಶೋಧಿಸಬೇಕಾಗಿದೆ. ಇಲ್ಲಿನ ಮಹಿಳೆಯು

ಮಾರಣಾಂತಿಕ ಸಂಗತಿಗಳನ್ನು ಅನುಭವಿಸಿದರೂ ಅದನ್ನು ಅವಳು ಹೊರಹಾಕುವಂತಿಲ್ಲ. ಹೊರಹಾಕಲೆತ್ನಿಸುವುದಾದರೂ, ಅವಳಿಗೆ ಅದರ ಪರಿಣಾಮಗಳಿಂದ ಬೇರೆಡೆ ನೆಲೆ ನಿಲ್ಲಲು ಕನಿಷ್ಟ ಪ್ರಮಾಣದ ಆಶ್ರಯವು ಅವಳಿಗಿಲ್ಲವಾದ್ದರಿಂದ ಇರುವ ಪ್ರಮಾಣದಲ್ಲಿ ಕೌಟುಂಬಿಕ ವಲಯ ಉತ್ತಮವೆನ್ನಬಹುದು. ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಒಟ್ಟು ಸಮುದಾಯದ ಆಸ್ತಿಯಾಗಿ ಪರಿಗಣಿತವಾಗುವ ಮಹಿಳೆಯು ತನ್ನದಲ್ಲದೆಂದು ಹೇಳಲಾಗುವ ಸಾರ್ವಜನಿಕ ವಲಯದಲ್ಲಿ ಅವಳ ಪ್ರವೇಶ ಪ್ರಕ್ರಿಯೆಯಿಂದ ಮೊದಲುಗೊಂಡು, ನಿರಂತರವಾದ ಪ್ರಕ್ರಿಯೆಗಳಲ್ಲಿ ವಿಭಿನ್ನ ಬಗೆಯ ದೌರ್ಜನ್ಯಗಳಿಗಿಡಾಗಬೇಕಾಗುತ್ತದೆ.

**೨.೫. ಸಾರ್ವಜನಿಕ ವಲಯದಲ್ಲಿ ಹಿಂಸೆ ಮತ್ತು ದೌರ್ಜನ್ಯ**

ಸಾಮಾಜಿಕ ವ್ಯವಸ್ಥೆಯಲ್ಲಿ ಕೌಟುಂಬಿಕ ವಲಯದಷ್ಟೇ ಪ್ರಮುಖವಾಗಿ ಕಾಣಿಸಿಕೊಳ್ಳುವುದೇ ಸಾರ್ವಜನಿಕ ವಲಯ. ಈ ವಲಯವನ್ನು ವ್ಯಾಖ್ಯಾನಿಸುವಾಗ ಬಹುತೇಕ ಚಿಂತಕರು ಆರ್ಥಿಕ ವ್ಯವಹಾರಗಳನ್ನು ಮಾತ್ರ ಪರಿಗಣಿಸಿರುವುದು ಕಂಡು ಬರುತ್ತಿದೆ. ಮಹಿಳೆಯ ಪ್ರವೇಶವನ್ನು ನಿರಾಕರಿಸಿದ ಈ ವಲಯವು ಪುರುಷ ವ್ಯವಸ್ಥೆಯಲ್ಲಿ, ಪುರುಷ ವಲಯವೆಂದೆ ಸಮಾಜ ವ್ಯವಸ್ಥೆಯಲ್ಲಿ ಬಿಂಬಿತವಾಗಿದೆ. ಆದರೆ ಇತ್ತೀಚಿಗಷ್ಟೇ ಮಹಿಳೆಯರು ಪುರುಷ ಸಂಸ್ಕೃತಿಯ ಕೆಲವು ಹುನ್ನಾರಗಳಿಂದಾಗಿ ಸಾರ್ವಜನಿಕ ವಲಯದ ಪ್ರವೇಶ ಪಡೆದರು.

ಮಹಿಳೆಯ ವಲಯವೆಂದೆ ಹೇಳಲಾದ ಕೌಟುಂಬಿಕ ವಲಯವು ಮೇಲ್ನೋಟಕ್ಕೆ ಅವಳ ರಕ್ಷಣೆಯನ್ನು, ಒಡೆತನವನ್ನು ಪೋಷಿಸುತ್ತಿದೆ. ಅವಳಿಗೆ ಗೌರವ ತರುವಂತಹ ಒಂದೇ ಒಂದು ವಲಯ ಅದು ಕೌಟುಂಬಿಕ ವಲಯವೆಂಬುದು ಅಸತ್ಯದ ಸಂಗತಿಯಾಗಿದೆ. ಇನ್ನೂ ಗೌರವ, ರಕ್ಷಣೆ, ಭದ್ರತೆ, ಇವುಗಳಿಗೆ ಅವಕಾಶವೇ ಇಲ್ಲವೆಂದು ಪ್ರಚಲಿತವಾಗಿರುವ ವಲಯದಲ್ಲಿ ಅದರ ಸ್ವರೂಪ ಇನ್ನಷ್ಟು ಭೀಕರವಾಗಿದೆ. ಮೇಲ್ನೋಟಕ್ಕೆ ಇದನ್ನು ಸಮಾಜ ವ್ಯವಸ್ಥೆಯು ಒಪ್ಪಿಕೊಳ್ಳುತ್ತದೆ. ಇನ್ನಷ್ಟು ಭೀಕರ ಎಂದು ವ್ಯಾಖ್ಯಾನಿಸುವಲ್ಲಿಯೇ ಸಾರ್ವಜನಿಕ ವಲಯದಲ್ಲಿ ಅವಳ ಮೇಲಾಗುವ ದೌರ್ಜನ್ಯಗಳು ಗೋಚರಿಸುತ್ತವೆ ಎನ್ನುವ ತರ್ಕವಿದೆ. ಆದರೆ ವಾಸ್ತವ ಸಂಗತಿಯಲ್ಲಿ ಈ ತರ್ಕವು ಅಸಮಂಜಸವಾಗಿದೆ. ಪುರುಷಪರವಾದಂತಹ ರೂಢಿಗಳಿರುವ ಸಮಾಜ ವ್ಯವಸ್ಥೆಯಲ್ಲಿ ಎಲ್ಲ ಪುರುಷರಿಗೂ, ಎಲ್ಲ ಹೆಂಗಸರ ಮೇಲೆ ಅಧಿಕಾರವಿದ್ದು, ಯಾರ ಮೇಲೆಯು ಸಹ ಅವರು ಆಕ್ರಮಣವನ್ನು ಮಾಡಬಹುದು ಎಂಬ ಅಲಿಖಿತ ಕಾನೂನಿದೆ. ಕೌಟುಂಬಿಕ ವಲಯವನ್ನು ಸುರಕ್ಷಿತ ಜಾಗವೆಂದು ಹೇಳುವ ಹಾಗೆ ಸಾರ್ವಜನಿಕ ವಲಯದಲ್ಲಿನ ಕೆಲವು ಸ್ಥಳಗಳನ್ನು ಸುರಕ್ಷಿತವೆಂದು ಹೇಳಲಾಗುತ್ತಿದೆ. ಉದಾ:- ದೇವಸ್ಥಾನ, ಸರ್ಕಾರಿ ಕಛೇರಿಗಳು, ಸಂಸ್ಥೆಗಳು, ಗುಂಪುಗಳಲ್ಲಿ ಕೆಲಸ ಮಾಡುವ ಸ್ಥಳಗಳು, ಕಾರ್ಖಾನೆಗಳು, ಇತ್ಯಾದಿ. ಆದರೆ ಸ್ತ್ರೀಕೇಂದ್ರೀತ ನೆಲೆಯಲ್ಲಿ ನೋಡಿದಾಗ ಈ ಸ್ಥಳಗಳು, ವಲಯಗಳು ಸಹಿತ ರಕ್ಷಣೆಯ ತಾಣಗಳಾಗಿಲ್ಲವೆಂಬುದಕ್ಕೆ ಸಾಕಷ್ಟು ಆಧಾರಗಳು ದೊರೆಯುತ್ತವೆ. ಸಂಘ-ಸಂಸ್ಥೆಗಳಲ್ಲಿ, ಕಛೇರಿಗಳಲ್ಲಿ,

ಕಾರ್ಖಾನೆಗಳಲ್ಲಿ, ನೌಕರರ ಸಂಘಗಳೆಂದೂ, ಯುನಿಯನ್‌ಗಳೆಂದೂ, ಅಲ್ಲಿನ ಸಮಸ್ಯೆಗಳನ್ನು ನಿವಾರಿಸಿಕೊಳ್ಳಲು ರೂಪಿಸಿಕೊಳ್ಳಲಾಗಿರುತ್ತದೆ. ಆದರೆ ಇಲ್ಲೆಲ್ಲಿಯೂ ಸಹ ಮಹಿಳೆಯ ಸಮಸ್ಯೆಗಳು, ಸಮಸ್ಯೆಗಳಾಗಿ ಪರಿಗಣಿಸುವ ಗೋಜಿಗೆ ಹೋಗುವುದಿಲ್ಲ. ಸಾಮಾನ್ಯ ಸಂಗತಿಗಳಿಗೂ, ಸೌಕರ್ಯಗಳಿಗೂ ಹೋರಾಡಲೆಂದು ರಚಿಸಿಕೊಂಡಿರುವ ಇವುಗಳಲ್ಲಿ, ಮಹಿಳಾ ಬದುಕಿನ ಆಲೋಚನೆಗಳು ಒಳಗೊಂಡಿರುವುದಿಲ್ಲ. ಹಾಗಾಗಿ ಅಲ್ಲಿನ ಮಹಿಳೆಯರ ಪರಿಸ್ಥಿತಿಗಳಿಗೆ ವಿಶೇಷ ಗಮನಹರಿಸಬೇಕಾದುದರತ್ತ ಯಾರೂ ಸಹ ಕಾಳಜಿಯನ್ನು ವಹಿಸುವುದಿಲ್ಲ. ಆದ್ದರಿಂದ ಕುಟುಂಬಗಳಲ್ಲಿ ನಡೆಯುವಂತೆಯೇ ಸಾರ್ವಜನಿಕ ವಲಯಗಳಲ್ಲಿಯೂ ಪ್ರಕಟಗೊಳ್ಳದಿರುವಂತಹ ಸಂಗತಿಗಳಿವೆ. ಅದೇ ರೀತಿಯಾಗಿ ಪ್ರಕಟಗೊಳ್ಳುವ ಭಾಗಗಳೆಂದರೆ ಮಾರ್ಕೆಟ್, ಪ್ರಯಾಣದ ಸಂದರ್ಭ ಇತ್ಯಾದಿ. ಈ ಬಗೆಯ ಸಾರ್ವಜನಿಕ ಸ್ಥಳಕ್ಕೆ ಪ್ರವೇಶಿಸಿದ ಮಹಿಳೆಯರು ಕೆಲಸದ ಕಾರಣಕ್ಕಾಗಿಯೇ ಕೆಲವು ವಲಯಗಳಿಗೆ ನಿಗದಿತಗೊಳ್ಳುತ್ತಾರೆ. ಉದಾಹರಣೆಗೆ ಕಛೇರಿಗಳು, ರಾಜಕೀಯ ಪಕ್ಷಗಳು ಇತ್ಯಾದಿ. ಈ ಸಾರ್ವಜನಿಕ ವಲಯಗಳಲ್ಲಿನ ಮಹಿಳೆಯರ ವಿರುದ್ಧ ನಡೆಯುವ ಹಿಂಸೆ - ದೌರ್ಜನ್ಯಗಳು ಬಹುತೇಕವಾಗಿ ಪ್ರಕಟಗೊಳ್ಳುವುದಿಲ್ಲ.

ಹೀಗೆ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಕುರಿತು ಚರ್ಚಿಸುತ್ತಾ ಹೋದಾಗ ಸಾರ್ವಜನಿಕ ವಲಯದಲ್ಲಿ, ಸಾಮಾನ್ಯ ಸ್ಥಳ ಮತ್ತು ಕೆಲಸದ ಸ್ಥಳಗಳೆಂದು ಎರಡು ವಿಭಾಗಗಳಾಗುತ್ತವೆ. ಕೆಲಸದ ಸ್ಥಳಗಳಲ್ಲಿನ ಉಪವಲಯಗಳಲ್ಲಿ ಸಂಘಟಿತ ಮತ್ತು ಅಸಂಘಟಿತ ವಲಯಗಳು ಕಾಣಿಸಿಕೊಳ್ಳುತ್ತವೆ. ಈ ಉಪವಲಯಗಳ ಈವರೆಗೂ ಕುರಿತು ಸಾಕಷ್ಟು ಚರ್ಚೆಗಳು, ಚಿಂತನೆಗಳು ನಡೆಯುತ್ತಲೇ ಇವೆ.

ಸಂವಿಧಾನ ಮತ್ತು ಸರ್ಕಾರದ ಕಾಯ್ದೆಯ ಚೌಕಟ್ಟಿನೊಳಗೆ ಕಾರ್ಯನಿರ್ವಹಿಸುವ, ಉದ್ಯೋಗ ಭದ್ರತೆ ನೀಡುವ ಸಂಘಟನೆಗೊಂಡ ಕಾರ್ಮಿಕರಿರುವ ಮತ್ತು ಉತ್ಪಾದನೆಯಲ್ಲಿ ಅನೇಕ ಆಧುನಿಕ ತಂತ್ರಜ್ಞಾನವನ್ನು ಅಳವಡಿಸಿಕೊಂಡಿರುವ ವಲಯವೇ ಸಂಘಟಿತ ವಲಯ. ಇದಕ್ಕೆ ವಿರುದ್ಧವಾದ ಲಕ್ಷಣಗಳನ್ನು ಹೊಂದಿರುವ ವಲಯವೇ ಅಸಂಘಟಿತ ವಲಯವೆಂದು ಹೇಳಲಾಗುತ್ತದೆ. ಸಮಾನತೆಯೆಡೆಗಿನ ವರದಿಯು ಉದ್ಯೋಗ ಭದ್ರತೆಯನ್ನು ಒದಗಿಸುವ, ಸೇವಾ ನಿಯಮಗಳನ್ನು ಪಾಲಿಸುವ ಸಲುವಾಗಿ ಸರ್ಕಾರವು ರೂಪಿಸಿರುವ ಶಾಸನಗಳು ಮತ್ತು ಕಾನೂನುಗಳ ಚೌಕಟ್ಟಿನಿಂದ ಹೊರಗಿರುವ ಕಾರ್ಮಿಕ ಸಂಘ-ಸಂಘಟನೆಗಳು ಇಲ್ಲದ ಉತ್ಪಾದನಾ ವಲಯವನ್ನು ಅಸಂಘಟಿತ ವಲಯವೆಂದು ಕರೆಯಲಾಗುತ್ತದೆ.

ಕೆಲಸದ ಸ್ಥಳಗಳಲ್ಲಿ ಪ್ರಮುಖವಾಗಿ ಗುರುತಿಸಲಾದ ಸಂಘಟಿತ ಮತ್ತು ಅಸಂಘಟಿತ ವಲಯಗಳು ಸಾರ್ವಜನಿಕ ವಲಯದ ಭಾಗವಾಗಿಯೇ ಇರುವುದಾದರೂ ಇಲ್ಲಿ ಕಂಡು ಬರುವ ಮಹಿಳೆಯರ ಮೇಲಿನ ಆಕ್ರಮಣದ ಸ್ವರೂಪಗಳು ಭಿನ್ನವಾಗಿವೆ. ಸಾಮಾನ್ಯವಾಗಿ ಅಸಂಘಟಿತ ವಲಯದಲ್ಲಿನ ದೌರ್ಜನ್ಯಗಳು ಭೀಕರವೆನಿಸುತ್ತಿವೆ ಹಾಗೂ ಸಂಘಟಿತ ವಲಯದಲ್ಲಿನ ದೌರ್ಜನ್ಯಗಳು ನಡೆಯುವುದೇ ಇಲ್ಲವೆಂಬ ಧೋರಣೆಗಳು ಇವೆ. ಸಾಧಾರಣವಾಗಿ ಮಹಿಳೆಯು ಸಮೂಹಗಳಿಗಿಂತಲೂ, ಒಂಟಿಯಾದಂತಹ ಸನ್ನಿವೇಶಗಳಲ್ಲಿ ಹೆಚ್ಚು ಹಿಂಸೆ-ದೌರ್ಜನ್ಯಕ್ಕೊಳಗಾಗುತ್ತಾಳೆ.

ಸಾಮಾನ್ಯವಾಗಿ ಕೌಟುಂಬಿಕ ವಲಯದ ಅಧಿಕಾರ ಹಂಚಿಕೆಗಳು, ಸಾರ್ವಜನಿಕ ವಲಯದಲ್ಲಿಯೂ ವಿಸ್ತರಿಸುತ್ತವೆ. ಆದರೆ ಕೌಟುಂಬಿಕ ವಲಯದಲ್ಲಿನ ಪರಿಭಾಷೆಯಂತೆಯೇ ಸಂಘಟಿತ ವಲಯದಲ್ಲಿನ ರಹಸ್ಯಲೋಕವು ಅನಾವರಣಗೊಳ್ಳದಂತಹ ಅಂಶಗಳು ಹೆಚ್ಚಿನ ಪ್ರಮಾಣದಲ್ಲಿ ಕಾಣಿಸಿಕೊಳ್ಳುತ್ತವೆ. ಪ್ರಮಾಣಗಳಲ್ಲಿನ ಭಿನ್ನತೆಯಿರಬಹುದಾದರೂ ಒಟ್ಟು ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯ ರಕ್ಷಣೆ ಮತ್ತು ಭದ್ರತೆಯ ಪ್ರಶ್ನೆಯಿದೆ. ಸಾಂಪ್ರದಾಯಿಕ ಸಮಾಜ ವ್ಯವಸ್ಥೆಯ ವಿಧಾನದಲ್ಲಿ ಮಹಿಳಾ ಬದುಕು ಎದುರಿಸುತ್ತಿರುವ ಪ್ರಮುಖವಾದ ಸಂಗತಿ ಇದು. ಈ ಬಗೆಯ ದೌರ್ಜನ್ಯಗಳು ಮಹಿಳೆಯ ಮೇಲೆ ಆಗಬಾರದೆಂಬ ಆಶಯದಿಂದಲೆ ಮಹಿಳಾಪರ ಚಿಂತನೆಗಳು, ಚಳುವಳಿಗಳು ಪ್ರಸ್ತುತವಾಗಿಯೂ ಕೆಲಸ ಮಾಡುತ್ತಿವೆ. ಕಾನೂನುಗಳು ಎಲ್ಲರಿಗೂ ಒಂದೇ ಎಂದು ಹೇಳುವಲ್ಲಿ ಅರ್ಥವಿಲ್ಲ. ಸರ್ವರಿಗೂ ಸಮಾನವೆಂಬ ಚಿಂತನೆಗಳಲ್ಲಿ ಮಹಿಳೆಯರನ್ನು ಅಂಚಿಗೆ ಸರಿಸಲಾಗಿದೆಯೆಂಬ ಅಂಶವು ಸ್ಪಷ್ಟವಾದ ಹಿನ್ನೆಲೆಯಲ್ಲಿ, ಮಹಿಳೆಯರಿಗೆ ಪ್ರತ್ಯೇಕವಾದ ಕಾನೂನುಗಳು ಅವಶ್ಯಕತೆಯನ್ನು ವ್ಯಕ್ತಪಡಿಸಲಾಯಿತು. ಆದ್ದರಿಂದ ಈಗಾಗಲೇ ಆಗಿರುವ ಪ್ರಯತ್ನಗಳಲ್ಲಿ ಮಹಿಳಾ ಕಾನೂನುಗಳು ಜಾರಿಗೆ ಬಂದಿವೆ. ಹೀಗೆ ಮಹಿಳೆಯರಿಗೆ ವಿಶೇಷ ಕಾನೂನುಗಳನ್ನು ಒದಗಿಸಿಕೊಡುವಲ್ಲಿ ಹಲವು ಬಗೆಯ ಯಶಸ್ಸನ್ನು ಸ್ತ್ರೀವಾದಿ ಚಿಂತನೆಗಳು, ಹೋರಾಟಗಳು ಗಳಿಸಿಕೊಳ್ಳುತ್ತಾ ಬಂದಿವೆ. ಬೇರೆ ಬೇರೆ ದೇಶಗಳಲ್ಲಿ ಭಿನ್ನ ಬಗೆಯ ಯಶಸ್ಸನ್ನು ಪಡೆದುಕೊಂಡಿವೆ. ಮತದಾನದ ಹಕ್ಕಿಗಾಗಿನ ಹೋರಾಟದ ಕಾಲದಿಂದಲೂ ಹಿಡಿದು, ಹೆಂಗಸಿನ ಪ್ರತಿಯೊಂದು ಸಂಗತಿಗಾಗಿಯೂ ವಿಶೇಷವಾದ ಹೋರಾಟವನ್ನು ಮಾಡಿಯೇ ಹಕ್ಕನ್ನು ಪಡೆಯಬೇಕಾಗಿರುವುದು ಅನಿವಾರ್ಯವಾಗಿದೆ. ಇಂಥ ಕಾನೂನುಗಳಲ್ಲಿ ಸುದೀರ್ಘವಾಗಿ ಚರ್ಚೆಯಾದ ಕೌಟುಂಬಿಕ ಹಿಂಸೆ ತಡೆ ಕಾಯ್ದೆ ೨೦೦೬, ಕೌಟುಂಬಿಕ ವಲಯದ್ದಾದರೆ, ಸಾರ್ವಜನಿಕ ವಲಯಕ್ಕಾಗಿ ಜಾರಿಗೊಳಿಸಲಾಗುತ್ತಿರುವ ಕೆಲಸದ ಸ್ಥಳಗಳಲ್ಲಿ ನಡೆಯುವ ಲೈಂಗಿಕ ಕಿರುಕುಳ ನಿಷೇಧ ಕಾಯ್ದೆಗಳನ್ನು ವಿಶೇಷವಾಗಿ ವಿಶ್ಲೇಷಣೆಗೊಳಪಡಿಸಲಾಗುತ್ತಿದೆ.

### ೨.೬ ಕೌಟುಂಬಿಕ ಹಿಂಸೆ ತಡೆ ಕಾಯ್ದೆ : ಸ್ತ್ರೀವಾದಿ ವಿಶ್ಲೇಷಣೆ

ಈ ವರೆಗಿನ ಕಾನೂನುಗಳಿಗಿಂತ ಹೊಸ ಕೌಟುಂಬಿಕ ದೌರ್ಜನ್ಯ ತಡೆ ಕಾಯ್ದೆಯು, ಬಹುಮುಖ್ಯವಾದ ಸುಧಾರಣೆಗಳನ್ನು ಒಳಗೊಂಡಿದೆ. ಹಿಂದಿನ ನಾಗರಿಕ ಕಾನೂನುಗಳಲ್ಲಿ, ಕಾಯ್ದೆಗಳಲ್ಲಿ ಕುಟುಂಬದಲ್ಲಿನ ಮಹಿಳೆಯ ಹಕ್ಕುಗಳ ಸಮರ್ಪಕವಾದ ರಕ್ಷಣೆಗಳು ಹೊರಬಂದಿರುವುದು ಕಂಡು ಬರುವುದಿಲ್ಲ. ವೈವಾಹಿಕ ಸಂಬಂಧಗಳಾಚೆಗೂ ವಿಸ್ತರಿಸಿದ ಕೌಟುಂಬಿಕ ಹಿಂಸೆಯ ವ್ಯಾಖ್ಯಾನವು ಯಶಸ್ವಿಯಾಗಿ ಸಮರ್ಥಿಸಲ್ಪಟ್ಟಿದೆ. ಬೃಹತ್ ಪ್ರಮಾಣದಲ್ಲಿ ಹೊರಬಂದಿರುವ ಈ ಕಾಯ್ದೆ ಪ್ರತಿಷ್ಠೆಯ ಮಹತ್ವಾಕಾಂಕ್ಷೆಯನ್ನು ಹೊಂದಿದ್ದರೂ ಸಾಕಷ್ಟು ಪ್ರಮಾಣದಲ್ಲಿ ಸೂಕ್ಷ್ಮತೆಯ ಕೊರತೆಯಿದೆಯೆಂದು ಮಧು ಪೂರ್ಣಿಮಾ ಕೀಶ್ವರು ಅಭಿಪ್ರಾಯಪಟ್ಟಿದ್ದಾರೆ. ಈ ಕಾಯ್ದೆಯು ಎಲ್ಲ ದಮನಕ್ಕೊಳಗಾದ ಮಹಿಳೆಯನ್ನು ಸಮರ್ಪಕವಾಗಿ ಶಿಕ್ಷಿಸುವ ಸಾಧ್ಯತೆಯನ್ನು ಹೇಳುತ್ತದೆ. ಸರ್ಕಾರ ಮತ್ತು ಸರ್ಕಾರೇತರ

ಜಾಲ ಸಂಬಂಧಗಳನ್ನು ಸಮರ್ಥವಾಗಿ ರೂಪಿಸಲಾಗಿದೆಯಾದ್ದರಿಂದ, ಎಲ್ಲ ಮಹಿಳೆಯರಿಗೂ ಇದು ನ್ಯಾಯವನ್ನು ಒದಗಿಸುತ್ತದೆಯೆಂದು, ಈ ಕಾಯಿದೆಯನ್ನು ರೂಪಿಸಿದವರು ನಿರೀಕ್ಷೆಯಲ್ಲಿದ್ದಾರೆ. ಈ ಕಾಯಿದೆಯು ಎಲ್ಲ ಮಹಿಳೆಯರಿಗೆ ನ್ಯಾಯ ಒದಗಿಸುತ್ತದೆಯೊ ಅಥವಾ ಇಲ್ಲವೋ ಎಂಬುದಕ್ಕಿಂತ, ಈವರೆಗೆ ರೂಪಿತವಾದ ಕಾನೂನುಗಳಿಗಿಂತ ಸಾಕಷ್ಟು ಪ್ರಮಾಣದಲ್ಲಿ ಭಿನ್ನವಾಗಿ ಆಲೋಚಿಸಿದೆ. ಯಾವುದೇ ಸಂಗತಿಯು ಸಕಾರಾತ್ಮಕ ಮತ್ತು ನಕರಾತ್ಮಕ ಅಂಶಗಳನ್ನು ಒಳಗೊಂಡಿರುತ್ತವೆಯೆಂಬುದಕ್ಕೆ ಈ ಕಾಯಿದೆಯು ಹೊರತಲ್ಲ.

ಈ ವರೆಗಿನ ಕಾನೂನಿನಲ್ಲಿ ವರದಕ್ಷಿಣೆಯನ್ನು ಮಾತ್ರ ಕೌಟುಂಬಿಕ ಹಿಂಸೆಯೆಂದು ಪರಿಭಾವಿಸಲಾಗಿತ್ತು. ಆದರೆ ಇತ್ತೀಚಿಗೆ ಬಂದ ತಿದ್ದುಪಡಿಗಳಿಂದ ಕೌಟುಂಬಿಕ ಹಿಂಸೆಯು ಕೇವಲ ವರದಕ್ಷಿಣೆಯ ನೆಪದಲ್ಲಿ ಮುಚ್ಚಿ ಹೋಗುತ್ತಿದೆಯೆಂಬ ಅಂಶವನ್ನು ಹೊರಹಾಕಿದೆ ಹಾಗೂ ವರದಕ್ಷಿಣೆಯು ಕೌಟುಂಬಿಕ ಹಿಂಸೆಯ ಒಂದು ಬಗೆಯೇ ವಿನಃ ವರದಕ್ಷಿಣೆಯಷ್ಟೇ ಕೌಟುಂಬಿಕ ಹಿಂಸೆಯಲ್ಲವೆಂದು ವ್ಯಾಖ್ಯಾನಿಸಿದೆ. ಮಹಿಳಾ ವಿಷಯಗಳಿಗೆ ಸಂಬಂಧಿತ ಪ್ರಕರಣಗಳು ನ್ಯಾಯಾಲಯದ ನಿರ್ಲಕ್ಷ್ಯದಿಂದ ಅಂಚಿಗೆ ತಳ್ಳಲಾಗಿದೆ. ಭಾರತ ದೇಶದಲ್ಲಿನ ಕೌಟುಂಬಿಕ ದೌರ್ಜನ್ಯದ ನೈಜ ಮುಖವನ್ನು ಇದು ಪರಿಚಯಿಸಿದೆ. ಮಹಿಳೆಯರ ವಿರುದ್ಧ ನಡೆಯುವ ದೌರ್ಜನದ ಕಾರಣ ವರದಕ್ಷಿಣೆಯೆಂಬ ಸರಳೀಕೃತ ವ್ಯಾಖ್ಯಾನವನ್ನು ಇದು ತಳ್ಳಿಹಾಕುತ್ತದೆ. ಭಾರತೀಯ ದಂಡ ಸಂಹಿತೆಯ ಕಲಂ ೪೯೮(A) ಅಡಿಯಲ್ಲಿ ಅಪರಾಧಿಕ ನ್ಯಾಯಾಲಯಗಳು ಮತ್ತು ನಾಗರಿಕ ನ್ಯಾಯಾಲಯಗಳು ಕೌಟುಂಬಿಕ ದೌರ್ಜನ್ಯಕ್ಕೊಳಗಾದವರಿಗೆ ಪರಿಹಾರಗಳನ್ನು ಒದಗಿಸುವುದರತ್ತ ಗಮನಹರಿಸುತ್ತವೆ.

ಗಂಡ ಅಥವಾ ಹೆಂಡತಿಯೊಂದಿಗಿನ ಸಂಬಂಧದಲ್ಲಿ ಮಹಿಳೆಯರಿಗೆ ಆಗುವ ಅನ್ಯಾಯವನ್ನು ಮತ್ತು ಕಾನೂನಿನಲ್ಲಿ ಈ ಸಂಬಂಧಿತವಾಗಿ ಒದಗಿಸಲಾಗಿರುವ ಸವಲತ್ತನ್ನು ಅರಿತುಕೊಂಡು, ಮಹಿಳೆಯರ ನಾಗರಿಕ ಮತ್ತು ವೈವಾಹಿಕ ಹಕ್ಕುಗಳು, ಸಕಾರಾತ್ಮಕ ರಕ್ಷಣೆಗಳನ್ನು ಒದಗಿಸಲ್ಪಡುವ ಮಾರ್ಗಸೂಚಿಯಾಗಿ ಈ ಹೊಸ ಕಾಯಿದೆಯು ನೆರವಿಗೆ ನಿಲ್ಲುತ್ತದೆ. ಎರಡನೆಯ ಹಂತದ ಪರಿಹಾರವಾಗಿ ಈ ಕಾನೂನಿನಡಿಯಲ್ಲಿ ಅಪರಾಧಿಗಳಿಗೆ ಸೆರಮನೆ ವಾಸದ ಶಿಕ್ಷೆಯನ್ನು ವಿಧಿಸಲಾಗುತ್ತದೆ.

ಈ ಕಾನೂನಿನ ವ್ಯಾಪ್ತಿಯಲ್ಲಿ ಸೊಸೆಯಂದಿರು, ಹೆಂಡತಿಯರ ಪಾತ್ರಗಳಲ್ಲಿರುವ ಮಹಿಳೆಯರಷ್ಟೇ ಅಲ್ಲದೆ, ಅಜ್ಜಿಯರು ಸೇರಿದಂತೆ ನಾದಿನಿ-ಸೊಸೆ, ಅತ್ತೆ, ತಾಯಂದಿರು, ಅಕ್ಕತಂಗಿಯರು, ಮಕ್ಕಳನ್ನೊಳಗೊಂಡು ಕೌಟುಂಬಿಕ ಹಿಂಸೆಯಲ್ಲಿನ ವ್ಯಾಖ್ಯಾನದ ವ್ಯಾಪ್ತಿಗೊಳಪಡಿಸಲಾಗಿದೆ. ಹಲವಾರು ಮಹಿಳೆಯರು ಅವರ ಮಕ್ಕಳು ಮತ್ತು ಅಳಿಯಂದಿರಿಂದಲೇ ವಿಶೇಷವಾಗಿ ವಿಧವೆಯರೂ, ವಿದುರರಿಂದ ಬಲಿಪಶುವಾಗಿಸುವವರಿಗೆ ಈ ಕಾನೂನು ಉಪಯುಕ್ತವಾಗಿದೆ. ಈ ಹೊಸ ಕಾಯ್ದೆಯು ಮಕ್ಕಳ ಬಂಧನದಲ್ಲಿರುವ ಮಹಿಳೆಯರ ವಿರುದ್ಧದ ದೌರ್ಜನ್ಯದ ರಕ್ಷಣೆ, ವೈವಾಹಿಕ ಕುಟುಂಬಗಳ ಹಕ್ಕುಗಳು, ಸಂರಕ್ಷಣೆಗಾಗಿ - ಪೋಷಣೆಗಾಗಿರುವ ನಾಗರಿಕ ಪರಿಹಾರಗಳನ್ನು ಒಳಗೊಂಡಿರುವುದರಿಂದ ಸಾಕಷ್ಟು

ವ್ಯಾಪಕತೆಯನ್ನು ಮತ್ತು ತ್ವರಿತವಾದ ಪರಿಹಾರಗಳನ್ನು ನಿಗದಿತ ಸಮಯದಲ್ಲಿ ಒದಗಿಸುವುದನ್ನು ಸೂಚಿಸಿರುವುದು ಪ್ರಮುಖ ಸುಧಾರಣೆಯಾಗಿದೆ. ಈ ಬಗೆಯ ಉಪಯುಕ್ತ ಅಂಶಗಳನ್ನು ಹೊಂದಿರುವ ಈ ಕಾನೂನು ದಮನಕಾರಿ ಪುರುಷ ಪ್ರಧಾನ ವ್ಯವಸ್ಥೆಗೆ ಎಚ್ಚರಿಕೆಯ ದನಿಯಾಗಿದೆ.

ಕಾಯ್ದೆಯ ಸೆಕ್ಷನ್ ೨ (a) ಮಹಿಳೆಯ ಸಶಕ್ತೀಕರಣವನ್ನು ಆಧರಿಸಿ ರೂಪಿಸಲಾಗಿದೆ ಹಾಗೂ ಒಂದೇ ಸೂರಿನಡಿಯಲ್ಲಿ ವಾಸಿಸುವವರು ಕೌಟುಂಬಿಕ ಹಿಂಸೆಯ ವಿರುದ್ಧ ಹೋರಾಡಿ ಲಾಭವನ್ನು ಪಡೆಯಬಹುದಾಗಿದೆ ಎಂಬುದನ್ನು ವಿವರಿಸುತ್ತದೆ.

ಸೆಕ್ಷನ್ (೩) ರಡಿಯಲ್ಲಿ "ಕೌಟುಂಬಿಕ ದೌರ್ಜನ್ಯ"ವೆಂದರೆ ಯಾವುದೇ ಕ್ರಿಯೆ, ನಡೆವಳಿಕೆ, ಕರ್ತವ್ಯ ಲೋಪ, ಆದೇಶಗಳಿಂದ ಮಹಿಳೆ ಅಥವಾ ಮಗುವನ್ನು ಹಿಂಸಿಸುವುದು, ಅವರ ಅಸ್ತಿತ್ವಕ್ಕೆ ಧಕ್ಕೆ ತರುವುದನ್ನು ಕೌಟುಂಬಿಕ ದೌರ್ಜನ್ಯವೆಂದು ಹೇಳುತ್ತದೆ. ದೈಹಿಕ, ಲೈಂಗಿಕ, ಭಾವನಾತ್ಮಕ, ಮೌಖಿಕ, ಮಾನಸಿಕ ಮತ್ತು ಆರ್ಥಿಕ ದುರಾಚಾರ ಅಥವಾ ಬೆದರಿಕೆಗಳನ್ನು ದೌರ್ಜನ್ಯವೆಂದು, ಇದನ್ನು ಗಂಭೀರವಾದ ಅಪರಾಧವೆಂದು ಪರಿಗಣಿಸಿದೆ. ಮಹಿಳೆಯರ ವಿರುದ್ಧ ನಡೆಯುವ ಹಿಂಸೆ ದೌರ್ಜನ್ಯದ ಬಗೆಗಳ ವಿವರವಾದ ಪಟ್ಟಿಯನ್ನು ಇದು ಹೊರಹಾಕುತ್ತದೆ. ಸುದೀರ್ಘ ಅವಧಿಯವರೆಗೆ ನ್ಯಾಯಾಧೀಶರ ವಿವೇಕಯುತ ಪರಿಜ್ಞಾನದಿಂದ, ಆದೇಶ ಅಥವಾ ಕರ್ತವ್ಯ ಲೋಪದ ಕೃತ್ಯವು ಸಹ ಕೌಟುಂಬಿಕ ಹಿಂಸೆಯೆಂದು ಕಾನೂನು ಇದನ್ನು ಗಂಭೀರವಾಗಿ ಪರಿಗಣಿಸಿ ಶಿಕ್ಷೆಯನ್ನು ವಿಧಿಸಬೇಕೆಂದು ಹೇಳಲಾಗುತ್ತದೆ.

ಬಹುಮುಖ್ಯವಾಗಿ ಈ ಕಾನೂನು ಸ್ತ್ರೀ-ಪುರುಷರ ವಿವಾಹದ ಚೌಕಟ್ಟಿನಾಚೆಗಿನ ಸಂಬಂಧವನ್ನು ಹೊಂದಿದ್ದು, ಮಹಿಳೆಯು ಆ ಸಂಗಾತಿಯಿಂದ ಕಿರುಕುಳಕ್ಕೆ ಒಳಗಾದರೆ ಆ ವ್ಯಕ್ತಿಯು, ಸೆಕ್ಷನ್ ೨(g)ಗನುಗುಣವಾಗಿ ಶಿಕ್ಷೆಯನ್ನು ಅನುಭವಿಸುತ್ತಾನೆ. ಇಬ್ಬರು ವ್ಯಕ್ತಿಗಳ ಮಧ್ಯದ ಸಂಬಂಧ ಅಥವಾ ಯಾವುದೇ ಸಮಯದಲ್ಲಿಯೂ ಗೃಹಸಂಬಂಧಿ ಅಂಶಗಳನ್ನು ಹಂಚಿಕೊಂಡು ಒಟ್ಟಿಗೆ ಬದುಕುವವರನ್ನು "ಕೌಟುಂಬಿಕ ಸಂಬಂಧ"ದ ವ್ಯಾಪ್ತಿಗೊಳಪಡಿಸುತ್ತದೆ. ಆದರೆ ಈ ಬಗೆಯ ಸಂಬಂಧಗಳಿಗೆ ನಿಗದಿತ ಅವಧಿಯನ್ನು ಒದಗಿಸಿಲ್ಲವಾಗಿದೆ ಹಾಗೂ ಕೌಟುಂಬಿಕ ದೌರ್ಜನ್ಯಕ್ಕೊಳಗಾದ ಮಹಿಳೆಗೆ ಪೋಲಿಸ್, ಆಶ್ರಯ ಮನೆ ಮತ್ತು ವೈದ್ಯಕೀಯ ಸೌಲಭ್ಯಗಳನ್ನು ಸೇವೆಗಳನ್ನು ಪಡೆಯುವ ಹಕ್ಕನ್ನು ಒದಗಿಸಲಾಗಿದೆ. ಈ ಕಾನೂನಿನಡಿಯಲ್ಲಿ ಅಪರಾಧಿಯೆಂದು ಗುರುತಿಸಲ್ಪಟ್ಟವರನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡುವುದನ್ನು ನಿಷೇಧಿಸಿದೆ. ಸಂರಕ್ಷಣಾಧಿಕಾರಿಗಳನ್ನು ನೇಮಿಸುವ ಹಕ್ಕನ್ನು ನೀಡಿದೆ. ವಿಶೇಷವಾದ ಚಿಂತನೆಗಳನ್ನಾಧರಿಸಿ ರೂಪಿತವಾದ ಈ ಕಾನೂನು ಅತಿಯಾದ ನಿರೀಕ್ಷೆಗಳನ್ನಿರಿಸಿಕೊಂಡಿದೆಯೆಂಬುದು ಖಚಿತವಾಗಿದೆ.

ಅತಿಯಾದ ಮಹತ್ವಾಕಾಂಕ್ಷೆಯಿರುವ ಈ ಕಾನೂನೇ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹಲವು ಬಗೆಯ ಆಕ್ರಮಣಗಳಿಗೆ ಒಳಗಾಗುತ್ತಿದೆ. ಕಾಯಿದೆಯು ಜಾರಿಯಾದ ನಂತರದಿಂದಲೂ ಈ ಕಾಯ್ದೆಯ ಕುರಿತು ಚರ್ಚೆಗಳು ನಡೆಯುತ್ತಿವೆ. ಸಾಂಪ್ರದಾಯಿಕ ಮನೋಭಾವವುಳ್ಳ ಸಮಾಜ ಜೀವಿಗಳು ಇದನ್ನು

ನಿಷೇಧಿಸುವಂತೆ ಸರ್ಕಾರಕ್ಕೆ ಒತ್ತಡವನ್ನು ತರುತ್ತಿದ್ದಾರೆ. ಪುರುಷ ಪ್ರಧಾನ ವ್ಯವಸ್ಥೆಗೆ ಮುಳ್ಳಾಗಿರುವ ಈ ಕಾನೂನನ್ನು ನಿಷೇಧಿಸುವ ಪ್ರಯತ್ನವು ಸಹ 'ಪುರುಷ ರಾಜಕಾರಣ'ವೇ ಆಗಿದೆ.

ಕೌಟುಂಬಿಕ ವಲಯದಲ್ಲಿನ ಸಮಗ್ರ ಬಗೆಯ ದೌರ್ಜನ್ಯವನ್ನು ಅನಾವರಣಗೊಳಿಸುವ ಈ ಕಾನೂನು, ಸಾರ್ವಜನಿಕ ವಲಯದಲ್ಲಿ ಜಾರಿಯಾಗಿಸುತ್ತಿರುವ ಕೆಲಸದ ಸ್ಥಳದಲ್ಲಿ ನಡೆಯುವ ಲೈಂಗಿಕ ಕಿರುಕುಳ ನಿಷೇಧ ಕಾಯ್ದೆಯನ್ನು ಮುಖಾಮುಖಿಯಾಗಿಸುವ ಮೂಲಕ ಕೌಟುಂಬಿಕ ವಲಯ - ಸಾರ್ವಜನಿಕ ವಲಯವು ಮೇಲ್ನೋಟಕ್ಕೆ ಭಿನ್ನವೆನಿಸಿದರೂ ಪರಸ್ಪರ ಪೂರಕವಾಗಿವೆಯಾದ್ದರಿಂದ, ಇಲ್ಲಿ ನಡೆಯುವ ದೌರ್ಜನ್ಯವು ಸಹ ಕೌಟುಂಬಿಕ ವಲಯದ ವಿಸ್ತೃತ ರೂಪವೇ, ಸಾರ್ವಜನಿಕ ವಲಯದಲ್ಲೂ ಕಾಣಿಸುತ್ತದೆ ಎಂಬ ಅಂಶದ ಪರಿಶೀಲನೆಗಾಗಿ ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳ ನಿಷೇಧ ಕಾಯ್ದೆಯನ್ನು ಚರ್ಚೆಗೊಳಪಡಿಸಲಾಗುತ್ತಿದೆ.

### ೨.೭ ಕೆಲಸದ ಸ್ಥಳಗಳಲ್ಲಿ ಲೈಂಗಿಕ ಕಿರುಕುಳ ತಡೆ ಕಾಯ್ದೆ : ಸ್ತ್ರೀವಾದಿ ವಿಶ್ಲೇಷಣೆ

ಸ್ತ್ರೀ ಸ್ವಾತಂತ್ರ್ಯವನ್ನು ನಿರಾಕರಿಸುವ ಸಮಾಜ ವ್ಯವಸ್ಥೆಯಲ್ಲಿ, ಅವಳ ಅಧೀನತೆಗೆ ಹಲವು ಬಗೆಯ ಕಾರಣಗಳನ್ನು ಕೊಡಲಾಗುತ್ತದೆ. ಅದರಲ್ಲಿ ಪ್ರಮುಖವಾಗಿ ಕಾಣಿಸಿಕೊಳ್ಳುವುದೇ ಆರ್ಥಿಕ ಅವಲಂಬನೆ. ಮಹಿಳೆ ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸದ ಹೊರತು, ಅವಳ ಅಸ್ತಿತ್ವರೂಪಿಕೆ ಸಾಧ್ಯವಾಗುವುದಿಲ್ಲವೆಂದು ಹೇಳಬಹುದು. ದಶಕಗಳ ಚರಿತ್ರೆಯತ್ತ ಗಮನಹರಿಸಿದಾಗ ಇವತ್ತಿನ ಮಹಿಳೆಯ ಪರಿಸ್ಥಿತಿಗಳಲ್ಲಿ ಹಲವಾರು ಬದಲಾವಣೆಗಳಾಗಿರುವುದು ಒಪ್ಪಿತವಾದರೂ, ಅವಳ ಅಧೀನ ನೆಲೆಯ ಬಿಡುಗಡೆಯಲ್ಲಿ ಇದ್ಯಾವುದು ಸಮರ್ಪಕವಾಗಿ ಸಹಾಯಕ್ಕೆ ನಿಲ್ಲುತ್ತಿಲ್ಲ. ಸಂದರ್ಭಾನುಸಾರವಾಗಿ ಹೊಸ ಬಗೆಯ ರೂಪಗಳನ್ನು ತಾಳುತ್ತಿರುವ ಪ್ರಧಾನಧಾರೆಗಳಲ್ಲಿ, ಮಹಿಳೆಯರ ಮೇಲಿನ ಹಿಂಸೆ-ದೌರ್ಜನ್ಯಗಳು ಹೊಸ ರೂಪಗಳಲ್ಲಿ ಕಂಡು ಬರುತ್ತಿವೆ. ಈ ಬಗೆಯ ಕ್ರೌರ್ಯಗಳನ್ನು ಎದುರಿಸುವುದಕ್ಕೆ ಸಮಾಜ ವ್ಯವಸ್ಥೆಯಲ್ಲಿ ಲಭ್ಯವಿರುವ ಶಿಕ್ಷಣವಾಗಲಿ, ಉದ್ಯೋಗವಾಗಲಿ ಅವಳಲ್ಲಿ ಆತ್ಮವಿಶ್ವಾಸವನ್ನು ಮೂಡಿಸುವುದಕ್ಕಿಂತ ಅವಳನ್ನು ಕುಬ್ಜಳಾಗಿಸುತ್ತಿರುವುದು, ಪುರುಷ ಮೌಲ್ಯಗಳಿಗೆ ನಿಷ್ಠಳಾಗುವಂತೆ ರೂಪಿಸುತ್ತಿರುವುದೇ ಹೆಚ್ಚಿನ ಸಂಖ್ಯೆಯಲ್ಲಿದೆ. ಇಂತಹ ಎಲ್ಲೆಗಳನ್ನು ಮೀರಿಯೂ ಕಾಣಿಸಿಕೊಳ್ಳುವಂತಹ ಮಹಿಳೆಯರು ಅಪವಾದವೆಂಬಂತಿದ್ದಾರೆ.

ಆರ್ಥಿಕ ಸ್ವಾವಲಂಬನೆಯ ಸಾಧನೆಗಾಗಿಯೊ? ಪುರುಷ ಪ್ರತಿಷ್ಠೆಯ ದ್ಯೋತಕವಾಗಿಯೊ? ಕುಟುಂಬದ ಹೊಣೆ ಹೊರುವ ಅನಿವಾರ್ಯತೆಗಾಗಿಯೊ? ಬಡತನಕ್ಕಾಗಿಯೋ? ವ್ಯವಸ್ಥೆ ನಿರ್ಮಿತ ವಿವಾಹದ ಅಗತ್ಯತೆಯ ಭಾಗವಾಗಿಯೊ? ಉದ್ಯೋಗ ವಲಯಕ್ಕೆ ಮಹಿಳೆಯರು ಕಾಲಿರಿಸುತ್ತಿರುವುದು ಕಂಡು ಬರುತ್ತದೆ. ಹಾಗೆಯೇ ಈ ಉದ್ಯೋಗ ವಲಯಕ್ಕೆ ಮುಖಾಮುಖಿಯಾದ ಮಹಿಳೆಯರು ತಮ್ಮ ಸ್ವ-ಇಚ್ಛೆಯ ಹುದ್ದೆಗಳನ್ನು ಪಡೆಯುವಲ್ಲಿ ವಿಫಲರಾಗುತ್ತಿರುವುದು ಹೆಚ್ಚಿನ ಸಂಖ್ಯೆಯಲ್ಲಿದೆ. ಕುಟುಂಬ ವಲಯದಲ್ಲಿ ನಿರ್ವಹಿಸುವ ಸೇವಾವಲಯದಂತೆಯೇ, ಉದ್ಯೋಗವಲಯದಲ್ಲಿ ಮಹಿಳೆಯರನ್ನು

ಶಿಕ್ಷಕಿಯಾಗಿಯೊ, ದಾದಿಯಾಗಿಯೊ, ದ್ವಿತೀಯ-ಪ್ರಥಮ ದರ್ಜೆಯ ಸಹಾಯಕ ಹುದ್ದೆಗಳಿಗೆ ಮೀಸಲಾಗಿರುಸುತ್ತಿರುವುದು ಸಾರ್ವಜನಿಕ ವಲಯಗಳಲ್ಲೂ ನಿಗದಿಗೊಳಿಸಲಾಗುತ್ತಿರುವುದು ಒಂದು ಆಯಾಮವಾದರೆ, ಈ ದುಡಿಮೆಯಿಂದ ಲಭ್ಯವಾಗುವ ಆದಾಯವು ಅವಳಿಗೆ ದಕ್ಕದಂತಹ, ಅವಳ ಸ್ವಯಂ ಅಗತ್ಯಗಳ ಪೂರೈಕೆಗಾಗಿ ಉಳಿಯುತ್ತಿಲ್ಲವೆಂಬುದು ಅಧೀನತೆಯ ಸ್ಥಿರೀಕರಣ ಇನ್ನೊಂದು ಆಯಾಮವೆನ್ನಬಹುದು.

ಎಂತಹದೆ ಪಾಂಡಿತ್ಯವನ್ನು ಹೊಂದಿರುವ ಮಹಿಳೆಯಾದರೂ ಉದ್ಯೋಗ ವಲಯದಲ್ಲಿ 'ಅಧಿಕಾರಯುತ ಹುದ್ದೆ'ಗಳಿಂದ, ನಿರ್ಧಾರಾತ್ಮಕ ನೆಲೆಗಳಿಂದ ವಂಚಿತಳಾಗುತ್ತಿರುವುದೇ ಹೆಚ್ಚು ಎಂಬುದು ಮೂರನೆ ಆಯಾಮವಾಗಿ ಪರಿಗಣಿಸಬಹುದು. ಈ ಬಗೆಯ ಹತ್ತು ಹಲವು ಸಂಕೀರ್ಣ ಮಜಲುಗಳನ್ನು ಮೀರಿ ಅವಳು ಸಾಧನಾ ವಲಯಕ್ಕೆ ಪ್ರವೇಶಿಸಿ ಸಾಧಿಸಿದ್ದೇ ಆದರೆ, ಅವಳಿಗೆ ಸಲ್ಲಬೇಕಾದ ಗೌರವ ಮನ್ನಣೆ, ಮಾನ್ಯತೆಗಳು ದೊರೆಯುವುದಿಲ್ಲ. ಉದಾ:- ಇತ್ತೀಚೆಗಷ್ಟೇ ನಿಧನರಾದ ಸ್ವರ ಸಾಮ್ರಾಜ್ಞೆ ಗಂಗೂಬಾಯಿ ಹಾನಗಲ್, ಸಂಗೀತ ಲೋಕದಲ್ಲಿ ಮಹತ್ತರವಾದಂತಹ ಸಾಧನೆಯನ್ನು ಮಾಡಿದರೂ ಸಹ, ಅವರಿಗೆ ಪುರುಷರಂತೆಯೇ 'ಪಂಡಿತ್' ಎಂದು ಸಂಬೋಧಿಸುವಲ್ಲಿಯ ನಿರಾಕರಣೆಯನ್ನು ಕಾಣಬಹುದು. ಪಂಡಿತ್ ಭೀಮಸೇನ್ ಜೋಶಿ ಎಂದು ಹೇಳುವಂತೆ, ಪಂಡಿತ್ ಗಂಗೂಬಾಯಿ ಹಾನಗಲ್ ಎಂದು ಹೇಳದಿರುವುದು, ಆ ವಿದ್ವತ್‌ಲೋಕಕ್ಕೆ, ಗೌರವಕ್ಕೆ ಅನರ್ಹರೆಂಬುದರ ಪ್ರತೀಕವಾಗಿ ವ್ಯವಸ್ಥೆಯು ಪ್ರತಿಬಿಂಬಿಸುತ್ತದೆ. ಮಹತ್ತರ ಸಾಧನೆಗಳಿಗೆ ಹೆಸರಾದವರ ಪರಿಸ್ಥಿತಿಗಳು, ಸಲ್ಲಬೇಕಾದ ಮಾನ್ಯತೆಗಳು, ಲಭ್ಯವಾಗಬೇಕಾದ ಅನುಕೂಲಗಳಿಂದ ವಂಚಿತರಾಗುವಂತಹ ಸಂದರ್ಭಗಳಲ್ಲಿ, ಸಾಮಾನ್ಯ ಉದ್ಯೋಗಗಳಲ್ಲಿ ಕಾಣಿಸಿಕೊಳ್ಳುವ ಮಹಿಳೆಯರ ಬದುಕು ಊಹೆಗೂ ನಿಲುಕದಂತಹ ನಿಕೃಷ್ಟ ಸ್ಥಿತಿಯನ್ನು ಹೊಂದಿದೆ.

ಹಲವು ಬಗೆಯ ಸಂಘಟಿತ - ಅಸಂಘಟಿತ ವಲಯಗಳಿಗೆ ಪ್ರವೇಶಿಸುತ್ತಿರುವ ಮಹಿಳೆ ಕೆಲಸದ ಸ್ಥಳಗಳಲ್ಲಿ ಲೈಂಗಿಕ ದೌರ್ಜನ್ಯಕ್ಕೆ ಒಳಗಾಗುತ್ತಿರುವ ಪ್ರಕರಣಗಳ ಸಂಖ್ಯೆ ಹೆಚ್ಚುತ್ತಲಿದೆ. ಗೋಚರವಾಗುವ ಸಂಗತಿಯನ್ನಾಧರಿಸಿ ಹೇಳಬಹುದಾದರೂ ಅಗೋಚರ ಪ್ರಕರಣಗಳ ಸಂಖ್ಯೆಯ ಲೆಕ್ಕ ತರ್ಕಕ್ಕೆ ನಿಲುಕದಂತಿದೆ. ಒಂದೆಡೆ ಆರ್ಥಿಕ ಸ್ವಾವಲಂಬನೆಯ ಉದ್ದೇಶದಿಂದ ಮಹಿಳೆಯರಿಗೆ ಉದ್ಯೋಗಾವಕಾಶವನ್ನು ಸೃಷ್ಟಿಸುತ್ತಿರುವ ಪ್ರಭುತ್ವ - ಸರ್ಕಾರ ವ್ಯವಸ್ಥೆಗಳು, ಇನ್ನೊಂದೆಡೆ ಅವಳಿಗೆ ದೊರೆತ ಉದ್ಯೋಗವನ್ನು ನಿಭಾಯಿಸಲು ಅಸಮರ್ಥಳೆಂದು ನಿರೂಪಿಸುವ ತಂತ್ರಗಾರಿಕೆಗಳಿಂದ ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳದಂತಹ ದೌರ್ಜನ್ಯಗಳಿಂದ, ಒಂದು ಉದ್ಯೋಗವನ್ನೇ ನಿರಾಕರಿಸುವಂತಹ ಸ್ಥಿತಿಯನ್ನು ರೂಪಿಸುವುದು, ಪ್ರವೇಶ ನಿಷೇಧದ ಎರಡನೆ ಹಂತದ ಹಿಂಸೆ-ದೌರ್ಜನ್ಯವೆಂದು ಹೇಳಬಹುದು. ಇದರಾಚೆಗೂ ಪ್ರವೇಶಿಸಿದ್ದೇ ಆದರೆ ಅಲ್ಲಿನ ಆಕ್ರಮಣಗಳನ್ನು ಎದುರಿಸಿ ಬದುಕುತ್ತಿರುವುದೇ ಆದರೆ, ಅವಳ ಕೆಲಸಗಳಲ್ಲಿನ ಶ್ರದ್ಧೆ, ಆಸಕ್ತಿಯನ್ನು ವಿಚಲಿತಗೊಳಿಸುವ, ಮಾನಸಿಕ ಒತ್ತಡಗಳನ್ನು, ಅಭದ್ರತೆಯ

ಭಾವವನ್ನು ಸೃಷ್ಟಿಸುತ್ತಿರುವ ಮೂಲಕ ಅವಳನ್ನು ಅಧೀನ ಸ್ತರಕ್ಕೆ ಕುಟುಂಬದ ಚೌಕಟ್ಟಿಗೆ ಸೀಮಿತಗೊಳಿಸುವ ತಂತ್ರಗಾರಿಕೆಯೇ ಆಗಿದೆ. ಇದಕ್ಕೆ ಸೂಕ್ತ ಉದಾ:- ಅದ್ಭುತ ಟೆನ್ನಿಸ್ ಆಟಗಾರ್ತಿಯೆಂದೆ ಹೆಸರಾದ ಸಾನಿಯಾ ಮಿರ್ಜಾ ಭಾರತ ದೇಶಕ್ಕೆ, ಮುಸ್ಲಿಂ ಮಹಿಳಾ ಸಮುದಾಯಕ್ಕೆ ಕೀರ್ತಿಯ ಪ್ರತೀಕವಾದ ಇವರು ಕ್ರೀಡಾಲೋಕದಲ್ಲಿ ಹಿಂದೆಂದೂ ಇಲ್ಲದಷ್ಟು ಕೀರ್ತಿಯನ್ನು ತಂದುಕೊಡುವಲ್ಲಿ ಯಶಸ್ವಿಯಾಗುತ್ತಿದ್ದಾರೆ. ಹದಿನೆಂಟು ವರ್ಷವನ್ನು ದಾಟಿದ ಈ ಆಟಗಾರ್ತಿಯ ಸಾಧನೆಯು ನಿಜಕ್ಕೂ ಅಮೋಘವಾದುದು. ಗೌರವಕ್ಕೆ ಪಾತ್ರವಾದುದು. ಆದರೆ ಇವರಿಗೆ ಸಿಗಬೇಕಾದ ಪ್ರೋತ್ಸಾಹದ ಬದಲು ವ್ಯವಸ್ಥೆಯಲ್ಲಿ ದಮನದ ಸಂಗತಿಯೇ ಹೆಚ್ಚು. ಧರ್ಮದ ಹೆಸರಿನಲ್ಲಿ ಜಮಾತ - ಎ - ಉಲೇಮಾ - ಎ - ಹಿಂದ್ ಸಂಸ್ಥೆಯು ಇಸ್ಲಾಮಿಕ್ ಉಡುಪನ್ನು ಧರಿಸಿ ಟೆನಿಸ್ ಆಡುತ್ತಿಲ್ಲವೆಂಬ ಆರೋಪವನ್ನು ಮಾಡುವುದರೊಂದಿಗೆ, ಕಲ್ಕತ್ತಾದಲ್ಲಿ ಅವರಿಗೆ ಆಡಲಿಕ್ಕೆ ಬಿಡುವುದಿಲ್ಲವೆಂಬ ಹೇಳಿಕೆಯನ್ನು ನೀಡಿರುವುದು ಮಹಿಳಾ ಸಾಧನೆಯ ತಿರಸ್ಕಾರವೇ ಆಗಿದೆ.

ಸಾನಿಯಾ ಮಿರ್ಜಾರಿಗೆ ಪೋಲಿಸ್ ಇಲಾಖೆಯಿಂದ, ಶಿಕ್ಷಣ ಸಂಸ್ಥೆಗಳಿಂದ ರಕ್ಷಣೆಯನ್ನು ನೀಡುತ್ತಿದೆಯೆಂದು ಹೇಳಬಹುದಾದರೂ ಒಂದು ಸಾಧನೆಗೆ ತೊಡಗಿದಾಗ ಅಲ್ಲಿ ನಿರಾಳತೆಯ - ನಿರಾತಂಕದ ವಾತಾವರಣ, ಸಾಧಕರಿಗೆ ಲಭ್ಯವಾಗಬೇಕು. ಆದರೆ ಮಾನಸಿಕವಾಗಿ ಕುಗ್ಗಿಸುವ ಮೂಲಕ, ಅವರ ಸಾಮರ್ಥ್ಯವನ್ನು ತೋರಿಸುವಲ್ಲಿ ಅಶಕ್ತರಾಗಿಸುವಂತಹ ಸಂದರ್ಭಗಳ ಸೃಷ್ಟಿಯು ಲಿಂಗದ ಕಾರಣದಿಂದಲೇ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ - ಹಿಂಸೆಯೆಂಬುದು ಸ್ಪಷ್ಟವಾಗುತ್ತದೆ. ಇದೇ ಸಾಮಾಜಿಕ ವ್ಯವಸ್ಥೆಯಲ್ಲಿ ಅದೆಷ್ಟು ಮುಸ್ಲಿಂ ಮಹಿಳೆಯರು ಸಿನಿಮಾ ತಾರೆಗಳಾಗಿ, ವಿಶ್ವಸುಂದರಿಯಂತಹ ಸ್ಪರ್ಧೆಗಳಲ್ಲಿ ಪಾಲ್ಗೊಳ್ಳುತ್ತಿರುವುದನ್ನು ಪ್ರಶ್ನಿಸದಿರುವುದು, ತನ್ನ ಅಗತ್ಯಕ್ಕಾಗಿ ಸನ್ನಿವೇಶಗಳನ್ನು ತಿರುಚಿಕೊಳ್ಳುವ ಪುರುಷ ಧೋರಣೆಯು ಕಂಡು ಬರುತ್ತದೆ. ವಿಶ್ವಸುಂದರಿ, ಚಲನಚಿತ್ರಗಳಲ್ಲಿನ ಅಶ್ಲೀಲತೆಗಳು ಪುರುಷನ ದಾಹ ತಣಿಸುವಲ್ಲಿ ರೂಪಿಸಿಕೊಂಡ ಆಯಾಮಗಳಾದ್ದರಿಂದ ಅಲ್ಲಿನ ಮಹಿಳೆಯ ಮೇಲಾಗುವ ಹಿಂಸೆ-ದೌರ್ಜನ್ಯಗಳಾಗಲಿ, ಪ್ರಶ್ನೆಗಳಾಗಲಿ ತಲೆಯೆತ್ತುವುದಿಲ್ಲ. ಇಂತಹ ಹಲವು ಬಗೆಯ ಉದ್ಯೋಗಸ್ಥ ಮಹಿಳೆಯರ ಸಂಗತಿಗಳನ್ನು ಸಾಕ್ಷಿಯಾಗಿ ಒದಗಿಸಬಹುದಾಗಿದೆ. ಹೀಗೆ ಹತ್ತಾರು ಬಗೆಯ ಸಮಸ್ಯೆಗಳಲ್ಲಿ ಹೆಚ್ಚಿನ ಬಗೆಯಲ್ಲಿ ಕಂಡು ಬರುತ್ತಿರುವುದು ಉದ್ಯೋಗ ಸ್ಥಳದಲ್ಲಿ ಲೈಂಗಿಕ ಕಿರುಕುಳಗಳು. ಇದು ಸಂಘಟಿತ-ಅಸಂಘಟಿತವಲಯಗಳಲ್ಲಿ ಪಡೆದುಕೊಳ್ಳುವ ಸ್ವರೂಪ, ಪ್ರಮಾಣಗಳು ಭಿನ್ನವಾದರೂ ಉದ್ದೇಶ ಒಂದೆಯಾಗಿದೆ.

ಕೌಟುಂಬಿಕ ವಲಯದ ದೌರ್ಜನ್ಯ - ಹಿಂಸೆಯ ವಿಸ್ತೃತ ರೂಪವೇ ಸಾರ್ವಜನಿಕ ವಲಯದಲ್ಲಿ ಕಾಣಿಸಿಕೊಳ್ಳುವ ಸಂಗತಿಯನ್ನು ಪರಿಶೀಲಿಸಲು ಕೌಟುಂಬಿಕ ಹಿಂಸೆ ತಡೆ ಕಾಯ್ದೆ ಮತ್ತು ಕೆಲಸದ ಸ್ಥಳಗಳಲ್ಲಿ ನಡೆಯುವ ಲೈಂಗಿಕ ಕಿರುಕುಳ ನಿಷೇಧ ಕಾಯ್ದೆಯನ್ನು ವಿಶೇಷವಾಗಿ ವಿಶ್ಲೇಷಣೆಗೊಳಪಡಿಸುವ ಈ ಹಿನ್ನೆಲೆಯಲ್ಲಿ ಕೆಲಸದ ಸ್ಥಳಗಳಲ್ಲಿ ಲೈಂಗಿಕ ಕಿರುಕುಳ ನಿಷೇಧ ಕಾಯ್ದೆಯ ಅಗತ್ಯತೆಯನ್ನು ಚರ್ಚಿಸಲಾಗುತ್ತಿದೆ.

**ಕೆಲಸದ ಸ್ಥಳಗಳಲ್ಲಿ ಲೈಂಗಿಕ ಕಿರುಕುಳ ನಿಷೇಧ ಕಾಯ್ದೆ - ಜಾರಿಗೊಳಿಸಬೇಕಾದ ಸಂದರ್ಭ**

ಸಾರ್ವಜನಿಕ ವಲಯದ ಪ್ರಮುಖ ಭಾಗವಾಗಿರುವ ಉದ್ಯೋಗವಲಯಗಳಲ್ಲಿ ಮಹಿಳೆಯರು ಪಾಲ್ಗೊಳ್ಳುತ್ತಿರುವುದು ತೀರಾ ಇತ್ತೀಚಿನ ಸಂಗತಿಯೇನಲ್ಲ. ಹಾಗೆಯೇ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ-ಹಿಂಸೆಯ ಬಗೆಗಳಲ್ಲಿ 'ಲೈಂಗಿಕ ಕಿರುಕುಳ'ವು ಒಂದಾಗಿದೆ. ಮಹಿಳೆಯರು ಕುಟುಂಬ - ಕುಟುಂಬದಾಚೆಗಿನ ಸಂದರ್ಭಗಳಲ್ಲೂ ಲೈಂಗಿಕ ದೌರ್ಜನ್ಯಕ್ಕೆ ಒಳಗಾಗುತ್ತಿರುವುದನ್ನು ಸಾಕಷ್ಟು ಅಧ್ಯಯನಗಳು ಶೋಧಿಸಿವೆ.

ಹಲವು ವರ್ಷಗಳಿಂದ ಮಹಿಳಾ ಸಂಘಟನೆಗಳು ಮಹಿಳೆಯರ ವಿರುದ್ಧ ನಡೆಯುವ ಹಿಂಸೆ-ದೌರ್ಜನ್ಯದಂತಹ ಕೃತ್ಯಗಳ ವಿರುದ್ಧ ಪ್ರತಿಭಟನೆಯನ್ನು ಮಾಡಿರುವುದು ಕಂಡು ಬರುತ್ತದೆ. ಭಾರತದ ಸಂವಿಧಾನದ ೧೯ (೧) (ಜಿ) ಅನುಚ್ಛೇದದ ಅಡಿಯಲ್ಲಿ ಯಾವುದೇ ವ್ಯಕ್ತಿಯು, ಯಾವುದೇ ವೃತ್ತಿಯನ್ನು ಮಾಡುವ ಅಥವಾ ಯಾವುದೇ ಉದ್ಯೋಗ ಅಥವಾ ವ್ಯಾಪಾರವನ್ನು ಕೈಗೊಳ್ಳುವ ಸ್ವಾತಂತ್ರ್ಯ ಒಂದು ಮೂಲಭೂತ ಹಕ್ಕು ಎಂದು ಹೇಳುತ್ತದೆ. ಆದರೆ ಸರ್ವರಿಗೂ ಸಮಾನವೆಂದು ಜಾರಿಯಾದ ಸಂವಿಧಾನದಲ್ಲಾಗಲಿ, ಇತರೆ ಯಾವುದೇ ಅಂಶಗಳಲ್ಲಾಗಲಿ ಮಹಿಳೆಯರನ್ನು ಒಳಗೊಂಡಿಲ್ಲವೆಂಬುದು ಅಲಿಖಿತ ಶಾಸನದಂತಿದೆ. ಹಾಗೆಯೇ ಕೆಲಸದ ಸ್ಥಳಗಳಲ್ಲಿ ತೊಡಗುವ ಮಹಿಳೆಯರು ಒಳಗಾಗುವ ಲೈಂಗಿಕ ಕಿರುಕುಳವು ಮಹಿಳೆಯರ ಮೂಲಭೂತ ಹಕ್ಕಿನ ಉಲ್ಲಂಘನೆಯಾಗುತ್ತದೆಯೆಂದು ಹೇಳಬಹುದು.

ಅಲ್ಲದೆ ೧೯೭೯ರಲ್ಲಿ ಜಾರಿಯಾದ CEDAW ಒಡಂಬಡಿಕೆಯು ಮಹಿಳೆಯರ ವಿರುದ್ಧ ತೋರುವ ತಾರತಮ್ಯ ಮತ್ತು ಮಹಿಳೆಯರ ಘನತೆಗೆ ಕುಂದುಂಟು ಮಾಡುವ ಯಾವುದೇ ಕೃತ್ಯ ಸಮಾನತೆಯ ಹಕ್ಕನ್ನು ಉಲ್ಲಂಘಿಸುತ್ತದೆಯಾದ್ದರಿಂದ ಅದನ್ನು ಮಾನವ ಹಕ್ಕುಗಳ ಉಲ್ಲಂಘನೆಯೇ ಆಗಿದೆ. ಈ ಬಗೆಯ ಸಂಗತಿಗಳು ಸಂವಿಧಾನದಲ್ಲಿ ದಾಖಲಾದರೂ, ಅದು ಕೇವಲ ಪುಸ್ತಕಗಳೊಳಗಿನ ಸಮಾನತೆಯಾಗಿದೆಯೇ ವಿನಃ ವಾಸ್ತವದಲ್ಲಿ ಪೂರಕವಾಗಿಲ್ಲವೆಂಬುದಕ್ಕೆ ಹೆಚ್ಚುತ್ತಿರುವ ಕೆಲಸದ ಸ್ಥಳಗಳಲ್ಲಿನ ಲೈಂಗಿಕ ಕಿರುಕುಳದ ಪ್ರಕರಣಗಳೆ ಆಧಾರವಾಗಿವೆ.

ರಾಜಸ್ಥಾನ ಸರ್ಕಾರದ ಮಹಿಳಾ ಅಭಿವೃದ್ಧಿ ಯೋಜನೆಯಡಿಯಲ್ಲಿ 'ಸಾಥಿನ್' ಆಗಿ ಕೆಲಸ ಮಾಡುತ್ತಿರುವ ಭಾಂವ್ರಿದೇವಿ ಎಂಬ ಮಹಿಳೆಯು, ಬಾಲ್ಯ ವಿವಾಹಗಳನ್ನು ತಡೆಗಟ್ಟುವ ಕೆಲಸವನ್ನು ಮಾಡುತ್ತಿದ್ದರು. ರಾಜಸ್ಥಾನದ ಹಳ್ಳಿಯೊಂದರಲ್ಲಿ ಒಂದು ವರ್ಷದ ಮಗುವಿನ ಬಾಲ್ಯ ವಿವಾಹವನ್ನು ತಡೆದು ನಿಲ್ಲಿಸಿದರೆಂಬ ಕಾರಣಕ್ಕೆ ಭಾಂವ್ರಿದೇವಿಯವರ ಮೇಲೆ ನಾಲ್ಕು ಜನರು ಅವರ ಗಂಡನ ಸಮ್ಮುಖದಲ್ಲೆ ಸಾಮೂಹಿಕ ಅತ್ಯಾಚಾರವನ್ನು ಮಾಡಿದರು. ದೈಹಿಕ ಮತ್ತು ಮಾನಸಿಕ ಆಘಾತಕ್ಕೊಳಗಾದ ಭಾಂವ್ರಿದೇವಿಯವರು ತಮ್ಮ ಆತ್ಮಸ್ಥೈರ್ಯವನ್ನು ಕಳೆದುಕೊಳ್ಳದೆ, ದೂರನ್ನು ದಾಖಲಿಸಲು ಮುಂದಾದಾಗ, ಇದಕ್ಕೆ ಲಭ್ಯವಾಗಬೇಕಾದ ಸಾಕ್ಷಿಗಳು ದೊರೆಯದಂತೆ ಸಕಲ ಪ್ರಯತ್ನಗಳು ನಡೆದವು. ವೈದ್ಯ ವ್ಯವಸ್ಥೆ ಮತ್ತು ಸಮಾಜದ ರಕ್ಷಣೆಗಾಗಿಯೇ ಸ್ಥಾಪಿತವಾದ ಪೋಲಿಸ್ ಮತ್ತು ನ್ಯಾಯ ವ್ಯವಸ್ಥೆಗಳು ದೂರನ್ನು

ದಾಖಲಿಸದಂತೆ ಎಲ್ಲ ಹಂತಗಳಲ್ಲಿ ಅಡ್ಡಿಯನ್ನುಂಟುಮಾಡಿದಾಗ, ಕೆಲವು ಮಹಿಳಾಪರ ಸಂಘಟನೆಗಳು, ಸಾಮಾಜಿಕ ಕಾರ್ಯಕರ್ತರು ಸೇರಿ ಭಾರತದ ಸಂವಿಧಾನದ ೧೪, ೧೯ ಮತ್ತು ೨೧ನೆಯ ಅನುಚ್ಛೇದದಡಿಯಲ್ಲಿ ಮಹಿಳೆಯರಿಗೆ ದಕ್ಕಬೇಕಾದ ಮೂಲಭೂತ ಹಕ್ಕುಗಳು ಜಾರಿಯಾಗಬೇಕೆಂದು ಸಾರ್ವಜನಿಕ ಹಿತಾಸಕ್ತಿ ಅರ್ಜಿಯನ್ನು ಸಲ್ಲಿಸಿದರು. ಸರ್ವೋಚ್ಚ ನ್ಯಾಯಾಲಯ ೧೯೯೭ರ ಆಗಸ್ಟ್ ೧೨ ರಂದು ಈ ಪ್ರಕರಣದಲ್ಲಿ ತೀರ್ಪು ನೀಡಿತು. 'ವಿಶಾಖಾ' ಎಂಬ ಮಹಿಳಾ ಸಂಘಟನೆಯ ಮೂಲಕ ಅರ್ಜಿ ಸಲ್ಲಿಸಿದ್ದ ಕಾರಣ ಇದು 'ವಿಶಾಖಾ Vs ರಾಜಸ್ಥಾನ ಸರ್ಕಾರ' ಪ್ರಕರಣವೆಂದೆ ದಾಖಲಾಗಿ, ವಿಶಾಖಾ ತೀರ್ಪಾಗಿ ಹೊರಬಂದಿತು. ಅದೇ ಸಂದರ್ಭದಲ್ಲಿ ಲೈಂಗಿಕ ಕಿರುಕುಳದ ಕುರಿತ ವಿವರವಾದ ಮಾರ್ಗದರ್ಶಿ ಸೂತ್ರಗಳನ್ನು ಸಹ ಸರ್ವೋಚ್ಚ ನ್ಯಾಯಾಲವು ಘೋಷಿಸಿತು.

**ಕೆಲಸದ ಸ್ಥಳಗಳಲ್ಲಿ ಲೈಂಗಿಕ ಕಿರುಕುಳ ನಿಷೇಧ ಕಾಯ್ದೆ - ಸ್ಥೂಲ ನೋಟ**

"ಸ್ತ್ರೀ-ಪುರುಷರ ಸಮಾನತೆ ಎಂಬುದರಲ್ಲಿ ಲೈಂಗಿಕ ಕಿರುಕುಳದಿಂದ ರಕ್ಷಣೆ ಹಾಗೂ ಗೌರವಯುತವಾಗಿ ಕೆಲಸ ಮಾಡುವ ವಾತಾವರಣವನ್ನು ಹೊಂದಿರುವ ಹಕ್ಕೂ ಸೇರುತ್ತದೆ. ಇದು ಸಾರ್ವತ್ರಿಕವಾಗಿ ಮಾನ್ಯತೆ ಪಡೆದಿರುವ ಮೂಲಭೂತ ಮಾನವ ಹಕ್ಕು. ಈ ಹಕ್ಕನ್ನು ಚಲಾಯಿಸಲು ಅಗತ್ಯವಾದ, ಸಮಾನ ಕನಿಷ್ಠ ಅಗತ್ಯತೆಗೆ ಜಾಗತಿಕ ಸಮ್ಮತಿ ದೊರೆತಿದೆ. ಆದ್ದರಿಂದ ಈ ಸೂತ್ರಗಳ ರಚನೆಯಲ್ಲಿ ಅಂತರರಾಷ್ಟ್ರೀಯ ಒಡಂಬಡಿಕೆ ಹಾಗೂ ಸೂತ್ರಗಳು ಅತ್ಯಂತ ಪ್ರಮುಖ ಪಾತ್ರವಹಿಸುತ್ತವೆ". ಈ ಬಗೆಯ ಸಮಗ್ರ ಶಾಸನವನ್ನು ಶೀಘ್ರವಾಗಿ ರಚಿಸಬೇಕೆಂದು ಸಹ ತೀರ್ಪಿನಲ್ಲಿ ತಿಳಿಸಲಾಗಿದೆ (ಉಲ್ಲೇಖ : Combating law of Sexual harrassment at work place).[೧೭]

ಕೆಲಸದ ಸ್ಥಳಗಳಲ್ಲಿನ ಲೈಂಗಿಕ ಕಿರುಕುಳದ ವಿರುದ್ಧ, ಮಹಿಳೆಯರ ರಕ್ಷಣಾ ಕಾಯ್ದೆ ೨೦೦೭ ಎಂಬ ಶೀರ್ಷಿಕೆಯನ್ನು ಸೆಕ್ಷನ್ ಒಂದರಲ್ಲಿ ಸೂಚಿಸಲಾಗಿದೆ ಹಾಗೂ ಈ ಕಾಯ್ದೆಯ ನಿಯಮಗಳು ಭಾರತದುದ್ದಕ್ಕೂ ಅನ್ವಯಿಸುತ್ತವೆ. ಕೇಂದ್ರ ಸರ್ಕಾರದ ಒತ್ತಡದಿಂದ ಬಂದ ಸರ್ಕಾರಿ ಪ್ರಕಟಣೆಯು ಪತ್ರಿಕೆಯ ವಿಜ್ಞಾಪನಾ ಪತ್ರವಾಗಿ ಇದನ್ನು ರೂಪಿಸಲಾಗಿದೆ.

ಸೆಕ್ಷನ್ : ೨ರಲ್ಲಿ ಈ ಕಾಯ್ದೆಯು ಒಳಗೊಂಡಿರುವ ಪ್ರಮುಖ ಪದಗಳ ವ್ಯಾಖ್ಯಾನಗಳನ್ನು ಒಳಗೊಂಡಿದೆ. ೨ (A) "ಪೀಡಿತ ಮಹಿಳೆ"ಯೆಂದರೆ ಯಾವುದೇ ಕೆಲಸದ ಮಹಿಳೆಯು ಯಾರಿಂದಲಾದರೂ ಲೈಂಗಿಕ ಕಿರುಕುಳದ ಕೃತ್ಯಕ್ಕೆ ಒಳಗಾದವರು ಎಂದು ಹೇಳಲಾಗುತ್ತದೆ. ೨ (b) "ನಿಯಮಿತ ಸರ್ಕಾರ" ಅಂದರೆ ಯಾವುದೇ ರೀತಿಯಲ್ಲಿ ಸ್ಥಾಪಿಸಲ್ಪಟ್ಟ, ಖರೀದಿಸಲ್ಪಟ್ಟ, ಒಡೆತನವನ್ನು ಹೊಂದಿದ ನೇರವಾಗಿ ಅಥವಾ ಪರೋಕ್ಷವಾಗಿ ಹಣಕಾಸುಗಳು ಒದಗಿಸಲ್ಪಟ್ಟ ಕೆಲಸದ ಸ್ಥಳದೊಂದಿಗೆ ಸಂಬಂಧ ಹೊಂದಿರುವುದನ್ನು ಹೇಳಲಾಗಿದೆ.

೨ (c)ಯಲ್ಲಿ ಜಿಲ್ಲಾ ಸಮಿತಿಯಿಂದ ಆಯ್ಕೆಯಾದವರನ್ನು ಅಧ್ಯಕ್ಷರೆಂದು ಗುರುತಿಸಲಾಗಿದೆ ಹಾಗೂ ೨ (d) ಸೆಕ್ಷನ್ ನಾಲ್ಕರಡಿಯಲ್ಲಿ ದೂರುಗಳನ್ನು ಪಡೆದು ದಾಖಲಿಸಲು ರೂಪಿಸಲಾಗಿರುವುದನ್ನು

ಕಮಿಟಿಯೆಂದು ಹೇಳಲಾಗಿದೆ. ೨ (e)ಯನ್ವಯ ಅಧಿಕಾರಿಯಾಗಿ ನೇಮಕವಾದವರನ್ನು 'ಜಿಲ್ಲಾ ಅಧಿಕಾರಿ' ಎಂದು ಕರೆಯಲಾಗಿದೆ.

೨ (f) ಪ್ರಕಾರ "ಕೆಲಸಗಾರರು" ಅಥವಾ "ನೌಕರರು" ಎಂದರೆ ಯಾವುದೇ ಕೆಲಸದ ಸ್ಥಳದಲ್ಲಿ ನಿರಂತರವಾಗಿ, ತಾತ್ಕಾಲಿಕವಾಗಿ, ದಿನಗೂಲಿ ಆಧಾರದ ಮೇಲೆ, ನೇರ ಅಥವಾ ಏಜೆಂಟರ ಮೂಲಕ ನೇಮಕವಾದವರು, ಕಾಂಟ್ರಾಕ್ಟರಗಳು ನೇಮಿಸಿಕೊಂಡವರು, ಪ್ರಮುಖ ಉದ್ಯೋಗಿಯ ಗಮನಕ್ಕೆ ಬಂದು ಅಥವಾ ಬಾರದೆ ಇರುವವರು, ತಾತ್ಕಾಲಿಕ ಉದ್ದೇಶಕ್ಕಾಗಿ ನೇಮಕವಾದವರು, ಸಂಭಾವನೆ ಸಹಿತ ಅಥವಾ ರಹಿತ ಕೆಲಸ ಮಾಡುವವರು, ಗೃಹಕೃತ್ಯ ಕೆಲಸಗಾರರು, ತರಬೇತಿದಾರರು, ಪರೀಕ್ಷಾ ಅವಧಿಯಲ್ಲಿರುವ ಕೆಲಸಗಾರರನ್ನು, ಈ ಕಾಯ್ದೆಯು ಕೆಲಸಗಾರರು ಅಥವಾ ನೌಕರರೆಂದು ಗುರುತಿಸುತ್ತದೆ.

೨ (g) ಯಜಮಾನ/ಒಡೆಯ ಎಂದರೆ

(i) ಯಾವುದೇ ವಿಭಾಗ, ಸಂಘಟನೆಯನ್ನು ಒಳಗೊಂಡ, ಸ್ಥಾಪಿತ, ಸಂಸ್ಥೆ, ಕಛೇರಿ, ಶಾಖೆ ಅಥವಾ ಸ್ಥಳೀಯ ಸ್ವಾಧೀನ ಅಥವಾ ಸರ್ಕಾರ ನಿಗದಿಪಡಿಸಿದ ಘಟಕದ ಯಜಮಾನ, ವಿಭಾಗದ ಮುಖ್ಯಸ್ಥ, ಮೊದಲಾದವರನ್ನು ನಿಗದಿತ ಕ್ರಮದಲ್ಲಿ ಈ ವ್ಯಾಖ್ಯಾನಕ್ಕೆ ಸೇರಿಸಲಾಗಿದೆ.

(ii) ಈ ಯಾವುದೇ ಉಪವಾಕ್ಯಕ್ಕೊಳಪಡದ ಯಾವುದೇ ಕೆಲಸದ ಸ್ಥಳಗಳಲ್ಲಿ ಮ್ಯಾನೇಜ್‌ಮೆಂಟಿನ ಜವಾಬ್ದಾರಿ ಹೊಂದಿರುವ ಯಾವುದೇ ವ್ಯಕ್ತಿ, ಮೇಲ್ವಿಚಾರಣೆಗೆ ಮತ್ತು ಕೆಲಸದ ಸ್ಥಳವನ್ನು ನಿಯಂತ್ರಿಸುವವರನ್ನು ಈ ವ್ಯಾಖ್ಯಾನದಡಿಯಲ್ಲಿ ಸೇರಿಸಲಾಗಿದೆ.

ಹಾಗೆಯೇ ಸ್ಥಳೀಯ ಸಮಿತಿ, ಸದಸ್ಯರು, ರೆಸ್ಪಾಂಡೆಂಟರು, ಅಧಿಕಾರದಿಂದ ನಿಯಮಿಸಿದವರ ಕುರಿತು ಸಹ ವ್ಯಾಖ್ಯಾನಗಳನ್ನು ಈ ಕಾಯ್ದೆಯಲ್ಲಿ ಒದಗಿಸಲಾಗಿದೆ.

**ಸೆಕ್ಷನ್ : ೨ "ಕೆಲಸದ ಸ್ಥಳ"ವೆಂದರೆ**

(i) ಯಾವುದೇ ವಿಭಾಗ, ಸಂಘಟನೆ, ಎಂಟರ್‌ಪ್ರೈಜಸ್, ಸಂಸ್ಥೆ, ಕಚೇರಿ, ಶಾಖೆ ಅಥವಾ ಘಟಕಗಳು ಅದು ಸ್ವಯಂ ಸ್ಥಾಪಿತ, ಹಣಕಾಸಿನ ಸೌಲಭ್ಯವನ್ನು ಪಡೆದು ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಸರ್ಕಾರ ನಿಗದಿತ ಅಥವಾ ಸ್ಥಳೀಯ ಸ್ವಾಧೀನ ಪಡೆದದ್ದು ಅಥವಾ ಸರ್ಕಾರದಿಂದ ಸ್ಥಾಪಿತ ಕಂಪೆನಿಗಳು ಅಥವಾ ಸಹಕಾರ ಸಂಘಗಳು ಇತ್ಯಾದಿ.

(ii) ಯಾವುದೇ ಖಾಸಗಿ ವಲಯ, ಸಂಘಟನೆ, ಸಂಸ್ಥೆ, ಸೊಸೈಟಿ, ಘಟಕಗಳು ಸೇವೆಯನ್ನು ಒದಗಿಸುವ ಶಾಖೆಗಳು, ವ್ಯವಹಾರಿಕ, ಪ್ರೊಫೇಶನಲ್, ಶೈಕ್ಷಣಿಕ, ವೃತ್ತಿಪರ, ಕೈಗಾರಿಕ ಸಂಸ್ಥೆಗಳು ಅಥವಾ ಹಣಕಾಸಿನ ಚಟುಟಿಕೆಗಳನ್ನೊಳಗೊಂಡ ಉತ್ಪಾದನೆ, ವಿತರಣೆ, ಮಾರಾಟ, ಹಂಚಿಕೆ ಅಥವಾ ಸೇವೆಗಳನ್ನು ಒಳಗೊಂಡಿರುವಂತಹವು.

(iii) ಮನೆ ಅಥವಾ ವಾಸಸ್ಥಳ.

(iv) ಉದ್ಯೋಗ ಅಥವಾ ಕೆಲಸದ ತರಬೇತಿಗೆಂದು, ಕೆಲಸಗಾರರು ಭೇಟಿ ನೀಡುವ ಯಾವುದೇ ಸ್ಥಳವನ್ನು ಸಹ ಕೆಲಸದ ಸ್ಥಳವೆಂದು ಹೇಳಲಾಗಿದೆ.

(v) 'ಅಸಂಘಟಿತ ವಲಯ'ವೆಂದು ಕರೆಯಲಾಗುವ ಮತ್ತು ಅದರಡಿಯಲ್ಲಿ ಕೆಲಸ ಮಾಡುವವರನ್ನು, ಕೆಲಸದ ಸ್ಥಳದ ವ್ಯಾಖ್ಯಾನದ ವ್ಯಾಪ್ತಿಯಲ್ಲಿ ಪರಿಗಣಿಸಲಾಗಿದೆ. ಉದಾ:- ಕೃಷಿ, ಕೈಗಾರಿಕೆ, ಟ್ರೇಡ್ ಯುನಿಯನ್ ಇತ್ಯಾದಿ ಹೀಗೆ ಕೆಲಸದ ಸ್ಥಳವನ್ನು ಸಾಕಷ್ಟು ವಿಶಾಲವ್ಯಾಪ್ತಿಯಲ್ಲಿ ವ್ಯಾಖ್ಯಾನಿಸಲಾಗಿದೆ.

**ಸೆಕ್ಷನ್ : ೩. "ಲೈಂಗಿಕ ಕಿರುಕುಳ"**

- ದೈಹಿಕ ಸ್ಪರ್ಶ ಮತ್ತು ಲೈಂಗಿಕವೆನಿಸುವಂತಹ ಆಂಗಿಕ ಅಭಿನಯ ಅಥವಾ ಮಾತು.
- ಲೈಂಗಿಕವಾಗಿ ತೃಪ್ತಗೊಳಿಸುವಂತೆ ಒತ್ತಾಯ ಅಥವಾ ಮನವಿ.
- ಲೈಂಗಿಕವೆನಿಸಬಹುದಾದಂತಹ ಅಭಿಪ್ರಾಯಗಳ ಅಭಿವ್ಯಕ್ತಿ.
- ಅಶ್ಲೀಲ ಸಾಹಿತ್ಯ ಅಥವಾ ಪತ್ರಗಳನ್ನು ತೋರಿಸುವುದು.
- ಲೈಂಗಿಕ ಸ್ವರೂಪದ ಇತರ ಯಾವುದೇ ಅನುಚಿತವಾದ ಆಂಗಿಕ, ಶಾಬ್ದಿಕ ಅಥವಾ ಶಾಬ್ದಿಕವಲ್ಲದ ನಡವಳಿಕೆ ಇತ್ಯಾದಿ ಅಂಶಗಳನ್ನು ಲೈಂಗಿಕ ಕಿರುಕುಳದ ವ್ಯಾಖ್ಯಾನ ದಡಿಯಲ್ಲಿ ವಿವರಿಸಲಾಗಿದೆ.

ಅಲ್ಲದೆ ಈ ಕಾಯಿದೆಯಡಿಯಲ್ಲಿ ಆಯಾ ಕೆಲಸದ ಸ್ಥಳಗಳಲ್ಲಿಯೇ ದೂರು ಸಮಿತಿಗಳನ್ನು ನೇಮಿಸಲು ಸೂಚಿಸಿದೆ. ಈ ದೂರು ಸಮಿತಿಗಳನ್ನು ವಿಭಾಗ, ಉಪವಿಭಾಗಗಳಲ್ಲಿ ವರ್ಗೀಕರಿಸಿ ಕೆಲಸದ ಸ್ಥಳಗಳಿಗೆ ಹತ್ತಿರದಲ್ಲಿರಬೇಕು. ಈ ಸಮಿತಿಯ ಅಧ್ಯಕ್ಷರಾಗಿ ಕೆಲಸ ಸ್ಥಳದಲ್ಲಿ ಹಿರಿಯ ಮಹಿಳೆಯರನ್ನು ನೇಮಿಸಬೇಕು. ಇವರು ಲಭ್ಯವಾಗದಿದ್ದ ಪಕ್ಷದಲ್ಲಿ ಸಹೋದರಿ ಸಂಸ್ಥೆಯ ಅಥವಾ ಸರ್ಕಾರೇತರ ಸಂಸ್ಥೆಯಲ್ಲಿರುವವರನ್ನು ನೇಮಿಸಿಕೊಳ್ಳಬೇಕು. ಹಾಗೆಯೆ ಕನಿಷ್ಟ ಇಬ್ಬರು ಸದಸ್ಯರಾದರೂ ಸಾಮಾಜಿಕ ಕಾರ್ಯಕರ್ತರಲ್ಲಿ, ಮಹಿಳಾ ವಿಷಯಗಳಿಗೆ ಸಂಬಂಧಿಸಿದಂತೆ ಕಾರ್ಯನಿರ್ವಹಿಸಿದಂತವರಾಗಿರಬೇಕು.

ಒಬ್ಬ ಸದಸ್ಯರನ್ನು ಸರ್ಕಾರೇತರ ಸಂಸ್ಥೆ ಅಥವಾ ಸಂಘಟನೆಯಿಂದ, ಮಹಿಳಾಪರ ವಿಷಯಗಳಲ್ಲಿ ಆಸಕ್ತಿ ಹೊಂದಿದವರನ್ನು ನೇಮಿಸಿಕೊಳ್ಳಬೇಕು. ಅಲ್ಲದೆ ಒಟ್ಟು ಸದಸ್ಯರಲ್ಲಿ ೫೦ ಪ್ರತಿಶತ ಮಹಿಳೆಯರಾಗಿರಬೇಕು. ಒಮ್ಮೆ ಆಯ್ಕೆಯಾದ ಪದಾಧಿಕಾರಿಗಳು ನೋಂದಾವಣೆಯಾದ ದಿನಾಂಕದಿಂದ ಮೂರು ವರ್ಷಗಳವರೆಗೂ ಅಧಿಕಾರದಲ್ಲಿರಬೇಕು. ಈ ಒಟ್ಟು ಪದಾಧಿಕಾರಿಗಳಿಗೆ ನಿಗದಿತ ವೇತನವು ನೀಡಬೇಕು. ಪದಾಧಿಕಾರಿಗಳಲ್ಲಿ, ಹೊಸದಾಗಿ ಕೆಲಸಕ್ಕೆ ನೇಮಕವಾದವರನ್ನು ಸಹ ಒಳಗೊಂಡಿರಬೇಕು.

ಜಿಲ್ಲೆಗೆ ಒಬ್ಬರಂತೆ ಜಿಲ್ಲಾಧಿಕಾರಿಯನ್ನು ನೇಮಿಸಬೇಕು. ಅವರು ಸರ್ಕಾರದಿಂದ ನಿಗದಿಯಾದ ಜಿಲ್ಲಾ ನ್ಯಾಯಾಧೀಶರು ಅಥವಾ ಹೆಚ್ಚುವರಿ ಜಿಲ್ಲಾ ನ್ಯಾಯಾಧೀಶರು ಅಥವಾ ಕಲೆಕ್ಟರ್ ಅಥವಾ ಡೆಪ್ಯೂಟಿ ಕಲೆಕ್ಟರ್‌ಗಳು ಜಿಲ್ಲಾ ಅಧಿಕಾರಿಯಾಗಿ ಆಯ್ಕೆ ಮಾಡಿ ಅವರು ಒಟ್ಟು ಈ ಕಾರ್ಯ ವೈಖರಿಯು

ಜಾರಿಯಾಗುವಂತೆ, ಸಮರ್ಪಕವಾಗಿ ಈ ಕಾಯ್ದೆಯಡಿ ಕಾರ್ಯನಿರ್ವಹಿಸುವಂತೆ ಎಚ್ಚರವಹಿಸಬೇಕು. ಸ್ಥಳೀಯ ಸಮಿತಿಗಳಲ್ಲಿನ ಪದಾಧಿಕಾರಿಗಳಿಗೂ ಇದೇ ಆಯ್ಕೆಯ ನಿಯಮವು ಅನ್ವಯವಾಗುತ್ತದೆ.

ದೂರು ದಾಖಲೆಯ ನಿಯಮಗಳನ್ನು ಇದು ವಿವರಿಸುತ್ತದೆ. ಹೀಗೆ ದಾಖಲಿಸಿಕೊಂಡ ದೂರುಗಳ ಪರಿಶೀಲನಾ ವರದಿಯನ್ನು ಸಲ್ಲಿಸುವ ಕ್ರಮಗಳನ್ನು ಒಳಗೊಂಡಿದೆ. ಅಲ್ಲದೆ ದಾಖಲಾದ ಪ್ರಕರಣಕ್ಕೆ ೯೦ ದಿನಗಳಲ್ಲಿ ಕಡ್ಡಾಯವಾಗಿ ನ್ಯಾಯ ಒದಗಿಸಬೇಕಾಗಿರುವುದು ದೂರು ಸಮಿತಿಯ ಜವಾಬ್ದಾರಿಯೆಂದು ಆದೇಶಿಸಲಾಗಿದೆ. ಪೀಡಿತ ವ್ಯಕ್ತಿಯು ದೂರು ಸಲ್ಲಿಸದಂತಹ ಪರಿಸ್ಥಿತಿಯಲ್ಲಿದ್ದರೆ, ಮಾನಸಿಕ, ದೈಹಿಕ ಆಘಾತಕ್ಕೊಳಗಾದರೆ ಅಥವಾ ನಿಧನರಾದರೆ ಅವರ ಪರವಾಗಿ ದೂರು ಸಲ್ಲಿಸುವುದಕ್ಕೂ ಅವಕಾಶವನ್ನು ಒದಗಿಸಿದೆಯಲ್ಲದೆ, ಈ ಬಗೆಯ ಪೀಡನೆಗೆ ಒಳಗಾದ ಮಹಿಳೆಯು ಆ ಸಂದರ್ಭಗಳಲ್ಲಿ ರಜೆಯನ್ನು ಅಥವಾ ವರ್ಗಾವಣೆಯನ್ನು ಬಯಸಿದಲ್ಲಿ ಅದನ್ನು ಸಂಸ್ಥೆಯು ನೀಡಬೇಕು ಎಂದು ಹೇಳಲಾಗಿದೆ. ಇದು ವಿಚಾರಣೆಗೆ ಮುಂಚೆಯೇ ಕಿರುಕುಳ ನೀಡಿದ ಅಧಿಕಾರಿ/ವ್ಯಕ್ತಿಯನ್ನು ವರ್ಗಾಯಿಸಲು ಕೋರಿದರು ಅದಕ್ಕೆ ಸಮ್ಮತಿಯನ್ನು ನೀಡಬೇಕು.

ಇದಕ್ಕಾಗಿಯೇ ರೂಪಿತವಾದ ಸೆಲ್‌ಗಳು ವರ್ಷಕ್ಕೊಮ್ಮೆ ಕಡ್ಡಾಯವಾಗಿ ಸ್ವೀಕರಿಸಿದ ದೂರುಗಳು. ಅದಕ್ಕೆ ಕೈಗೊಂಡ ಕ್ರಮಗಳ ವಿವರವಾದ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಬೇಕು. ಉದ್ಯೋಗದಲ್ಲಿ ಪ್ರಮೋಷನ್ ಒದಗಿಸುವ ನೆಪದಲ್ಲಿ, ನ್ಯಾಯವಾಗಿ ಸಿಗಬೇಕಾದ ಬಡ್ತಿಗಳಿಗೆ ಅಡ್ಡಿಯುಂಟು ಮಾಡುವ ಮೂಲಕ, ಕೆಲಸ ಮಾಡುವಾಗ ಸೂಚನೆ ಕೊಡುವ ನೆಪದಲ್ಲಿ ಮೈ-ಕೈ ಸ್ಪರ್ಶಿಸುವುದು, ಮಾತುಗಳಲ್ಲಿ ಅಸಭ್ಯ ಸಂಜ್ಞೆಗಳನ್ನು ಮಾಡುವುದು, ಅಶ್ಲೀಲ ಹಾಸ್ಯ ಚಟಾಕಿಗಳನ್ನು ಹೇಳುವುದು, ತನ್ನ ಲೈಂಗಿಕ ಆಸೆಗಳನ್ನು ಪೂರೈಸದಿದ್ದರೆ ವರ್ಗಾವಣೆ ಮಾಡುವುದಾಗಿ ಅಥವಾ ಕೆಲಸದಿಂದ ತೆಗೆದು ಹಾಕುವುದಾಗಿ ಹೆದರಿಸುವುದು ಇತ್ಯಾದಿಗಳನ್ನು ಸಹ ಲೈಂಗಿಕ ದೂರುಗಳನ್ನು ದಾಖಲಿಸಬಹುದು. ಇದಕ್ಕೆ ಸಮಿತಿಯು ಪರಿಹಾರಗಳನ್ನು ಒದಗಿಸಬೇಕು. ಈ ಬಗೆಯಲ್ಲಿ ದಾಖಲಾದ ಪ್ರಕರಣಗಳ ಗೌಪ್ಯವಾಗಿಡಬೇಕು. ಇಂತಹ ಘಟನೆಗಳು ಬಹುತೇಕ ಮಹಿಳೆಯು ಏಕಾಂತದ ಸಂದರ್ಭದಲ್ಲಿ ನಿರ್ಜನ ಪ್ರದೇಶಗಳಲ್ಲಿ ಘಟಿಸುವುದರಿಂದ ಕಿರುಕುಳದ ಬಗ್ಗೆ ಪ್ರತ್ಯಕ್ಷ ಸಾಕ್ಷಿ ಒದಗಿಸುವುದಕ್ಕೆ ಒತ್ತಾಯಿಸಬಾರದು. ದೂರು ನೀಡದವರಿಗೆ ಮಾತನಾಡಲು ಮೊದಲ ಆದ್ಯತೆಯಿರಬೇಕು ಎಂಬ ಅಶಗಳನ್ನು ಸೂಚಿಸುತ್ತದೆ.

ಸೆಕ್ಷನ್ : ೧೭ರಲ್ಲಿ ಕೆಲಸವನ್ನು ನೀಡುವ ಯಜಮಾನರಿಗೂ ಕೆಲವು ನಿಯಮಗಳನ್ನು ವಿಧಿಸಿದೆ. ಕೆಲಸಗಾರರಿಗೆ ಆ ಕಂಪನಿಯ ಮಾಲಿಕರೋ ಅಥವಾ ಕೆಲಸವನ್ನು ನೀಡಿದ ಮಾಲೀಕರು ಸುರಕ್ಷಿತ ಕೆಲಸದ ವಾತಾವರಣವನ್ನು ಕೆಲಸದ ಸ್ಥಳಗಳಲ್ಲಿ ಒದಗಿಸಬೇಕು. ಕೆಲಸದ ಸ್ಥಳಗಳಲ್ಲಿ ಲೈಂಗಿಕ ಕಿರುಕುಳವನ್ನು ನಿಷೇಧಿಸಲಾಗಿದೆ ಎಂಬುದು ಸ್ಪಷ್ಟಪಡಿಸಬೇಕು. ಈ ಬಗೆಯ ಅಪರಾಧಗಳು ಘಟನೆಯಲ್ಲಿ ಸೂಕ್ತ ದಂಡ ವಿಧಿಸುವ ನಿಯಮಗಳನ್ನು ಸೂಚಿಸಬೇಕು. ಈ ಕೃತ್ಯಕ್ಕೆ ಒಳಗಾದ ಮಹಿಳೆಯು ದೂರು ಸಲ್ಲಿಸುವಾಗ, ವಿಚಾರಣೆಗಳನ್ನು ಕೈಗೊಳ್ಳುವಾಗ ಸ್ವಯಂ ಕೆಲಸದ

ಸ್ಥಳದವರಾಗಲಿ, ಹೊರಗಿನವರಾಗಲಿ ಮಹಿಳೆಯರಿಗೆ ಹೆದರಿಸುವ, ಕಿರುಕುಳ ನೀಡುವ, ತಡೆಯನ್ನುಂಟು ಮಾಡುವಂತಿದ್ದರೆ ಸಂಸ್ಥೆಯ ಮಾಲೀಕರು ರಕ್ಷಣೆಯನ್ನು ಒದಗಿಸಬೇಕು.

ಕೆಲಸಗಾರನ ದುರ್ವತನೆಯು ಗಮನಕ್ಕೆ ಬಂದಲ್ಲಿ, ಸ್ವಯಂ ಸಂಸ್ಥೆಯ ಮಾಲೀಕರೆ ದೂರು ಸಮಿತಿಗಾಗಲಿ, ಪೋಲಿಸ್ ಇಲಾಖೆಗೆ ಮಾಹಿತಿಯನ್ನು ನೀಡಿ ಕ್ರಮಕೈಗೊಳ್ಳುವಲ್ಲಿ ಸಹಾಯಕರಾಗಬೇಕು. ದೂರು ಸಮಿತಿಯ ಸ್ಥಾಪನೆ (ಕೆಲಸದ ಸ್ಥಳದಲ್ಲಿ) ಅದರ ಕಾರ್ಯವೈಖರಿಯು ಕಟ್ಟುನಿಟ್ಟಾಗಿ ಜಾರಿಯಾಗುವಂತೆ ಜಾಗೃತಿಯನ್ನು ವಹಿಸಬೇಕು ಎಂಬ ನಿಯಮಗಳನ್ನು ರೂಪಿಸಿದೆ.

ಅಲ್ಲದೆ ಸಮಿತಿಗಳು ಸಲ್ಲಿಸಿದ ವಾರ್ಷಿಕ ವರದಿಯನ್ನು ಜಿಲ್ಲಾಧಿಕಾರಿಗಳು ಕೂಲಂಕುಷವಾಗಿ ಪರಿಶೀಲಿಸುವ ಅಗತ್ಯತೆಯನ್ನು ಸಹ ಇಲ್ಲಿ ಹೇಳಲಾಗಿದೆ.

ಈ ನಿಟ್ಟಿನಲ್ಲಿ ವಿಶಾಖ ಪ್ರಕರಣದ ತೀರ್ಪಿನ ಸಂದರ್ಭದಲ್ಲಿ ಅಂದರೆ ೧೯೯೭ರಲ್ಲಿ ಕಾನೂನಿನ ಅಗತ್ಯತೆಯನ್ನು ಹೇಳಿದ್ದರೂ ಸಹ ಕಾನೂನು ಜಾರಿಯಲ್ಲಿ, ಸೂಚಿಸಿದ ಮಾರ್ಗದರ್ಶಿಸೂತ್ರಗಳ ಪರಿಪಾಲನೆಗೂ ಸಹ ಸೂಕ್ತ ಕ್ರಮಕೈಗೊಳ್ಳದಿರುವುದರಿಂದಲೇ ೨೦೦೪ರಲ್ಲಿ ಬರೋಡ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರೊಬ್ಬರಿಂದ ಲೈಂಗಿಕ ಕಿರುಕುಳಕ್ಕೆ ಒಳಗಾದ ವಿದ್ಯಾರ್ಥಿನಿಯ ಪ್ರಕರಣವನ್ನು, ಆಲೋಚನಾ ಮಹಿಳಾ ಸಂಘಟನೆಯ ಡಾ. ಮೇಧಾಕೊತ್ವಾಲ್ ಮತ್ತಿತರ ಮಹಿಳಾ ಸಂಘಟನೆಗಳು ಭಾರತದ ಮುಖ್ಯ ನ್ಯಾಯಾಧೀಶರಿಗೆ ಬರೆದ ಪತ್ರವೇ ರಿಟ್ ಆಗಿ ಸ್ವೀಕರಿಸಿ, ವಿಶಾಖಪ್ರಕರಣದಲ್ಲಿ ಹಾಕಿದ ಸೂತ್ರಗಳ ಸಮೀಕ್ಷೆಗೊಳಪಡಿಸಿದ್ದರಿಂದ ಕೇಂದ್ರ-ರಾಜ್ಯ ಸರಕಾರಗಳು ಚುರುಕುಗೊಂಡವು. ಈ ಪ್ರಕರಣ ಮೇಧಾಕೊತ್ವಾಲ್ ಪ್ರಕರಣವೆಂದೇ ಪ್ರಚಲಿತವಾಯಿತು. ಇದೇ ಸಂದರ್ಭದಲ್ಲಿ ರಾಷ್ಟ್ರೀಯ ಮಹಿಳಾ ಆಯೋಗ ಕರಡನ್ನು ರಚಿಸಿ, ಮಂತ್ರಾಲಯದ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಗೆ ಸಲ್ಲಿಸಿತು. ಇದರ ಪ್ರಯುಕ್ತ ೨೦೦೪ರ ನವೆಂಬರ್‌ನಲ್ಲಿ ಮುಂಬೈಯಲ್ಲಿ ಸಭೆ ಸೇರಿ ಸುದೀರ್ಘ ಚರ್ಚೆಗಳು ನಡೆದು ಕೆಲವು ಬದಲಾವಣೆಗಳನ್ನು ಸೇರಿಸಿ ಇದಕ್ಕೆ ಮತ್ತೊಮ್ಮೆ ಮಹಿಳಾ ಸಂಘಟನೆಗಳು, ಸರ್ಕಾರೇತರ ಸಂಸ್ಥೆಗಳು - ಸಾರ್ವಜನಿಕ ಸಲಹೆಗೆ ಕೋರಿದೆ.

## ಪ್ರಸ್ತುತ ಕಾಯ್ದೆಯ ವಿಶ್ಲೇಷಣೆ

ವ್ಯವಸ್ಥಿತ ಸಾಮಾಜಿಕ ವ್ಯವಸ್ಥೆಯ ಸೃಷ್ಟಿಗೆ ಕಾನೂನುಗಳ ಅಗತ್ಯತೆಯು ಹೆಚ್ಚಿನ ಮಟ್ಟದ್ದಾಗಿದೆ. ಸಂವಿಧಾನದಿಂದ ಮೊದಲುಗೊಂಡು, ಮನುಕುಲಕ್ಕೆ ಒಂದೆ ಮಾದರಿಯ ನೀತಿ ನಿಯಮಗಳೆಂದು ಹೇಳಲಾಗುವುದಾದರೂ, ಅಲ್ಲಿ ಮಹಿಳೆ ಅದೃಶ್ಯತೆಯು ಸಹ ಸಾಮಾನ್ಯವೆಂಬಂತೆ ಕಾಣಿಸಿಕೊಳ್ಳುತ್ತದೆ. ಆದ್ದರಿಂದ ಮಹಿಳಾ ಬದುಕಿಗೆ ಸಮಾಜ ವ್ಯವಸ್ಥೆಯಿಂದ ಏನನ್ನೇ ಪಡೆಯಬೇಕಾದರೂ ನಿರಂತರ ಹೋರಾಟದ, ಸಂಘರ್ಷಗಳ ಅನಿವಾರ್ಯತೆಯಂತು ಇದ್ದೇ ಇದೆ. ಅಂತಹ ಹಲವಾರು ಸುದೀರ್ಘ ಹೋರಾಟಗಳ ಫಲವೇ ಮಹಿಳಾ ಕಾನೂನುಗಳು. ವಿಶಾಖ ಮತ್ತು ಮೇಧಾಕೋತ್ವಾಲ್‌ಗಳಂತಹ

ಪ್ರಕರಣಗಳ ವಿಶಿಷ್ಟ ಹೋರಾಟದಿಂದ ಕೆಲಸದ ಸ್ಥಳಗಳಲ್ಲಿ ಲೈಂಗಿಕ ಕಿರುಕುಳ ತಡೆ ಕಾಯ್ದೆಯು ರೂಪಿತವಾಯಿತು. ಲೈಂಗಿಕ ಕಿರುಕುಳದ ಹಲವಾರು ಆಯಾಮಗಳನ್ನು ಶೋಧಿಸಿ ರಚನೆಯಾದ ಈ ಕಾಯ್ದೆಯ ಮಾರ್ಗದರ್ಶಿ ಸೂತ್ರಗಳನ್ನು ಗಮನಿಸಿದರೆ ಅಮೇರಿಕಾದ ಸಮಾನ ಉದ್ಯೋಗಾವಕಾಶಗಳ ಆಯೋಗ ಲೈಂಗಿಕ ಕಿರುಕುಳವನ್ನು ಉದ್ಯೋಗ ಸ್ಥಳದಲ್ಲಿ ಮಹಿಳಾ ಉದ್ಯೋಗಿಯ ಕಾರ್ಯದಕ್ಷತೆಗೆ ಅಡ್ಡಬರುವ ಅಥವಾ ಪ್ರತಿಕೂಲದ ಅಥವಾ ಭಯದ ವಾತಾವರಣವನ್ನುಂಟು ಮಾಡುವುದಕ್ಕೆ ಲೈಂಗಿಕವೆನಿಸುವ ವರ್ತನೆ ಎಂದು ಪರಿಭಾಷಿಸುತ್ತದೆ (ಉಲ್ಲೇಖ : ಹೊಸತು ಪತ್ರಿಕೆ, ಪುಟ ೧೨೮)[೧೦]ಯೆಂಬುದು ಈ ವ್ಯಾಖ್ಯಾನ ಒಳಗೊಂಡಿದೆಯೆನ್ನಬಹುದು. ಯಾವುದೇ ಸಂಗತಿಯು ಪರಿಪೂರ್ಣವೆಂದು ಹೇಳಲಾಗದು. ಅಂತೆಯೇ ಪ್ರಸ್ತುತ ಕಾಯ್ದೆಯು ಸಹ ಕೆಲವು ಲೋಪದೋಷಗಳನ್ನು ಒಳಗೊಂಡಿದೆಯೆನ್ನಬಹುದು. ಈ ಹಿನ್ನೆಲೆಯಲ್ಲಿ ಈ ಕಾಯ್ದೆಯನ್ನು ವಿಶಿಷ್ಟವಾಗಿ ವಿಶ್ಲೇಷಣೆಗೊಳಪಡಿಸುವ ಅಗತ್ಯತೆಯಿದೆ.

ಇದುವರೆಗೂ ಜಾರಿಯಾದ ಕಾನೂನುಗಳಲ್ಲಿನ ವಿಶಿಷ್ಟ ಕಾಯ್ದೆಯ ಸಾಲಿಗೆ ಪ್ರಸ್ತುತ ಕಾಯ್ದೆಯು ಸೇರಿಸಬಹುದಾಗಿದೆ. ಕೆಲಸದ ಸ್ಥಳಗಳಲ್ಲಿನ ಪ್ರತಿಯೊಬ್ಬ ಮಹಿಳೆಗೂ ಉಪಯುಕ್ತವಾದ ಮಾದರಿಯಲ್ಲಿಯೇ ಈ ಕಾಯ್ದೆಯು ರಚನೆಗೊಂಡಿದೆ. ಸಾರ್ವಜನಿಕ ವಲಯಕ್ಕೆ ಇತ್ತೀಚೆಗೆ ಪ್ರವೇಶ ಪಡೆದಿರುವ ಮಹಿಳಾ ಸಮುದಾಯ ಮತ್ತು ಹಲವು ಕಾರಣಗಳಿಂದ ಸಮಸ್ಯೆಗೊಳಗಾಗುತ್ತಿರುವ ಮಹಿಳೆಗೆ ಸಮರ್ಪಕ ರಕ್ಷಣೆಯನ್ನು ಒದಗಿಸುವಲ್ಲಿ ಇದು ಅತ್ಯುಪಯುಕ್ತವಾದುದಾಗಿದೆ.

ಆದರೆ ಕಾಯ್ದೆಯು 'ಕೆಲಸದ ಸ್ಥಳ' ಮತ್ತು 'ಲೈಂಗಿಕ ಕಿರುಕುಳ'ವನ್ನು ಮಾತ್ರ ಪ್ರತಿನಿಧಿಸುವುದರಲ್ಲಿಯೇ ಮೂಲ ತೊಡಕುಂಟು ಮಾಡುತ್ತದೆಯೆನ್ನಬಹುದು. ಸಾರ್ವಜನಿಕ ವಲಯಕ್ಕೆ ಮುಖಾಮುಖಿಯಾಗುತ್ತಿರುವ ಮಹಿಳೆಯರು ಕೌಟುಂಬಿಕ ವಲಯದಂತೆ - ಕೆಲಸದ ಸ್ಥಳದಲ್ಲಿ ನಿರಂತರವಾಗಿ ಒಡನಾಡುವ ಸಂದರ್ಭಗಳು ಹೆಚ್ಚಿನದಾಗಿವೆ. ಆದರೆ, ಸಾರ್ವಜನಿಕ ಸ್ಥಳಕ್ಕೆ ಕಾಲಿರಿಸಿದ ಮಹಿಳೆಯರು ಕೆಲವು ನಿಗದಿತ ಕೆಲಸದ ವಲಯಗಳಿಗೆ ಸೀಮಿತವಾಗುತ್ತಾರಾದ್ದರಿಂದ ಈ ಕಾಯ್ದೆಯು ಕೇವಲ ಕೆಲಸದ ಸ್ಥಳವನ್ನು ಆಧರಿಸುವುದು ಸಮರ್ಪಕವಾಗುವುದಿಲ್ಲವೆನಿಸುತ್ತದೆ. ಉದಾ:- ಯಾವುದೋ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಮಹಿಳೆಯು ಕುಟುಂಬದೊಳಗಡೆ ಇರುವಾಗ, ಅವಳ ಜವಾಬ್ದಾರಿಯು ಕುಟುಂಬದ್ದಾಗಿರುತ್ತದೆ. ಅದೇ ರೀತಿಯಾಗಿ ಕಛೇರಿಗೆ ತಲುಪಿದ ನಂತರ ಅವಳ ಸಂಪೂರ್ಣ ಹೊಣೆಗಾರಿಕೆಯು ಆ ಕಛೇರಿಯ ಒಡೆತನವಿರುವವರಿಗೆ ಅನ್ವಯಿಸುತ್ತದೆ.

ಈ ಅಂಶವೇ ಇಲ್ಲಿ ಪ್ರಮುಖ ಪ್ರಶ್ನೆಯಾಗಿ ನಿಲ್ಲುತ್ತದೆ. ಅಂದರೆ ಕುಟುಂಬ ಮತ್ತು ಕಛೇರಿಯ ಮಧ್ಯದ ಪ್ರಯಾಣದ ಸಂದರ್ಭಗಳಲ್ಲಿ ಅವಳ ಮೇಲಾಗುವ ದೌರ್ಜನ್ಯ - ಹಿಂಸೆಗಳಿಗೆ ಹೊಣೆ ಹೊರುವವರು ಯಾರು? ಎಂಬ ಪ್ರಶ್ನೆಗೆ ಉತ್ತರಿಸುವಲ್ಲಿ ಈ ಕಾಯ್ದೆಯನ್ನು ತಿದ್ದುಪಡಿ ಮಾಡುವ ಮೂಲಕ ಜಾರಿಯಾದರೆ ಸೂಕ್ತವೆನಿಸುತ್ತದೆ.

ಅಲ್ಲದೆ ಈ ಕಾಯ್ದೆಯು ಕೇವಲ 'ಲೈಂಗಿಕ ಕಿರುಕುಳ'ವನ್ನು ಸುದೀರ್ಘವಾಗಿ ಚರ್ಚಿಸುತ್ತದೆ. ಅದೇ ಕೆಲಸದ ಸ್ಥಳಗಳಲ್ಲಿ ಲೈಂಗಿಕ ಕಿರುಕುಳದಾಚೆಗೂ ಹಲವಾರು ಬಗೆಯ ಹಿಂಸೆ - ದೌರ್ಜನ್ಯಗಳಿಗೆ ಮಹಿಳೆಯರು ಒಳಗಾಗುತ್ತಿರುವುದಕ್ಕೆ ಸಾಕಷ್ಟು ಉದಾಹರಣೆಗಳನ್ನು ನೀಡಬಹುದು. ಉದಾ:- ಕಛೇರಿಯಲ್ಲಿ ಸಮರ್ಪಕವಾಗಿ ಕಾರ್ಯನಿರ್ವಹಿಸುತ್ತಿರುವ ಮಹಿಳೆಗೆ ದಕ್ಕಬೇಕಾದ ಅಧಿಕಾರವಾಗಲಿ, ಇನ್ನಿತರ ಅನುಕೂಲಗಳಾಗಲಿ, ಅವಳ ಬೌದ್ಧಿಕತೆಯ ಕಾರಣದಿಂದಲೋ, ಇನ್ನಾವುದೇ ಕಾರಣಕ್ಕೊ ದಕ್ಕದಿರುವಾಗ ಅದು ಸಹ ಹಿಂಸೆ - ದೌರ್ಜನ್ಯದ ವ್ಯಾಪ್ತಿಗೆ ಒಳಪಡುತ್ತಿದೆಯೇ ವಿನಹ ಲೈಂಗಿಕ ಕಿರುಕುಳದ ಉದ್ದೇಶದಿಂದಲೇ ಎಂದು ಹೇಳುವುದು ಅಸಾಧ್ಯವಾಗುತ್ತದೆ. ಇದರರ್ಥ ಕೆಲಸದ ಸ್ಥಳಗಳಲ್ಲಿ ನಿರಂತರವಾಗಿ ಒಡನಾಡುವ ಮಹಿಳಾ ಸಮುದಾಯದ ಮೇಲೆ ಆಗುವ ಹಲವು ವಿಧದ ಹಿಂಸೆ - ದೌರ್ಜನ್ಯಗಳ ಒಂದು ಬಗೆ 'ಲೈಂಗಿಕ ಕಿರುಕುಳ'ವೇ ವಿನಹ, ಎಲ್ಲ ಮಹಿಳೆಯರ ಮೇಲೂ ಅಥವಾ ಕೆಲಸದ ಸ್ಥಳದಲ್ಲಿ ಇದೊಂದೆ ಬಗೆಯ ದೌರ್ಜನ್ಯ - ಹಿಂಸೆ ನಡೆಯುತ್ತಿದೆಯೆಂಬುದು ಗ್ರಹಿಸಿಕೊಂಡಾಗ ಈ ಒಂದು ವಿಧದಲ್ಲಿ ಇತರೆ ಎಲ್ಲ ಆಯಾಮಗಳು ಮರೆಮಾಚುವ ಸಾಧ್ಯತೆಗಳೇ ಹೆಚ್ಚಾಗಿವೆ. ಹಾಗೆಯೇ ಸಂಘಟಿತ ವಲಯಕ್ಕಿಂತ - ಅಸಂಘಟಿತ ವಲಯಗಳಲ್ಲಿ ಈ ಬಗೆಯ ಲೈಂಗಿಕ ಕಿರುಕುಳಗಳ ಪ್ರಮಾಣ ಹೆಚ್ಚಾಗಿ ಕಾಣಿಸುವುದರಿಂದ, ಈ ಕಾಯ್ದೆಯ ರೂಪಿಕೆಯಾಗಿರುವುದು, ಅಸಂಘಟಿತ ವಲಯವನ್ನೇ ಹೆಚ್ಚು ಗಮನದಲ್ಲಿರಿಸಿಕೊಂಡಿದೆಯೇ? ಎಂಬ ಗುಮಾನಿಯು ಮೂಡುತ್ತದೆ.

ಕಾಯ್ದೆಯ ಗುರಿ, ಉದ್ದೇಶಗಳು ಹೆಚ್ಚು ವಿಶಿಷ್ಟತೆಯಿಂದ ಕೂಡಿವೆ. ಆದರೆ ಈ ಕಾಯ್ದೆಯು ಒಟ್ಟು ಸಾರ್ವಜನಿಕ ವಲಯ ಮತ್ತು ಸಾರ್ವಜನಿಕ ಸ್ಥಳದಲ್ಲಾಗುವ ಹಿಂಸೆ - ದೌರ್ಜನ್ಯಗಳನ್ನು ಗಮನದಲ್ಲಿರಿಸಿಕೊಂಡು ರೂಪಿತವಾದರೆ ಇನ್ನಷ್ಟು ಸಮರ್ಪಕವಾಗಿರುತ್ತಿತ್ತು. ಮೂಲಭೂತ ಮಾನವ ಹಕ್ಕಿನ ಉಲ್ಲಂಘನೆಯು ಲೈಂಗಿಕ ಕಿರುಕುಳಕ್ಕೆ ಅನ್ವಯಿಸುವಂತೆ, ಸಾರ್ವಜನಿಕ ವಲಯದ ಪ್ರವೇಶ ನಿರಾಕರಣೆಯಿಂದ ಮೊದಲುಗೊಂಡು, ಅಲ್ಲಿನ ಪ್ರಕ್ರಿಯೆಯುದ್ದಕ್ಕೂ ಮಹಿಳಾ ಸಮುದಾಯವನ್ನು ಮತ್ತೆ ಮತ್ತೆ ಕುಟುಂಬಕ್ಕೆ ಸೀಮಿತಗೊಳಿಸುವಲ್ಲಿ ನಡೆಯುತ್ತಿರುವ ಹಲವಾರು ವಿಧದ ಸೂಕ್ಷ್ಮ ಆಕ್ರಮಣಗಳಿಂದ ಮೊದಲಾಗಿ ಜೀವ ಕಳೆದುಕೊಳ್ಳುವಂತಹ ಸ್ಥಿತಿಗೆ ಮಹಿಳೆಯರು ತಲುಪುತ್ತಿರುವುದು ಸಹ ಮಾನವ ಹಕ್ಕಿನ ಉಲ್ಲಂಘನೆಯೆ ಅಲ್ಲವೆ?

ಈ ಕಾಯ್ದೆಯಲ್ಲಿ ಕೆಲಸದ ಸ್ಥಳ, ಪೀಡಿತ ಮಹಿಳೆ, ಜಿಲ್ಲಾಧಿಕಾರಿ, ಕೆಲಸದ ಸ್ಥಳದ ಮಾಲಿಕರು, ಲೈಂಗಿಕ ಕಿರುಕುಳ ಇತ್ಯಾದಿ ವ್ಯಾಖ್ಯಾನವನ್ನು ಸ್ಪಷ್ಟವಾಗಿ ನೀಡಿರುವುದು, ಸಮಸ್ಯೆಯ ಬಹುಪಾಲು ಆಯಾಮಗಳನ್ನು ಶೋಧಿಸಿರುವುದು ಖಚಿತವಾಗುತ್ತದೆ.

ಹಾಗೆಯೇ ದೂರು ಸಮಿತಿಯ ರಚನೆ, ಪದಾಧಿಕಾರಿಗಳ ಆಯ್ಕೆ, ದೂರು ಪಡೆಯುವವರು ಆಕ್ರಮಣಕ್ಕೊಳಗಾದವರೊಂದಿಗೆ ನಡೆದುಕೊಳ್ಳಬೇಕಾದ ರೀತಿ, ವಾರ್ಷಿಕ ವರದಿ, ಅದರ ಪುನರ್ ಪರಿಶೀಲನೆ, ತರಬೇತಿಗಳು, ಹಿಂಸೆಗೊಳಗಾದ ಮಹಿಳೆಯರು ಅನಕ್ಷರಸ್ಥರಾದಲ್ಲಿ ದೂರು ಬರೆಯಿಸಿಕೊಳ್ಳುವ

ಸಮಸ್ತ ಆಯಾಮಗಳನ್ನು ಸ್ಪಷ್ಟಪಡಿಸಿರುವುದು. ಕಾಯ್ದೆಯ ಜಾರಿಯ ನಂತರದಲ್ಲಿ ಸಮಸ್ಯೆಯ ಪರಿಹಾರದ ಕುರಿತು ಸಾಕಷ್ಟು ಆಶಾದಾಯಕತೆಯನ್ನು ಮೂಡಿಸಿದೆ.

ಜಿಲ್ಲಾಧಿಕಾರಿಯ ಆಯ್ಕೆಯ ಪ್ರಶ್ನೆಯನ್ನು ಕುರಿತು ಸರ್ಕಾರದಿಂದ ನಿಗದಿಯಾದವರನ್ನು ಎಂದು ಸೂಚಿಸಲಾಗಿದೆ. ಈ ದೂರು ಸಮಿತಿಯ ಪರಿಶೀಲನೆಯಲ್ಲಿ ಅವರು ವಹಿಸದ ಬೇಕಾದ ಕ್ರಮಗಳನ್ನು ಸ್ಪಷ್ಟಪಡಿಸಿಲ್ಲ. ಹಾಗೆಯೇ ಈ ಜಿಲ್ಲಾಧಿಕಾರಿಯಿಂದ ಸಮಸ್ಯೆಗಳು ಎದುರಾದರೆ ಅದನ್ನು ನಿವಾರಿಸುವ ಕುರಿತ ಕ್ರಮಗಳನ್ನು ವಿವರಿಸಬೇಕಾದ ಅಗತ್ಯವು ಕಂಡು ಬರುತ್ತದೆ. ದೂರು ಸಮಿತಿಯ ಸದಸ್ಯರು - ಪದಾಧಿಕಾರಿಗಳ ಆಯ್ಕೆಗೆ ಸೂಚಿಸಲಾದ ಮಾನದಂಡಗಳನ್ನು, ಜಿಲ್ಲಾಧಿಕಾರಿಯ ನೇಮಕದಲ್ಲಿಯೂ ಸೂಚಿಸುವುದು ಹೆಚ್ಚು ಸೂಕ್ತವಾಗಬಹುದು.

ದಾಖಲಾದ ಪ್ರಕರಣಕ್ಕೆ ೯೦ ದಿನಗಳೊಳಗಡೆ ಕ್ರಮವಹಿಸುವುದನ್ನು ಸೂಚಿಸಿರುವುದು ಹೆಚ್ಚು ಖಚಿತವಾಗಿದೆ. ಮಹಿಳಾ ಸಮಸ್ಯೆಯ ಪ್ರಕರಣಗಳು ನ್ಯಾಯಾಲಯಗಳಲ್ಲಿ ಸಂಬಂಧಪಟ್ಟ ಇಲಾಖೆಗಳಲ್ಲಿ ಧೂಳು ಹಿಡಿಯುವುದು, ಅವಿರತ ಹೋರಾಟ ಮಾಡಿದರೂ ನ್ಯಾಯ ದೊರೆಯದಂತಹ ಪರಿಸ್ಥಿತಿಗಳು, ಇಂಥ ಒಂದು ಹೋರಾಟಕ್ಕೆ ಕೈ ಹಾಕಲು ಜನತೆಯು ಹೆದರುವಂತಾಗುವುದನ್ನು ನಿವಾರಿಸಲು ಸಹಕಾರಿಯಾಗಿದೆ. ಇದಕ್ಕೆ ಉತ್ತಮ ಉದಾ:- ಚೆಂಡಿಘಡದ ರೂಪನ್ ಡಿಯೋಲ್ ಬಜಾಜ್ ಕೆ.ಪಿ.ಎಸ್. ಗಿಲ್ ಪ್ರಕರಣದ ತೀರ್ಪು ಹೊರಬಿದ್ದಿರುವುದು ೧೭ ವರ್ಷದ ನಿರಂತರ ಪರಿಶ್ರಮದಿಂದಾಗಿ, ಮಹಿಳೆಯರು ಈ ಸಂಗತಿಗಳು ದಾಖಲಿಸುವುದೇ ಹೆಚ್ಚು ಎಂಬಂತಿರುವ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ, ಅದಕ್ಕೆ ದೊರೆಯುವ ನ್ಯಾಯಕ್ಕಾಗಿ ಪರದಾಡಬೇಕಾದ ಸಂದರ್ಭಗಳು ಉನ್ನತ ಹುದ್ದೆಯಲ್ಲಿರುವ ರೂಪನ್ ಡಿಯೋಲ್ ಬಜಾಜ್‌ರವರಿಗೆ ಕಷ್ಟಕರವಾದರೆ, ಸಾಮಾನ್ಯ ಮಹಿಳೆಯರು ಇಂಥದೊಂದು ಕ್ರಮ ಕುರಿತು ಯೋಚಿಸುವುದು ಸಹ ಕನಸಿನ ಮಾತೇ ಎಂಬಂತಿರುವುದಕ್ಕೆ, ಈ ಕಾಯ್ದೆ ರೂಪಿಸಿದ ನಿಗದಿತ ಅವಧಿ ಮತ್ತು ದೂರು ಸಮಿತಿಯ ಹೊಣೆಗಾರಿಕೆಯು ಸೂಕ್ತವಾಗಿ ಕಂಡು ಬರುತ್ತದೆ. ಇವುಗಳೊಂದಿಗೆ ಪ್ರಕರಣಗಳ ಗೌಪ್ಯತೆ ಮತ್ತು ಪ್ರತ್ಯೇಕ್ಷ ಸಾಕ್ಷಿಗೆ ಒತ್ತಾಯಿಸದಿರುವುದು ಮಹಿಳಾ ವಿಷಯಗಳಲ್ಲಿ ಎಚ್ಚರವಹಿಸಿ ರೂಢಿಸಿಕೊಳ್ಳಬೇಕಾದ ಸಂಗತಿಯತ್ತ ಗಮನಹರಿಸಿರುವುದು ಕಂಡು ಬರುತ್ತದೆ.

ಆ ಬಗೆಯ ಸಂಗತಿಗಳು ಕಾಯ್ದೆಯೂ ಜಾರಿಯಾದ ಮೇಲೆ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಕಾಯ್ದೆಯ ಮೇಲೆ ಆಕ್ರಮಣಗಳಾಗುವ ಸಂಗತಿಗಳನ್ನು ಸಹ ಊಹಿಸಬಹುದಾಗಿದೆ. ಇಂತಹ ಪ್ರತ್ಯಕ್ಷ ಸಾಕ್ಷಿಗೆ ಒತ್ತಾಯಿಸದಿರುವುದು, ಮಹಿಳಾ ಸಮುದಾಯ ಈ ಕಾಯ್ದೆಯನ್ನು ದುರುಪಯೋಗ ಪಡಿಸಿಕೊಳ್ಳುವ ಯೋಚನೆಯನ್ನು ಮುಂದಿಡುವ ಮೂಲಕ ಈ ಕಾಯ್ದೆಯು ಜಾರಿಯಾಗದಂತೆ ನೋಡಿಕೊಳ್ಳುವ ಚಾಕಚಕ್ಯತೆಯು ಸಾಂಪ್ರದಾಯಿಕ ಸಮಾಜ ವ್ಯವಸ್ಥೆಗಿದೆ.

ಕಾಯ್ದೆಯಡಿಯಲ್ಲಿ ಕೆಲಸದ ಸ್ಥಳದ ಮಾಲೀಕರಿಗೂ ಜವಾಬ್ದಾರಿಯನ್ನು ನಿಗದಿಪಡಿಸಿರುವುದು ಸೂಕ್ತವಾದರೂ, ಇದು ಜಾರಿಯಾಗುವುದೆಂಬುದನ್ನು ಗ್ರಹಿಸುವುದು ಕಷ್ಟಕರವಾಗಿದೆ. ಕೆಲಸದ ಸ್ಥಳಗಳಲ್ಲಿ

ಮಹಿಳೆಯರಿಗೆ ನಿರಾತಂಕ ವಾತಾವರಣದ ಒದಗಿಸುವಿಕೆ ಕೆಲಸದ ಸ್ಥಳದ ಮಾಲೀಕರ ಹೊಣೆಗಾರಿಕೆಯೆಂಬುದು ಸರಿಯಾದುದೆ ಆದರೆ, ಅಲ್ಲಿ ಲೈಂಗಿಕ ಕಿರುಕುಳದಂತಹ ಪ್ರಕರಣಗಳು ನಡೆಸದಾಗಲಾಗಲಿ, ಆ ಬಗೆಯ ವರ್ತನೆಗಳಲ್ಲಿರುವ ವ್ಯಕ್ತಿಯು ಕಂಡು ಬಂದಲ್ಲಿ ತಕ್ಷಣ ಅವರು ಅದನ್ನು ದೂರು ಸಮಿತಿಯ ಅಥವಾ ಪೋಲಿಸ್ ಇಲಾಖೆಯ ಗಮನಕ್ಕೆ ತರುವುದು. ಸರಿಯಾದ ಕ್ರಮವೇ ಆದರೂ, ಪ್ರತಿಯೊರ್ವ ವ್ಯಕ್ತಿಗೂ ತನ್ನ ಕಂಪೆನಿಯ, ಕಛೇರಿಯ ಪ್ರತಿಷ್ಠೆಯ ಪ್ರಶ್ನೆಗಳು ಮುಖ್ಯವಾಗುತ್ತವೆ. ಈ ಬಗೆಯ ಘಟನೆಗಳು ತನ್ನ ಕಂಪೆನಿಯಲ್ಲಾಗಲಿ, ಕೆಲಸದ ಸ್ಥಳದಲ್ಲಾಗಲಿ ಘಟಿಸಿರುವುದು ತಿಳಿದು ಬಂದಲ್ಲಿ ಆ ಕಚೇರಿಯ ಬೆಳವಣಿಗೆಗೆ ಅದು ಅಡ್ಡಿಯನ್ನುಂಟುಮಾಡುವ ಸಾಧ್ಯತೆಗಳು ಹೆಚ್ಚಾಗಿರುವುದರಿಂದ, ಅಂತಹ ಪ್ರಕರಣಗಳನ್ನು ಮುಚ್ಚಿಹಾಕುವ ಯತ್ನಕ್ಕೆ ಮುಂದಾಗುತ್ತಾರೆಯೇ ಹೊರತು, ಮಹಿಳಾ ಬದುಕಿನ ಪ್ರಶ್ನೆಯೂ ಮುಖ್ಯವಾಗುವುದಿಲ್ಲ.

ಸಾಕಷ್ಟು ಆತ್ಮಸ್ಥೈರ್ಯವನ್ನು ಹೊಂದಿರುವ ಮಹಿಳೆಯು ತನ್ನ ಮೇಲಾದ ಅಥವಾ ಮೇಲಾಗಬಹುದಾದ ಆಕ್ರಮಣವನ್ನು ದೂರು ಸಮಿತಿಯ ಗಮನಕ್ಕೆ ತರಲು ಮುಂದಾದಾಗ ಅವಳಿಗೆದುರಾಗುವ ಸಮಸ್ಯೆಯ ಪ್ರಮಾಣವು ಇನ್ನಷ್ಟು ತೀವ್ರವಾಗುವ ಸಂಭವಗಳೇ ಹೆಚ್ಚು. ಅಂತಹ ಸಂದರ್ಭಗಳಲ್ಲಿ ಹೊರಗಿನವರಿಂದ ತೊಂದರೆಗಳಾಗದಂತೆ ನೋಡಿಕೊಳ್ಳುವುದು ದೂರದ ಸಂಗತಿಯಾಗಿ ನಿಲ್ಲುತ್ತದೆ.

ಈ ಸಮಸ್ಯೆಯ ಕುರಿತು ತರಬೇತಿಗಳು ನಡೆಸುವತ್ತಲೂ ಸೂಚಿಸುವ ಈ ಕಾಯ್ದೆಯು ಮೊದಲಿನ ಬಹುಪಾಲು ಕಾಯ್ದೆಗಳಿಗಿಂತಲೂ ವಿಶಿಷ್ಟವಾದುದೆನ್ನಬಹುದು. ಯಾವುದೇ ತರಬೇತಿಯ ಸಹ ಅದರಲ್ಲಿಯೂ ಮಹಿಳಾ ವಿಷಯಗಳಿಗೆ ಸಂಬಂಧಿಸಿದಂತೆ ಕಾರ್ಯಕ್ರಮಗಳನ್ನು ರೂಪಿಸಿದಾಗ, ಅದು ಮಹಿಳೆಯರಲ್ಲಿ ಇಂಥದೊಂದು ಘಟನೆಯು ಎದುರಾದಾಗ ಅದನ್ನು ಎದುರಿಸುವ, ನಿಭಾಯಿಸುವ ಆತ್ಮವಿಶ್ವಾಸವನ್ನು ಮೂಡಿಸುವಲ್ಲಿ ತರಬೇತಿ ಕಾರ್ಯಕ್ರಮಗಳು, ಜಾಗೃತಿ ಕಾರ್ಯಕ್ರಮಗಳು ಯಶಸ್ವಿಯಾದದ್ದೇ ಆದರೆ ಸಮಸ್ಯೆಯು ಅರ್ಧದಷ್ಟು ನಿವಾರಣೆಯಾದಂತೆಯೇ ಎಂದು ಹೇಳಬಹುದು.

**೨.೮. ಎರಡು ಕಾಯ್ದೆಯ ಮುಖಾಮುಖಿ**

ಕೌಟುಂಬಿಕ ಹಿಂಸೆ ತಡೆ ಕಾಯ್ದೆ ಮತ್ತು ಕೆಲಸದ ಸ್ಥಳದಲ್ಲಿನ ಲೈಂಗಿಕ ಕಿರುಕುಳ ತಡೆ ಕಾಯ್ದೆಗಳೆರಡು ಮಹಿಳಾ ಕಾನೂನಿನ ಇತಿಹಾಸದಲ್ಲೆ ಮೈಲಿಗಲ್ಲುಗಳೆಂದು ಹೇಳಬಹುದು. ಇವುಗಳು ಈವರೆಗೂ ಜಾರಿಯಾದ ಕಾನೂನುಗಳಿಗಿಂತ ಸಾಕಷ್ಟು ವಿಭಿನ್ನ ಮತ್ತು ವಿಶಿಷ್ಟ ಬಗೆಯಲ್ಲಿ ರೂಪಿತವಾಗಿರುವುದು ಈ ಎರಡು ಕಾಯ್ದೆಯಲ್ಲಿನ ವಿವರಗಳನ್ನು ಗಮನಿಸಿದಾಗ ಸ್ಪಷ್ಟವಾಗುತ್ತದೆ. ಹಾಗೆಯೇ ಈ ಎರಡು ಕಾಯ್ದೆಗಳ ವಿಶಿಷ್ಟ ವಿಶ್ಲೇಷಣೆಯ ಅಗತ್ಯತೆಯನ್ನು ಈಗಾಗಲೇ ಸ್ಪಷ್ಟಪಡಿಸಲಾಗಿದೆ.

ಸಮಗ್ರ ಸಮಾಜ ವ್ಯವಸ್ಥೆಯಲ್ಲಿ ಹಿಂಸೆ - ದೌರ್ಜನ್ಯಕ್ಕೊಳಗಾಗುತ್ತಿರುವ ಮಹಿಳಾ ಸಮುದಾಯದ ಮೇಲಿನ ಆಕ್ರಮಣದ ಮೂಲ ಉದ್ದೇಶ ಒಂದೇಯಾಗಿದೆ. ಕೌಟುಂಬಿಕ ಮತ್ತು ಸಾರ್ವಜನಿಕ

ವಲಯಗಳೆರಡರಲ್ಲಿಯೂ ಕಂಡು ಬರುವ ಯಾಜಮಾನ್ಯ ಮತ್ತು ಅಧೀನ ನೆಲೆಯ ಮುಂದುವರಿಕೆಯು ಒಂದೇ ಸ್ವರೂಪದಲ್ಲಿ ಕಾಣಿಸುತ್ತದೆ. ಕೌಟುಂಬಿಕ ವಲಯದಲ್ಲಿ ವರದಕ್ಷಿಣೆಯ ಹೆಸರಿನಲ್ಲಿ ಮುಚ್ಚಿ ಹೋಗುವ ಇತರೆ ಹಿಂಸೆ - ದೌರ್ಜನ್ಯಗಳು, ಸಾರ್ವಜನಿಕ ವಲಯದಲ್ಲಿ ಲೈಂಗಿಕ ಕಿರುಕುಳದ ನೆಪದಲ್ಲಿಮರೆಯಾಗುವ ಇತರೆ ಸಮಸ್ಯೆಗಳಲ್ಲಿ ಸಾಮ್ಯತೆಯನ್ನು ಕಾಣಬಹುದಾಗಿದೆ.

ಕೌಟುಂಬಿಕ ಚೌಕಟ್ಟಿನೊಳಗಿರುವ ಮಹಿಳೆ ಸಾರ್ವಜನಿಕ ವಲಯಕ್ಕೆ ಕಾಲಿರಿಸಿದಾಗಲೇ ಮಹಿಳೆಯರು ಎರಡೂ ವಲಯಗಳಲ್ಲಿ ಅನುಭವಿಸುತ್ತಿರುವ ಹಿಂಸೆ - ದೌರ್ಜನ್ಯಗಳ ಸ್ಪಷ್ಟ ಅನಾವರಣವನ್ನು ಗುರುತಿಸಲು ಸಾಧ್ಯವಾಯಿತು. ಕೌಟುಂಬಿಕ ಸಮಸ್ಯೆಯಂತೆಯೇ - ಸಾರ್ವಜನಿಕ ವಲಯಗಳಲ್ಲಿನ ಸಮಸ್ಯೆಗಳು ಸಹ ಪ್ರಕಟವಾಗದಿರುವಂತಹ ಸಂಗತಿಗಳು ಸಮಾನ ಹೋಲಿಕೆಯನ್ನು ಗ್ರಹಿಸಲು ಅನುಕೂಲಕರವಾಗಿದೆ. ಸಾಕಷ್ಟು ವಿಸ್ತೃತವಾದ ವ್ಯಾಪ್ತಿಯಲ್ಲಿ ಚರ್ಚೆಯಾಗಿ ಜಾರಿಯಾಗಿರುವ ಕೌಟುಂಬಿಕ ಹಿಂಸೆ - ತಡೆ ಕಾಯ್ದೆಯು ಅತೀ ಮಹತ್ವಕಾಂಕ್ಷೆಯನ್ನು ಹೊಂದಿದೆಯೆಂಬಂತೆಯೇ, ಲೈಂಗಿಕ ಕಿರುಕುಳ ತಡೆ ಕಾಯ್ದೆಯ ಮಾರ್ಗದರ್ಶಿ ಸೂತ್ರಗಳು ಗಮನಿಸಿದಾಗಲೂ ಅದೇ ಸಂಗತಿಯ ಪುನರಾವರ್ತನೆಯಾಗುತ್ತದೆ.

ಭಾರತ ದೇಶದಲ್ಲಿನ ಕೌಟುಂಬಿಕ ದೌಜನ್ಯದ ನೈಜ ಮುಖವನ್ನು ಕೌಟುಂಬಿಕ ಹಿಂಸೆ ತಡೆ ಕಾಯ್ದೆಯಂತೆ, ಲೈಂಗಿಕ ಕಿರುಕುಳದ ಸಮಗ್ರ ಸ್ವರೂಪವನ್ನು ಕೆಲಸದ ಸ್ಥಳದಲ್ಲಿ ನಡೆಯುವ ಲೈಂಗಿಕ ಕಿರುಕುಳ ತಡೆ ಕಾಯ್ದೆಯು ಅನಾವರಣಗೊಳಿಸಿದೆ. ಕೌಟುಂಬಿಕ ಹಿಂಸೆಯೆಂಬುದು ಕೇವಲ ಗಂಡ-ಹೆಂಡಂತಿಯ ಸಂದರ್ಭವಷ್ಟೇ ಅಲ್ಲದೆ ಗಂಡ-ಗಂಡನ ಮನೆಯವರು ಮತ್ತು ಹುಟ್ಟಿದ ಮನೆಯವರನ್ನು ಹಾಗೂ ಅದರಾಚೆಗಿನ ಸಂಗತಿಗಳನ್ನು ಕೌಟುಂಬಿಕ ಹಿಂಸೆ ತಡೆ ಕಾಯ್ದೆಯ ವ್ಯಾಖ್ಯಾನದ ವ್ಯಾಪ್ತಿಯಲ್ಲಿ ಪರಿಗಣಿಸಿದೆ. ಹಾಗೆಯೇ ಲೈಂಗಿಕ ಕಿರುಕುಳವೆಂಬುದು ಕೇವಲ ಅತ್ಯಾಚಾರವಷ್ಟೇ ಅಲ್ಲ. ಅದು ದೈಹಿಕ ಸ್ಪರ್ಶ, ಲೈಂಗಿಕತೆಯನ್ನಾಧರಿಸಿದ ಹಾಸ್ಯಚಟಾಕಿಗಳವರೆಗೂ ವಿಸ್ತೃತವಾಗಿ ಈ ಕಾಯ್ದೆಯ ವ್ಯಾಖ್ಯಾನದಲ್ಲಿ ಕಂಡು ಬರುತ್ತದೆ.

ಎರಡು ಕಾಯ್ದೆಯಲ್ಲಿಯೂ ಸಹ ಮಹಿಳಾ ಬದುಕಿನ ಮೂಲಭೂತ ಹಕ್ಕಿನ ಉಲ್ಲಂಘನೆಯ ಪ್ರಶ್ನೆಯು ಕಂಡು ಬರುತ್ತದೆ. ಮಹಿಳೆಯ ಒಟ್ಟು ಸಮಸ್ಯೆಯು ಸಹ ಅವಳ ಲೈಂಗಿಕತೆಯನ್ನು ಕೇಂದ್ರವಾಗಿರಿಸಿಕೊಂಡಿದ್ದೆಯಾಗಿದೆ ಎಂಬುದನ್ನು ಈ ಕಾಯ್ದೆಗಳು ಸ್ಪಷ್ಟಪಡಿಸುತ್ತದೆ.

ಕುಟುಂಬದ ಮರ್ಯಾದೆಯನ್ನು ಕಾಪಾಡಲು ಹೊಣೆ ಹೊತ್ತಿರುವ (ಹೊರಿಸಲಾದ) ಮಹಿಳೆಯರು ಅವರ ಮೇಲಾದ ಆಕ್ರಮಣಗಳು ಎಷ್ಟೇ ಕರಾಳವಾಗಿದ್ದರೂ ಅದನ್ನು ಹೊರಹಾಕದಂತಹ ಸನ್ನಿವೇಶಗಳನ್ನು ವ್ಯವಸ್ಥೆಯು ಸೃಷ್ಟಿಸಿದೆ. ಅದೇ ರೀತಿಯಾಗಿ ಸಾರ್ವಜನಿಕ ವಲಯದಲ್ಲಿನ ಹಲವಾರು ಸಂಗತಿಗಳು, ಸಮಸ್ಯೆಗಳನ್ನು ಮಹಿಳೆಯರು ಹೊರಜಗತ್ತಿನೊಂದಿಗೆ ಹಂಚಿಕೊಳ್ಳುವ ಅವಕಾಶಗಳಿಲ್ಲ. ಅಲ್ಪ-ಸ್ವಲ್ಪವಾಗಿ ಲಭ್ಯವಾದುದಂತಹ ಅವಕಾಶಗಳಿರುವಲ್ಲಿಯೂ ಅವಳು ಹೊರಹಾಕಿದ್ದರೆ ಅವಳ ರಕ್ಷಣೆಯ ಪ್ರಶ್ನೆಯು ಇನ್ನಷ್ಟು ಸಂಕೀರ್ಣವಾಗುತ್ತದೆ. ಸಮಸ್ಯೆಯ ಸ್ವರೂಪವು ಇನ್ನಷ್ಟು ಗಂಭೀರತೆಯನ್ನು ಪಡೆದುಕೊಳ್ಳುತ್ತದೆ.

ಕುಟುಂಬದಲ್ಲಿ ಗಂಡನಿಂದಲೋ, ತಂದೆಯಿಂದಲೊ ಅಥವಾ ಇನ್ನಾರೋ ಪುರುಷ ಸದಸ್ಯರಿಂದ ಆಗುವ ದೌರ್ಜನ್ಯ-ಹಿಂಸೆಗಳು; ಕಛೇರಿಗಳಲ್ಲಿ, ಕೆಲಸದ ಸ್ಥಳಗಳಲ್ಲಿನ ಪುರಷ ಸಮುದಾಯದಿಂದಾಗುವ ಹಿಂಸೆ-ದೌರ್ಜನ್ಯಗಳು ಬಹುತೇಕ ಪ್ರಕಟಗೊಳದಿರುವ ಸಂಗತಿಗಳನ್ನು ಒಬ್ಬ ಗೃಹಿಣಿಯ ಸಂದರ್ಭದ ಹಿನ್ನೆಲೆಯಲ್ಲಿಯೂ - ಒಬ್ಬ ಉದ್ಯೋಗಸ್ಥ ಮಹಿಳೆಯ ಸಂದರ್ಭದಲ್ಲಿಯೂ ಸಮಾನ ಸ್ವರೂಪದಲ್ಲಿ ಕಾಣಬಹುದಾಗಿದೆ.

ಕೆಲವೊಂದು ಸಂದರ್ಭಗಳಲ್ಲಿ ಕುಟುಂಬದಲ್ಲಾದ ಹಿಂಸೆ-ದೌರ್ಜನ್ಯಗಳಿಂದಲೇ ಸಾರ್ವಜನಿಕ ವಲಯಕ್ಕೆ ಮಹಿಳೆ ಕಾಲಿರಿಸಿರುವುದರಿಂದ ಕಂಡು ಬಂದರೆ, ಈ ಸಾರ್ವಜನಿಕ ವಲಯಕ್ಕೆ ಕಾಲಿರಿಸಿರುವುದರಿಂದಲೇ ಕುಟುಂಬದಲ್ಲಿನ ಹಿಂಸೆ - ದೌರ್ಜನ್ಯಗಳಿಗೆ ಬಲಿಯಾಗಬೇಕಾದಂತಹ ಸಂದರ್ಭಗಳು ಅನುಬಂಧದಲ್ಲಿ ದಾಖಲಾದ ಪ್ರಕರಣಗಳಲ್ಲಿ ಕಾಣಬಹುದು.

ಕುಟುಂಬದೊಳಗಿನ ಅಸಮಾನ ಅಧಿಕಾರ ಹಂಚಿಕೆಯ ಪ್ರಕ್ರಿಯೆಯ ಮುಂದುವರಿಕೆಯೇ ಸಾರ್ವಜನಿಕ ವಲಯಗಳಲ್ಲಿಯೂ ಮಹಿಳೆಯರನ್ನು ಪುರುಷ ಬದುಕಿಗೆ ಪೂರಕವಾಗಿ, ಸೇವಾ ವಲಯಗಳಿಗೆ ಸೀಮಿತಗೊಳಿಸುವಂತಹ ಹುದ್ದೆಗಳಿಗೆ ಮೀಸಲಾಗಿರಿಸುವುದು ಯಾಜಮಾನ್ಯ ಮತ್ತು ಅಧೀನ ನೆಲೆಯ ಪ್ರಕ್ರಿಯೆಯ ಮುಂದುವರಿಕೆಯ ಭಾಗವಾಗಿ ಪ್ರತಿನಿಧಿತವಾಗುತ್ತದೆ. ಹಾಗಾಗಿಯೇ ಕೌಟುಂಬಿಕ ವಲಯದ ಹಿಂಸೆ-ದೌರ್ಜನ್ಯದ ವಿಸ್ತೃತ ರೂಪವೇ ಸಾರ್ವಜನಿಕ ವಲಯದ ಹಿಂಸೆ-ದೌರ್ಜನ್ಯಗಳಲ್ಲಿಯೂ ಸ್ಪಷ್ಟವಾಗಿ ಕಾಣಿಸುತ್ತದೆ.

ಕೆಲಸದ ಸ್ಥಳದಲ್ಲಿನ ಲೈಂಗಿಕ ಕಿರುಕುಳ ತಡೆ ಕಾಯ್ದೆಯು ಮಹಿಳಾಪರ ಚಿಂತಕರು ಹೆಮ್ಮೆ ಪಡುವಂತಹ ಹೋರಾಟದ ಪ್ರತಿಫಲವೆನ್ನಬಹುದಾದರೂ, ಸಾರ್ವಜನಿಕ ವಲಯದ ಒಂದು ಬಗೆಯ ದೌರ್ಜನ್ಯ - ಹಿಂಸೆಯನ್ನು ಒಳಗೊಂಡಿರುವುದರತ್ತ ವಿಶೇಷವಾದ ಗಮನ ಹರಿಸಬೇಕಾಗಿದೆ. ಕೌಟುಂಬಿಕ ಹಿಂಸೆ ತಡೆ ಕಾಯ್ದೆಯೂ ಒಟ್ಟು ಕೌಟುಂಬಿಕ ವಲಯದ ಹಿಂಸೆ-ದೌರ್ಜನ್ಯಗಳನ್ನು ತಡೆಯುವಲ್ಲಿ ಅಸ್ತ್ರವಾಗಿರುವಂತೆಯೇ ಸಾರ್ವಜನಿಕ ವಲಯಕ್ಕೂ ಏಕರೂಪಿ ಕಾನೂನುನೊಂದರ ಅಗತ್ಯತೆಯಿದೆ.

ಕಾಯ್ದೆ - ಕಾನೂನುಗಳು ಜಾರಿಗೊಳಿಸುವ ಹೋರಾಟದ ಪ್ರಯತ್ನವು ಒಂದು ಮಹತ್ತರ ಸವಾಲಾದ ಮಹಿಳಾ ಹೋರಾಟಗಾರರಿಗೆ, ಅದು ಜಾರಿಯಾದ ನಂತರ ಮಹಿಳಾ ಬದುಕಿಗೆ ಸಮರ್ಪಕವಾಗಿ ಉಪಯುಕ್ತವಾಗುತ್ತಿದೆಯೇ ಎಂಬುದು ಸಹ ಅಷ್ಟೇ ಸವಾಲಿನ ಸಂಗತಿಯಾಗಿದೆ. ಪುರುಷ ಸಮುದಾಯದ ಒಂದು ಸಣ್ಣ ಪ್ರಮಾಣದ ಸಮಸ್ಯೆಯನ್ನು ಬಹುಬೇಗ ನಿವಾರಿಸುವ, ಆ ಕುರಿತು ಎಚ್ಚರಿಕೆಯನ್ನು ಸೂಚಿಸುವ ಪ್ರಧಾನ ಧಾರೆಯಲ್ಲಿ, ಮಹಿಳಾ ಸಮುದಾಯದ ಅಸ್ತಿತ್ವಕ್ಕೆ ಧಕ್ಕೆಯುಂಟು ಮಾಡುವಂತಹ ಸಮಸ್ಯೆಗಳಿಗಾಗಿ ನಿರಂತರ ಹೋರಾಟ ಮಾಡಿ ಫಲಗಳನ್ನು ಪಡೆದಾಗಲು, ಅದು ವಾಸ್ತವದಲ್ಲಿ ಸ್ತ್ರೀಸಮುದಾಯಕ್ಕೆ ಉಪಯುಕ್ತವಾಗುವ ಬದಲು, ಪುರುಷ ಪ್ರಧಾನ ಸಮಾಜದ ಅಸ್ತ್ರವಾಗಿ ಬಳಕೆಯಾಗುತ್ತಿರುವುದು ಪುರುಷ ಚಿಂತನೆಯ ಬೇರುಗಳ ಆಳವನ್ನು ಊಹಿಸಲು ಸಾಧ್ಯವಾಗದಂತಹ ಸಂದರ್ಭವು ಎದುರಾಗುತ್ತದೆ.

ಈ ಬಗೆಯಲ್ಲಿ ದೌರ್ಜನ್ಯ - ಹಿಂಸೆಯ ಚಿಂತನೆಗಳ ಸಮೀಕ್ಷೆಯಿಂದ ಮೊದಲಾಗಿ, ದೌರ್ಜನ್ಯ-ಹಿಂಸೆಗಳ ವಿವಿಧ ಆಯಾಮಗಳನ್ನು ಗ್ರಹಿಸಲಾಯಿತು. ಕೌಟುಂಬಿಕ ಮತ್ತು ಸಾರ್ವಜನಿಕ ವಲಯಗಳಲ್ಲಿ ಹಿಂಸೆ - ದೌರ್ಜನ್ಯಗಳನ್ನು ಚರ್ಚೆಗೊಳಪಡಿಸುವ ಮೂಲಕ, ಪ್ರಮುಖವಾಗಿ ಎರಡು ಕಾಯ್ದೆಗಳನ್ನು ಮುಖಾಮುಖಿಯಾಗಿಸುವುದರೊಂದಿಗೆ ಸಂಶೋಧನೆಯ ಪ್ರಾಕಲ್ಪನೆಯನ್ನು ಪರೀಕ್ಷೆಗೊಳಪಡಿಸಲಾಯಿತು. ಈ ನಿಟ್ಟಿನಲ್ಲಿ ವಿವಿಧ ಸಾರ್ವಜನಿಕ ವಲಯಗಳಲ್ಲಿ ಯಾಜಮಾನ್ಯ ಮತ್ತು ಅಧೀನ ನೆಲೆಯ ಸಂಬಂಧಗಳನ್ನು ಗ್ರಹಿಸಲು ಮುಂದಿನ ಅಧ್ಯಾಯವನ್ನು ರೂಪಿಸಿಕೊಳ್ಳಲಾಗಿದೆ.

---

**ಅಡಿಟಿಪ್ಪಣಿಗಳು:**

೧ Violence against Women, New movements and new theories in India, Pg. No. 35
೨ Same Book, Pg. No. 36
೩ Creation of patriarchary, Greada Learner, Pg. No. 1
೪ Violence and protective majors for women Development and empowerment, Aurona Goeal, 2004, Pg. No. 88
೫ Women and Voilence, A Country Report, Veena Poonacha, 1995, Pg. No. 2
೬ ಸ್ತ್ರೀವಾದಿ ಪ್ರವೇಶಿಕೆ, ಕನ್ನಡ ಲೇಖಕಿಯರ ಸಂಘ, ಬೆಂಗಳೂರು, ಪು.ಸಂ. ೩೯
೭ ಅದೇ ಪುಸ್ತಕ, ಅದೇ ಪುಟ
೮ ಅದೇ ಪುಸ್ತಕ, ಪು.ಸಂ. ೪೦
೯ ಅದೇ ಪುಸ್ತಕ, ಪು.ಸಂ. ೧೩
೧೦ Economic and Political Weekly, October, 14, 2006 Pg. No. 4356
೧೧ Combating Law of Sexual Harrasment at work place, Guidelines, Pg. No. 28
೧೨ ಹೊಸತು ವಿಶೇಷ ಸಂಚಿಕೆ, ಜನವರಿ, ೨೦೦೯, ಪು.ಸಂ. ೧೨೮

# ಅಧ್ಯಾಯ ಮೂರು

# ವಿವಿಧ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ಹಿಂಸೆ, ದೌರ್ಜನ್ಯ

ಅಧ್ಯಾಯ ಮೂರು

# ವಿವಿಧ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ಹಿಂಸೆ, ದೌರ್ಜನ್ಯ

ಲಿಂಗ ಪಕ್ಷಪಾತದ ನೆಲೆಯಲ್ಲಿ ಮುಂದುವರೆಯುತ್ತಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ರೂಪಿತಗೊಂಡಿರುವ ಸ್ತ್ರೀ-ಪುರುಷರ ಸಂಬಂಧಗಳಲ್ಲಿ ಯಾಜಮಾನ್ಯತೆ ಮತ್ತು ಅಧೀನತೆಯ ಸ್ವರೂಪವು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಕುಟುಂಬದಲ್ಲಿ ಅಧಿಕಾರದ ಒಡೆತನ ಪುರುಷಾಧೀನವಾಗಿದ್ದು, ಸಾರ್ವಜನಿಕ ವಲಯಗಳಲ್ಲಿನ ಒಡೆತನದ ಮೇಲೆಯೂ ಹಕ್ಕನ್ನು ಸ್ಥಾಪಿಸಿದೆ. ಎರಡೂ ವಲಯಗಳಲ್ಲಿ ಅಧೀನವಾಗಿ ಕಾಣಿಸಿಕೊಳ್ಳುವ ಮಹಿಳಾ ಸಮುದಾಯ ಶಾಶ್ವತವಾಗಿ ಅದೇ ನೆಲೆಯಲ್ಲಿ ಮುಂದುವರೆಯಬೇಕೆಂಬ ಆಕಾಂಕ್ಷೆ ಪುರುಷ ಪ್ರಧಾನ ವ್ಯವಸ್ಥೆಯ ಎಲ್ಲ ಹುನ್ನಾರಗಳಿಗೂ ನಾಂದಿಯಾಗಿದೆ. ಈ ನಿಟ್ಟಿನ ಪುರುಷ ಸಮುದಾಯದ 'ಸ್ವ-ಕೇಂದ್ರಿತ' ಚಿಂತನೆಯು ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಕಾರಣೀಭೂತವಾಗಿದೆ. ಸರ್ವರಂಗಗಳಲ್ಲಿಯೂ ಸಕ್ರಿಯವಾಗಿ ಮಹಿಳೆಯು ಪಾಲ್ಗೊಳ್ಳುತ್ತಿದ್ದರೂ ಸಾರ್ವಜನಿಕ ವಲಯವು ಇಂದಿಗೂ ಪುರುಷ ವಲಯವಾಗಿಯೇ ಉಳಿದುಕೊಂಡಿದೆ. ಈ ಹಿನ್ನೆಲೆಯಲ್ಲಿ ವಿವಿಧ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಸ್ವರೂಪದ ಚರ್ಚೆಯನ್ನು ಈ ಅಧ್ಯಾಯವು ಒಳಗೊಂಡಿದೆ.

ಸಾರ್ವಜನಿಕ ವಲಯದ ಪ್ರವೇಶ ಪ್ರಕ್ರಿಯೆಯಿಂದಲೂ ಮಹಿಳೆಗೆ ನಿಷೇಧ ಹೇರಿರುವುದು. ಪಿತೃ ಸಂಸ್ಕೃತಿಯನ್ನು ರೂಢಿಸಿಕೊಂಡಿರುವ ವ್ಯವಸ್ಥೆಯಲ್ಲಿ ಸಹಜವಾಗಿಯೇ ಒಪ್ಪಿತವಾಗಿದೆ. ಹೀಗೆ ಮೊದಲ ಹಂತದಿಂದಲೂ ಆರಂಭವಾಗುವ ಹಿಂಸೆ-ದೌರ್ಜನ್ಯಗಳು, ಮಹಿಳೆಯು ಆ ಪ್ರವೇಶ ಪ್ರಕ್ರಿಯೆಯಿಂದ ಮುಂದುವರಿದಂತೆಲ್ಲ ಅವಳ ಇರುವಿಕೆಯೇ ಅಲ್ಲಿ ಸಾಧ್ಯವಿಲ್ಲವೆಂಬ ಮಟ್ಟಿಗೆ ಸಮಾಜ ವ್ಯವಸ್ಥೆಯಲ್ಲಿ ಪ್ರಧಾನಲಿಂಗೀಯ ಪರವಾದ ಚಿಂತನೆಗಳು ಆಳವಾಗಿ ಬೇರೂರಿವೆ. ಈ ಮಿತಿಗಳಾಚೆಗೂ ದೃಢವಾಗಿ ಪಾಲ್ಗೊಳ್ಳುತ್ತಿರುವ ಮಹಿಳೆ ಹತ್ತು, ಹಲವು ರೀತಿಯ ಆಕ್ರಮಣಗಳಿಗೊಳಗಾಗುತ್ತಿದ್ದಾಳೆ. ಅಲ್ಲಿ ಲಭ್ಯವಾಗಬೇಕಾದ ಕನಿಷ್ಠ ಪಕ್ಷದ ಸೌಲಭ್ಯಗಳಿಂದ ವಂಚಿತರಾಗುವುದರಿಂದ ಮೊದಲುಗೊಂಡು, ಪ್ರಾಣ ಕಳೆದುಕೊಳ್ಳುವಂತಹ ಕ್ರೌರ್ಯಕ್ಕೆ ಬಲಿಯಾಗುತ್ತಿದ್ದಾಳೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿಯೂ ಸಾಧನೆಯ ಪಥದಲ್ಲಿ ತಮ್ಮ ಛಾಯೆಯನ್ನು ಮೂಡಿಸುತ್ತಿರುವ ಮಹಿಳೆಯರ ಸಂಖ್ಯೆ ಬೆರಣಿಕೆಯಷ್ಟು ಇಲ್ಲವಾಗಿದೆ.

ಈ ಅಂಶಗಳನ್ನಾಧರಿಸಿ ವಿವಿಧ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ-ಹಿಂಸೆಗಳ ಸಮಗ್ರ ಸ್ವರೂಪವನ್ನು ಗ್ರಹಿಸುವ ಅಗತ್ಯತೆಯಿದೆ.

ಮೇಲ್ನೋಟಕ್ಕೆ ಭಿನ್ನವೆನಿಸುವ ಕೌಟುಂಬಿಕ - ಸಾರ್ವಜನಿಕ ವಲಯಗಳೆರಡೂ ಸಹ ಪರಸ್ಪರ ಪೂರಕವಾಗಿವೆಯೆಂಬುದು ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಆದರೆ ಈ ಸಂಗತಿಯು ಪ್ರತಿಯೊಂದು ಸಾರ್ವಜನಿಕ ವಲಯಗಳಲ್ಲಿನ ಹಿಂಸೆ-ದೌರ್ಜನ್ಯಗಳಲ್ಲಿ ಕಾಣಿಸಿಕೊಳ್ಳುತ್ತದೆಯೆ? ಎಂಬುದನ್ನು ಖಚಿತಪಡಿಸಿಕೊಳ್ಳಲು ವಿವಿಧ ಸಾರ್ವಜನಿಕ ವಲಯಗಳನ್ನು ವಿಶ್ಲೇಷಣೆಗೊಳಪಡಿಸಲಾಗಿದೆ. ಅಧಿಕಾರ ಪಡೆಯುವಿಕೆ ಮತ್ತು ಅಧೀನತೆಯನ್ನು ಶಾಶ್ವತವಾಗುಳಿಸುವ ಉದ್ದೇಶದಿಂದಲೇ ನಡೆಯುತ್ತಿರುವ ಹಿಂಸೆ-ದೌರ್ಜನ್ಯಗಳು, ಈ ವಲಯಗಳಲ್ಲೂ ಸಹ ಯಾಜಮಾನ್ಯತೆ - ಅಧೀನತೆಯನ್ನು ಮುಂದುವರಿಸುವಲ್ಲಿಯೇ ಸಾಗುತ್ತಿದೆಯೆ? ಎಂಬ ಅಂಶಗಳನ್ನು ಗ್ರಹಿಸುವ ಯತ್ನ ಈ ಅಧ್ಯಾಯದಲ್ಲಿ ಮಾಡಲಾಗುತ್ತಿದೆ. ಈ ಬಗೆಯ ಹಿಂಸೆ-ದೌರ್ಜನ್ಯಗಳು ಸ್ತ್ರೀ-ಪುರುಷರಿರ್ವರ ಮೇಲೆ ನಡೆಯುತ್ತಿವೆಯಾದರೂ, ಸ್ತ್ರೀ-ಕೇಂದ್ರಿತ ಚಿಂತನೆಯನ್ನಾಧರಿಸಿದ ಈ ಸಂಶೋಧನೆಯಲ್ಲಿ ದೌರ್ಜನ್ಯ-ಹಿಂಸೆಗಳು ಮಹಿಳೆಯ ಮೇಲೆ ನಡೆಸುತ್ತಿರುವುದು ಪುರುಷನ ಹಕ್ಕಾಗಿ, ಸಾಮಾಜಿಕ ಮನ್ನಣೆಯನ್ನು ಪಡೆದಿರುವ ವಿಷಾದನೀಯ ಅಂಶಗಳು ಈ ಎಲ್ಲಾ ವಲಯಗಳಲ್ಲೂ ಕಾಣಿಸಿಕೊಳ್ಳುತ್ತಿವೆಯೆ? ಅದರಲ್ಲೂ ಕೆಲವು ವಲಯಗಳಲ್ಲಿ ಇದರ ಛಾಯೆಯು ದಟ್ಟವಾಗಿದೆಯೆ? ಹಾಗಿದ್ದಿದೇ ಆದರೆ ಹಾಗಿರಲೂ ಕಾರಣ ಅದು ಅಧಿಕಾರ ಕೇಂದ್ರಿತ ವಲಯವೆ? ಎಂಬ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳುವುದು ಅಗತ್ಯವಿದೆ.

ಜಾತಿ, ಜನಾಂಗ, ವರ್ಣಗಳ ಕಾರಣಗಳಿಂದ ನಡೆಯುವ ಹಿಂಸೆ-ದೌರ್ಜನ್ಯಗಳು ಲಿಂಗದ ಕಾರಣದಿಂದಾಗಿ ಹೆಣ್ಣಾಗಿರುವುದಕ್ಕೆ ಮಹಿಳೆಯರ ಮೇಲೆ ವಿವಿಧ ಸಾರ್ವಜನಿಕ ವಲಯಗಳಲ್ಲಿ ದೌರ್ಜನ್ಯ-ಹಿಂಸೆಗೊಳಗಾಗುತ್ತಿದ್ದು ಅವುಗಳ ಹಿಂದಿರುವ ಹುನ್ನಾರ, ಮೂಲ ನೆಲೆಯು ಪುರುಷ ಪ್ರಧಾನತೆಯೇ ಆಗಿದೆ. ಈ ನಿಟ್ಟಿನಲ್ಲಿ ಅಸಮಾನ ಅಧಿಕಾರ ಮತ್ತು ಅಸಹನೆಯ ಕಾರಣಗಳಿಂದ ಜನ್ಮ ತಳೆಯುವ ದೌರ್ಜನ್ಯ ಕುಟುಂಬದಲ್ಲಿಗಿಂತ ಹೆಚ್ಚು ಸಾರ್ವಜನಿಕ ವಲಯಗಳಲ್ಲಿ ಗುರುತಿಸಬಹುದು, ಕ್ರೀಡಾಲೋಕ, ಆರ್ಥಿಕತೆ, ಶಿಕ್ಷಣ, ಆರೋಗ, ಧರ್ಮ, ರಾಜಕೀಯ ಮತ್ತು ಉದ್ಯೋಗಗಳಲ್ಲಿ ಮಹಿಳೆ ಅನುಭವಿಸುತ್ತಿರುವ ದೌರ್ಜನ್ಯ. ಸಾರ್ವಜನಿಕ ವಲಯದ ಪ್ರವೇಶದಿಂದ ಆರಂಭವಾಗಿ, ಅಲ್ಲಿಯೇ ನೆಲೆಗೊಳ್ಳಲು ಆಗದಂತಹ ಸಂದರ್ಭಗಳನ್ನು ಪುರುಷ ಚಿಂತನೆಯೂ ಸೃಷ್ಟಿಸುತ್ತಲೇ ಇವೆ. ಈ ಬಗೆಯ ದೌರ್ಜನ್ಯ-ಹಿಂಸೆಗಳು ಕುಟುಂಬ ವಲಯದ ಯಜಮಾನಿಕೆ ಮತ್ತು ಅಧೀನತೆಯ ವಿಸ್ತೃತರೂಪವೇ ಸಾರ್ವಜನಿಕ ವಲಯಗಳಲ್ಲಿಯೂ ಕಾಣಿಸಿಕೊಳ್ಳುವುದೆಂಬುದು ವಿವರಗಳಿಂದ ಗ್ರಹಿಸುವ ಹಿನ್ನೆಲೆಯು ಈ ಅಧ್ಯಾಯವು ಆಧರಿಸಿದೆ.

### ೩.೧. ಧಾರ್ಮಿಕ ವಲಯ

ಸಾಮಾಜೀಕರಣದ ಕೊಂಡಿಯಾಗಿ ಕಾರ್ಯನಿರ್ವಹಿಸುವ ಧರ್ಮವು ಆಯಾ ಜಾತಿ, ಸಮುದಾಯಕ್ಕನುಗುಣವಾಗಿ ಮನುಷ್ಯರ ವ್ಯಕ್ತಿತ್ವ ರೂಪಿಕೆಗೆ ಸಹಕಾರಿಯಾಗಿದೆಯೆಂದು ಸಮಾಜ ವ್ಯವಸ್ಥೆಯ

ನಂಬಿಕೆಯಾಗಿದೆ. ಉತ್ಪಾದನಾ ಸಾಮಗ್ರಿಗಳ ಅಭಿವೃದ್ಧಿಯಾದಂತೆಲ್ಲ, ವರ್ಗ ವಿಭಜನೆಯಿಂದ ವ್ಯವಸ್ಥೆಯು ಕೂಡಿಕೊಂಡಿತು. ಈ ನಿಟ್ಟಿನಲ್ಲಿ ಸಮಾಜವನ್ನು ಸುಸಂಬದ್ಧವಾದ ಚೌಕಟ್ಟಿಗೊಳಪಡಿಸಲು ನಿಯಂತ್ರಣಾ ಮಾಧ್ಯಮದ ಅಗತ್ಯತೆಯಲ್ಲಿ ಹಿನ್ನೆಲೆಯಲ್ಲಿ ದೈವದ ಪರಿಕಲ್ಪನೆ ಬೆಳೆದು ಬಂದಿತು. ವ್ಯವಸ್ಥೆಯಾಭಿವೃದ್ಧಿಯ ಚಾರಿತ್ರಿಕ ಸಂದರ್ಭದಲ್ಲಿ ಧರ್ಮದ ಉದಯವಾಯಿತು. ಪ್ರಬಲವರ್ಗಗಳು - ದುರ್ಬಲವರ್ಗಗಳು ಮೇಲೆಳದಂತೆ, ದಮನಕಾರಿ ಪ್ರವೃತ್ತಿಯಲ್ಲಿಯೇ ಧರ್ಮವು ಅಗತ್ಯವಾಯಿತು. ಪುರುಷರು (ಪ್ರಬಲರು) ಬೆಳೆದು ಬರುತ್ತಿರುವ ಹಿನ್ನೆಲೆಯನ್ನಾಧರಿಸಿ ರೂಪಿತವಾದ ಧರ್ಮವು ಮಹಿಳೆಯರನ್ನು ದುರ್ಬಲ ವರ್ಗದಡಿಯಲ್ಲಿಯೇ ವ್ಯಾಖ್ಯಾನಿಸಿತು. ಈ ಹಿನ್ನೆಲೆಯಲ್ಲಿ ಧರ್ಮದ ದೃಷ್ಟಿಕೋನವು ಮಹಿಳಾ ಸಂಬಂಧಿತವಾಗಿ ಆಕ್ರಮಕವಾದುದಾಗಿದೆ. ಮಹಿಳೆಯರ ವಿರುದ್ಧ ನಡೆಯುವ ಯಾವುದೇ ಕ್ರಿಯೆ, ಹಿಂಸೆ-ದೌರ್ಜನ್ಯಗಳು ನಡೆದರೂ ಅಲ್ಲಿ ಧರ್ಮದ ಪ್ರಭಾವವು ಕಾಣಿಸದೆ ಇರದು. ವಿವಿಧ ಬಗೆಯ ಜಾತಿ, ಕೋಮು-ಗಲಭೆಗಳಲ್ಲಿ ನಡೆದ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಹಿಂದೆ ಧರ್ಮದ ಸೂಕ್ಷ್ಮ ಎಳೆಗಳು ಕಾಣಿಸಿಕೊಳ್ಳುತ್ತವೆ. ಸಮಾಜ ವ್ಯವಸ್ಥೆಯಲ್ಲಿ ಸರ್ವವ್ಯಾಪಿಯಾದ ಧರ್ಮವು ಮಹಿಳೆಯ ಸಾಮಾಜಿಕ ಚಹರೆಯನ್ನು ಇಲ್ಲವಾಗಿಸಿದೆ ಹಾಗೂ ಸಮಾಜ ವ್ಯವಸ್ಥೆಯಲ್ಲಿನ ಇತರೆ ಸಂಸ್ಥೆಗಳ ನಿರ್ದೇಶಕ ಸ್ಥಾನದಲ್ಲಿ ಧರ್ಮ ಸ್ಥಾಪಿತವಾಗಿದೆ. ಈ ಬಗೆಯ ಸ್ಥೂಲ ಸಂಗತಿಗಳನ್ನಾಧರಿಸಿ, ಧಾರ್ಮಿಕ ವಲಯದ ವಿವಿಧ ಧರ್ಮಗಳಲ್ಲಿ ಮಹಿಳಾ ಸ್ವರೂಪ, ಧರ್ಮದ ಕಾರಣದಿಂದಲೇ ಸಾರ್ವಜನಿಕ ವಲಯದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಸ್ವರೂಪವನ್ನು ಇಲ್ಲಿ ಚರ್ಚೆಗೊಳಪಡಿಸಲಾಗುತ್ತಿದೆ.

ಒಟ್ಟು ಧಾಮಿಕ ವಲಯದ ಚರಿತ್ರೆಯತ್ತ ಗಮನಹರಿಸಿದಾಗ, ವಿವಿಧ ಬಗೆಯ ಧರ್ಮಗಳ ಉದ್ಭವವಾದದ ಸನ್ನಿವೇಶಗಳು ಸಾಕಷ್ಟು ವೈಚಿತ್ರ್ಯತೆಯಿಂದ ಕೂಡಿದೆ. ಪ್ರತಿಯೊಂದು ಧರ್ಮವು ಸಹ ಇನ್ನೊಂದು ಧರ್ಮದಲ್ಲಿನ ಲೋಪದೋಷದ ನಿವಾರಣೆಗೆಂಬಂತೆ ಉದಯಿಸುತ್ತಲೇ ಇವೆ. ವ್ಯವಹಾರಿಕ ನೆಲೆಯಲ್ಲಿ ಇವುಗಳನ್ನು ಸಹೋದರ ನೆಲೆಯ ಧರ್ಮಗಳಿಂದ ಹೇಳಬಹುದಾದರೂ, ವಾಸ್ತವದಲ್ಲಿ ಪ್ರತಿಯೊಂದು ಧರ್ಮವೂ ಇನ್ನೊಂದು ಧರ್ಮದ ಪ್ರತಿಸ್ಪರ್ಧಿಯಾಗಿಯೇ ಇರುವುದನ್ನು ಗುರುತಿಸಬಹುದು. ಹೀಗೆ ಜನ್ಮತಾಳಿದ ಪ್ರತಿಯೊಂದು ಧರ್ಮವೂ ಸಹ ಹೆಣ್ಣನ್ನು ಎರಡನೆ ದರ್ಜೆಯವಳೆಂದೆ ಪರಿಗಣಿಸಿದ್ದು, ಕೆಲವೇ ಕೆಲವು ಸನ್ನಿವೇಶಗಳಲ್ಲಿ ವೈಭವೀಕರಣದಿಂದಲೋ, ಇನ್ನಾವುದೇ ಕಾರಣಕ್ಕೊ ಮಿಂಚಿನಂತ ಎಳೆಗಳನ್ನು ಹೊರಹಾಕುತ್ತದೆ. ಅದರಾಚೆಗೆ ಕಾರ್ಲ್‌ಮಾರ್ಕ್ಸ್‌ರವರು ಹೇಳುವಂತೆ ಈಗಾಗಲೇ ಅಸ್ತಿತ್ವದಲ್ಲಿರುವ ಹಿಂಸಾತ್ಮಕ ವ್ಯವಸ್ಥೆಯ ಪ್ರತಿರೂಪವೇ ಧರ್ಮವೆಂಬ ಅಭಿಪ್ರಾಯವನ್ನು ನಿರಾಕರಿಸುವಂತಿಲ್ಲ.

ಪ್ರಪಂಚದಲ್ಲಿ ಮನುಷ್ಯನ ಮಹಿಮೆಯನ್ನು ಹಿಂದೂ ಧರ್ಮದಷ್ಟು ಇನ್ನಾವ ಧರ್ಮವೂ ಉನ್ನತ ಹಾಗೂ ಉದಾತ್ತ ಭಾವನೆಗಳಿಂದ ಬೋಧಿಸಿಲ್ಲ. ಅಂತೆಯೇ ಮತ್ತಾವ ಧರ್ಮವೂ ಬಡವರ, ಕೆಳವರ್ಗದವರ ಕತ್ತಿನ ಮೆಲೆ ಸವಾರಿ ಮಾಡಲಿಲ್ಲವೆಂದು ಹೇಳುವ ಚಿಂತಕರ ವ್ಯಾಖ್ಯಾನದಿಂದ, ಮಹಿಳೆಯರನ್ನು ಸಹ ಒಂದು ಕೆಳವರ್ಗವಾಗಿ ಪರಿಗಣಿಸಿದ್ದಾರೆಂಬುದಕ್ಕೆ ಸ್ಪಷ್ಟ ಚಿತ್ರಗಳು ದೊರೆಯುತ್ತವೆ.

ಇದಕ್ಕೆ ಉದಾಹರಣೆಯಾಗಿ ಹಿಂದೂ ಧರ್ಮದಲ್ಲಿಯೇ ಮಹಾನ್ ಗ್ರಂಥಗಳೆಂದು ಸಾಬೀತಾಗಿರುವ ರಾಮಾಯಣ ಮತ್ತು ಮಹಾಭಾರತದಲ್ಲಿನ ಸ್ತ್ರೀಪಾತ್ರಗಳ ಚಿತ್ರಣವನ್ನು ನೋಡಿದಾಗ ಮಹಿಳೆಯರ ಮೇಲಾಗುವ ಹಿಂಸೆ ದೌರ್ಜನ್ಯಗಳು ಬೆಳಕಿಗೆ ಬರುತ್ತವೆಯಲ್ಲದೆ, ಹಿಂದೂ ಧರ್ಮದ ಒಟ್ಟು ಆಶಯವೇ ಅನಾವರಣಗೊಳ್ಳುತ್ತವೆ. ರಾಮಾಯಣ - ಮಹಾಭಾರತದ ಸ್ತ್ರೀ ಪಾತ್ರಗಳು ಒಂದಲ್ಲಾ ಒಂದು ಬಗೆಯಲ್ಲಿ, ಹಿಂದೂ ಧರ್ಮದ ಮಹಿಳೆಯರ ಮೇಲೆ ದುಷ್ಪರಿಣಾಮವನ್ನು ಬೀರದೆ ಉಳಿದಿಲ್ಲ. ದ್ರೌಪದಿಯ ಪಾತ್ರಕ್ಕಿಂತ, ಸೀತೆಯ ಪಾತ್ರವು ಆದರ್ಶನಾರಿಯ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಮಹಿಳೆಯ ಮೇಲಿನ ದೌರ್ಜನ್ಯದ ಪ್ರತೀಕವಾಗಿ ಗೋಚರಿಸುತ್ತವೆ. ಪತಿವ್ರತಾ ಧರ್ಮದ ಪರಿಪಾಲನೆಗಾಗಿಯೇ ರಾಮನೊಂದಿಗೆ ಕಾಡಿಗೆ ಬಂದ ಸೀತೆ, ರಾವಣನ ಕುಟೀರದಲ್ಲಿ ಬಂಧಿಯಾಗುತ್ತಾಳೆ. ಈ ಕಾರಣದಿಂದಲೇ ಸೀತೆಯ ಶೀಲ ಶಂಕಿಸಿದ ರಾಮನು (ಅಗಸನೊಬ್ಬನ ಮಾತಿನಿಂದ) ಅವಳನ್ನು ಮತ್ತೆ ಕಾಡಿಗಟ್ಟುತ್ತಾನೆ. ಈ ಕಾಡಿನ ಪಯಣದಲ್ಲಿ ಅವಳ ಮೇಲಾಗುವ ಆಕ್ರಣಗಳನ್ನು ಚಿತ್ರಿಸುವ ಗೋಜಿಗೆ ಹೋಗದ ಧರ್ಮಶಾಸ್ತ್ರವು, ಶೀಲದ ನೆಪದಲ್ಲಿ ಅವಳ ಸಂಪೂರ್ಣ ದಮನವನ್ನು ಮಾಡುತ್ತದೆ. ಸರ್ವರ ಹಿತವನ್ನು ಕಾಪಾಡುವ ಆಶಯದಿಂದಲೇ ಜನ್ಮ ತಳೆದ ಧರ್ಮಗಳು ರಾಮನ ಶೀಲದ ಚಕಾರವೆತ್ತುವುದಿಲ್ಲ. ಸಾರ್ವಜನಿಕ ವಲಯಕ್ಕೆ ಕಾಲಿರಿಸಿದ ಹೆಣ್ಣು ತನ್ನ ನೈತಿಕತೆಯ(?)ನ್ನೇ ಕಳೆದುಕೊಳ್ಳುತ್ತಾಳೆಂಬ ಉಲ್ಲೇಖಗಳು ಇಂದಿಗೂ ಕಾಣಸಿಕೊಳ್ಳುತ್ತಿವೆ. ಸಾರ್ವಜನಿಕ ಸಭೆಯಲ್ಲಿ ಕೌರವರು ದ್ರೌಪದಿಯ ಸೀರೆಯನ್ನು ಸೆಳೆಯುತ್ತಿದ್ದಾಗ ಧರ್ಮ ಪರಿಪಾಲಕರಾದ ಪಾಂಡವರ ಮೌನವು, ಮಹಿಳೆಯೊಬ್ಬಳ ಮೇಲೆ ಬಹಿರಂಗವಾಗಿ ನಡೆಯುತ್ತಿರುವ ಆಕ್ರಮಣವನ್ನು ಮೂಕ ಪ್ರೇಕ್ಷಕರಾಗಿ ನೋಡುವುದು ಧರ್ಮವೇ? ಹೆಣ್ಣನ್ನು ಜೂಜಿಗಿಡುವ ವಸ್ತುವಾಗಿಸಿದ್ದು ಧರ್ಮವೇ? ಒಂದೆಡೆ ಸೀತೆಯನ್ನು ದೇವತೆಯೆಂದು ವೈಭವೀಕರಿಸಿ, ಇನ್ನೊಂದೆಡೆ ದಿಟ್ಟತನದ ದ್ರೌಪದಿಯನ್ನು ರಕ್ಕಸಿ ಸ್ವರೂಪದಲ್ಲಿ ನಿಲ್ಲಿಸುವುದು ಧರ್ಮವೇ? ಪಿತೃ ಚಿಂತನೆಗಳನ್ನು ಚಾಚೂ ತಪ್ಪದೇ ಪಾಲಿಸಿದ ಸೀತೆ, ದ್ರೌಪದಿಯರಿಬ್ಬರೂ ಕೌಟುಂಬಿಕ - ಸಾರ್ವಜನಿಕ ವಲಯಗಳೆರಡರಲ್ಲೂ ದೌರ್ಜನ್ಯಕ್ಕೊಳಗಾದ ಸಂಗತಿಗಳನ್ನು ಇಂದಿಗೂ ನಿರಾಕರಿಸಿ, ಮಹಿಳಾ ಬದುಕಿನ ಮಾದರಿಗಳಾಗಿಸಿ ಅವರನ್ನು ಈಗಿನ ಸ್ತ್ರೀ ಸಮುದಾಯವನ್ನು ಶೋಷಿಸುವ ಅಸ್ತ್ರವಾಗಿ ಬಳಕೆಯಲ್ಲಿವೆ.

ಹೆಣ್ಣು ಹಿಂಸಿಸಲೆಂದೆ, ಭೋಗಿಸಲೆಂದೆ ಇರುವ ವಸ್ತುವೆಂದು ಚಿತ್ರಿಸಲಾಗಿರುವ ಮನುಸ್ಮೃತಿ, ನಡೆದಾಡುವ ಮನುಗಳನ್ನು ಹುಟ್ಟು ಹಾಕುತ್ತಲೇ ಇರುವುದು, ಮಹಿಳಾ ಬದುಕನ್ನು ಪ್ರತಿ ಹಂತಕ್ಕೂ ನುಚ್ಚು ನೂರಾಗಿಸುತ್ತಿರುವುದು ಧರ್ಮದ ಕೊಡುಗೆ.

ಬದುಕಿನ ಹಲವು ಕನಸುಗಳನ್ನು ಹೊತ್ತ ಯುವತಿಯರನ್ನು, ದೇವಸ್ಥಾನಗಳಲ್ಲಿ ದೇವರ ಹೆಸರಿನಲ್ಲಿ ದೇವದಾಸಿಯರನ್ನಾಗಿಸಿ, ಅವಳನ್ನು ಸಾರ್ವಜನಿಕವಲಯದ ಲೈಂಗಿಕ ಸರಕಾಗಿ ರೂಪಿಸುತ್ತಿರುವುದು, ಪಿತೃಚಿಂತನೆಯ ಅಟ್ಟಹಾಸಕ್ಕೆ ಮಣಿದು ಅನೇಕ ಕಹಿ ಸತ್ಯಗಳನ್ನು ನುಂಗಿ ಹಿಂಸಾತ್ಮಕ ಬದುಕನ್ನು ಬದುಕುವಂತೆ ಮಹಿಳೆಗೆ ಅನಿವಾರ್ಯತೆಯನ್ನು ಸೃಷ್ಟಿಸುತ್ತಲೇ ಇರುವ ಧಾರ್ಮಿಕ ವಲಯದಲ್ಲಿ ಧರ್ಮಗಳನ್ನು ಆರಾಧಿಸುತ್ತಿರುವುದು, ಸಮಾಜದ ಅಧಃಪತನದ ಸೂಚಕವೇ ಆಗಿದೆ.

ಮಹಿಳಾ ಬದುಕಿನ ಕರಾಳ ಸ್ಥಿತಿಯನ್ನು ಪೋಷಿಸಿ, ಮುಂದುವರೆಸಲೆಂದೆ ಸ್ಥಾಪಿತವಾಗಿರಬಹುದಾದ ಇಸ್ಲಾಂ ಧರ್ಮವು ಮಹಿಳೆಯರ ಮೇಲಿನ ಹಿಂಸೆ - ದೌರ್ಜನ್ಯವನ್ನು, ಧಾರ್ಮಿಕ ಯಾಜಮಾನ್ಯದ ಹಕ್ಕಾಗಿ ಬಿಂಬಿತವಾಗಿದೆಯೆಂದರೆ ಅತಿರೇಕವೆನಿಸಲಾಗದು. ಮಹಿಳೆಯ ಸ್ವಾತಂತ್ರ್ಯವನ್ನು ದಿಗ್ಬಂಧನಕ್ಕೊಳಪಡಿಸುವ ಮುಸ್ಲಿಂ ಧರ್ಮವು, ಮಹಿಳೆಯನ್ನು ದೇಹ ಕೇಂದ್ರಿತವಾಗಿ, ಲೈಂಗಿಕ ಸರಕಿನಾಚೆಗಾಗಲಿ, ಹೇರುವ ಯಂತ್ರದಾಚೆಗೆ ಒಂದು ಜೀವವೆಂದು ಪರಿಗಣಿಸಿಲ್ಲವೆಂದೇ ಹೇಳಬಹುದು. ಇಸ್ಲಾಂ ಧರ್ಮದ ನಿಯಮಾನುಸಾರ ಹೆಣ್ಣುಮಕ್ಕಳು ಪರದಾ ಪದ್ಧತಿಯನ್ನುಅನುಸರಿಸಲೇಬೇಕೆಂಬ ಕುಟುಂಬಗಳು ಇಂದಿಗೂ ಎಲ್ಲೆಡೆ ಕಾಣಸಿಕೊಳ್ಳುತ್ತಿವೆ. ಹೊಸ್ತಿಲಾಚೆಗೆ ಹೆಣ್ಣು ಕಾಲಿಡುವ ಸಂದರ್ಭಗಳು ತೀರಾನೇ ವಿರಳ. ಅವಳು ಸಾರ್ವಜನಿಕ ವಲಯವನ್ನು ಪ್ರವೇಶಿಸಿದರೂ, ಪರದೆಯೊಂದಿಗೆಯೇ ಪ್ರವೇಶಿಸಬೇಕೆಂಬುದಕ್ಕೆ ಸಾಕಷ್ಟು ಉದಾಹರಣೆಗಳು ದೊರೆಯುತ್ತವೆ. ಚರಿತ್ರೆಯಲ್ಲಿನ ಸಾಧನಾವಲಯದಲ್ಲಿ ರಾಣಿ ರಜಿಯಾ ಸುಲ್ತಾನಳ ಪ್ರಸ್ತಾಪ ಬಿಟ್ಟರೆ ಬೇರೆಯವರ ಹೆಸರುಗಳ ಉಲ್ಲೇಖವು ಅಷ್ಟಾಗಿ ಇಲ್ಲ. ಚತುರ ರಾಜಕಾರಣಿಯಾಗಿರುವ ರಜಿಯಾ ಸುಲ್ತಾನಳು ಸರ್ವ ವಿದ್ಯೆ, ಆಡಳಿತ ಪಾರಾಂಗತಳಾಗಿದ್ದರೂ ಹೆಣ್ಣಾಗಿರುವುದಕ್ಕೆ ಅವಳ ಆಡಳಿತವನ್ನು ಸಹಿಸದ ಮುಸ್ಲಿಂ, ಆಳರಸರು, ಸಾಮಂತರು ಅವಳನ್ನು ಕೊಲೆ ಮಾಡುವಂತಹ ಮಾರಣಾಂತಿಕ ದೌರ್ಜನ್ಯ, ಹೆಣ್ಣಿಗೆ ಸಾರ್ವಜನಿಕ ವಲಯದ ಪ್ರವೇಶ ನಿಷೇಧ, ಅದನ್ನು ಮೀರಿದರೆ ಸಿಗುವ ಫಲಿತವನ್ನು ಇದು ಪ್ರತಿನಿಧಿಸುತ್ತವೆ.

ಬಿಜಾಪುರ ಜಿಲ್ಲೆಯಲ್ಲಿ ಇವತ್ತಿಗೂ ಸಹ ಸಾಟ್‌ಖಬ್ರಸ್ತಾನ್ (೬೦ ಸಮಾಧಿಗಳು) ಕುರಿತ ಕಥೆಗಳಿವೆ. ಬಿಜಾಪುರದ ಆದಿಲ್‌ಶಾಹಿಯೊಬ್ಬನೂ ೫೯ ಯುದ್ಧಗಳಲ್ಲಿ ಜಯಗಳಿಸಿ ೫೯ ರಾಜರ ಹೆಂಡತಿಯರನ್ನು ವಶಪಡಿಸಿಕೊಂಡಿದ್ದನು. ಇವರೆಲ್ಲರೂ ಸೋತ ಅರಸರ ಆಸ್ತಿಯಾಗಿದ್ದು, ಗೆದ್ದ ರಾಜನೊಂದಿಗೆ ಜೀವಿಸಬೇಕಾದ ಅನಿವಾರ್ಯವಿತ್ತು. ಕೊನೆಗೆ ಈ ಆದಿಲ್‌ಶಾಹಿಯು ೬೦ನೇ ಯುದ್ಧದಲ್ಲಿ ಸೋಲುವ ಪ್ರಸಂಗ ಬಂದಾಗ, ತಾನು ಗೆದ್ದ ರಾಣಿಯರು ಇತರೆ ರಾಜರ ಪಾಲಾಗದ್ದನ್ನು ಸಹಿಸದೆ ಸಾಲಾಗಿ ೫೯ ರಾಣಿಯನ್ನು ಕೊಂದು, ತಾನು ಮರಣ ಹೊಂದಿದ, ಪುರುಷನ ಸರಕಾಗಿಯೇ ಪರಿಗಣಿಸಲ್ಪಡುವ ಮಹಿಳೆಯರನ್ನು ತನ್ನ ಪ್ರತಿಷ್ಠೆಯ ದ್ಯೋತಕವಾಗಿ ಕೊಲೆಗೈಯುವಂತಹ ಧಾರುಣ ಕೃತ್ಯಕ್ಕೆ ಕೈ ಹಾಕುವುದನ್ನು ಧರ್ಮವು ಸಮ್ಮತಿಸುವುದು ಕಂಡರೆ ಧರ್ಮವು ಅರ್ಥವೇ ಕಳೆದುಕೊಳ್ಳುತ್ತದೆ.

ಇವತ್ತಿಗೂ ಕೂಡ ಜಗತ್ತಿನ ಬಹುಪಾಲು ಕಡೆ ಮಹಿಳೆಯರಿಗೆ ಮಸೀದಿಗಳಲ್ಲಿ ಪ್ರವೇಶವಿಲ್ಲ. ಅವಳು ಅಪವಿತ್ರಳೂ, ಕುಲೀನಳು ಎಂದೇ ನಿಷೇಧವನ್ನು ಹೇರಲಾಗುತ್ತದೆ. ಪ್ರತಿಯೊಂದಕ್ಕೂ 'ಪವಿತ್ರ' ಖುರಾನಿನ ಉಲ್ಲೇಖ ಕೊಡುವ, ಮುಸ್ಲಿಂ ಮೂಲಭೂತವಾದಿಗಳು ಮಹಿಳೆಯರಿಗೆ ಸಂಪೂರ್ಣವಾಗಿ ಮೂಲ ಖುರಾನನ್ನು, ಪಠಿಸುವ ಅವಕಾಶ ಒದಗಿಸಿರುವ ಸಂದರ್ಭಗಳೇ ಕಾಣಸುವುದಿಲ್ಲ. ಖುರಾನಿನ ನೆಪದಲ್ಲಿ ಪಿತೃಸಂಸ್ಕೃತಿಯು ಮಹಿಳಾ ಸಮುದಾಯದ ಮೇಲೆ ಎಸಗುತ್ತಿರುವ ಕ್ರೌರ್ಯಕ್ಕೂ ಸಹ ಸಮ್ಮತಿಯನ್ನು ಪಡೆದಂತಿದೆ. ವಿಶ್ವದ ಒಟ್ಟು ಅನಕ್ಷರಸ್ಥರಲ್ಲಿ ಮುಸ್ಲಿಂ ಮಹಿಳೆಯರ ಪ್ರಮಾಣವೇ ಅಧಿಕವಾಗಿದೆಯೆಂದು ಅನೇಕ ಅಧ್ಯಯನಗಳು ದೃಢಪಡಿಸಿವೆ.

ಈ ಬಗೆಯಲ್ಲಿನ ಉಸಿರುಗಟ್ಟುವಂತಹ ವಾತಾವರಣದಲ್ಲಿಯೂ ಸಹ ಮಹಿಳೆ ತನ್ನ ಸಾಧನೆಗಳಿಗಾಗಿ ಹಂಬಲಿಸಿ ಮುಂದೆ ಬಂದಿರುವುದಕ್ಕೆ ಡಿ.ಸಿ. ಶಮಿಮ್‌ಬಾನು, ಸುಪ್ರಿಂ ಕೋರ್ಟ್ ನ್ಯಾಯಾಧೀಶೆಯಾದ ಫಾತೀಮಾ ಬೀಬಿ, ಬಿಜಾಪುರ ಮಹಿಳಾ ವಿಶ್ವವಿದ್ಯಾಲಯದ ಕುಲಪತಿಯಾಗಿದ್ದ ಸಯಿದಾಲಖ್ತರ್, ೨೦೦೧ರಲ್ಲಿ ಐ.ಎ.ಎಸ್. ಪರೀಕ್ಷೆಯಲ್ಲಿ ದ್ವಿತೀಯ ರ್‍ಯಾಂಕ್ ಪಡೆದ ಶಹ್ನಾ ನಿಗಾರ್, ಸಾಹಿತಿಗಳಾದ ಸಾರಾ ಅಬೂಬಕರ್, ಭಾನುಮುಷ್ತಾಕ್ ಕ್ರೀಡಾ ಲೋಕದಲ್ಲಿ ನಿರಂತರವಾಗಿ ಮಿಂಚುತ್ತಿರುವ ಟೆನ್ನಿಸ್ ಆಟಗಾರ್ತಿ ಸಾನಿಯಾ ಮಿರ್ಜಾ, ಬಂಗಾಳ ವಿವಾದಾತ್ಮಕ ಲೇಖಕಿಯೆಂದೆ ಹೆಸರಿಸಲಾದ ತಸ್ಲೀಮಾ ನಸರಿನ್‌ರಂತಹ ಮಹಿಳಾ ಸಾಧಕಿಯರು ಅಪವಾದವೆನ್ನುವಂತೆಯೇ ಇದ್ದಾರೆ. ಸಾರ್ವಜನಿಕ ವಲಯಕ್ಕೆ ಕಾಲಿರಿಸಿದ ಈ ಮಹಿಳೆಯರ ಸಾಧನಾ ಹಾದಿಯು ಸುಖಕರವೇ ಆಗಿರಲಿಲ್ಲವೆಂಬುದಕ್ಕೆ ಸಾನೀಯಾಳ ಡ್ರೆಸ್‌ಕೊಡ ಪ್ರಕರಣದ ಹಿನ್ನೆಲೆಯಲ್ಲಿ ಮುಸ್ಲಿಂ ಮೂಲಭೂತವಾದಿಗಳು ಹೊರಡಿಸುವ ಫತ್ವಗಳು, ತನ್ನ ದೇಶದಲ್ಲೆಲ್ಲಾ ತನಗೆ ಜಾಗ ನೀಡದಿರುವುದರೊಂದಿಗೆ ಅವರನ್ನು ಜೀವಂತವಾಗಿ ದಹಿಸುವ ಭಯದಿಂದ ಕೆಲವು ಕಾಲ ಭೂಗತರಾಗಬೇಕಾದ ಸಂದರ್ಭವೆದುರಿಸಿದ ತಸ್ಲೀಮಾ ನಸರಿನ್‌ರವರು ಧರ್ಮವನ್ನು ಪ್ರಶ್ನಿಸಿದ್ದಕ್ಕಾಗಿ ಕ್ರೌರ್ಯಕ್ಕೆ, ದೌರ್ಜನ್ಯಕ್ಕೆ ಬಲಿಯಾಗುತ್ತಿದ್ದಾರೆಂಬುದು, ಬೇರೆ ಯಾವ ಹೆಣ್ಣು ಈ ಬಗೆಯ ಸಾಹಸಕ್ಕೆ ಕೈಹಾಕಬಾರದೆಂಬುದರ ಪುರುಷ ರಾಜಕಾರಣದ ಹುನ್ನಾರವೇ ಆಗಿದೆ.

ವೇದ ಕಾಲದ ನಂತರದಲ್ಲಿನ ೨೫೦೦ ವರ್ಷಗಳು ಗತಿಸಿದ ಮೇಲೆ ಹಳೆಯ ಧರ್ಮಗಳ ಸಂಕೀರ್ಣತೆಯನ್ನು ಪ್ರಶ್ನಿಸುತ್ತಲೇ ಉದಯಿಸಿದ ಬೌದ್ಧ ಮತ್ತು ಜೈನಧರ್ಮಗಳಲ್ಲಿಯೂ ಕೂಡ ಅಷ್ಟಾಗಿ ಸ್ತ್ರೀಪರ ನಿಲುವುಗಳನ್ನು ತಳೆದಿರುವುದಂತಹುದೇನಿಲ್ಲ. ಇರುವ ಧರ್ಮಗಳಿಗಿಂತಲೂ ಕೊಂಚ ಉದಾರವೆನ್ನಬಹುದಾದ ಸಂಗತಿಗಳು ಕಂಡು ಬಂದರೂ ಪುರುಷ ಸಂಸ್ಕೃತಿಯ ಬೇರುಗಳು ಅಷ್ಟಾಗಿ ಸಡಲಗೊಂಡಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಅಹಿಂಸಾತ್ಮಕ, ಮಾನವೀಯ ಧರ್ಮಗಳನ್ನೇ ತಳಹದಿಯಾಗಿಸಿಕೊಂಡಿದೆಯೆಂದು ಹೇಳುತ್ತಿರುವುದು ಸ್ತ್ರೀಧರ್ಮವನ್ನು ಕುರಿತು ಹೇಳುವಾಗ ಹಿಂಸಾತ್ಮಕ ಧೋರಣೆಗಳಿರುವುದನ್ನು ಕಾಣಬಹುದು. ಪುತ್ರ-ಪುತ್ರಿಯರ ಭೇದವಿರಲಿಲ್ಲ, ವಿವಾಹವೆಂಬುದು ಹೆಣ್ಣಿಗೆ ಕಡ್ಡಾಯವಿರಲಿಲ್ಲ, ಹೆಣ್ಣು ಸಂತಾನ ಪಡೆಯುವಿಕೆ ಪಾಪಕರವೆಂಬ ಸಂಗತಿ ಅಳಿದು ಹೋಗಿದೆಯೆಂಬ ಬದಲಾವಣೆಗಳನ್ನು ಒಪ್ಪುತ್ತಲೆ, ರಾಜನರ್ತಕಿಯರು ಮತ್ತು ವೇಶ್ಯಾವೃತಿಯನ್ನು ಪೋಷಿಸುತ್ತಿರುವುದು, ಇದನ್ನು ಮುಂದುವರಿಸಲು ಹೆಣ್ಣು ಸಂತಾನವು ಅಗತ್ಯತೆಯೆಂಬುದನ್ನು ಉದ್ಧರಿಸುವ ಬೌದ್ಧ ಧರ್ಮವು ಸಹ ಸಾರ್ವಜನಿಕ ವಲಯದಲ್ಲಿನ ಪ್ರವೇಶಗಳಲ್ಲಿ ಸೂಕ್ಷ್ಮ ಹಿಂಸಾತ್ಮಕ ಎಳೆಗಳು ಮಹಿಳೆಯರ ವಿರುದ್ಧದ ನೆಲೆಯಲ್ಲಿ ಚಾಲ್ತಿಯಲ್ಲಿರುವುದು, ಹಳೆಯ ಧರ್ಮಗಳ ಮುಂದುವರಿಕೆಯೇ ಆಗಿದೆ. "ಪತಿಯು ಪತ್ನಿಯನ್ನು ಗೌರವಿಸಬೇಕು, ವಿನಯದಿಂದ ವರ್ತಿಸಬೇಕು. ಅವಳ ವಿಶ್ವಾಸಗಳಿಸಬೇಕು. ಮನೆಯ ಕಾರ್ಯಕಲಾಪಗಳ ಜವಾಬ್ದಾರಿವಹಿಸಬೇಕು. ಅವಳಿಗೆ ಆಭರಣಗಳನ್ನು ಕೊಡಿಸಬೇಕು" (ಉಧೃತ : ಮಹಿಳಾ ಸಾಮಾಜಿಕತೆ, ಡಾ. ಜ್ಯೋತಿ ಶಶಿಕುಮಾರ್)[೧] ಎಂಬ ಹೇಳಿಕೆಯ ಮೂಲಕ ಪತಿ-ಪತ್ನಿಯರ ಸಂಬಂಧವನ್ನು ಹೇಳುವ ಬುದ್ಧ, ಕೊನೆಗೂ ಹಕ್ಕುಗಳೆಲ್ಲವೂ ಪುರುಷನದೆ, ಬಾಧ್ಯತೆಗಳೆಲ್ಲವೂ ಮಹಿಳೆಯರದು ಎಂದು

ಬಿಂಬಿಸಿದ್ದಾನೆ. ಕೌಟುಂಬಿಕ ವಲಯವಾಗಿರಲಿ-ಸಾರ್ವಜನಿಕ ವಲಯವಾಗಿರಲಿ ಅದರ ಮೇಲಿನ ಅಧಿಕಾರ ಮಾತ್ರ ಪುರುಷನದೇ ಎಂದು ಹೇಳಿದ್ದಾನೆ. ಕೊನೆಗೆ ಅವಳಿಗೆ ಯಾವುದೋ ಭೌತಿಕ ವಸ್ತುಗಳ ಕೊಡಿಸುವಿಕೆಯ ಮೂಲಕ ನಿಯಂತ್ರಣ ಸಾಧಿಸುವುದನ್ನು ಈ ವ್ಯಾಖ್ಯಾನವು ಪ್ರತಿನಿಧಿಸುತ್ತ ಅಂತಿಮವಾಗಿ ಅಧಿಕಾರ ಕೇಂದ್ರವಾದ ರಾಜಕೀಯ ವಲಯವನ್ನು ಪ್ರವೇಶಿಸುವುದಕ್ಕೆ ಮತ್ತು ವಿದೇಶಿ ಪ್ರಯಾಣಗಳೂ ಹೆಣ್ಣಿಗೆ ಅನಗತ್ಯವೆಂದು ಅವಳ ಸಾಮಾಜಿಕ ವಲಯದ ಪ್ರವೇಶವನ್ನು ನಿರಾಕರಿಸುವುದು ಹಿಂಸೆ-ದೌರ್ಜನ್ಯದ ಆಯಾಮವೆಂದು ಹೇಳಬಹುದಾಗಿದೆ. ವಿಧವಾ ಪುನರ್‌ವಿವಾಹವನ್ನು, ಭಿಕ್ಷುಣಿಯರಾಗುವುದಕ್ಕೆ ಪ್ರೋತ್ಸಾಹಿಸುತ್ತಿದ್ದ ಬುದ್ಧ ತನ್ನ ತಾಯಿಯೇ ಭಿಕ್ಷುಣಿಯಾಗುತ್ತೇನೆಂದಾಗ ನಿರಾಕರಿಸುವುದು ಪುರುಷ ಚಿಂತನೆಯ ಭಾಗವಲ್ಲವೆ? ಸಾಧನೆಯ ಪಥವೇರಲು ಹೆಂಡತಿಯನ್ನು ನಡುರಾತ್ರಿಯಲ್ಲಿ ತ್ಯಜಿಸಿ ಹೋಗಿದ್ದು, ಪತ್ನಿ-ಪತಿ ಸಂಬಂಧದ ಕುರಿತು ವ್ಯಾಖ್ಯಾನವನ್ನು ನೀಡಿದ್ದು ವಿಚಿತ್ರ ಸಂಗತಿಯಲ್ಲವೆ? ಭಿಕ್ಷುಣಿಯರಾಗಲು ಪರರ ಹೆಂಗಸರು ಮಾತ್ರವೆಂಬ ಧೋರಣೆಯೆ? ಅಂತಿಮವಾಗಿ ಸಂನ್ಯಾಸಿ-ಸಂನ್ಯಾಸಿನಿ ಒಟ್ಟಿಗೆ ಇರಬಹುದೆಂದು ಹೇಳುತ್ತಾ ಹೆಣ್ಣಿನ ಸಾರ್ವಜನಿಕ ವಲಯದ ಪ್ರವೇಶವನ್ನು ಪ್ರೇರೇಪಿಸುತ್ತೇನೆಂಬ ಚಹರೆಯನ್ನು ಮೂಡಿಸಿರುವ ಬುದ್ಧ ಬೌದ್ಧ ಭಿಕ್ಷುಣಿಯರಿಂದಲೇ ಬುದ್ಧ ಧರ್ಮದ ಅವನತಿಯಾಯಿತೆಂದು ಹೇಳುವ ಬೌದ್ಧ ಧರ್ಮ, ಸ್ವಾತಂತ್ರ್ಯವನ್ನು ನೀಡುತ್ತಲೇ ಕಿತ್ತುಕೊಳ್ಳುವ ಚಾತುರ್ಯದಿಂದಲೇ ಮಹಿಳೆಯರ ಮೇಲೆ ಆಕ್ರಮಣವೆಸಗಿದೆ.

ಬೌದ್ಧ ಧರ್ಮದ ಸಮಕಾಲೀನವೆಂಬಂತೆ ಹೇಳಲಾಗುವ ಜೈನಧರ್ಮವೂ ಶ್ವೇತಾಂಬರ-ದಿಗಂಬರ ಪಂಥಗಳ ನಡುವೆ ನಿಲ್ಲುವ ಸಮನ್ವಯ ಸೇತುವೆ ಯಾಪನೀಯ ಸಂಘದ "ಸ್ತ್ರೀಣಾಂ ತದ್ಭವೇ ಮೋಕ್ಷ" (ಹೆಂಗಸರಿಗೆ ಅದೇ ಜನ್ಮದಲ್ಲೇ ಮೋಕ್ಷ ಸಾಧ್ಯ), "ಸದ್‌ಗ್ರಂಥಾ ನಾಂ ಮೋಕ್ಷ" (ಬಟ್ಟೆ ತೊಟ್ಟವರಿಗೂ ಮೋಕ್ಷವಿದೆ), "ಪರಿಶಾಸನೇ ಮೋಕ್ಷ" (ಜೈನೇತರರಿಗೂ ಮೋಕ್ಷವಿದೆ) ಎಂಬ ಮೂರು ಮುಖ್ಯ ಸೂತ್ರಗಳನ್ನು ಹೇಳುತ್ತದೆ.

ರಾಜತಂತ್ರಜ್ಞಳಾದ ಮೃಗಾವತಿಯು ಗಂಡ ಶತಾನೀಕನ ಅನುಪಸ್ಥಿತಿಯಲ್ಲಿ ಪ್ರದ್ಯೋತನನ್ನು ಹಿಮ್ಮೆಟ್ಟಿಸಿದ್ದರ ಉಲ್ಲೇಖವಿದೆ. ಕೊನೆಗೂ ಹೆಣ್ಣು, ಗಂಡಿನ ಗೈರುಹಾಜರಿಯಲ್ಲೇ ಸಾರ್ವಜನಿಕ ವಲಯವನ್ನು ಪ್ರವೇಶಿಸುವ, ಪ್ರಧಾನಧಾರೆಗೆ ಬರುತ್ತಾಳೆಂಬುದಕ್ಕೆ ಜೈನಧರ್ಮವು ಹೊರತಲ್ಲ. ನಾಟ್ಯರಾಣಿ ಶಾಂತಲೆಯು ಸಹ ರಾಜ ವಿಷ್ಣುವರ್ಧನನ ಮಡದಿಯಾಗಿರುವುದಕ್ಕೆ ಈ ವಲಯದಲ್ಲಿ ಗುರುತಿಸಿಕೊಳ್ಳುತ್ತಾಳೆಂಬಂತಿದೆ.

ಸೋಮದೇವ ಸೂರಿಯೂ ಸ್ತ್ರೀ-ಪುರುಷ ದೈಹಿಕ ಭಿನ್ನತೆಯಲ್ಲಿಯೇ ವ್ಯತ್ಯಾಸವೇ ವಿನಃ ಬೌದ್ಧಿಕತೆಯಲ್ಲಿ ಸ್ತ್ರೀಯರೇ ಶ್ರೇಷ್ಠರೆಂದು ಹೇಳಿದ್ದಾನೆ. ಆದರೆ ಶಾಕಟಾಯನನು ಸ್ತ್ರೀ ನಿರ್ವಾಣ ಕೇವಲ ಬುಕ್ತಿ ಪ್ರಕರಣೆ ಎಂಬ ಗ್ರಂಥದಲ್ಲಿ, ಜೈನ ಸಿದ್ಧಾಂತ ಸ್ತ್ರೀ ಮುಕ್ತಿ ವಿರೋಧವಾಗಿಲ್ಲವೆಂದು ಹೇಳುತ್ತಾ, ಗರ್ಭಿಣಿಯರು ಸನ್ಯಾಸಿನಿಯಾಗಬಾರದೇ ಹೊರತು, ಸ್ತ್ರೀ ಮುಕ್ತಿ ನಿರಾಕರಣೆಯು

ತರ್ಕಬದ್ಧವಲ್ಲ, ಸ್ತ್ರೀ-ಪುರುಷರು ಸಮಾನರು, ಲಿಂಗಭೇದಕ್ಕೆ ಧಾರ್ಮಿಕತ್ವಕ್ಕೆ ಅಡ್ಡಿಯಲ್ಲ. ಮೋಕ್ಷಗಳಿಸಲು ನಗ್ನತ್ವವೇ ಸರ್ವಸ್ವವಲ್ಲ ಅದು ಅನುಷಂಗಿಕವೆಂದು ಸ್ಪಷ್ಟವಾಗಿ ಹೇಳಿದ್ದಾನೆ. ಆದರೆ ಈ ವ್ಯಾಖ್ಯಾನವು ಲಿಂಗ ಸಮಾನತೆಯನ್ನು ಹೇಳಿದರೂ ನೈಸರ್ಗಿಕವಾದ ಹೆಣ್ಣಿನ ದೈಹಿಕ ಕ್ರಿಯೆಗಳನ್ನು ನಿರಾಕರಣೆಯನ್ನು ಕಾಣಬಹುದು.

ಜೈನ ಸಮಾಜ ಮಹಿಳೆಯರ ಶಿಕ್ಷಣಕ್ಕೆ ಸಮಾನ ಅವಕಾಶ ಕಲ್ಪಿಸಿದ್ದರಿಂದ ಆರ್ಯಿಕೆಯರು ಘನವಿದ್ವಾಂಸರಾದರು, ಪ್ರಾಚೀನ ಕಾಲದಲ್ಲಿ ಮಹಿಳಾ ಕಾಲೇಜು ಮತ್ತು ಮಹಿಳಾ ವಿಶ್ವವಿದ್ಯಾಲಯವನ್ನು ತೆರೆದವರು ಜೈನರೆಂಬುದು ಸ್ತ್ರೀವಾದಿ ನೆಲೆಯ ಅಧ್ಯಯನಕ್ಕೆ ಹೊನ್ನಕಳಶವಾಗಿದೆ ಎಂಬುದು ಕಮಲಾ ಹಂಪನಾರ ಅಭಿಪ್ರಾಯವು ಸಕಾರಾತ್ಮಕತೆಯನ್ನು ತಿಳಿಸಿದರೆ, ಜೈನಧರ್ಮದ ಮೊದಲನೆ ತೀರ್ಥಂಕರನಾದ ಋಷಭದೇವನು ಸ್ತ್ರೀಶಿಕ್ಷಣದ ಕುರಿತು. ನಿಮ್ಮ ಈ ಶರೀರವೂ, ವಯಸ್ಸು, ಅಸಮಾನವಾದ ಶೀಲವೂ ವಿದ್ಯೆಯಿಂದ ಅಲಂಕೃತವಾದರೆ ನಿಮ್ಮ (ಸ್ತ್ರೀ) ಜನ್ಮವು ಸಾರ್ಥಕವಾಗುತ್ತವೆ. ಲೋಕದಲ್ಲಿ ವಿದ್ಯಾವಂತನಾದ ಪುರುಷನು ವಿದ್ವಾಂಸರುಗಳಿಂದ ಸನ್ಮಾನ ಪಡೆಯುತ್ತಾನೆ. ಅದರಂತೆಯೇ ವಿದ್ಯಾವತಿಯಾದ ಸ್ತ್ರೀಯೂ, ಸ್ತ್ರೀ ಸೃಷ್ಟಿಯಲ್ಲಿ ಮೊದಲನೆಯ ಸ್ಥಾನವನ್ನು ಪಡೆಯುತ್ತಾಳೆ ಎಂಬ ಹೇಳಿಕೆಯು ಋಷಭದೇವನು ಹೆಣ್ಣನ್ನು ಕೆಳದರ್ಜೆಯವಳಂತೆ ಕಂಡು ಲೌಕಿಕ ಶಿಕ್ಷಣದಿಂದ ಮಾತ್ರ ಸಫಲರಾಗುತ್ತಾರೆಂಬ ವಾದವನ್ನು ಮಂಡಿಸಿದ್ದಾನೆ. ಸ್ತ್ರೀಯೂ ಶಿಕ್ಷಣ ಪಡೆದು ಸೃಷ್ಟಿಯಲ್ಲಿ ಅಂದರೆ ಸಂತಾನ ಕಾರ್ಯದಲ್ಲಿ ಮಾತ್ರ ನಿರತರಾಗಬೇಕೆಂದು, ಅವಳನ್ನು ಪ್ರಕೃತಿಗೆ ಹೋಲಿಸಿ ಅಭಿಪ್ರಾಯಪಟ್ಟಿರುವುದು ಅಸಮಂಜಸವೆನಿಸುತ್ತದೆ. ಶೈಕ್ಷಣಿಕ ವಲಯದ ಪ್ರವೇಶವನ್ನು ಒದಗಿಸಿದರೂ, ಮತ್ತೆ ಗೃಹ ಬಂಧನಕ್ಕೊಳಪಡಿಸುವ ಸಂಗತಿಯು ಇಂದಿನ ಆಧುನಿಕ ಯುಗದಲ್ಲಿಯೂ ಕಾಣಬಹುದು. ಉದಾ:- ವಧುವಿನ ಆಯ್ಕೆಯ ಅರ್ಹತೆಯಲ್ಲಿ ಹುಡುಗಿ ಪದವಿಧರೆಯಾಗಿರಬೇಕು. ಆದರೆ ಉದ್ಯೋಗ ಮಾಡುವುದು ಅವಶ್ಯಕವಿಲ್ಲ. ಗಂಡ-ಮಕ್ಕಳಿಗೆ ಪೂರಕವಾಗಿ ಮಕ್ಕಳನ್ನು ಓದಿಸಲು, ಗಂಡನ ಉದ್ಯೋಗದಲ್ಲಿ  ಸಹಾಯಕವಾಗಲು ಎಂಬ ಅಂಶ ಜೈನಧರ್ಮದಲ್ಲಿನ ಶಿಕ್ಷಣದ ಪ್ರಸ್ತಾಪಕ್ಕೆ ಹೋಲಿಕೆಯಾಗುತ್ತವೆ.

ದಾನ ಚಿಂತಾಮಣಿ ಅತಿಮಬ್ಬೆ ಸತಿ ಹೋಗದಿರಲು ಮಗನ ಪಾಲನೆಗಾಗಿ ಎಂಬ ಪ್ರಸ್ತಾಪವೂ ಜೈನ ಧರ್ಮದಲ್ಲಿದೆ ಹಾಗೂ ಹೆಣ್ಣು ಪುರುಷನ ದೇಹದಿಂದಲೇ ಮರುಜನ್ಮ ತಾಳಬೇಕೆಂಬುದರ ಮಾಹಿತಿಯೂ ಇದೆ. ಒಂದೆಡೆ ವೈಭವೀಕರಣ, ಇನ್ನೊಂದೆಡೆ ನಿರಾಕರಣೆಯ ಅಂಶಗಳು ಪಿತೃಸಂಸ್ಕೃತಿಯ ದ್ವಿಮುಖ ಚಿಂತನೆಗೆ ಜೈನಧರ್ಮವು ಹೊರತದಲ್ಲ.

ದಿಗಂಬರ ಪಂಥವಂತೂ ಮಹಿಳೆಯೇ ಒಂದು 'ಪ್ರಮಾದ' ಎಂಬ ನಿಲುವಿಗೆ ಬಂದಿದೆ. ಅವಳು ವಕ್ರ ನಡೆಯುಳ್ಳವಳು, ದ್ವೇಷ, ಭಯ, ದುಗುಡ, ಸುಖಾಪೇಕ್ಷೆ ಇರುವವಳೆಂದು ಹಿಯಾಳಿಕೆಗೆ ಗುರಿ ಮಾಡಿದೆ. ಸಮಾಜ ನಿರ್ಮಿತ ವಿವಸ್ತ್ರವಾಗದಿರುವುದರ ಪ್ರಶ್ನೆಯನ್ನು ಚರ್ಚೆಗೆ ತರದೆ ವಿವಸ್ತ್ರರಾಗುವುದು ಸ್ತ್ರೀಯರಿಗೆ ಸಾಧ್ಯವಿಲ್ಲ. ಆದ್ದರಿಂದ ಅವಳಿಗೆ ಮೋಕ್ಷವು ಸಾಧ್ಯವಿಲ್ಲವೆಂಬುದು ಜೈನಧರ್ಮದ ದಿಗಂಬರ

ಪಂಥದ ವಾದ. ಹೆಣ್ಣು ಹಿಂಸೆಯನ್ನು ನಿಯಂತ್ರಿಸಲಾರಳು ಎಂಬ ಮಿಥ್ಯಾ ಕಲ್ಪನೆಯನ್ನು ಸೃಷ್ಟಿಸುತ್ತಲೇ, ಹೆಣ್ಣಿನ ಮೇಲೆ ದೌರ್ಜನ್ಯವೆಸಗಿರುವುದು ನಿಜಕ್ಕೂ ಪ್ರಶ್ನಾರ್ಹ ಸಂಗತಿಯಲ್ಲವೆ?

ಎಲ್ಲ ಧರ್ಮಗಳಿಗಿಂತಲೂ ಉದಾರವಾದುದು ಎಂಬ ಕ್ರಿಶ್ಚಿಯನ್ ಧರ್ಮವು ಸಹ ಧರ್ಮ ಬೆಂಬಲಿತ ಲಿಂಗಪೂರ್ವಾಗ್ರಹಗಳಿಂದ ವಿಮುಕ್ತಿಯನ್ನೇನು ಹೊಂದಿಲ್ಲ. ಆ್ಯಡಂ ಮತ್ತು *ಈವಳ* ಕಥೆಯು ಎಲ್ಲೆಡೆಯಲ್ಲಿಯೂ ಸಾಕಷ್ಟು ಪ್ರಚಲಿತವಾಗಿದೆ. ಮೊದಲ ಸೃಷ್ಟಿಯೇ ಆ್ಯಡಂ. ಆ್ಯಡಂಗೆ ಒಬ್ಬ ಜೊತೆಗಾರರ ಅಗತ್ಯತೆಯನ್ನಾಧರಿಸಿ, ಆತನ ಪಕ್ಕೆಲುಬಿನಿಂದ *ಈವಳ* ಸೃಷ್ಟಿಯಾಯಿತು. ಹಾಗಾಗಿ ಹೆಣ್ಣು ನಿರಂತರವಾಗಿ ಪುರುಷ ಸಮುದಾಯಕ್ಕೆ ಅಧೀನವಾಗಿಯೇ ಇರಬೇಕೆಂಬ ಹೇಳಿಕೆಯು *ಈ* ಸಂಗತಿಯಿಂದಲೆ ಆಗಿದೆ. ಪುರುಷನೇ ಶ್ರೇಷ್ಠನೆಂದು ಸಾರುವ *ಈ* ಧರ್ಮವು ಮೊದಮೊದಲು ಮಹಿಳೆಯರಿಗೆ ಸಾರ್ವಜನಿಕ ಸ್ಥಳದಲ್ಲಿ ಅಂದರೆ ಚರ್ಚ್‌ಗಳಲ್ಲಿ ಪ್ರವೇಶವಿಲ್ಲವೆಂಬುದಕ್ಕೆ ಕೆಲವು ಕಡೆ ಉಲ್ಲೇಖಗಳಿವೆ. ಹಾಗೆಯೇ ಸ್ತ್ರೀಯರು ಸ್ವತಃ ಸಾಧಕರಾಗುವುದನ್ನು ನಿರಕಾರಿಸುವುದು ಅಷ್ಟೇ ಅಲ್ಲ. ಪುರುಷರು ಇವರ ಸಂಪರ್ಕದಿಂದ ದೂರವುಳಿದಾಗಲೇ ತಮ್ಮ ಬಯಕೆಗಳ ಮೇಲೆ ನಿಯಂತ್ರಣವನ್ನು ಸಾಧಿಸುವುದು ಹಾಗೂ ಬದುಕಿನಲ್ಲಿ ಸಾಧನೆಗಳನ್ನು ಮಾಡುವುದು ಸಾಧ್ಯವೆಂದು ಹೇಳುತ್ತವೆ. ವಿಚ್ಛೇದನ ಪಡೆಯುವ ಹಕ್ಕಿನಿಂದಲೂ ಕ್ರೈಸ್ತ ಮಹಿಳೆ ವಂಚಿತಳಾಗಿದ್ದಳು. ನ್ಯಾಯಾಲಯಗಳಲ್ಲಿ ಸಾಕ್ಷಿ ಹೇಳುವ ಹಕ್ಕನ್ನು ಕೂಡ ನಿರಾಕರಿಸಲಾಗಿತ್ತು. ಡಾ. ಇವ್ಯಾಂಜಿಲೀನ್ ಆಂಡರ್ ಸನ್ ರಾಜ್‌ಕುಮಾರ್ ಇವರು ಬೈಬಲ್‌ನ ೧೫ನೇ ಅಧ್ಯಾಯ ೩-೫ನೇ ಪರಿಚ್ಛೇದಗಳಲ್ಲಿ ಕ್ರಿಸ್ತನು ದೇವನಾದ ಗಳಿಗೆಯನ್ನು ನೋಡಿದ ಮೊದಲು ಸಾಕ್ಷಿಯಾದ ಮೇರಿ ಮ್ಯಾಗ್ನಲೀನ್‌ಳ ಹೆಸರಿನ ಉಲ್ಲೇಖಿಸುವ ಬದಲು ಪೀಟರ್ ಎಂಬ ಹೆಸರನ್ನು ಸೇರಿಸಲಾಗಿದೆ. ಚರಿತ್ರೆಯಲ್ಲಿ ಮಹಿಳೆಯ ಸಾಧನೆಗಳು ಅದೃಶ್ಯವಾಗಿಸಿದಂತೆ ಕ್ರಿಶ್ಚಿಯನ್ ಧರ್ಮದಲ್ಲಿ ಆಗಿದೆ. ಅಂತೆಯೇ ದೈವತ್ವಕ್ಕೆರುವುದು, ದೇವರಾಗುವುದು ಏನಿದ್ದರೂ ಅದು ಪುರುಷನ ಸಾಧನೆ, ಹೆಣ್ಣು ಆ ಸಾಧನೆಯ ವೀಕ್ಷಕಳೆಂಬಂತೆ ಚಿತ್ರಿಸಿರುವುದು ಅವಳ ಸಾಧನೆಯ ಕುರಿತಾಗಲಿ, ಅಸ್ತಿತ್ವದ ಕುರಿತಾಗಲಿ ಚರ್ಚೆಗೊಳಪಡಿಸುವುದೇ ಇಲ್ಲ. ಸಂತ ಬರ್ನಾರ್ಡ್ ತನ್ನ ತಾಯಿಗೆ 'ನಿನ್ನಿಂದ ನನಗೆ ಪ್ರಯೋಜನವೇನು? ನನಗೆ ನಿನ್ನಿಂದ ದೊರೆತದ್ದು ಕೇವಲ ಪಾಪ ಮತ್ತು ದುಃಖವಷ್ಟೆ. ನಿನ್ನಿಂದಾಗಿಯೇ ನಾನು *ಈ* ದುಃಖ ತುಂಬಿದ ಜಗತ್ತಿಗೆ ಬರಬೇಕಾಯಿತು. ನೀವೆಲ್ಲ ಹೆಂಗಸರೇ ಪಾಪಿಗಳು, ಪಾಪದಿಂದಲೇ ನನಗೆ ಜನ್ಮವಿತ್ತಿದ್ದಿಯ' ಎಂಬ ವ್ಯಾಖ್ಯಾನದಲ್ಲಿ ಮಗುವೊಂದರ ಜನ್ಮಕ್ಕೆ ಸ್ತ್ರೀ-ಪುರುಷರಿರ್ವರು ಸಮಪಾಲು ಎನ್ನುವ ವಿಷಯವೇ ಲೆಕ್ಕಕ್ಕಿಲ್ಲ. ಕೆಡುಕಿನ ಮೂಲ ಹೆಣ್ಣು; ಒಳಿತಿನ ಮೂಲ ಗಂಡು ಎಂಬಂತೆಯೇ ಇಲ್ಲಿಯೂ ಚಿತ್ರಣವಿದೆ. ಹಾಗೆಯೇ ಗರ್ಭಧಾರಣೆಯು ಅವಳ ಸದ್ಗತಿಯೆಂದು ತಾಯ್ತನಕ್ಕೆ ಕಟ್ಟಿಹಾಕಲಾಗಿದೆ. ಅಂತಿಮವಾಗಿ ಧರ್ಮದ ಕುರಿತು ಸ್ತ್ರೀಯರು ಪ್ರಶ್ನಿಸಬಾರದು. ಪುರುಷನಿಗಾಗಿ ಸ್ತ್ರೀಯ ಜನನವಾದ್ದರಿಂದ; ಅವನಿಗೆ ಅಧೀನರಾಗಿಯೇ ಬದುಕು ಸವೆಸಬೇಕೆಂದು ಹೇಳಲಾಗಿದೆ.

"ಧರ್ಮೋ ರಕ್ಷತಿ ರಕ್ಷಿತಃ ......" ಎಂಬ ಮಾತು ಮಹಿಳೆಯರ ಸಂದರ್ಭದಲ್ಲಿರಿಸಿ ನೋಡಿದರೆ ಹುಸಿಯೆಂಬಂತಾಗಿದೆ. ದೇಶದ ಸಂಸ್ಕೃತಿ, ಧರ್ಮ, ಆಚಾರ ನಡೆ-ನುಡಿಗಳನ್ನು, ಕಾಪಾಡುವ ಹೊಣೆಯನ್ನು

ಹೊರಿಸಲಾದ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಗೆ ಧರ್ಮದ ಹೆಸರಿನಲ್ಲಿಯೇ ನಡೆಯುತ್ತಿರುವ ಮಹಿಳೆಯ ಮೇಲಿನ ಹಿಂಸೆ-ದೌರ್ಜನ್ಯಗಳಿಗೆ ಕೊನೆಯೆಂಬುದೇ ಇಲ್ಲವೇನೊ? ಹೆಣ್ಣನ್ನು ಕುಟುಂಬಕ್ಕೆ ಸೀಮಿತಪಡಿಸುವ ಧರ್ಮಗಳಲ್ಲಿ ಮಹಿಳೆಯರ ಸಾರ್ವಜನಿಕ ವಲಯದ ಪ್ರವೇಶವನ್ನೇ ನಿರಾಕರಿಸುವುದು ಒಂದು ಹಂತದವರೆಗೂ ಕಾಣುತ್ತದೆ. ಈ ಭದ್ರಗೋಡೆಗಳನ್ನು ಸೀಳಿ ಹೆಣ್ಣು ಅಷ್ಟೋ - ಇಷ್ಟೋ ಸಿಕ್ಕ ಅವಕಾಶಗಳಲ್ಲಿ ತನ್ನ ಪ್ರತಿಭೆಯನ್ನು ಪ್ರದರ್ಶಿಸುತ್ತಿರುವಾಗ, ಸಹಿಸದ ಪುರುಷ ಪ್ರಧಾನ ವ್ಯವಸ್ಥೆಯು ಧರ್ಮದ ಹೊಸ ಮುಖಗಳಲ್ಲಿ ಮಹಿಳೆಯನ್ನು ನಿಯಂತ್ರಿಸಲು ಮುಂದಾಗಿದೆ. ಶಿಶುಹತ್ಯೆ ಮಹಾಪಾಪ ಎಂಬ ಧರ್ಮಗಳು ಹೆಣ್ಣು ಭ್ರೂಣಹತ್ಯೆಯು ಅನಿವಾರ್ಯ, ಹೆಣ್ಣಿನ ಜನನ ಅನಗತ್ಯವೆಂದು ಒಳಗೊಳಗೆ ಸಾರಿವೆ. ಪ್ರಧಾನಲಿಂಗೀಯ ಪರವಾದ ಚಿಂತನೆಗಳನ್ನೇ ಪೋಷಿಸಿರುವ ಧಾರ್ಮಿಕ ವಲಯದಿಂದ ಮಹಿಳೆಯರನ್ನು ಶತಮಾನಗಳಿಂದಲೂ ದೂರವೇ ಇರಿಸಲಾಗಿದೆ. ಧರ್ಮದ ವಕ್ತಾರರೇ ಪುರುಷರಾಗಿರುವುದರಿಂದ ತಮ್ಮ ಅನಕೂಲಕ್ಕೆ ತಕ್ಕಂತೆಯೇ ಹೆಣ್ಣನ್ನು ಧರ್ಮದಲ್ಲಿ ವ್ಯಾಖ್ಯಾನಿಸಿದ್ದಾರೆ. ಒಟ್ಟು ವ್ಯವಸ್ಥೆಯಲ್ಲಿ ಹೆಣ್ಣನ್ನು ಲೈಂಗಿಕತೆಯಾಚೆಗೆ ನೋಡಿಲ್ಲವೆಂಬುದು ಧರ್ಮಗಳಿದಲೂ ದೃಢಪಟ್ಟಿದೆ. ಕೆಲವು ಆದರ್ಶ ಪಾತ್ರಗಳನ್ನು ರೂಪಿಸಿರುವ ಪ್ರಧಾನಧಾರೆಯ ಚಿಂತನೆಗಳಲ್ಲಿ ರೂಪತಳೆದ ಧರ್ಮಗಳಲ್ಲಿ ಪುರುಷನ ಬೌದ್ಧಿಕ, ಸಾಮರ್ಥ್ಯವನ್ನೇ ಪ್ರಶ್ನಿಸಿ ನಿಲ್ಲುವ, ಬದುಕಿನ ಹಲವು ಬವಣೆಗಳ ಮಧ್ಯೆಯು ಧೈರ್ಯ, ಸಾಹಸದ ಕೆಲಸಕ್ಕೆ ಕೈ ಹಾಕಿ ಸಾಧನೆಯನ್ನು ಮಾಡುತ್ತಿರುವ ಹೆಣ್ಣನ್ನು ಆದರ್ಶನಾರಿಯರೆಂದು ಒಪ್ಪಿಕೊಳ್ಳುವ ಎದೆಗಾರಿಕೆ ಪುರುಷ ಸಂಸ್ಕೃತಿಗೆ ಇಲ್ಲವಾಗಿದೆಯೆಂದೇ ಹೇಳಬಹುದು. ಒಟ್ಟು ಧರ್ಮಗಳಲ್ಲಿ ಹೆಣ್ಣನ್ನು ಗ್ರಹಿಸಿರುವ ಕುರಿತು ಮನುಚಕ್ರವರ್ತಿಯವರು. ಮಾನವ ಕುಲವೇ ಗಂಡು. ಗಂಡಸು ಹೆಣ್ಣನ್ನು ಆಕೆಯ ಸ್ವಂತಿಕೆಯಲ್ಲಿ ವ್ಯಾಖ್ಯಾನಿಸದೇ ತನಗೆ ಸಂಬಂಧಿಸಿದಂತೆ ವ್ಯಾಖ್ಯಾನಿಸುತ್ತಾನೆ. ಆಕೆಯು ಒಂದು ಆಕಸ್ಮಿಕ ಅಷ್ಟೇ, ಅತ್ಯಗತ್ಯಕ್ಕೆ ಸಂಬಂಧಿಸಿದಂತೆ ಅಸ್ತಿತ್ವದಲ್ಲಿರುವ ಒಂದು ಅನಗತ್ಯ ಆಕೆ. ಆತನೇ ಕರ್ತೃ. 'ಆತನೆ ಆತ್ಯಂತಿಕ ಶಕ್ತಿ, ಆಕೆ ಏನಿದ್ದರೂ ಅನ್ಯ'ವೆಂದು ಅಭಿಪ್ರಾಯವನ್ನು ನೀಡಿದ್ದಾರೆ. ಹೆಣ್ಣನ್ನು ಕುಟುಂಬಕ್ಕೆ ಸೀಮಿತಗೊಳಿಸುತ್ತಲೇ ಸಾರ್ವಜನಿಕ ವಲಯದ ಪ್ರವೇಶವನ್ನೇ ಎಲ್ಲಾ ಧರ್ಮಗಳು ನಿರಾಕರಿಸುತ್ತವೆ. ಅಲ್ಲಲ್ಲಿ ಸಾಧನಾ ಪಥದಲ್ಲಿ ಸಾಗುತ್ತಿರುವ ಹೆಣ್ಣನ್ನು ನಿಯಂತ್ರಿಸಲು ಅಸ್ತ್ರವಾಗಿ ಧರ್ಮವನ್ನು ಬಳಸಲಾಗುತ್ತಿದೆ ಹಾಗೂ ಧಾರ್ಮಿಕ ವಲಯದಲ್ಲಿ ಹೆಣ್ಣಾಗಿರುವ ಕಾರಣದಿಂದಲೇ ಅನುಭವಿಸುತ್ತಿರುವ ಹಿಂಸೆ - ದೌರ್ಜನ್ಯಗಳಿಗೆ ಅಂತ್ಯವೇ ಇಲ್ಲವೇನೊ?

### ೩.೨. ಆರೋಗ್ಯ ವಲಯ

ಸಾರ್ವಜನಿಕ ವಲಯದ ಮುಖ್ಯ ಭಾಗಗಳಲ್ಲಿ ಆರೋಗ್ಯ ವಲಯವು ಒಂದಾಗಿದೆ. ಆರೋಗ್ಯವೇ ಬದುಕಿನ ಎಲ್ಲ ಬಗೆಯ ಪ್ರಗತಿಗೂ ತಳಹದಿ. ಪ್ರಧಾನಧಾರೆಯ ಚಿಂತನೆಗಳಿಂದಲೇ ಪ್ರಭಾವಿತವಾದ ಆರೋಗ್ಯ ವಲಯವು ಲಿಂಗ ಶ್ರೇಣೀಕೃತ ವ್ಯವಸ್ಥೆಯಲ್ಲಿ ಪ್ರಧಾನಲಿಂಗೀಯ ಪರವಾದ ಚಿಂತನೆಗಳನ್ನೆ ರೂಢಿಸಿಕೊಂಡಿರುತ್ತದೆಂಬುದು ಹೊಸ ಸಂಗತಿಯೇನಲ್ಲ. ಲೈಂಗಿಕತಾವಾದಿ ಚಿಂತನಾ ವಿಧಾನವನ್ನು ಅಳವಡಿಸಿಕೊಂಡಿರುವ ಸಮಾಜದಲ್ಲಿನ ಯಾವುದೇ ಆಲೋಚನೆಗಳು, ವಿಚಾರಗಳು, ಅಧೀನಲಿಂಗೀಯ

(ಮಹಿಳಾ) ವಿರೋಧಿಯಾಗಿಯೇ ರೂಪು ತಳೆಯುತ್ತಿವೆ. ಆರೋಗ್ಯ ವಲಯವು ಸಹ ಇದಕ್ಕೆ ಹೊರತೇನಲ್ಲ. ಹಾಗಾಗಿ ಇಲ್ಲಿ ಆರೋಗ್ಯದ ವ್ಯಾಖ್ಯಾನಗಳತ್ತ ಗಮನ ಹರಿಸುತ್ತ, ಮಹಿಳಾ ಆರೋಗ್ಯವನ್ನು ನಿರ್ವಚಿಸಿಕೊಳ್ಳುವುದು, ಪಂಚವಾರ್ಷಿಕ ಯೋಜನೆಗಳಲ್ಲಿ ಮಹಿಳಾ ಆರೋಗ್ಯದ ಪ್ರಸ್ತಾಪ ಹಾಗೂ ಮತ್ತು ಎಂ.ಟಿ.ಪಿ (MTP) ಕಾಯ್ದೆ (೧೯೭೧)ಯನ್ನು ಮಾತ್ರ ಪ್ರಸ್ತಾಪಿಸಲಾಗುತ್ತದೆ. ಈ ಬಗೆಯ ವಿಸ್ತೃತ ವ್ಯಾಪ್ತಿಯನ್ನು ಹೊಂದಿರುವ ಆರೋಗ್ಯ ವಲಯದಲ್ಲಿ ಮಹಿಳಾ ಆರೋಗ್ಯದ ಮೇಲಾಗುವ ದೌರ್ಜನ್ಯವನ್ನು ಸ್ಥೂಲವಾಗಿ ಚರ್ಚಿಸುತ್ತಾ, ಸಂತಾನಾರೋಗ್ಯದ ಮೇಲೆ ಪ್ರಭುತ್ವದ ಸಮ್ಮತಿಯಿಂದಲೇ ನಡೆಯುತ್ತಿರುವ ದೌರ್ಜನ್ಯವನ್ನು ವಿಶ್ಲೇಷಿಸಲಾಗುತ್ತದೆ.

ಹುಟ್ಟಿನಿಂದ, ಸಾಯುವವರೆಗೂ ದೈಹಿಕ, ಮಾನಸಿಕ, ಬೌದ್ಧಿಕ ಆರೋಗ್ಯಗಳಲ್ಲಿ ಯಾವುದೇ ಬಗೆಯ ಸಮಸ್ಯೆಗಳಿಲ್ಲದೆ ನೆಮ್ಮದಿಯಾಗಿರುವುದನ್ನು ನೈಜವಾದ ಆರೋಗ್ಯವೆಂದು ಪರಿಗಣಿಸಲಾಗುತ್ತದೆ. ಮಹಾತ್ಮಾಗಾಂಧೀಜಿಯವರು "ಆರೋಗ್ಯವೆಂದರೆ ದೇಹವು ಸೌಖ್ಯದಿಂದಿರುವುದೆಂದರ್ಥ. ಮೈಯಲ್ಲಿ ಯಾವ ತರಹದ ರೋಗ ರುಜಿನಗಳಿಲ್ಲದೇ ಅನಾಯಾಸವಾಗಿ ದಿನವೆಲ್ಲಾ ತನ್ನ ಸಹಜ ಕೆಲಸ ಕಾರ್ಯಗಳಲ್ಲಿ ತೊಡಗಿಸಿಕೊಳ್ಳಬಲ್ಲವನನ್ನು ಒಳ್ಳೆಯ ಆರೋಗ್ಯಶಾಲಿಯೆನ್ನಬಹುದು. ದಿನದಲ್ಲಿ ಹತ್ತರಿಂದ-ಹನ್ನೆರಡು ಮೈಲಿ ನಿರಾಯಾಸದಿಂದ ನಡೆಯಬಲ್ಲ; ಸಾಧಾರಣ ಶರೀರ ಶ್ರಮದ ಕೆಲಸಗಳನ್ನು ಯಾವ ದಣಿವೂ ಇಲ್ಲದೇ ಮಾಡಬಲ್ಲ; ಸಾಮಾನ್ಯ ಸರಳ ಆಹಾರವನ್ನು ಸುಲಭವಾಗಿ ಅರಗಿಸಿಕೊಳ್ಳಬಲ್ಲ; ಅವನ ಮನಸ್ಸು ಮತ್ತು ಇಂದ್ರಿಯಗಳೂ ಸಮರಸವಾಗಿಯೂ, ಸಮಚಿತ್ತವಾಗಿಯೂ ಇರುತ್ತದೆ. ಈ ಲಕ್ಷಣಗಳ ನಿರೂಪಣೆಗೆ ದೇಹದಾರ್ಢ್ಯ ಪಂದ್ಯಗಳಿಗೆ ಸ್ಪರ್ಧಿಸುವಂತವರಿಗೆ ಅನ್ವಯಿಸುವುದಿಲ್ಲ. ಅಸಾಧಾರಣ ದೇಹಬಲ ಉಳ್ಳವನು ಸಂಪೂರ್ಣ ಆರೋಗ್ಯದಿಂದಿರುತ್ತಾನೆಂದೂ ಹೇಳುವಂತಿಲ್ಲ. ದೇಹದ ಇನ್ನಾವುದೋ ಭಾಗಕ್ಕೆ ಲೋಪವನ್ನುಂಟು ಮಾಡಿಕೊಂಡು, ಬರೀ ಮಾಂಸ-ಖಂಡಗಳಿಂದ ಮೈಬೆಳೆಸಿಕೊಂಡಿದ್ದಾನೆಂದಷ್ಟೇ ಹೇಳಬಹುದು (ಉದ್ಧೃತ: ಶಿವಪ್ಪ, ಬಸಪ್ಪ, ೨೦೦೮)[೧] ಎಂದು ಅಭಿಪ್ರಾಯಪಟ್ಟಿದ್ದಾರೆ.

ಡಾ. ಟಿ.ಎಸ್. ಸತ್ಯನಾರಾಯಣರಾವ್ : ಆರೋಗ್ಯವಂತ ಎನ್ನಲು ಕಾಯಿದೆಯಿಲ್ಲದಿದ್ದರೆ ಸಾಲದು. ವ್ಯಕ್ತಿಯು ಎಲ್ಲಾ ದೃಷ್ಟಿಯಿಂದಲೂ ಸಮರ್ಪಕನಾಗಿರುವುದು ಅವಶ್ಯಕವಾಗುತ್ತದೆ. ಲೈಂಗಿಕತೆಯೂ ಆರೋಗ್ಯದ ದೃಷ್ಟಿಯಿಂದ ಅಷ್ಟೇ ಮುಖ್ಯ. ಅವೆರಡಕ್ಕೂ ಬಿಡದ ನಂಟು. ಹೇಗೆ ಮನಸ್ಸು, ದೇಹಗಳನ್ನು ಬೇರ್ಪಡಿಸಲು ಸಾಧ್ಯವಿಲ್ಲವೋ, ಹಾಗೆಯೇ ಲೈಂಗಿಕತೆಯನ್ನು ಆರೋಗ್ಯತನದಿಂದ ಬೇರ್ಪಡಿಸಲು ಸಾಧ್ಯವಿಲ್ಲ. ಎಲ್ಲಿ ಮನುಷ್ಯ ಲೈಂಗಿಕವಾಗಿ ದುರ್ಬಲನಾಗಿದ್ದಾನೊ, ಅಲ್ಲಿ ಆರೋಗ್ಯದಲ್ಲಿ ನ್ಯೂನತೆಯಿದೆಯೆಂದೇ ಅರ್ಥ (ಸತ್ಯನಾರಾಯಣರಾವ್.ಟಿ.ಎಸ್., ೨೦೦೦).[೨] ವಿಶ್ವಸಂಸ್ಥೆಯು ಯಾವುದೇ ರೀತಿಯ ರೋಗಗಳು ಅಥವಾ ದೈಹಿಕ ಮತ್ತು ಮಾನಸಿಕ ಹಾಗೂ ಸಾಮಾಜಿಕವಾಗಿ ಸಂಪೂರ್ಣ ಸೌಖ್ಯವಾಗಿರುವುದನ್ನು ಆರೋಗ್ಯವೆಂದು ಪರಿಗಣಿಸಲಾಗಿದೆ.

ಮೇಲೆ ಸೂಚಿಸಿದ ಮೂರು ವ್ಯಾಖ್ಯಾನಗಳಲ್ಲಿ ಗಾಂಧೀಜಿಯವರ ವ್ಯಾಖ್ಯಾನವು ನೇರವಾಗಿ ಪುರುಷನನ್ನೇ ಕೇಂದ್ರೀಕೃತವಾಗಿರಿಸಿಕೊಂಡು ವ್ಯಾಖ್ಯಾನಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಇನ್ನುಳಿದ ಎರಡು

ವ್ಯಾಖ್ಯಾನಗಳಲ್ಲಿಯೂ ಪರೋಕ್ಷವಾಗಿ ಪುರುಷಕೇಂದ್ರಿತ ನೆಲೆಯಲ್ಲೇ ವಿವೇಚಿಸಲಾಗಿದೆ. ಟಿ.ಎಸ್. ಸತ್ಯನಾರಾಯಣರಾವ್‌ರವರು ಆರೋಗ್ಯದ ವ್ಯಾಖ್ಯಾನದಲ್ಲಿ ಲೈಂಗಿಕ ಆರೋಗ್ಯಕ್ಕೆ ಹೆಚ್ಚು ಒತ್ತು ಕೊಟ್ಟಿರುವುದು ಗಮನಾರ್ಹವಾಗಿದೆಯಾದರೂ, ಸ್ತ್ರೀ-ಪುರುಷರಿರ್ವರ ಲೈಂಗಿಕ ಆರೋಗ್ಯವೆಂಬುದನ್ನು ಸ್ಪಷ್ಟಪಡಿಸಿಲ್ಲ. ಹೀಗೆ ಪುರುಷಪ್ರಧಾನ ವ್ಯವಸ್ಥೆಯಲ್ಲಿ ಸಾಮಾನ್ಯೀಕರಿಸಿದ ಯಾವುದೇ ಚಿಂತನೆಗಳಲ್ಲಿಯೂ ಸಹ ಅದು ಮಹಿಳೆಯನ್ನು ಒಳಗೊಂಡಿರುವುದಿಲ್ಲವೆಂಬುದಕ್ಕೆ ಮೇಲಿನ ವ್ಯಾಖ್ಯಾನಗಳನ್ನೇ ಉದಾಹರಣೆಗಳಾಗಿ ನೋಡಬಹುದು.

ಸ್ತ್ರೀವಾದಿ ಚಿಂತನಾಕ್ರಮವೊಂದು ಬೆಳೆದು ಬಂದ ನಂತರ ಒಟ್ಟು ಸಮಾಜ ವ್ಯವಸ್ಥೆಯನ್ನು ಪುನರ್ ಪರಿಶೀಲನೆಗೊಳಪಡಿಸಿದಾಗ ಮಹಿಳೆಯ ಅದೃಶ್ಯತೆಯು ಎಲ್ಲ ವಲಯಗಳಲ್ಲೂ ಕಾಣಬಹುದೆಂಬುದನ್ನು ವಿವಿಧ ಸ್ತ್ರೀವಾದಿಗಳು, ವಿವಿಧ ವಲಯಗಳನ್ನು ಪುನರಾವಲೋಕಿಸುವ ಮೂಲಕ ಮಹಿಳೆಯನ್ನು ಸಹಜೀವಿಯಾಗಿ ಪುರುಷಪ್ರಧಾನ ವ್ಯವಸ್ಥೆಯು ಪರಿಗಣಿಸದಿರುವುದನ್ನು ಸ್ಪಷ್ಟಪಡಿಸಿದರು. ಈ ನಿಟ್ಟಿನಲ್ಲಿ ಮಹಿಳಾ ಆರೋಗ್ಯದ ವಿಶೇಷವಾದ ಚಿಂತನೆಗಳು ಆರಂಭವಾದವು.

**ಮಹಿಳಾ ಆರೋಗ್ಯ**

ಆರೋಗ್ಯ ವಲಯವನ್ನು ಮರುಚಿಂತನೆಗೊಳಪಡಿಸಿದಾಗ ಕಂಡು ಬರುವ ಪ್ರಮುಖವಾದ ಅಂಶವೆಂದರೆ, ಬಹುತೇಕವಾಗಿ ಮಹಿಳೆಯರಿಂದಲೇ ಸಮಾಜದಲ್ಲಿನ ಪ್ರತಿಯೊಂದು ಜೀವವು ಸದೃಢವಾಗಿರುವುದು, ತಾಯಿ, ಅಜ್ಜಿ, ಹೆಂಡತಿ, ಮಗಳು, ಸ್ನೇಹಿತೆ, ತಂಗಿ ಇತ್ಯಾದಿ ಪಾತ್ರಗಳಲ್ಲಿ ಕಾಣಿಸಿಕೊಳ್ಳುವ ಮಹಿಳಾ ಸಮುದಾಯ ಪುರುಷ ಸಮುದಾಯದತ್ತ ವಿಶೇಷವಾಗಿ ಗಮನಹರಿಸುವಂತೆ ಸಮಾಜ ವ್ಯವಸ್ಥೆಯ ರೂಪಿಕೆಯಾಗಿದೆ. ಒಟ್ಟು ಸಮಾಜವೇ ಆರೋಗ್ಯ ರಕ್ಷಣೆಯ ಸಂದರ್ಭ ಬಂದಾಗ ಮಹಿಳೆಯನ್ನು ಅವಲಂಬಿಸಬೇಕಾಗಿದೆ. ವಿಪರ್ಯಾಸವೆಂದರೆ ಮಹಿಳೆಯರ ಆರೋಗ್ಯಕ್ಕೆ ಬೇಕಾದ ಅಗತ್ಯತೆಗಳಿಂದ ಅತಿ ನಯಗಾರಿಕೆಯಿಂದ, ಕ್ರೂರತೆಯ ಹಂತದವರೆಗೂ ತಿರಸ್ಕೃತಳಾಗಿದ್ದಾಳೆ. ಉದಾ:- ಗೃಹಿಣಿಗೆ ಕುಟುಂಬದ ಎಲ್ಲರ ಸೌಖ್ಯವನ್ನು, ಪಾಲನೆ-ಪೋಷಣೆಯ ಜವಾಬ್ದಾರಿಯನ್ನು ಹೊರಿಸಲಾಗಿದೆ. ಊಟ, ಉಪಚಾರ ಎಲ್ಲ ವಿಷಯಗಳಲ್ಲೂ ಪುರುಷನ ಹಿತವನ್ನು ಕಾಪಾಡುವ ಮಹಿಳೆಯು ಎಷ್ಟೋ ಸಂದರ್ಭಗಳಲ್ಲಿ ತನ್ನ ಹೊಟ್ಟೆಗೆ ಹಿಟ್ಟಿಲ್ಲದಂತೆ ಬದುಕುವ ಸಂಗತಿಗಳನ್ನು ಕಾಣುವುದು ಒಂದೆಡೆಯಾದರೆ, ಹುಟ್ಟಿದ ಮನೆ-ಗಂಡನ ಮನೆಯಲ್ಲಿ ಲಿಂಗ ತಾರತಮ್ಯದಿಂದಾಗಿ, ಹೆಣ್ಣಾಗಿರುವ ಕಾರಣಕ್ಕಾಗಿಯೇ ಹಳಸಲು, ಕೊಳಸಲನ್ನು ತಿಂದೋ, ಕೆಲವೊಮ್ಮೆ ಅದು ಇಲ್ಲದೇ ಬದುಕಬೇಕಾದ ಸಂದರ್ಭಗಳನ್ನು ಕಾಣುತ್ತೇವೆ. ಸಂಸ್ಕೃತಿ, ಧರ್ಮದ ನೊಗವನ್ನು ಅವಳಿಗೆ ಹೊರಿಸಲಾದಂತಹ ಸಂಗತಿಗಳಲ್ಲಿ ಪೂಜೆ, ವ್ರತ, ಉಪವಾಸಗಳ ಸಂದರ್ಭದಲ್ಲಿಯೂ ಅದರಲ್ಲೂ ವೈವಿಧ್ಯದ ಆಚರಣೆಯಲ್ಲಂತೂ ಮಹಿಳೆಯು ಆಹಾರವನ್ನು ತ್ಯಜಿಸಿ, ಹಿಂಸಾತ್ಮಕ ಬದುಕನ್ನು ಬದುಕುವ ಸನ್ನಿವೇಶಗಳು ಸಾಕಷ್ಟಿವೆ. ಅವಳ ಆರೋಗ್ಯಕ್ಕೆ ಪುಷ್ಟಿಯೊದಗಿಸುವ ಆಹಾರದಿಂದಲೇ ಅವಳು ವಂಚಿತಳಾಗುತ್ತಾಳೆ. ಇವೆಲ್ಲವೂ ಸಹ ಹಿಂಸೆ, ದೌರ್ಜನ್ಯದ ಆಯಾಮಗಳಾಗಿಯೇ ಇವೆ.

ಸಾಧಾರಣವಾಗಿ ಮಹಿಳೆಗೆ ಪುಷ್ಟಿಕರ ಆಹಾರ ಒದಗಿಸುವುದೇ ಮೂರು ಸಂದರ್ಭಗಳಲ್ಲಿ ಋತುಮತಿ, ಗರ್ಭಿಣಿ, ಹೆರಿಗೆ ಈ ಮೂರು ಸಂದರ್ಭಗಳಲ್ಲಿ ಅವಳಿಗಾಗಿ ಆಹಾರ ಒದಗಿಸುವುದರಿಂದ ಅವಳ ಗಂಡನ ಸುಖಕ್ಕಾಗಿ, ಮಗುವಿನ ಆರೋಗ್ಯಕ್ಕಾಗಿ ಎಂಬ ಉದ್ದೇಶವನ್ನೇ ಬಲು ಮುಖ್ಯವಾಗಿ ಅವಲಂಬಿಸಿವೆ. ಹೀಗೆ ನಿರ್ಲಕ್ಷ್ಯವಾಗುತ್ತಿರುವ ಮಹಿಳೆಯರ ಆರೋಗ್ಯದ ಕುರಿತಾಗಿ ಮಹಿಳೆ ದೈಹಿಕವಾಗಿ ಮತ್ತು ಮಾನಸಿಕವಾಗಿ ಸುಸ್ಥಿತಿಯಲ್ಲಿದ್ದರೆ ಅವಳನ್ನು ಆರೋಗ್ಯವಂತ ಮಹಿಳೆ ಎಂದು ಇದಕ್ಕೆ ವಿರುದ್ಧವಾದ ಸ್ಥಿತಿಯನ್ನು ಅನಾರೋಗ್ಯದ ಸ್ಥಿತಿಯೆಂದು ಕರೆಯಬಹುದು. ಮಹಿಳೆಯ ಆರೋಗ್ಯ-ಅನಾರೋಗ್ಯವು ಕುಟುಂಬ, ಸಮಾಜ-ಪರಿಸರದೊಂದಿಗೆ ಪೂರಕವಾದ ಸಂಬಂಧವನ್ನು ಹೊಂದಿದೆಯೆಂದು ಮಹಿಳಾ ವೈದ್ಯರು ಅಭಿಪ್ರಾಯಪಟ್ಟಿದ್ದಾರೆ. ಆದರೂ ಮಹಿಳಾ ಆರೋಗ್ಯದ ನಿರ್ವಚನದಲ್ಲಿ ಮಹಿಳಾ ಲೈಂಗಿಕತೆಯನ್ನು ವಿಶೇಷವಾಗಿ ಪರಿಗಣನೆಗೆ ತೆಗೆದುಕೊಳ್ಳಬೇಕಾದ ಜರೂರಿರುವುದನ್ನು ಮನಗಾಣಬೇಕಾಗಿದೆ.

ಆರೋಗ್ಯಕ್ಕೆ ಸಂಬಂಧಿಸಿದಂತೆ ಚರ್ಚಿಸುತ್ತಿರುವ ಸಂದರ್ಭದಲ್ಲಿ ಯಾವುದೇ ಬಗೆಯ ಸಮಸ್ಯೆಗಳಿಗೂ ವ್ಯಕ್ತಿಯೇ ಕಾರಣನಾಗಿರುತ್ತಾನೆ. ಸಹಜ ಹುಟ್ಟಿನ ಕಾರಣಗಳಿಲ್ಲದೇ, ಸಾಮಾಜಿಕ ಕಾರಣಗಳಿಂದ ಆರೋಗ್ಯವು ಕೆಡುತ್ತದೆ. ಸಮುದಾಯ ಜೀವನದಲ್ಲಿ ಪರಸ್ಪರ ಕೊಳು-ಕೊಡುಗೆಗಳಿರುತ್ತವೆ. ಈ ನೆಲೆಯಲ್ಲಿ ಬುದ್ಧಿ ಜೀವಿಗಳು, ಆಡಳಿತ ವ್ಯವಸ್ಥೆಯು ಸಮುದಾಯ ಜೀವನವು ಆರೋಗ್ಯಯುತವಾಗಿರುವಂತೆ ಕೆಲವು ಕೊಡುಗೆಗಳನ್ನು ನೀಡಿದ್ದಾರೆ. ಪಿತೃ ಸಂಸ್ಕೃತಿಯ ಅಂಶಗಳು ವ್ಯವಸ್ಥೆಯಲ್ಲಿ ಗಾಢವಾಗಿರುವುದರಿಂದ, ಇಲ್ಲೆಲ್ಲೆಡೆಯು ಪಿತೃಸಂಸ್ಕೃತಿಯ ಮೌಲ್ಯವನ್ನು ಸ್ಥಿರೀಕರಿಸಲಾಗಿದೆಯಾದ್ದರಿಂದ ಮಹಿಳೆಯರ ಆರೋಗ್ಯವು ನಿರ್ಲಕ್ಷ್ಯಕ್ಕೊಳಗಾಗಿದೆ.

ಅಷ್ಟೇ ಅಲ್ಲದೆ ಅದು ತೀವ್ರ ಅಪಾಯಕ್ಕೆ ಒಡ್ಡಿದೆ. ಮಹಿಳೆಯ ದೇಹವನ್ನು ಒಂದು ಪ್ರಯೋಗಾಲಯ ಎಂಬಂತೆ, ಅಮಾನವೀಯ ಸಮಸ್ಯೆಗಳಿಗೊಡ್ಡಿದೆ. ಮಹಿಳೆಯ ಆರೋಗ್ಯ ಸುಸ್ಥಿತಿಯಲ್ಲಿಲ್ಲವೆಂಬುದಕ್ಕೆ ಕಾರಣ ವೈಯಕ್ತಿಕತೆಗಿಂತ ಬಹುಪಾಲು ಸಾಮಾಜಿಕತೆಯಲ್ಲಿಯೇ ಇದೆ. ಹೆಣ್ಣನ್ನು ಸಹಜೀವಿಯೆಂದು ಪರಿಗಣನೆಗೆ ತೆಗೆದುಕೊಳ್ಳಲಾಗದ ಸಮಾಜ ವ್ಯವಸ್ಥೆಯಲ್ಲಿ ಸಹಜವೆನ್ನುವಂತೆ ಅವಳ ಆರೋಗ್ಯದ ಚಿಂತನೆಗಳನ್ನು ಪೂರ್ಣವಾಗಿ ಕೈಬಿಡಲಾಗಿದೆ. ನಿರ್ಲಕ್ಷ್ಯ, ಅಪಮಾನ, ಅವಹೇಳನಗಳು ದೌರ್ಜನ್ಯ-ಹಿಂಸೆಯ ಆಯಾಮಗಳೇ ಆಗಿವೆ. ಉದಾ:- ಆರೋಗ್ಯ ವಿಜ್ಞಾನದ ಪ್ರಕಾರ ಪುರುಷನ ದೇಹಕ್ಕೆ ಬೇಕಾದ ಸರಾಸರಿ ಕ್ಯಾಲೋರಿ ೨೫೦೦, ಆದರೆ ಸ್ತ್ರೀಯರ ದೇಹಕ್ಕೆ ಬೇಕಾದ ಕ್ಯಾಲೋರಿ ೨೦೦೦ವೆಂದು ನಿಗದಿಗೊಳಿಸಲಾಗಿದೆ. ಮಹಿಳೆಯ ದೈನಂದಿನ ದುಡಿಮೆಯಲ್ಲಿ ಅವಳು ಬೆವರು, ರಕ್ತ, ಕಣ್ಣೀರಿನ ಮೂರು ಬಗೆಯ ದುಡಿಮೆಯನ್ನು ದುಡಿಯುವುದರಿಂದ ಮೇಲೆ ಸೂಚಿಸಿದ ಕ್ಯಾಲೋರಿಯ ಹಂಚಿಕೆಯು ತರತಮವಾಗುತ್ತದೆ. ಹೀಗೆ ಸಾಕಷ್ಟು ಉದಾಹರಣೆಗಳು ಮಹಿಳಾ ಆರೋಗ್ಯದ ನಿರ್ಲಕ್ಷ್ಯದ ಕೊರತೆಯು ಸಾಮಾನ್ಯ ಆರೋಗ್ಯದ ಚಿಂತನೆಗಳಲ್ಲಿ ಕಾಣಬಹುದಾಗಿದೆ.

ಸಮಾಜದ ಒಂದು ಹೊರೆಯೆಂದು ಭಾವಿಸಲಾಗಿರುವ ಹೆಣ್ಣು ಜೀವವು ಮನುಕುಲದ ಮುಂದುವರಿಕೆಗಾಗಿ ಇರುವವಳೆಂಬುದನ್ನು ಈ ವ್ಯವಸ್ಥೆಯು ಕಡೆಗಣಿಸಿದೆ. ಒಬ್ಬ ಮಹಿಳೆಯ ಆರೋಗ್ಯವನ್ನು

ಕಾಪಾಡಿಕೊಳ್ಳುವುದು ಸಾಮಾಜಿಕ ವ್ಯವಸ್ಥೆಯ ಪ್ರತಿಫಲಿತ ನಿಯಮವಾಗಿರುತ್ತದೆ. ಮಹಿಳೆಯು ದೈಹಿಕ, ಮಾನಸಿಕ, ಬೌದ್ಧಿಕ, ಸಂತಾನಾರೋಗ್ಯ ಎಂಬ ನಾಲ್ಕು ಬಗೆಯ ಆರೋಗ್ಯಗಳನ್ನು ಕಾಪಾಡಿಕೊಳ್ಳಬೇಕಾಗಿದೆ. ಈ ಸಮಸ್ಯೆಗಳು ಸಾಮಾಜಿಕ ಸಮಸ್ಯೆಗಳಾಗದೆ ವೈಯಕ್ತಿಕ ಸಮಸ್ಯೆಗಳಾಗುತ್ತವೆ. ಕುಟುಂಬದ ಬಡತನದ ಪರಿಣಾಮಗಳು ಯಾವುದೇ ಕಾರಣಕ್ಕೂ ಪುರುಷನ ಮೇಲಾಗುವುದಿಲ್ಲ. ಮಹಿಳೆಯ ಮೇಲಾಗುವ ಈ ಬಡತನದ ಪರಿಣಾಮವಾಗಿ ಅವಳಿಗೆ ಪೌಷ್ಟಿಕ ಆಹಾರದ ಕೊರತೆಯಿಂದ ಬಳಲುತ್ತಾಳೆ. ಆದರೆ ಶ್ರೀಮಂತ ಕುಟುಂಬದ ಮಹಿಳೆಯು ಕೂಡ ಪೌಷ್ಟಿಕ ಆಹಾರದ ಕೊರತೆಯನ್ನು ಎದುರಿಸುತ್ತಾಳೆ. ಉದಾ:- ಸಮಾಜ ವ್ಯವಸ್ಥೆಯಲ್ಲಿ ಕಟ್ಟಲ್ಪಟ್ಟ ಮಹಿಳಾ ಸೌಂದರ್ಯದ ಪರಿಕಲ್ಪನೆಯು ಮಹಿಳೆಯ ಆಹಾರ ಸೇವನೆಯನ್ನು ನಿಯಂತ್ರಿಸುತ್ತದೆ. ಈ ಕಾರಣವಾಗಿ ನಿಯಂತ್ರಣದ ಪರಿಣಾಮಕಾರಿ ತಂತ್ರಗಾರಿಕೆಯೇ ದೌರ್ಜನ್ಯವೆಂದು ಹೇಳಬಹುದಾಗಿದೆ. ಪ್ರಭಾವಿತ ಮತ್ತು ನಿಯಂತ್ರಿತ ಸಮಾಜ ವ್ಯವಸ್ಥೆಗಳೆರಡೂ ಸೇರಿ ಮಹಿಳೆಯ ಆರೋಗ್ಯದ ಮೇಲೆ ದುಷ್ಪರಿಣಾಮವನ್ನು ಬೀರುತ್ತವೆ. ಅವಳ ಅನುಕೂಲ-ಪ್ರತಿಕೂಲ ಪರಿಸ್ಥಿತಿಗಳೆರಡರಲ್ಲೂ ಸಹ ಅವಳು ತನ್ನ ಆರೋಗ್ಯವನ್ನು ಕಾಪಾಡಿಕೊಳ್ಳಲಾಗದಂತಹ ಪ್ರಸಂಗಗಳು, ಚಿಂತನೆಗಳು ಸಮಾಜ ವ್ಯವಸ್ಥೆಯಲ್ಲಿವೆ.

ಮಹಿಳೆಯ ದೇಹ, ಬುದ್ಧಿ, ಸಂತಾನಾರೋಗ್ಯ ಇತ್ಯಾದಿಗಳಲ್ಲಿ ಯಾವುದಾದರೊಂದರ ಮೇಲೆ ಆಕ್ರಮಣ, ಹಲ್ಲೆಗಳಾದರೂ ಸಹ ಅದು ಅವಳ ಮಾನಸಿಕ ಆರೋಗ್ಯವನ್ನು ಕಲುಷಿತಗೊಳಿಸುತ್ತದೆ. ಮನೋಲೋಕವೆನ್ನುವುದೇ ಅಮೂರ್ತವಾದುದು, ದೇಹ, ಬುದ್ಧಿಯಂತೆಯೇ ಮನಸ್ಸು ಕಣ್ಣಿಗೆ ಗೋಚರಿಸುವುದಿಲ್ಲ. ಬೇಸರ, ದುಃಖ, ಆತಂಕ, ತಲ್ಲಣ, ಅವಮಾನ, ಕೋಪ ಇವೆಲ್ಲವುಗಳು ಭಾವಲೋಕದ ಅಡಿಯಲ್ಲಿರುತ್ತವೆ. ಭಾವನೆಗಳ ಮೂಲಕ ಇದಕ್ಕೆ ಪ್ರತಿಕ್ರಿಯಿಸಬೇಕು. ಮಹಿಳಾ ಬದುಕು ಸಾಮಾಜಿಕತೆಯ ನೆಲೆಯಿಂದಲೆ ನಿರ್ವಚನಗೊಳ್ಳುವುದರಿಂದ, ಸಾಮಾಜಿಕ ಸಂಬಂಧಗಳು, ಸನ್ನಿವೇಶಗಳಿಗನುಗುಣವಾಗಿ ಬದುಕಿನ ನಿರ್ವಹಣೆಯಾಗುತ್ತದೆ. ಮನೋಲೋಕದಲ್ಲಿನ ಸಂಗತಿಗಳು ಮನೋವಿಜ್ಞಾನವು ವಿವರಿಸುತ್ತೇನೆಂದು ಹೊರಟಿದೆ.

ಆದರೆ ಭೌತಿಕವಾಗಿ ಮೂರ್ತವಾಗಿರುವ ಸಂಗತಿಗಳೇ ಮಹಿಳಾ ವಿರೋಧಿಯಾಗಿ ರೂಪಗೊಂಡಿರುವ ಈ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಅಮೂರ್ತವಾಗಿರುವುದರ ವಿವರಣೆಗಳು ಯಾವ ಬಗೆಯವೆಂದು ಸಹಜವಾಗಿ ಕಲ್ಪಿಸಬಹುದಾಗಿದೆ. ಎಲ್ಲ ಚಿಂತನೆಗಳಂತೆಯೇ ಇದು ಸಹ ಪಿತೃ ಸಂಸ್ಕೃತಿಯ ಆಯುಧವಾಗಿಯೇ ಪರಿಣಮಿಸಿದೆ. ಈ ಹಿನ್ನೆಲೆಯಲ್ಲಿ ಮನಃಶಾಸ್ತ್ರದ ಪಿತಾಮಹನಾದ ಸಿಗ್ಮಂಡ್ ಫ್ರಾಯ್ಡ್‌ನು ಮಂಡಿಸಿದ ಸಿದ್ಧಾಂತವು ಒಟ್ಟು ಮನೋಲೋಕವನ್ನು ವಿವರಿಸುತ್ತೇನೆಂದು ಹೊರಟಿರುವಾಗಲೂ ಅದು ಮಹಿಳಾ ಮನೋಲೋಕವನ್ನು ವಿವರಿಸುವಲ್ಲಿ ವಿಫಲವಾಗಿದೆ. ಫ್ರಾಯ್ಡ್‌ನ ಚಿಂತನೆಯು ಶಿಶ್ನಕೇಂದ್ರಿತ ಚಿಂತನೆಯಾಗಿದ್ದು, ಇದರಿಂದ ಮಹಿಳಾ ಅಧೀನತೆಯನ್ನು ಇನ್ನಷ್ಟು ಗಟ್ಟಿಗೊಳಿಸಲು ಪೂರಕವಾಗಿದೆಯೆಂಬುದನ್ನು ಸ್ತ್ರೀವಾದಿ ಮನೋವಿಜ್ಞಾನಿಗಳು ಶೋಧಿಸಿದ್ದಾರೆ. ಕರೆನ್‌ಹಾರ್ನಿಯವರು ಶಿಶ್ನ ಈರ್ಷ್ಯೆಯ ಪ್ರತಿಯಾಗಿ ಗರ್ಭ ಈರ್ಷ್ಯೆಯನ್ನು ಪ್ರತಿಪಾದಿಸಿದ್ದಾರೆ.

ದೇಹ ರಚನೆಯ ಆತ್ಯಂತಿಕ ಸಂಗತಿ(Anatomy is the destiny)ವೆಂದು ದೃಢವಾಗಿರುವ ನಂಬಿರುವ ಫ್ರಾಯ್ಡ್‌ನ ಸಿದ್ಧಾಂತದಲ್ಲಿ ಮಹಿಳೆಯನ್ನು ಒಳಗೊಂಡರೂ ಸಹಿತ, ಅವಳ ವರ್ತನೆಗಳನ್ನು ಆಧರಿಸಿ ಮನೋಲೋಕವನ್ನು ವಿವರಿಸುವುದು ಅಸಮರ್ಪಕ ಸಂಗತಿ. ಆತಂಕ, ಭಯ, ತಲ್ಲಣಗಳಿಂದ ಕೂಡಿದ ಅವಳ ವರ್ತನೆಯನ್ನು ಅವಳು ಹೆಣ್ಣಾಗಿರುವುದಕ್ಕೆ ಹಾಗಿರಬೇಕೆಂದು ವಿವರಿಸಲಾಗುತ್ತದೆಯೇ ಹೊರತು, ಜೈವಿಕ ಭಿನ್ನತೆಯನ್ನು ಆಧರಿಸಿಯೇ ಅವಳ ಮೇಲೆ ಹೆಣ್ಣು ವಿನಾಕಾರಣಕ್ಕೆ ಆಗುವ ಸಾಮಾಜೀಕರಣವನ್ನು ಪ್ರಶ್ನಿಸುವ ಗೋಜಿಗೆ ಹೋಗುವುದಿಲ್ಲ. ಅಲ್ಬರ್ಟ್ ಬಂಡೊರವರ ಸಾಮಾಜಿಕ ಕಲಿಕಾ ಸಿದ್ಧಾಂತವು, ಸಾಮಾಜೀಕರಣವನ್ನು ಪ್ರಶ್ನಿಸುವ ಅಗತ್ಯತೆಯನ್ನು ಒತ್ತಿ ಹೇಳುತ್ತಾರೆಂಬುದನ್ನು ಉಲ್ಲೇಖಿಸುವುದು ಸೂಕ್ತ.

'ಮನುಸ್ವಾಸ್ಥ್ಯ ಸಾಮಾಜಿಕ ವಾತಾವರಣದ ಪ್ರತಿಬಿಂಬ'ವೆಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ಮಹಿಳೆಯರ ವಿರುದ್ಧ ನಡೆಯುವ ಎಲ್ಲ ಬಗೆಯ ದೌರ್ಜನ್ಯಗಳು ಮಹಿಳೆಯ ಮನಸ್ಸಿನ ಮೇಲೆ ಪರಿಣಾಮವನ್ನು ಬೀರುತ್ತವೆ. ಇಡೀ ಸಮಾಜ ವ್ಯವಸ್ಥೆಯು ಮಹಿಳಾ ಬದುಕನ್ನು ನಿರ್ಬಂಧಿಸುವುದರಿಂದ, ಅವಳ ಭಾವಲೋಕದ ಸಂಗತಿಗಳನ್ನು ಅವಳು ಸ್ಪಷ್ಟವಾಗಿ ವ್ಯಕ್ತಪಡಿಸುವುದಕ್ಕೂ ನಿರ್ಬಂಧಗಳಿರುವುದನ್ನು "ಮೌನ ಸಂಸ್ಕೃತಿ"ಯಲ್ಲಿ ಕಾಣಬಹುದಾಗಿದೆ.

ಸಾರ್ವಜನಿಕ ವಲಯಗಳಲ್ಲಿ ನಿರಂತರವಾಗಿ ನಡೆಯುತ್ತಿರುವ ಹಿಂಸೆ-ದೌರ್ಜನ್ಯಗಳಿಗೆ ಮಹಿಳೆಯ ಮನೋಲೋಕವು ತತ್ತರಿಸಿ ಹೋಗಿದೆ. ಅದರಲ್ಲೂ ಆಧುನಿಕ ಮಹಿಳೆಯು ಪ್ರತಿಕೂಲಕರವಾದ ಸಮಾಜ ವ್ಯವಸ್ಥೆಯಲ್ಲಿನ ಕೌಟುಂಬಿಕ ಮತ್ತು ಸಾರ್ವಜನಿಕ ವಲಯಗಳಲ್ಲಿ ನಿರಂತರವಾಗಿ ದುಡಿಯುವುದರೊಂದಿಗೆ, ಅಲ್ಲಿನ ಹಿಂಸೆ-ದೌರ್ಜನ್ಯಗಳು, ಹೆಣ್ಣಾಗಿರುವ ಕಾರಣಕ್ಕಾಗಿಯೇ ಅನುಭವಿಸುವ ಒತ್ತಡಗಳಿಂದ ಮಾನಸಿಕ ಅಸ್ವಾಸ್ಥ್ಯಕ್ಕೆ ಒಳಗಾಗುತ್ತಿರುವುದು ಕಂಡು ಬರುತ್ತದೆ. ಸಾಕಷ್ಟು ಗರ್ಭಿಣಿ ಮಹಿಳೆಯರ ಈ ಬಗೆಯ ಒತ್ತಡಗಳಿಂದ ಗರ್ಭಪಾತಗಳಾಗುತ್ತಿರುವುದನ್ನು ಕಾಣಬಹುದು. ಈ ನಿಟ್ಟಿನಲ್ಲಿ ದೇಹ, ಮನಸ್ಸು, ಬುದ್ಧಿಗಳು ಪರಸ್ಪರ ಪೂರಕವಾಗಿವೆ.

ಸಾಮಾನ್ಯವಾಗಿ ದೈಹಿಕ ಹಿಂಸೆಯು ಗೋಚರವಾಗಿರುತ್ತದೆ. ದೌರ್ಜನ್ಯ ಎನ್ನುವ ಪದವೇ ದೈಹಿಕ ಹಿಂಸೆಯನ್ನು ಸೂಚಿಸುತ್ತದೆ. ಅತ್ಯಾಚಾರ, ಆ್ಯಸಿಡ್ ದಾಳಿ ಇತ್ಯಾದಿಗಳಂತಹ ಕ್ರೂರ ಬಗೆಯ ದೈಹಿಕ ಹಿಂಸೆಯನ್ನು ಸಾರ್ವಜನಿಕ ವಲಯದಲ್ಲಿಯೂ ಕಾಣಬಹುದಾಗಿದೆ. ಹೀಗೆ ದೌರ್ಜನ್ಯ-ಹಿಂಸೆಗಳು, ದೇಹ-ಬುದ್ಧಿ-ಮನಸ್ಸಿನ ಮೆಲೆ ನಿರಂತರವಾಗಿ ಆಗುತ್ತಲೇ ಇವೆ.

ಮಹಿಳೆಯ ಆರೋಗ್ಯದ ಸಂದರ್ಭದಲ್ಲಿ ವಿಶೇಷವಾಗಿ ಪರಿಗಣನೆಗೆ ತೆಗೆದುಕೊಳ್ಳಬೇಕಾಗಿರುವುದು 'ಸಂತಾನಾರೋಗ್ಯ'. ಸಾರ್ವಜನಿಕ ವಲಯದ ಬಹುಪಾಲು ದೌರ್ಜನ್ಯಗಳು ಮಹಿಳೆಯರ ಸಂತಾನಾರೋಗ್ಯದ ಮೇಲಾಗುತ್ತಿವೆ. ಉದಾ: ಬಾಡಿಗೆ ತಾಯಿ, ಡಿಸೈನರ್ ಬೇಬಿ ಇತ್ಯಾದಿ.

“ಸಂತಾನಾರೋಗ್ಯವನ್ನು ವಿಶ್ವಸಂಸ್ಥೆಯು ಹೀಗೆ ವ್ಯಾಖ್ಯಾನಿಸುತ್ತದೆ. “ಸಂತಾನಾರೋಗ್ಯವೆಂಬುದು ಇತ್ತೀಚಿನ ದಶಕಗಳಲ್ಲಿ ಬಂದ ಹೊಸ ಪರಿಕಲ್ಪನೆ. ಜನರು ಹೊಣೆಯುತ, ತೃಪ್ತಿಕರವಾದ ಹಾಗೂ ಅಪಾಯ ರಹಿತವಾದ ಲೈಂಗಿಕ ಜೀವನವನ್ನು ನಡೆಸಲು ಸಾಧ್ಯವಾಗಿ, ಆರೋಗ್ಯಯುತ ಸಂತಾನವನ್ನು ಪಡೆಯಲು ಸಮರ್ಥರಾಗಿದ್ದು, ಬೇಕಿದ್ದಲ್ಲಿ ಯಾವಾಗ ಎಷ್ಟು ಮಕ್ಕಳು ಬೇಕು ಎನ್ನುವುದನ್ನು ನಿರ್ಧರಿಸುವ ಸ್ವಾತಂತ್ರ್ಯವನ್ನು ಹೊಂದಿರುವುದೇ ಸಂತಾನಾರೋಗ್ಯ” (Binnaial Report, 1992-93, WHO).[v]

ಮಹಿಳೆಯ ಆರೋಗ್ಯದಲ್ಲಿ ಸಂತಾನಾರೋಗ್ಯವು ಬಹುಮುಖ್ಯವಾದುದು. ಇದು ಯಾವುದೇ ಒಂದು ಕ್ಷಣದ ಸಂಗತಿಯಲ್ಲ. ಮಹಿಳೆಯು ಋತುಮತಿಯಾದಂದಿನಿಂದ, ಋತುಬಂಧದವರೆಗೂ ಸಹ ಸಂತಾನಾರೋಗ್ಯದ ಪ್ರಕ್ರಿಯೆಯಲ್ಲಿ ತೊಡಗುತ್ತಾಳೆ. ಒಂದು ಸಂತಾನವನ್ನು ಮನುಕುಲಕ್ಕೆ ನೀಡುವಲ್ಲಿ ಮಹಿಳೆಯು ತನ್ನ ಪ್ರಾಣವನ್ನೇ ಪಣವಾಗಿಡುತ್ತಾಳೆ. ಗಂಡು ಸಹ ಈ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುವವನಾದರೂ, ಹೆಣ್ಣಿನ ಭಾಗವಹಿಸುವಿಕೆಯು ಸುದೀರ್ಘ ಅವಧಿಯವರೆಗೂ ಇರುತ್ತದೆ. ಸಂತಾನೋತ್ಪತ್ತಿಯು ಮಹಿಳಾ ಬದುಕಿನ ಕೇಂದ್ರಬಿಂದುವಾದ ಅಂಶವಾಗಿದೆ. ಈ ಬಗೆಯ ಸಂತಾನ ಕ್ರಿಯೆಯ ಕುರಿತು ಸಾಮಾಜಿಕವಾಗಿ, ಕಟ್ಟಲ್ಪಟ್ಟ ವ್ಯಾಖ್ಯಾನಗಳು ಮಹಿಳೆಯ ಮೇಲೆ ಹಲವು ನಿರ್ಬಂಧಗಳನ್ನು ಅಡೆತಡೆಗಳನ್ನುಂಟು ಮಾಡಿದೆ. ಸರಳವಾಗಿ ನಡೆಯಬೇಕಾದ ಪ್ರಕ್ರಿಯೆಯು ಸಾಮಾಜಿಕ ವ್ಯವಸ್ಥೆಯ ಹಿಡಿತಕ್ಕೆ ಸಿಲುಕಿ ಮಹಿಳಾ ಬದುಕನ್ನು ಅಧೀನತೆಯತ್ತ ತಿರುಗಿಸಿದೆ. ಒಟ್ಟಾರೆಯಾಗಿ ಮಹಿಳೆಯರ ಯಾವುದೇ ಸನ್ನಿವೇಶವು ಸಹ ಮೂಲಭೂತವಾಗಿ ಸಾಮಾಜಿಕತೆಯ ತಳಹದಿಯನ್ನಾಧರಿಸಿಕೊಂಡಿದೆ. ಒಟ್ಟು ಮಹಿಳಾ ಆರೋಗ್ಯದ ಕುರಿತು ಸಾಕಷ್ಟು ಯೋಜನೆಗಳು ರೂಪಿತವಾಗಿವೆ.

## ಮಹಿಳಾ ಆರೋಗ್ಯ ಯೋಜನೆಗಳು

ಮಹಿಳಾ ಆರೋಗ್ಯದ ಕುರಿತು ೧೯೪೬ರಲ್ಲಿ ಭೋರ್ ಕಮಿಟಿಯು ರಾಷ್ಟ್ರೀಯ ಆರೋಗ್ಯ ಮತ್ತು ಅಭಿವೃದ್ಧಿ ಸಮಿತಿಯು ಸಲ್ಲಿಸಿದ ವರದಿಯ ಆಧಾರದ ಮೇಲೆ ಕೆಲಸ-ಕಾರ್ಯಗಳು ರಚನೆಗೊಂಡವು. ೧೯೮೩ರಲ್ಲಿ ರಾಷ್ಟ್ರೀಯ ಆರೋಗ್ಯ ಕಾರ್ಯನೀತಿಯನ್ನು ಭಾರತವು ರೂಪಿಸಿ ಜಾರಿಗೆ ತಂದಿದೆ. ೧೯೫೧-೧೯೫೬ರಲ್ಲಿ ಜಾರಿಯಾದ ಮೊದಲ ಪಂಚವಾರ್ಷಿಕ ಯೋಜನೆಯಡಿಯಲ್ಲಿ ೧೯೫೨ರಲ್ಲಿ ರಾಷ್ಟ್ರೀಯ ಕುಟುಂಬ ಯೋಜನಾ ಕಾರ್ಯಕ್ರಮವನ್ನು ರೂಪಿಸಲಾಯಿತು (ಉಲ್ಲೇಖ: ಮಹಿಳಾ ಆರೋಗ್ಯ : ಒಂದು ಮರುಚಿಂತನೆ : ಡಾ. ಕೆ. ಸರೋಜಾ). ೧೯೫೧-೫೬ರಲ್ಲಿ ಜಾರಿಯಾದ ಮೊದಲ ಪಂಚವಾರ್ಷಿಕ ಯೋಜನೆಯಡಿಯಲ್ಲಿ ರಾಷ್ಟ್ರೀಯ ಜನಸಂಖ್ಯಾ ನೀತಿಯ ಪ್ರಮುಖ ಗುರಿಯೇ ಜನಸಂಖ್ಯೆಯ ಪ್ರಮಾಣವನ್ನು ದೇಶದ ಆರ್ಥಿಕ ಪರಿಸ್ಥಿತಿಯ ಅಗತ್ಯಗಳಿಗೆ ಹೊಂದುವಂತಹ ಹಂತಕ್ಕೆ ತಗ್ಗಿಸುವುದಾಗಿತ್ತು. ಇಲ್ಲಿ ಕುಟುಂಬದ ಆರೋಗ್ಯ ಮತ್ತು ಕಲ್ಯಾಣವೇ ಪ್ರಧಾನ ಗುರಿಯಾಗಿತ್ತು.

ಎರಡನೆಯ ಪಂಚವಾರ್ಷಿಕ ಯೋಜನೆ : (೧೯೫೬-೬೧)ಯು ಮೊದಮೊದಲು ಕುಟುಂಬ ಯೋಜನೆಯು ಮಹಿಳೆಯ ಬಿಡುಗಡೆಯ ಅಂಶವಾಗಿ ಪರಿಗಣಿಸಲಾಗಿದ್ದರಿಂದ, ಬೇಡದ ಬಸಿರು, ಪದೇ ಪದೇ ಗರ್ಭಿಣಿಯಾಗುವ, ಹೆರಿಗೆಯ ಪ್ರಕ್ರಿಯೆಗಳಿಂದ ಮುಕ್ತತೆಯನ್ನು ಹೊಂದುವುದಾಗಿತ್ತು. ಆದರೆ ಈ ಎರಡು ಯೋಜನೆಗಳಲ್ಲಿ ಸಂತಾನ ನಿರೋಧಕ ಶಸ್ತ್ರಕ್ರಿಯೆಯು ಕಾಣಿಸಿಕೊಳ್ಳುವುದಿಲ್ಲ. ಅದರ ಬದಲಾಗಿ ಮಾತ್ರೆಗಳು, ಕ್ರಿಂಗಳು, ಜೆಲ್ಲಿಗಳು ಕುಟುಂಬ ಯೋಜನೆಗೆ ಬಳಸುವುದಾಗಿತ್ತು.

ಮೂರನೆ ಪಂಚವಾರ್ಷಿಕ ಯೋಜನೆ : (೧೯೬೧-೬೪)ರಲ್ಲಿ ಕುಟುಂಬ ಯೋಜನೆಯತ್ತ ಜನರನ್ನು ಸೆಳೆಯಲು ವಿವಿಧ ಬಗೆಯ ಪ್ರೋತ್ಸಾಹಧನ ಮತ್ತಿತ್ಯಾದಿ ಬಗೆಯ ಆಮಿಷಗಳನ್ನು ಒಡ್ಡಲಾಗುತ್ತಿತ್ತು. ಅಂತರರಾಷ್ಟ್ರೀಯ ಸಂಸ್ಥೆಗಳ ಮಾರ್ಗದರ್ಶನಕ್ಕನುಗುಣವಾಗಿ ೧೯೬೫ರಲ್ಲಿ ಗರ್ಭಕೋಶದಲ್ಲಿರಿಸುವ ಗರ್ಭ ನಿರೋಧಕಗಳಾದ ಲಿಪ್ಪರ್, ಲೂಪ್ (ವಂಕಿ) ಬಳಕೆಯನ್ನು ಪ್ರಚಾರ ಮಾಡಿತು.

ನಾಲ್ಕನೆ ಪಂಚವಾರ್ಷಿಕ ಯೋಜನೆ : (೧೯೬೯-೧೯೭೪)ಯಡಿಯಲ್ಲಿ ಎಂ.ಟಿ.ಪಿ. ಕಾಯ್ದೆಯನ್ನು ಜಾರಿಗೊಳಿಸುವ ಮೂಲಕ ಕುಟುಂಬ ಯೋಜನಾ ವಿಧಾನವನ್ನು ಕಾನೂನುಬದ್ಧವಾಗಿ ಗರ್ಭಪಾತ ಮಾಡಿಸಿಕೊಳ್ಳಲು ಜಾರಿಗೊಳಿಸಲಾಯಿತು. ಹಾಗೂ ಪುರುಷರ ಶಸ್ತ್ರಚಿಕಿತ್ಸೆಗೆ ಹೆಚ್ಚಿನ ಆದ್ಯತೆ ನೀಡಿ, ಶಿಬಿರಗಳನ್ನು ನಡೆಸುವ ಮೂಲಕ ಸಾಮೂಹಿಕ ಸಂತಾನ ಶಕ್ತಿ ಹರಣ ಚಿಕಿತ್ಸೆಯನ್ನು ಮಾಡಲಾಯಿತು. ಇದರ ಮೊದಲ ಶಿಬಿರವನ್ನು ಕೇರಳದಲ್ಲಿ ನಡೆಸಲಾಯಿತು.

ಐದನೆ ಪಂಚವಾರ್ಷಿಕ ಯೋಜನೆ : (೧೯೭೪-೭೮)ಯಲ್ಲಿ ಕುಟುಂಬ ಕಲ್ಯಾಣ ಯೋಜನೆಯೆಂದು, ಕುಟುಂಬ ಯೋಜನೆಗೆ ಹೊಸ ಹೆಸರಿನಿಂದ ಕರೆಯುವುದು ಆರಂಭವಾಯಿತು. ೧೯೭೭ರ ವೇಳೆಗೆ ಸಂತಾನ ನಿಯಂತ್ರಣ ಮಾತ್ರೆಗಳಿದ್ದರೂ, ಸ್ತ್ರೀಯರ ಸಂತಾನ ಹರಣ ಚಿಕಿತ್ಸೆಯು ಹೆಚ್ಚು ವ್ಯಾಪಾಕವಾಗಿ ಹರಡಿಕೊಂಡಿತ್ತು.

ಆರನೇ ಪಂಚಾವಾರ್ಷಿಕ ಯೋಜನೆ : (೧೯೮೦-೮೫)ರವಧಿಯಲ್ಲಿ ಪ್ರಾಥಮಿಕ ಆರೋಗ್ಯ ಪಾಲನಾ ಪರಿಕಲ್ಪನೆಯೂ ಸಹ ಕುಟುಂಬ ಕಲ್ಯಾಣ ಯೋಜನೆಯ ಮೇಲೆ ತನ್ನ ಪ್ರಭಾವವನ್ನು ಬೀರಿತು. ರಕ್ತಹೀನತಾ ಪ್ರತಿಬಂಧಕ ಕಾರ್ಯಕ್ರಮವನ್ನು ರೂಪಿಸಲಾಯಿತು.

ಏಳನೆಯ ಪಂಚವಾರ್ಷಿಕ ಯೋಜನೆ : (೧೯೮೫-೯೨) ಈ ಯೋಜನೆಯಡಿಯಲ್ಲಿ ಸರ್ಕಾರದೊಂದಿಗೆ ಸಂಬಂಧಿತ ಸಂಘಸಂಸ್ಥೆಗಳು ಮತ್ತು ಮಹಿಳಾ ಸಂಘಟನೆಗಳಿತ್ಯಾದಿಯಾಗಿ ಸಹ ಕುಟುಂಬ ಕಲ್ಯಾಣ ಯೋಜನೆಯ ಸಾಫಲ್ಯಕ್ಕಾಗಿ ಶ್ರಮಿಸಬೇಕೆಂದು ಬೇಡಿಕೆಯನ್ನು ಮುಂದಿಟ್ಟಿತು. ಹಾಗೂ ಮಕ್ಕಳ ಜನನದ ಮಧ್ಯಕ್ಕೆ ಅಂತರವಿರಿಸಲು ತಾತ್ಕಾಲಿಕ ಗರ್ಭನಿರೋಧಕಗಳು, ಮಾತ್ರೆಗಳು, ಕಾಪರಟಿಗಳು ಬಳಕೆಗೆ ಹೆಚ್ಚಿನ ಆದ್ಯತೆಯನ್ನು ನೀಡಲಾಯಿತು.

ಎಂಟನೆ ಪಂಚವಾರ್ಷಿಕ ಯೋಜನೆ : (೧೯೯೨-೧೯೯೭) ಜಾಗತೀಕರಣದ ಪ್ರಭಾವವು ಈಗಾಗಲೇ ಬಲವಾಗಿ ಬೇರೂರಿವುದರಿಂದ, ಆರೋಗ್ಯ ವಲಯವು, ಸರ್ಕಾರಿ ವಲಯದಿಂದ ಖಾಸಗಿ ಉದ್ಯಮಗಳ

ಕೈ ಸೇರಿತು. ಹೊಸ ಆರ್ಥಿಕ ನೀತಿಯಿಂದಾಗಿ ಆರೋಗ್ಯದ ಬಜೆಟ್‌ನ್ನು ಕಡಿತಗೊಳಿಸಿತು ಹಾಗೂ ಈ ನಿಧಿಯನ್ನು "ಬಡವರಿಗೆ ಮಾತ್ರ"ವೆಂದು ಸೀಮಿತಗೊಳಿಸಲಾಯಿತು. ಪ್ರಾಥಮಿಕ ಆರೋಗ್ಯ ಕೇಂದ್ರಗಳ ಸಂಖ್ಯೆ ಕಡಿಮೆಯಾಯಿತು. ಸುರಕ್ಷಿತ ತಾಯ್ತನ ಮತ್ತು ಎರಡಕ್ಕಿಂತ ಹೆಚ್ಚು ಮಕ್ಕಳಿರುವುದನ್ನು 'ಅನರ್ಹತೆ'ಯೆಂದು ಹೇಳಲಾಯಿತು. ವ್ಯಾಸೆಕ್ಟೊಮಿ ಶಸ್ತ್ರಕ್ರಿಯೆಯನ್ನು ಜಾರಿಗೊಳಿಸಲಾಯಿತು.

ಒಂಬತ್ತನೇ ಪಂಚವಾರ್ಷಿಕ ಯೋಜನೆ : (೧೯೯೭-೨೦೦೨) ಕೇಂದ್ರ ಸರ್ಕಾರವು ಸಂಬಂಧಿಸಿದ ಸಂಗತಿಗಳನ್ನು ನಿರ್ಣಯಿಸುವುದನ್ನು ಕೈಬಿಟ್ಟು ಅವುಗಳ ಜವಾಬ್ದಾರಿಯನ್ನು ವಿಕೇಂದ್ರೀಕರಣಗೊಳಸಲಾಯಿತು. ಗರ್ಭನಾಳದ ಸೋಂಕುಗಳನ್ನು ಮತ್ತು ಲೈಂಗಿಕ ಸೋಂಕುಗಳನ್ನು ಚಿಕಿತ್ಸೆಗೊಳಪಡಿಸುವುದನ್ನು ಅತಿ ಪ್ರಮುಖವಾದ ಅಂಶವೆಂದು ಪರಿಗಣಿಸಲಾಯಿತು.

ಹತ್ತನೇ ಪಂಚವಾರ್ಷಿಕ ಯೋಜನೆ : (೨೦೦೨-೨೦೦೭) ಈ ಯೋಜನೆಯಡಿಯಲ್ಲಿ ೨೦೦೭ರವರೆಗೆ ತಾಯಂದಿರ ಮರಣ ಪ್ರಮಾಣವು ೧೦೦೦ ಮಹಿಳೆಯರಲ್ಲಿ ಎರಡಕ್ಕೆ ಇಳಿಸುವುದು ಮತ್ತು ೧೧ನೇ ಪಂಚವಾರ್ಷಿಕ ಯೋಜನೆಯ ಕೊನೆ ಅವಧಿಯ ೨೦೧೨ರ ಹೊತ್ತಿಗೆ ಇದರ ಸಂಖ್ಯೆಯನ್ನು ೧ಕ್ಕೆ ಇಳಿಸುವುದೆಂದು ಯೋಜನೆಯನ್ನು ರೂಪಿಸಲಾಯಿತು.

೨೦೦೧ ರಿಂದ ೨೦೦೨ರ ದಶಕದಲ್ಲಿ ಜನಸಂಖ್ಯಾ ಬೆಳವಣಿಗೆಯನ್ನು ೧೬.೨% ರಷ್ಟು ಕಡಿಮೆ ಮಾಡುವುದಾಗಿ ಯೋಜಿಸಲಾಯಿತು.

ಇಲ್ಲಿ ಸ್ವಾತಂತ್ರ್ಯಾನಂತರದಲ್ಲಿ ಬಂದಿರುವ ಕೆಲವು ಯೋಜನೆಗಳನ್ನು ಮತ್ತು ಪಂಚವಾರ್ಷಿಕ ಯೋಜನೆಗಳನ್ನು ಮಾತ್ರ ಪ್ರಸ್ತಾಪಿಸಲಾಗಿದೆ. ಹೀಗೆ ರೂಪಿಸಲಾದ ಆರೋಗ್ಯ ಯೋಜನೆಯಲ್ಲಿ ಮಹಿಳಾ ಆರೋಗ್ಯದ ಕುರಿತು ಚಿಂತನೆಗೆ ತೊಡಗಿತಾದರೂ ಸಹ ಇದು ಸಾಂಪ್ರದಾಯಿಕ ನೆಲೆಯಾಚೆಗೆ ನಿಲ್ಲುವಲ್ಲಿ ವಿಫಲವಾಯಿತು.

ಮಹಿಳೆಯ ಒಟ್ಟು ಬದುಕು ಪುರುಷ ಲೋಕದ (ಬದುಕಿನ) ಸುತ್ತ ಸುತ್ತುವರಿಯುತ್ತಿರುವುದರಿಂದ ಮಹಿಳೆಯನ್ನು ಹೇರುವ ಯಂತ್ರವಾಗಿ ಪರಿಗಣಿಸಿ, ಅವಳ ಗರ್ಭಿಣಿ ಮತ್ತು ತಾಯ್ತನದ ಸಂದರ್ಭದಲ್ಲಿನ ಆರೋಗ್ಯವನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಯಿತು. ಪ್ರತಿಯೊಂದು ಪಂಚವಾರ್ಷಿಕ ಯೋಜನೆಯಲ್ಲಿ ಮಹಿಳೆಯ ಸಂತಾನಾರೋಗ್ಯವನ್ನು ಜನಸಂಖ್ಯೆ ನಿಯಂತ್ರಣದ, ಕುಟುಂಬ ಯೋಜನೆಯ, ಹಿನ್ನೆಲೆಯಲ್ಲಿ ನೋಡಲಾಗಿದೆ. ಇಲ್ಲಿ ಕುಟುಂಬದ ಕಲ್ಯಾಣ ಪ್ರಮುಖವಾಯಿತೆ ವಿನಃ ಮಹಿಳೆಯರ ಆರೋಗ್ಯ ಕಲ್ಯಾಣವು ಗುರಿಯಾಗಲಿಲ್ಲ, ಬದಲಿಗೆ ಮಹಿಳೆಯ ಸಂತಾನೋರೋಗ್ಯದ ಮೇಲೆ ಪ್ರಭುತ್ವದ ಸಮ್ಮತಿಯನ್ನಾಧರಿಸಿ ಆಕ್ರಮಣಗಳು ನಡೆದವು.

೧೯೯೨ರಲ್ಲಿ ವಿಶ್ವಆರೋಗ್ಯ ಸಭೆಯಿಂದ ಯೋಜಿಸಲ್ಪಟ್ಟ, ಜಾಗತಿಕ ಮಹಿಳೆಯರ ಆರೋಗ್ಯದ ಕಮೀಷನ್‌ನಲ್ಲಿ ಮಹಿಳೆಯರ ಆರೋಗ್ಯವನ್ನು ಜೀವನ ಚಕ್ರದ ದೃಷ್ಟಿಕೋನದ ಒಳಗೆ ಪರಿಗಣಿಸಿತು.

ಅವಳ ಸ್ವಂತ ಬದುಕಿನೊಳಗೆ ಆರೋಗ್ಯದ ನಿರ್ಬಂಧಗಳು ಕೇವಲ ಯಾವುದೋ ಒಂದು ಹಂತದ ಮೇಲೆ ಮಾತ್ರ ಪರಿಣಾಮ ಬೀರದೆ, ಬದುಕಿನುದ್ದಕ್ಕೂ ಪರಿಣಾಮಬೀರುತ್ತದೆ ಎಂಬ ವಾಸ್ತವದ ಸಂಗತಿಯನ್ನು ಹೊರಹಾಕುತ್ತದೆ.

ತದನಂತರದಲ್ಲಿ ಬಂದ ಎಂಟನೇ ಪಂಚವಾರ್ಷಿಕ ಯೋಜನೆಯಡಿಯಲ್ಲಿ ಜಾಗತೀಕರಣದ ಪ್ರಭಾವದಿಂದಾಗಿ ಆರೋಗ್ಯವಲಯವು ಖಾಸಗಿ ಉದ್ಯಮದ ವಶವಾದುದನ್ನು, ಎರಡು ಮಕ್ಕಳಿಗೆ ಜನ್ಮ ನೀಡುವ ನಿರ್ಬಂಧವನ್ನು ಹೇರಲಾಯಿತು ಹಾಗೂ ಮುಂದಿನ ಪಂಚವಾರ್ಷಿಕ ಯೋಜನೆಯಲ್ಲಿ ಗರ್ಭನಾಳ ಮತ್ತು ಲೈಂಗಿಕ ಸೋಂಕುಗಳನ್ನು ಚಿಕಿತ್ಸೆಗೊಳಪಡಿಸುವುದು ಪ್ರಮುಖವೆಂದು ಹೇಳಲಾಯಿತಾದರೂ ಈ ಒಟ್ಟು ಯೋಜನೆಗಳಲ್ಲಿ ಸಂತಾನಸಂಬಂಧಿ ಮತ್ತು ಕುಟುಂಬ ಯೋಜನಾ ವಿಧಾನಗಳನ್ನು ಅಳವಡಿಸಿಕೊಳ್ಳುವಲ್ಲಿ, ನಿರ್ಧಾರವನ್ನು ತೆಗೆದುಕೊಳ್ಳಬೇಕಾದ ಹೆಣ್ಣು-ಗಂಡಿನ ಮಧ್ಯದ ಅಧಿಕಾರ - ಸಂಬಂಧಗಳಲ್ಲಿ ಗಣನೀಯ ಬದಲಾವಣೆಗಳನ್ನು ಕುರಿತು ಚರ್ಚಿಸಲಿಲ್ಲ. ಮಹಿಳೆಯ ದೇಹದ ಮೇಲೆ ಅವಳ ಹಕ್ಕಿನ ಕುರಿತಾಗಲಿ, ಸಂತಾನದ ಹಕ್ಕಿನ ಕುರಿತಾಗಲಿ ಚರ್ಚೆಗಳು ಕಾಣಿಸಿಕೊಳ್ಳುವುದಿಲ್ಲ. ತನ್ನ ಮಗುವಿನ ತಂದೆ ಯಾರಾಗಬೇಕೆಂದು ಹೆಣ್ಣಿನ ಆಯ್ಕೆಯ ಕುರಿತು ಪ್ರಸ್ತಾಪಗಳಾಗುವುದಿಲ್ಲ. ನಿರಂತರವಾಗಿ ಸಮಾಜ, ಕುಟುಂಬದ ನಿರ್ದೇಶನದಲ್ಲಿ ಒತ್ತೆಯಾಳಿನಂತೆ ಬದುಕುವ ಮಹಿಳೆಯ ಮೇಲಾಗುವ ಹಿಂಸೆ-ದೌರ್ಜನ್ಯಗಳಲ್ಲಿ ಪ್ರಭುತ್ವವು ಹಸ್ತಕ್ಷೇಪ ಮಾಡಿತು. ಕುಟುಂಬ ಕಲ್ಯಾಣಕ್ಕಾಗಿ, ದೇಶದ ಹಿತಕ್ಕಾಗಿರುವ ನೆಪದಲ್ಲಿ ಮಹಿಳೆಯ ಸಂತಾನಾರೋಗ್ಯದ ಮೇಲೆ ಮರಣಾಂತಿಕ ಹಲ್ಲೆಗಳು ನಡೆಯುತ್ತಿವೆ. ೧೦ನೇ ಪಂಚವಾರ್ಷಿಕ ಯೋಜನೆಗಳಲ್ಲಿ ಸೂಚಿಸಿರುವಂತೆ, ತಾಯಂದಿರ ಮರಣ ಪ್ರಮಾಣ, ಜನಸಂಖ್ಯೆ ಪ್ರಮಾಣವನ್ನು ಕಡಿಮೆ ಮಾಡುವ ಯೋಜನೆಯನ್ನು ಹೊಂದಿತ್ತು. ಆದರೆ ವಾಸ್ತವದಲ್ಲಿ ಜನಸಂಖ್ಯೆಗಿಂತ ಹೆಣ್ಣು ಸಂಕುಲದ ಸಂಖ್ಯೆ ಕಡಿಮೆಯಾಗುತ್ತಿರುವುದು ಸಾಕಷ್ಟು ಸಂಶೋಧನೆಗಳು ಸಾಬೀತುಪಡಿಸುತ್ತಿರುವುದು, ಒಟ್ಟು ಸ್ತ್ರೀ ಸಂಕುಲದ ಮೇಲಾಗುವ ಹಿಂಸೆ - ದೌರ್ಜನ್ಯದ ಘಟ್ಟವನ್ನು ಗುರುತಿಸುತ್ತದೆ.

ಹೆಚ್ಚುತ್ತಿರುವ ವಿಜ್ಞಾನ - ತಂತ್ರಜ್ಞಾನಗಳಿಂದ ಮಹಿಳೆಯ ಗರ್ಭಾಶಯವು ಶಕ್ತಿ ಕೇಂದ್ರವಾಗುವ ಬದಲು ಹೊಸ ಬಗೆಯ ಆವಿಷ್ಕಾರಗಳ ಪರಿಶೀಲನೆಯಿಂದ, ಗರ್ಭಾಶಯುವನ್ನು ಪ್ರಯೋಗಾಲಯವಾಗಿಸಲಾಯಿತು. ಮಹಿಳೆಗೆ ಸಂತಾನದ ಅಂತರ ಮತ್ತು ಸಂತಾನದ ಮಿತಿಯ ನೆಪದಲ್ಲಿ ಅವಳ ದೇಹವನ್ನು ಬಳಸಲಾಯಿತು. ಪುರುಷ ಸಂಸ್ಕೃತಿಯಲ್ಲಿ ಈವರೆಗೂ ಶೋಧಿತವಾಗಿರುವ ಬಹುಪಾಲು ಜನನ ನಿಯಂತ್ರಣ ಸಾಧನಗಳು ಮಹಿಳೆಯ ಆರೋಗ್ಯದ ಮೇಲೆ ಮಾಡುವ ದೌರ್ಜನ್ಯದ ಪ್ರತೀಕವಾಗಿವೆ. ವ್ಯಾಸೆಕ್ಟೊಮಿಯಂತಹ ಸರಳ ಸಂತಾನ ಹರಣ ಚಿಕಿತ್ಸೆಗಳಿದ್ದರೂ, ಪುರುಷನಿಗೆ ಈ ಚಿಕಿತ್ಸೆಯನ್ನು ಮಾಡುವಲ್ಲಿ ನಿರಾಕರಿಸುವಂತಹ ಸಂಗತಿಗಳನ್ನು ಸಂಪ್ರದಾಯ, ಸಂಸ್ಕೃತಿಯ ಹೆಸರಿನಲ್ಲಿ ರೂಪಿಸಲಾಯಿತು. ಮಹಿಳೆಯ ದೇಹದಲ್ಲಿ ಸಂತಾನ ನಿಯಂತ್ರಣದಂತಹ ಸಾಧನಗಳ ಅಳವಡಿಕೆ ಅವಳ ದೇಹದ ಮೇಲಿನ ಹಿಂಸೆ - ದೌರ್ಜನ್ಯಗಳಿಗೆ ಪೂರಕವಾಯಿತು. ದೇಶದ ಜನಸಂಖ್ಯೆಯ ಹೆಸರಿನಲ್ಲಿ ಪ್ರಭುತ್ವವೇ ಮಹಿಳೆಯರ

ವಿರುದ್ಧ ದೌರ್ಜನ್ಯಗಳನ್ನು ನಡೆಸುತ್ತಿದೆ. ವಾಸ್ತವದ ಸಂದರ್ಭದಲ್ಲಿ ಒಬ್ಬ ಪುರುಷನಿಂದ ಜನಸಂಖ್ಯೆಯು ಹೆಚ್ಚಾಗುವುದೊ? ಅಥವಾ ಮಹಿಳೆಯಿಂದಲೋ? ಎಂಬ ಪ್ರಶ್ನೆಗಳಿಗೆ ಉತ್ತರವಾಗಿ, ಸಂತಾನ ಹರಣ ಚಿಕಿತ್ಸೆಗೊಳಪಡಬೇಕಾದವರು ಯಾರು? ಎಂಬ ಪ್ರಶ್ನೆಗಳನ್ನು ಹಾಕಿಕೊಂಡರೆ, ವಾಸ್ತವದಲ್ಲಿನ ವಿಪರ್ಯಾಸವು ತಿಳಿದು ಬರುತ್ತದೆ. ಈ ನಿಟ್ಟಿನಲ್ಲಿ ಮಹಿಳೆಯರ ಸಂತಾನಾರೋಗ್ಯದ ಮೇಲೆ ನಡೆಯುತ್ತಿರುವ ದೌರ್ಜನ್ಯ-ಹಿಂಸೆಯು ಹೊಸದೇನಲ್ಲ. ಇಚ್ಛಾನುಸಾರಿಯಾಗಿ ಬಳಸುವಲ್ಲಿ ಮಹಿಳೆಗೆ ವರದಾನವಾಗಬೇಕಾದ ಸಂತಾನ ನಿಯಂತ್ರಣದ ಶೋಧಗಳು ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ದೌರ್ಜನ್ಯದ ಆಯುಧವಾಗುತ್ತಿದೆ. 'ಡೆವೋ ಪ್ರಾವೆರಾ' ಎಂಬ ಸಂತಾನ ನಿಯಂತ್ರಕ ಸೂಜಿ ಮದ್ದಿನ ಬಳಕೆ, ಗರ್ಭಕೋಶದ ಹಾಗೂ ಸ್ತನಗಳ ಕ್ಯಾನ್ಸರಿಗೆ ದಾರಿ ಮಾಡುತ್ತದೆಂದು ಸ್ವತಃ ಅಮೇರಿಕಾ ಮತ್ತಿತರ ಅಭಿವೃದ್ಧಿಶೀಲ ಬಂಡವಾಳಶಾಹಿ ರಾಷ್ಟ್ರಗಳು ಅದನ್ನು ನಿಷೇಧಿಸಿದವು. ಆದರೆ ಇದನ್ನೇ ಬಿಳಿಯರ ಸರ್ಕಾರ ದಕ್ಷಿಣ ಆಫ್ರಿಕಾದಲ್ಲಿ ಕರಿಯರ ಮೇಲೆ, ಹೆಂಗಸರ ಮೇಲೆ ಬಲವಂತವಾಗಿ ಹೇರಳವಾಗಿ ಬಳಸಿತು (ಉಲ್ಲೇಖ: ಸ್ತ್ರೀವಾದಿ ಪ್ರವೇಶಿಕೆ).[೫]

ಸರ್ಕಾರವೇ ನಿಷೇಧಿತ ಸೂಜಿಮದ್ದನ್ನು ಹೆಂಗಸರ ಮೇಲೆ, ದಕ್ಷಿಣ ಆಫ್ರಿಕಾದ ಕರಿಯರ ಮೇಲೆ ಪ್ರಯೋಗಿಸಿರುವುದು ಅಧೀನ ನೆಲೆಯಲ್ಲಿರುವ ಸಮುದಾಯದ ಮೇಲಿನ ಹಿಂಸೆ - ದೌರ್ಜನ್ಯವನ್ನು ಪ್ರತಿನಿಧಿಸುತ್ತದೆ.

ಹಾಗೆಯೇ ಮೊದಮೊದಲು ಮಲೇರಿಯಾ ಔಷಧಿಯಾಗಿ ಬಳಕೆಗೊಂಡ "ಕ್ವಿನ್‌ಕ್ರೈನ್"ನ್ನು ೬೦ರ ದಶಕದ ಅಂತ್ಯ ಮತ್ತು ೭೦ರ ದಶಕದ ಪ್ರಾರಂಭದಲ್ಲಿ 'ಜೈಮ್‌ಸ್ಟರ್' ಎನ್ನುವ ವಿಜ್ಞಾನಿ. ಗರ್ಭ ನಿರೋಧಕವಾಗಿ, ಮಹಿಳೆಯರ ಗರ್ಭನಾಳದಲ್ಲಿ ತಡೆಯಂತೆ ವರ್ತಿಸುವ ಸಾಮರ್ಥ್ಯ ಇದಕ್ಕಿದೆಯೆಂದು ವರದಿಯನ್ನು ಹೊರಡಿಸಿದರು. ಈಗಾಗಲೇ ೧೯೯೧ರ ವಿಶ್ವ ಆರೋಗ್ಯ ಸಂಸ್ಥೆಯ ವಿಷವಿಜ್ಞಾನದ (Toxicalogy) ಪ್ಯಾನಲ್ ವರದಿಯು ಕ್ವಿನಕ್ರೈನ್ ಬ್ಯಾಕ್ಟೀರಿಯಾ ಭೌತ ವ್ಯವಸ್ಥೆಯಲ್ಲಿ ಉತ್ಪರಿವರ್ತನಕ್ಕೆ ಕಾರಣವಾಗುವ ನಿಯೋಗಿಯಾಗಿದೆ. ಇದಕ್ಕೆ ಸಸ್ತನಿಗಳ ಭೌತ ವ್ಯವಸ್ಥೆಯಲ್ಲಿ ನಿದರ್ಶನಗಳಿರುವುದುಂಟು. ಪ್ರಾಣಿಗಳಲ್ಲಿ ಇದರ ಕ್ಯಾನ್ಸರ್ ತರುವ ಸಾಮರ್ಥ್ಯದ ಬಗ್ಗೆ ಖಚಿತ ಮಾಹಿತಿ ಇಲ್ಲ. ಆದರೆ ಮನುಷ್ಯರಲ್ಲಿ ಕ್ಯಾನ್ಸರ್ ತರುವುದೆನ್ನುವುದಕ್ಕೆ ಕೆಲ ದಾಖಲೆಗಳಿವೆ (ಉಲ್ಲೇಖ: ಮಾನಸ, ಜುಲೈ-ಆಗಸ್ಟ್, ೧೯೯೭)[೬]ಯೆಂಬ ಸಂಗತಿಯನ್ನು ಮನಗಂಡ ಮೇಲೂ ಭಾರತೀಯ ವೈದ್ಯಕೀಯ ಸಂಶೋಧನಾ ಪರಿಷತ್ತು (ICMR) ೧೯೯೩-೯೪ರಲ್ಲಿ ಹೆಂಗಸರ ಮೇಲೆ ನಡೆಸಿದ ಎರಡನೇ ಹಂತದ ಕ್ಲಿನಿಕಲ್ ಟ್ರಯಲ್ಸ್‌ನಲ್ಲಿ ಶೇ. ೫೦ರಷ್ಟು ಅಸಾಫಲ್ಯತೆ ಕಂಡು ಬಂತು. ಹೀಗೆ ವಿಷಮಕಾರಿ ವಸ್ತುವೆಂದು ಸಾಬೀತಾದ ಮೇಲೂ ಅದನ್ನು ಮಹಿಳೆಯರ ಸಂತಾನ ನಿಯಂತ್ರಣ ಸಾಧನವಾಗಿ ಬಳಸಿರುವುದು, ಅವಳ ಪ್ರಾಣಕ್ಕಿಂತ, ದೇಶದ ಜನಸಂಖ್ಯೆಯ ನಿಯಂತ್ರಣವೇ ಪ್ರಮುಖ ಸಂಗತಿಯಾಗಿ ಪ್ರಭುತ್ವಕ್ಕೆ ಗೋಚರಿಸಿರುವುದು ವಿಷಾದನೀಯ. ಮಹಿಳೆಯರ ಆರೋಗ್ಯದ ಮೇಲಾಗುತ್ತಿರುವ ದೌರ್ಜನ್ಯ-ಹಿಂಸೆಗಳಿಗೆ ಇದಕ್ಕಿಂತ ಸೂಕ್ತವಾದ ಇನ್ನೊಂದು ಉದಾಹರಣೆಯಿರದೆನ್ನಬಹುದು.

ಈ ಬಗೆಯ ಅಮಾನವೀಯ ಆಕ್ರಮಣಗಳು ಮಹಿಳಾ ಆರೋಗ್ಯದ ಮೇಲೆ ನಡೆಯುತ್ತಿರುವುದಕ್ಕೆ, ವ್ಯವಸ್ಥೆಯಲ್ಲಿ ರೂಪಿತವಾಗಿರುವ ಕಾನೂನುಗಳು ಹೇಗೆ ಪೂರಕವಾಗಿವೆ ಎಂಬುದಕ್ಕೆ ಇಲ್ಲಿ ಈ ಕಾನೂನುಗಳನ್ನು ಸಾಂದರ್ಭಿಕ ಚರ್ಚೆಗೆ ತರಲಾಗುತ್ತಿದೆ.

**ವೈದ್ಯಕೀಯ ಗರ್ಭಪಾತ (ಎಂ.ಟಿ.ಪಿ) ಕಾಯ್ದೆ-೧೯೭೪**

ಅಂಡಾಣು ಮತ್ತು ವೀರ್ಯಾಣುವು ಬೆರೆತು ಜೀವ ತಳೆಯಬೇಕಾದ ಮಗು ಯಾವುದೇ ಕಾರಣದಿಂದಲಾದರೂ, ತಾಯ ಗರ್ಭದಿಂದ ಹೊರಬರುವ ಮೊದಲೆ ಛಿದ್ರವಾಗಿ ಗರ್ಭಧಾರಣೆಯ ಪ್ರಕ್ರಿಯೆಯು ನಿಷ್ಪಲವಾಗುವುದೇ ಗರ್ಭಪಾತ. ಈ ಬಗೆಯ ಗರ್ಭಪಾತವನ್ನು ಕಾನೂನು ಬದ್ಧವಾಗಿ ಮಾಡಬೇಕೆಂಬ ಉದ್ದೇಶದಿಂದ ಎಂ.ಟಿ.ಪಿ ಕಾಯ್ದೆಯು ಜಾರಿಗೊಳಿಸಲಾಯಿತು. ಈ ಕಾಯ್ದೆಯು ಶಾಸನಬದ್ಧವಾದರೂ ಸಹ ಕೆಲವು ನಿಬಂಧನೆಗಳನ್ನು ಇದು ಹೊಂದಿದೆ. ಕೇವಲ ಮೂರು ಬಗೆಯ ಸಂದರ್ಭಗಳಲ್ಲಿ ಕಾನೂನುಬದ್ಧವಾಗಿ ಗರ್ಭಪಾತವನ್ನು ಮಾಡಿಸಬಹುದಾಗಿದೆ.

೧. ತಾಯಿ ಮತ್ತು ಮಗುವಿನ ಆರೋಗ್ಯಕ್ಕೆ ಹಾನಿಯಾಗುವಂತಿದ್ದರೆ, ಉದಾ: ತಾಯಿಗಿರುವ ಏಡ್ಸ್, ಹೈಬಿಪಿ, ಸಕ್ಕರೆ ರೋಗ ಇತ್ಯಾದಿ ವಾಸಿಮಾಡದಂತಹ ಸಾಂಕ್ರಾಮಿಕ ಕಾಯಿಲೆಯಿದ್ದಾಗ.

೨. ಮಹಿಳೆಯ ಮೇಲೆ ಅತ್ಯಾಚಾರ ನಡೆದಂತಹ ಸಂದರ್ಭದಿಂದಾಗಿ ಗರ್ಭಧಾರಣೆಯಾಗಿದ್ದರೆ,

೩. ಕುಟುಂಬ ಯೋಜನೆಯ ವಿಧಾನವನ್ನು ಅಳವಡಿಸಿಕೊಂಡ ಹಂತದಲ್ಲಿ ವೈಫಲ್ಯವಾಗಿ ಗರ್ಭಿಣಿಯಾಗಿದ್ದರೆ.

ಈ ಮೂರು ಸಂದರ್ಭಗಳಲ್ಲಿ ಮಾತ್ರ ಗರ್ಭಪಾತ ಮಾಡಿಸಿಕೊಳ್ಳಬಹುದೆಂಬಂತೆ ಕಾನೂನನ್ನು ರೂಪಿಸಲಾಗಿದೆ. ಈ ರೀತಿಯ ಗರ್ಭಪಾತದ ಪೂರ್ವದಲ್ಲಿ ಅನಾರೋಗ್ಯಕರ ಮಗುವನ್ನು ಪತ್ತೆ ಹಚ್ಚಲು ವೈದ್ಯವಿಜ್ಞಾನವು ಅಮ್ನಿಯೋ ಸಿಂಥೆಸಿಸ್, ಸ್ಕ್ಯಾನಿಂಗ್‌ಗಳಂತಹ ಅನುಕೂಲಗಳನ್ನು ಶೋಧಿಸಿದೆ. ಆದರೆ ಇದರಿಂದ ಲಿಂಗಪತ್ತೆಯಾಗುವುದು. ಹಾಗಾಗಿ ಪಿತೃ ಸಂಸ್ಕೃತಿಯಲ್ಲಿ ಹಿಂಸೆ - ದೌರ್ಜನ್ಯ ಅಸ್ತ್ರವಾದ ಈ ತಂತ್ರಜ್ಞಾನದಿಂದ ಸ್ತ್ರೀ ಸಂಕುಲವೇ ಇನ್ನಿಲ್ಲವಾಗುತ್ತಿದೆ. ಇದಕ್ಕೆ ಪೂರಕವಾಗಿ ಕಾನೂನಿನ ದುರುಪಯೋಗವಾಗುತ್ತಿದೆ. ಹೀಗೆ ಮಹಿಳೆಯ ಅನುಕೂಲಕ್ಕಾಗಿ ಬಳಕೆಯಬೇಕಾದ ಕಾನೂನು, ವೈದ್ಯಕೀಯ ಸಂಶೋಧನೆಗಳು ವ್ಯವಸ್ಥೆಯಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಕ್ಕೆ ಬಳಕೆಯಾಗುತ್ತಿವೆ.

ಸಾಕಷ್ಟು ವಿಶಾಲವಾದ ವ್ಯಾಪ್ತಿಯನ್ನು ಹೊಂದಿರುವ ಆರೋಗ್ಯ ವಲಯದಲ್ಲಿ ನಡೆಯುವ ದೌರ್ಜನ್ಯವನ್ನು ಸ್ಥೂಲವಾಗಿ ಚರ್ಚಿಸಲಾಗಿದೆ. ಈ ನಿಟ್ಟಿನಲ್ಲಿ ಕೆಲವು ಆರೋಗ್ಯ ಸಂಬಂಧಿ ಯೋಜನೆಗಳು ಮತ್ತು ಕಾಯ್ದೆಗಳನ್ನಾಧರಿಸಿ ಆರೋಗ್ಯ ವಲಯದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಚರ್ಚಿಸುತ್ತ ಸಾರ್ವಜನಿಕ ವಲಯದಲ್ಲಿ ಇದರ ಅಗಾಧತೆಯ ಪ್ರಮಾಣ ಹಾಗೂ ದೇಶವನ್ನು ರಕ್ಷಿಸಬೇಕಾದ ಪ್ರಭುತ್ವವೇ ಕುಟುಂಬ ಯೋಜನೆಯ ನೆಪದಲ್ಲಿ ಮಹಿಳಾ ಅಸ್ತಿತ್ವವನ್ನು ಕಡೆಗಣಿಸುವ ಹಿನ್ನೆಲೆಯಲ್ಲಿ

ಮಹಿಳೆಯರ ಮೇಲಾಗುವ ಆಕ್ರಮಣಗಳನ್ನು ಸಂತಾನಾರೋಗ್ಯವನ್ನು ಪ್ರಮುಖವಾಗಿಸಿಕೊಂಡು ಚರ್ಚಿಸಲಾಗಿದೆ.

ಆರೋಗ್ಯ ವಲಯದಷ್ಟೇ ಪ್ರಮುಖವಾಗಿ ನಿಲ್ಲುವ ಶೈಕ್ಷಣಿಕ ವಲಯದಲ್ಲಿನ ದೌರ್ಜನ್ಯಗಳನ್ನು ಗ್ರಹಿಸುವುದು ಬಹು ಅಗತ್ಯದ ಸಂಗತಿಯಾಗಿದೆ.

**೩.೩. ಶೈಕ್ಷಣಿಕ ವಲಯ**

ಅಭಿವೃದ್ಧಿಯೆನ್ನುವುದು ಸಮಾಜದಲ್ಲಿರುವ ಎಲ್ಲ ವ್ಯಕ್ತಿಗಳ ಸಮಾನ ಪಾಲ್ಗೊಳ್ಳುವಿಕೆಯು ಅಭಿವೃದ್ಧಿಯೆಂದು ಹೇಳಬಹುದು. ಒಂದು ದೇಶದ ಅಭಿವೃದ್ಧಿಯನ್ನು ವ್ಯಾಖ್ಯಾನಿಸಬೇಕಾದರೆ, ಅಲ್ಲಿನ ಸ್ತ್ರೀ-ಪುರುಷರ ಸಮ ಪ್ರಮಾಣದ ಪ್ರಗತಿಯನ್ನು ಆಧರಿಸಬೇಕಾದುದು ಅವಶ್ಯಕವಾದುದು. ಈ ಬಗೆಯ ಅಭಿವೃದ್ಧಿಗೆ ಶೈಕ್ಷಣಿಕ ವಲಯವು ಬೆನ್ನೆಲುಬಾಗಿದೆ. ವ್ಯಕ್ತಿಯ ಬದುಕಿನ ರೂಪಿಕೆಯಲ್ಲಿ ಶಿಕ್ಷಣವು ಬಹುಮುಖ್ಯ ಪಾಲನ್ನು ಪಡೆಯುತ್ತದೆ. ಪ್ರಸ್ತುತ ಅಂಶದಲ್ಲಿ ಶಿಕ್ಷಣದ ವ್ಯಾಖ್ಯಾನ, ಮಹಿಳಾ ಶಿಕ್ಷಣದ ಅಗತ್ಯತೆ, ಸ್ವರೂಪಗಳನ್ನು ವಿಶ್ಲೇಷಣೆಗೊಳಪಡಿಸುತ್ತಾ ಶೈಕ್ಷಣಿಕ ವಲಯದಲ್ಲಿ ಮಹಿಳೆಯರ ವಿರುದ್ಧ ನಡೆಯುವ ಹಿಂಸೆ - ದೌರ್ಜನ್ಯದ ಸ್ವರೂಪವನ್ನು ಚರ್ಚಿಸಲಾಗುತ್ತಿದೆ.

ರವೀಂದ್ರನಾಥ ಟ್ಯಾಗೂರರ ಪ್ರಕಾರ ಆತ್ಮ ಪ್ರಕಾಶ ಮತ್ತು ಪ್ರೇಮಗಳೆಂಬ ಸ್ಥಿರಸಂಪತ್ತನ್ನು ತಂದುಕೊಟ್ಟು ಮಗುವನ್ನು ಸತ್ಯ ಸಂದ ಸುಂದರ ಯೋಗ್ಯ ವ್ಯಕ್ತಿಯನ್ನಾಗಿ ಮಾಡುವುದೇ ಶಿಕ್ಷಣವಾಗಿದೆ. ಎಂದರೆ, ಮಾನವನಲ್ಲಿ ಆಗಲೇ ಇರುವ ಪರಿಪೂರ್ಣತೆಯನ್ನು ಪ್ರಕಟಪಡಿಸುವುದೇ 'ಶಿಕ್ಷಣ'ವೆಂದಿದ್ದಾರೆ ಸ್ವಾಮಿ ವಿವೇಕಾನಂದರು. ಈ ವ್ಯಾಖ್ಯಾನಗಳು ಮೇಲ್ನೋಟದಲ್ಲಿ ಲಿಂಗನಿರಪೇಕ್ಷ ನೆಲೆಯಲ್ಲಿ ಹೇಳಲಾಗಿದೆಯೆಂದರೂ ಸಹಿತ, ಇವುಗಳೊಳಗಡೆಯೇ ಲಿಂಗಭೇದವು ಮನೆ ಮಾಡಿರುತ್ತದೆ. ಮಹಿಳಾ ಬದುಕಿಗೆ ಇವುಗಳನ್ನು ಅನ್ವಯಿಸಲು ಹೋರಾಟಗ ಇವುಗಳ ವೈಫಲ್ಯತೆಯೇ ಹೆಚ್ಚು ಎಂಬುದಕ್ಕೆ ಸಾಕಷ್ಟು ಸ್ತ್ರೀವಾದಿ ಚಿಂತನೆಗಳನ್ನು ಉಲ್ಲೇಖಿಸಬಹುದಾಗಿದೆ.

ಶಿಕ್ಷಣದ ಕುರಿತ ಚರ್ಚೆಯೊಂದನ್ನು ಆರಂಭಿಸಿದಾಗ ಬಹುಮುಖ್ಯವಾಗಿ ಅದನ್ನು ಔಪಚಾರಿಕ ಮತ್ತು ಅನೌಪಚಾರಿಕ ಶಿಕ್ಷಣವೆಂದು ವಿಭಾಗಿಸಬಹುದಾಗಿದೆ. ಈ ಎರಡು ಸಂಗತಿಗಳಲ್ಲಿಯೂ ಪುರುಷ ಬದುಕಿನ ರೂಪಿಕೆಯನ್ನಾಧರಿಸಿದ ಶೈಕ್ಷಣಿಕ ಸಂಗತಿಗಳಿವೆಯೇ ವಿನಃ ಮಹಿಳಾ ಬದುಕನ್ನಾಧರಿಸಿದ್ದಲ್ಲ. ಸಮಾಜ ಅಭಿವೃದ್ಧಿಗಾಗಿ ಪುರುಷ ಶೈಕ್ಷಣಿಕ ಸಬಲೀಕರಣದಷ್ಟೇ ಆದ್ಯತೆ ಮಹಿಳಾ ಶಿಕ್ಷಣಕ್ಕೂ ಒದಗಿದಾಗ ಮಾತ್ರ ಸಮಗ್ರ ಅಭಿವೃದ್ಧಿ ಸಾಧ್ಯ. ಈ ಹಿನ್ನೆಲೆಯಲ್ಲಿ ಮಹಿಳಾ ಶಿಕ್ಷಣದ ಅಗತ್ಯತೆಯನ್ನು ಗುರುತಿಸಬಹುದು.

ಮಹಿಳಾ ಶಿಕ್ಷಣದ ಪ್ರಸ್ತಾಪವು ಬಂದ ತಕ್ಷಣವೇ ಪ್ರಾಚೀನ ಕಾಲ, ಮಧ್ಯಕಾಲ ಮತ್ತು ಆಧುನಿಕ ಕಾಲಘಟ್ಟಗಳಲ್ಲಿ ವಿಭಜಿಸಿಕೊಳ್ಳುವ ಮೂಲಕ ಪ್ರಾಚೀನಕಾಲದ ಗಾರ್ಗಿಯಿ, ಮೈತ್ರಿಯಿ ಎಂಬಿತ್ಯಾದಿ ಮತ್ತು ಮೀರಾ, ಮಹಾದೇವಿಯಕ್ಕ, ಕಲಕಾರಿಮ್ಮೆಯವರನ್ನು ಮುಂದಿನ ಅವಧಿಯಲ್ಲಿ ಗುರುತಿಸಿ

ಮಹಿಳೆಯರಿಗೆ ಶೈಕ್ಷಣಿಕ ವಲಯದಲ್ಲೂ ಸಮಪಾಲಿದೆಯೆಂಬುದನ್ನು ಪುರುಷ ಸಂಸ್ಕೃತಿಯು ಸ್ಪಷ್ಟವಾಗಿ ಬಿಂಬಿಸುತ್ತದೆ. ಈ ಕೆಲವು ಮಹಿಳೆಯರ ಉದಾಹರಣೆಗಳು ಬಹುಶಃ ಮಹಿಳಾ ಶಿಕ್ಷಣವನ್ನು ಕುರಿತು ಪ್ರತಿನಿಧಿಸುವ ಮಹತ್ತರ ಸಂಗತಿಗಳೇನು ಕಾಣಿಸಿಕೊಳ್ಳುವುದಿಲ್ಲವೆಂದೇ ಹೇಳಬಹುದು. ಅಲ್ಲದೆ ರಾಜಕುಮಾರಿಯರ ಶಿಕ್ಷಣವನ್ನು ಪ್ರತಿನಿಧಿಸಲಾಗುತ್ತದೆ. ಆದರೆ ಇವರುಗಳ ಶೈಕ್ಷಣಿಕ ಹಿನ್ನೆಲೆಯನ್ನು ಗಮನಿಸಿದಾಗ ಅದು ಸಾಂಪ್ರದಾಯಿಕ ಮಾದರಿಯಾಚೆಗೆ ಸಾಗಿಲ್ಲವೆಂಬುದು ಗಮನಾರ್ಹ.

ಈ ಬಗೆಯಲ್ಲಿ ಶೈಕ್ಷಣಿಕ ವಲಯಕ್ಕೆ ಮಹಿಳೆಯು ಮುಖಾಮುಖಿಯಾದದ್ದು ೧೮೧೩ರ ಚಾರ್ಟರ್ ಕಾಯ್ದೆ ಮತ್ತು ೧೮೨೪ರಲ್ಲಿ ಅಮೆರಿಕನ್ ಮಿಶನ್ ಸಂಸ್ಥೆಯು ರೂಪಿಸಿಕೊಂಡ ಕಾರ್ಯ ಯೋಜನೆಯ ಪ್ರತಿಫಲವೇ ಎನ್ನಬಹುದು. ಆನಂತರದಲ್ಲಿ ೧೮೫೧ರಲ್ಲಿ ಈಶ್ವರಚಂದ್ರ ವಿದ್ಯಾಸಾಗರ ಅವರು ಬಾಲಿಕಾ ವಿದ್ಯಾಲಯವನ್ನು ಆರಂಭಿಸಿದರು. ಮುಂದುವರೆದಂತೆ ೧೮೪೮ರಲ್ಲಿ ಜ್ಯೋತಿ ಬಾಪುಲೆಯವರು ಕನ್ಯಾಶಾಲೆ, ೧೮೫೧ರಲ್ಲಿ ದಲಿತ ಮಹಿಳೆಗಾಗಿ ಮೊದಲ ಬಾರಿಗೆ ಶಾಲೆಯನ್ನು ಆರಂಭಿಸಲಾಯಿತು. ೧೯೦೭ರಲ್ಲಿ ಮಹರ್ಷಿಕರ್ವೆಯವರು ಮಹಿಳಾ ವಿಶ್ವವಿದ್ಯಾಲಯವನ್ನು ಪುಣೆಯಲ್ಲಿ ಸ್ಥಾಪಿಸಿದರು. ಹೀಗೆ ಅನಿಬೆಸೆಂಟ್, ಸಾವಿತ್ರಿಬಾಯಿ ಫುಲೆ, ವಿಮಲಾ ರಣದಿವೆಯಂತಹ ಮಹಿಳೆಯರು ಮಹಿಳಾ ಶಿಕ್ಷಣದ ಕುರಿತು ಕಾರ್ಯನಿರ್ವಹಿಸಿದರು. ೧೯೫೧ ರಿಂದ ೨೦೦೧ ಈವರೆಗಿನ ಮಹಿಳಾ ಸಾಕ್ಷರತಾ ಪ್ರಮಾಣವನ್ನು ಈ **ಕೋಷ್ಟಕ : ೧**ರಲ್ಲಿ ಗಮನಿಸಬಹುದು.

**ಭಾರತದಲ್ಲಿ ಸ್ತ್ರೀ-ಪುರುಷರ ಶೇಕಡಾವಾರು ಸಾಕ್ಷರತಾ ಪ್ರಮಾಣ**

| ವರ್ಷ | ಮಹಿಳೆ | ಪುರುಷ | ದೇಶದ ಶೇಕಡಾವಾರು ಸಾಕ್ಷಾರತಾ ಪ್ರಮಾಣ |
|---|---|---|---|
| ೧೯೫೧ | ೮.೮೬ | ೨೭.೧೬ | ೧೮.೩೩ |
| ೧೯೬೧ | ೧೫.೩೪ | ೪೦.೪೦ | ೨೮.೩೧ |
| ೧೯೭೧ | ೨೧.೯೭ | ೪೫.೯೫ | ೩೪.೪೫ |
| ೧೯೮೧ | ೨೮.೪೬ | ೫೩,೪೫ | ೪.೪೭ |
| ೧೯೯೧ | ೩೯.೨೯ | ೬೪೧೩ | ೫೨.೨೧ |
| ೨೦೦೧ | ೫೪.೧೬ | ೭೫.೮೫ | ೬೫.೩೮ |

**ಮೂಲ : ೨೦೦೧ರ ಜನಗಣತಿ, ಪು.ಸಂ. ೨೫೨.**

ಈ ಮೇಲೆ ದಾಖಲಿಸಿದಂತೆ ದೇಶದಲ್ಲಿ ೧೯೫೧-೨೦೦೧ರವರೆಗಿನ ಸಾಕ್ಷರತಾ ಪ್ರಮಾಣವನ್ನು ಗಮನಿಸಿದರೆ, ದಶಕದಿಂದ-ದಶಕಕ್ಕೆ ಮಹಿಳೆಯರ ಸಂಖ್ಯೆ ಪ್ರಗತಿಯಲ್ಲಿರುವುದು ಕಂಡು ಬರುತ್ತದೆ.

ಪುರುಷಾನುಪಾತಕ್ಕೆ ಹೋಲಿಸಿದಾಗ ಇನ್ನು ಸಾಕಷ್ಟು ಪ್ರಮಾಣದಲ್ಲಿನ ಅಭಿವೃದ್ಧಿಯನ್ನು ಮಹಿಳಾ ಶಿಕ್ಷಣವು ಬಯಸುತ್ತದೆ. ಕಳೆದ ಹಲವಾರು ವರ್ಷಗಳಿಂದಲೂ ಮಹಿಳಾ ಶಿಕ್ಷಣದ ಕುರಿತು ಚರ್ಚೆಗಳು, ಚಿಂತನೆಗಳು, ಯೋಜನೆಗಳು ಜಾರಿಯಾಗುತ್ತಲೇ ಇವೆಯಾದರೂ, ಮಹಿಳೆಯ ಅಸ್ತಿತ್ವ ರೂಪಿಕೆಯಲ್ಲಿ ಇದೆಲ್ಲವೂ ಸಹಕಾರಿಯಾಗದೇ ಟೊಳ್ಳು ಪ್ರಯತ್ನಗಳಾಗುತ್ತಿವೆ. ಮಹಿಳೆಯರಲ್ಲಿ ಆತ್ಮವಿಶ್ವಾಸವನ್ನು ಹೆಚ್ಚಿಸುವಲ್ಲಿ ಸಾಕಷ್ಟು ಕೊರತೆಗಳಾಗುತ್ತಿವೆ. ಈ ಬಗೆಯ ಸಮಸ್ಯೆಗಳ ಮೂಲ ಯಾವುದು ಎಂಬುದನ್ನು ತಿಳಿಯಲು ಅಗತ್ಯವಾಗಿ ಮಹಿಳಾ ಶಿಕ್ಷಣದ ಈವರೆಗಿನ ಚಿಂತನೆಗಳನ್ನು ಪುನರ್‌ವ್ಯಾಖ್ಯಾನಕ್ಕೆ ಒಳಪಡಿಸಬೇಕಾಗಿದೆ.

ಇದುವರೆಗೂ ಮಹಿಳೆಯರ ಶಿಕ್ಷಣಕ್ಕಾಗಿ ರೂಪಿತವಾಗಿರುವ ಚಿಂತನಾ ಮಾದರಿಗಳು ಪುರುಷ ಪ್ರಧಾನತೆಯ ಮಾದರಿಗಳಾಗಿಯೇ ಇವೆ. ಮಹಿಳಾ ಸಬಲೀಕರಣಕ್ಕಾಗಿ ಶಿಕ್ಷಣವಾಗುವ ಬದಲು ಮಹಿಳೆಯ ಹೆಸರಿನ ಮೂಲಕ ಪುರುಷ ಸಬಲೀಕರಣವನ್ನೇ ಇದು ಬಯಸುತ್ತಿದೆ. ಮಹಿಳಾ ಶಿಕ್ಷಣವು ಅವಳ ಸಾಮರ್ಥ್ಯ ಮತ್ತು ಚಲನಶೀಲತೆಯನ್ನು ಆಧರಿಸಿ ಚಿಂತನೆಗಳ ರೂಪಿಕೆ ಅಗತ್ಯವಾಗಿದೆ. ಆದರೆ ಇತ್ತೀಚಿನ ಮಹಿಳಾ ಶಿಕ್ಷಣವು ಇದರತ್ತ ಗಮನಹರಿಸುತ್ತಿದೆಯಾದರೂ ಫಲಿತಗಳು ಲಭ್ಯವಾಗುತ್ತಿಲ್ಲ.

'ಸ್ತ್ರೀ ಶಿಕ್ಷಣ ಮಹಿಳೆಗೆ ವರದಾನ' ಎಂಬ ನುಡಿಯೇ ಶಿಕ್ಷಣ ಪಡೆಯುವ ಅವಳ ಮೂಲಭೂತ ಹಕ್ಕನ್ನು ನಿರಾಕರಿಸುತ್ತದೆ. ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಶಿಕ್ಷಣವು ಪುರುಷ ಸಂಸ್ಕೃತಿಯು ನೀಡುವ ದಾನವಾಗಿ ಪರಿಗಣಿಸಲಾಗುತ್ತದೆ. ಈ ದಾನವು ಯಾವಾಗಲೂ ಏಕಪಕ್ಷೀಯವಾಗಿರುತ್ತದೆ. ಅಂದರೆ ಕೊಡುವವರ ಇಚ್ಛೆಯನ್ನು ಆಧರಿಸಿರುತ್ತದೆಯೇ ವಿನಃ ಪಡೆದುಕೊಳ್ಳುವವರ ಅಗತ್ಯತೆಯನ್ನು ಅರಿತಿರುವುದಿಲ್ಲ. ಇಲ್ಲಿಯೂ ಸಹ ಕೊಡುವವರು ಪ್ರಧಾನರು (ಯಜಮಾನರು) - ಪಡೆಯುವವರು (ಅಧೀನರು) ಎಂಬ ಯಾಜಮಾನ್ಯತೆ ಮತ್ತು ಅಧೀನ ನೆಲೆಯನ್ನು ಪ್ರತಿಷ್ಠಾಪಿಸುತ್ತದೆ.

ಈ ಸಂಗತಿಯನ್ನಾಧರಿಸಿ ಮಹಿಳಾ ಶಿಕ್ಷಣದತ್ತ ಗಮನಹರಿಸಿದಾಗ ಮಹಿಳಾ ಅಧೀನತೆಯನ್ನು ಪುನರ್‌ಸ್ಥಾಪಿಸುವುದು, ಅಧೀನ ನೆಲೆಯ ಸಮುದಾಯವು ಅದೇ ನೆಲೆಯಲ್ಲಿಯೇ ಮುಂದುವರಿಯಬೇಕೆಂಬ ಪುರುಷ ರಾಜಕಾರಣವು ಸ್ಫುಟವಾಗಿರುವುದನ್ನು ಕಾಣಬಹುದಾಗಿದೆ. ಈ ಹಿನ್ನೆಲೆಯಲ್ಲಿ ಒಟ್ಟು ಸಮಾಜ ವ್ಯವಸ್ಥೆಯಲ್ಲಿ ಆಳವಾಗಿ ಬೇರೂರಿರುವ ಪುರುಷ ಸಂಸ್ಕೃತಿಯ ಬೇರುಗಳೆ ಮಹಿಳಾ ಶಿಕ್ಷಣದ ಹಿಂದೆಯೂ ಸಹ ಪುರುಷ ಪ್ರಧಾನತೆಯ ಧೋರಣೆಯು ಬಲವಾಗಿದೆ. ಆ ಕಾರಣವಾಗಿ ಮಹಿಳೆಯರ ಶಿಕ್ಷಣದ ಪ್ರಮಾಣವು ಹೆಚ್ಚಾದಂತೆಲ್ಲ ಅವಳ ಸಬಲೀಕರಣವಾಗಬೇಕೆಂಬ, ನಿರೀಕ್ಷೆಯು ನಿರಾಸೆಯಾಗಿಯೇ ಉಳಿಯುವುದರ ಜೊತೆಗೆ ಅವಳ ಸಮಸ್ಯೆಗಳನ್ನು ನಿವಾರಿಸುವ ಬದಲು, ಹೊಸ ಆಯಾಮಗಳಲ್ಲಿ ಸಮಸ್ಯೆಯು ಸೃಷ್ಟಿಯಾಗುತ್ತಲೇ ಇವೆ. 'ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ' ಎಂಬ ಹೇಳಿಕೆಗಳೇ ಮಹಿಳಾ ಶಿಕ್ಷಣವು ಕುಟುಂಬದ ಸಬಲೀಕರಣಕ್ಕೆ, ಅದರಲ್ಲೂ ಪುರುಷ ಬದುಕಿಗೆ ಪೂರಕವೇ ಆಗಬೇಕೆಂಬ ಆಕಾಂಕ್ಷೆಯಂತೆಯೇ ಸಾಗುತ್ತಿದೆ.

ಈ ತಳಹದಿಯನ್ನು ಆಧರಿಸಿ ಮೂಡಿಬಂದ, ಮಹಿಳೆಯರಿಗಾಗಿ ರಾತ್ರಿ ಶಾಲೆ, ಉಚಿತ ಮಹಿಳಾ ಶಿಕ್ಷಣ, ಮಹಿಳಾ ವಿಶ್ವವಿದ್ಯಾಲಯಗಳ ಸ್ಥಾಪನೆ, ಸ್ತ್ರೀಶಕ್ತಿ ಕೇಂದ್ರಗಳ ಸ್ಥಾಪನೆ, ಮಹಿಳಾ ಶಿಕ್ಷಕಿಯರ ಅಗತ್ಯತೆಯ ಪ್ರತಿಪಾದನೆ, ಪಂಚವಾರ್ಷಿಕ ಯೋಜನೆಗಳು, ಸಂವಿಧಾನದಲ್ಲಿನ ಸಮಾನತೆ, ಬಾ ಬಾಲೆ ಶಾಲೆಗೆಯೆಂಬಂತಹ ಯೋಜನೆಗಳು ಸೈಕಲ್ ವಿತರಣೆ ಇತ್ಯಾದಿಗಳೆಲ್ಲವೂ ಸಹಿತ ಪುರುಷ ಹಿತಾಸಕ್ತಿಯನ್ನಾಧರಿಸಿಯೇ ರೂಪಿತವಾಗುತ್ತಿವೆ.

ಇಂದಿಗೂ ಮಹಿಳೆಯರಿಗಾಗಿ ರೂಪಿತವಾಗಿರುವ ಯೋಜನೆಗಳಲ್ಲಿ ಮಹಿಳೆಯ ಶಿಕ್ಷಣದ ಆಯಾಮಗಳನ್ನು ಶೋಧಿಸಿದಾಗ ಅವುಗಳು ಸಾಂಪ್ರದಾಯಿಕತೆಯ ಗಡಿಯನ್ನು ಮೀರಿಲ್ಲ. ಸಾಮಾಜೀಕರಣದ ಸ್ಥಿರಮಾದರಿ ಪಾತ್ರಗಳನ್ನು ಅಂತರ್ಗತಗೊಳಿಸಲಾಗುತ್ತಿದೆ. ಉದಾ:- ರಾಮನು ಅಪ್ಪನೊಂದಿಗೆ ಪೇಟೆಗೆ ಹೋದನು, ಸೀತೆಯು ಅಮ್ಮನೊಂದಿಗೆ ಮನೆ ಕೆಲಸದಲ್ಲಿ ಸಹಾಯ ಮಾಡುತ್ತಿದ್ದಳು. ಅಂದರೆ ರಾಮ-ಸೀತೆಯ ಆದರ್ಶದ ಮುಂದುವರಿಕೆ, ಎರಡನೆಯದಾಗಿ ಮತ್ತೆ ಹೆಣ್ಣುಮಗು ಗೃಹಬಂಧಿಯೇ ಎಂಬ ಅಂಶಗಳನ್ನೊಳಗೊಂಡಿರುವ ಪಠ್ಯಪುಸ್ತಕಗಳನ್ನಾಧರಿಸಿ ಮಹಿಳಾ ಸಬಲೀಕರಣ ಸಾಧಿತವಾಗುವುದಾದರೂ ಎಂತು?

ಲಿಂಗ ಪಾತ್ರಗಳ ಸ್ಥಿರೀಕರಣವನ್ನು ವಿಭಿನ್ನ ಆಯಾಮಗಳಲ್ಲಿ ಸ್ಥಾಪಿಸುತ್ತಿರುವ ಶೈಕ್ಷಣಿಕ ವಲಯದಲ್ಲಿ ಮಹಿಳೆಯರಿಗಾಗಿ ಬ್ಯೂಟಿಪಾರ್ಲರ್ ಕೋರ್ಸ್, ಫ್ಯಾಷನ್ ಡಿಸೈನಿಂಗ್ ಕೋರ್ಸ್, ಹೋಮ್‌ಸೈನ್ಸ್, ಸಂಗೀತ, ಚಿತ್ರಕಲೆ, ಕಸೂತಿ ಇತ್ಯಾದಿ ಮಹಿಳಾ ಶಿಕ್ಷಣದ ಭಾಗವಾಗುತ್ತಿದೆ. ವೈದ್ಯಕೀಯ ರಂಗ, ಮತ್ತಿತ್ಯಾದಿಗಳನ್ನು ಉದಾಹರಿಸುವುದಾದರೆ ಅಲ್ಲಿ ಬಹುಪಾಲು ಮಹಿಳೆಯರು "ಗೈನಕಾಲಜಿಸ್ಟ್"ಗಳಾಗಿರುತ್ತಾರೆ. ಹೀಗೆ ಮಹಿಳೆಗೆ ನಿರ್ದಿಷ್ಟ ಕ್ಷೇತ್ರಗಳಿಗೆ ಮಾತ್ರ ಶಿಕ್ಷಣವನ್ನು ಸ್ಥಿರೀಕರಿಸಲಾಗುತ್ತದೆ. ಅವಳ ಒಟ್ಟು ಶಿಕ್ಷಣವು ಸಹ 'ಲೈಂಗಿಕತೆ'ಯನ್ನು ಆಧರಿಸಿಯೇ ರೂಪಿತವಾಗುತ್ತಿದೆ. ಔಪಚಾರಿಕ ಶಿಕ್ಷಣವು ಬರಹವನ್ನು ಬಹುಪಾಲು ಆಧರಿಸಿರುವುದರಿಂದ ಪುರುಷ ನಿರ್ಮಿತ ಭಾಷೆಯಲ್ಲಿ, ಪುರುಷರ ಪರ ಅಂಶಗಳನ್ನೇ ಸ್ಥಿರೀಕರಿಸಲಾಗಿದೆ. ಅದನ್ನು ಬಳಸುತ್ತಲೇ ಸಾಗಬೇಕಿರುವ ಶೈಕ್ಷಣಿಕ ವಲಯವು ಇದಕ್ಕೆ ಹೊರತಲ್ಲ. ಮಹಿಳೆಯಿಂದಲೆ ಜನ್ಮ ತಳೆದಿರುವ ಕೃಷಿ ಶಿಕ್ಷಣವು ಅನೌಪಚಾರಿಕ ಶಿಕ್ಷಣದ ಭಾಗವೇ ಆಗಿದ್ದು, ಇಂದು ವಿಜ್ಞಾನ-ತಂತ್ರಜ್ಞಾನಗಳ ಬಳಕೆಯಿಂದ ಅವಳಿಗೆ ಆ ಪ್ರವೇಶವನ್ನು ನಿರಾಕರಿಸಿವೆ. ಈ ಬಗೆಯ ಪ್ರವೇಶದ ನಿರಾಕರಣೆಯೇ ಮೊದಲ ಹಂತದ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ. ಬಹುತೇಕವಾಗಿ ಮಹಿಳೆಯರು ಈ ಪ್ರವೇಶವನ್ನು ಪಡೆಯುತ್ತಿದ್ದಾರೆಂದು ಹೇಳಬಹುದಾದರೂ ಗ್ರಾಮೀಣ ಮಟ್ಟದಲ್ಲಿ ಈ ಪ್ರವೇಶ ಪ್ರಕ್ರಿಯೆಯು ತೀರಾ ನಿಧಾನಗತಿಯಲ್ಲಿದೆ. ಉದಾ:- ನ್ಯಾಷನಲ್ ಸ್ಯಾಂಪಲ್ ಸರ್ವೆಯಾಧಾರಿತ ೧೯೮೩ ರಿಂದ ೧೯೯೪ರವರೆಗಿನ ಗ್ರಾಮೀಣ ಮತ್ತು ನಗರದ ಮಹಿಳೆಯರ ಸಾಕ್ಷರತೆಯ ಪ್ರಮಾಣವನ್ನು ನೋಡಬಹುದಾಗಿದೆ.

ಕೋಷ್ಟಕ : ೨

| | ೧೯೮೩ | | ೧೯೮೮ | | ೧೯೯೪ | |
|---|---|---|---|---|---|---|
| ಸಾಕ್ಷರತಾ ಪ್ರಮಾಣ | ಗ್ರಾಮೀಣ | ನಗರ | ಗ್ರಾಮೀಣ | ನಗರ | ಗ್ರಾಮೀಣ | ನಗರ |
| ಅನಕ್ಷರಸ್ಥರು | ೮೬.೨ | ೫೬.೫ | ೮೨.೩ | ೫೧.೮ | ೨೯.೦ | ೪೪.೫ |
| ಪ್ರಾಥಮಿಕ ಹಂತ | ೧೦.೨ | ೧೭.೭ | ೧೨.೦ | ೧೯.೦ | ೧೩.೭ | ೧೭.೭ |
| ಮಾಧ್ಯಮಿಕ ಹಂತ | ೨.೧ | ೬.೧ | ೧೩.೨ | ೭.೩ | ೩.೯ | ೮.೧ |
| ಪ್ರೌಢ ಹಂತ | ೧.೨ | ೧೧.೬ | ೨.೦ | ೧೨.೩ | ೨.೭ | ೧೫.೩ |
| ಪದವಿ ಹಂತ | ೦.೩ | ೮.೦ | ೦.೪ | ೯.೬ | ೦.೨ | ೩೪.೬ |

ಈ ಮೇಲಿನ ಕೋಷ್ಟಕದಲ್ಲಿ ಗ್ರಾಮೀಣ ಮಹಿಳೆಯರು ಪ್ರೌಢ ಹಂತ ಮತ್ತು ಪದವಿ ಹಂತದಲ್ಲಿ ತೀರಾ ಕಡಿಮೆ ಪ್ರಮಾಣದಲ್ಲಿ ಕಾಣಿಸಿಕೊಳ್ಳುತ್ತಾರೆ. ಮಹಿಳೆಯ ಕುರಿತ ಸಾಮಾಜಿಕ ನಿರ್ವಚನವು ಲೈಂಗಿಕತೆಯನ್ನಾಧರಿಸಿದ್ದ, ಪ್ರೌಢ ಶಿಕ್ಷಣದ ಪ್ರವೇಶ ಮತ್ತು ಅವಳು ಋತುಮತಿಯಾಗುವ ವಯಸ್ಸು ಒಂದೇ ಸಮಯವನ್ನು ಹೋಲುವುದರಿಂದ ಆಗುತ್ತದೆ. ಈ ಹಂತದಿಂದಲೆ ಶೈಕ್ಷಣಿಕ ವಲಯದಿಂದ ನಿರಾಕೃತರಾಗುತ್ತಾರೆ. ಹೀಗೆ ಮಹಿಳೆ ಪ್ರಾಥಮಿಕ ಹಂತದ ಶೈಕ್ಷಣಿಕ ವಲಯದ ಪ್ರವೇಶವನ್ನು ಪಡೆದರು, ಅದು ಮುಂದುವರೆಯಲ್ಲಿ ಕೌಟುಂಬಿಕ ಕಾರಣಗಳು, ಸಾಮಾಜಿಕರಣಗಳು ಅವಳ ದೈಹಿಕತೆಯನ್ನು ಆಧರಿಸಿಯೇ ಹೊರಡುವುದರಿಂದ, ಪುರುಷ ಸಂಸ್ಕೃತಿಯ ನಿಯಂತ್ರಣದಡಿಯಲ್ಲಿ ಬದುಕಬೇಕಾದ ಅವಳು ಶಿಕ್ಷಣದಿಂದ ವಂಚಿತಳಾಗುತ್ತಾಳೆ. ಈ ಬಗೆಯ ಮೊದಲ ಹಂತದ ನಿಯಂತ್ರಣವು ಹಿಂಸೆ - ದೌರ್ಜನ್ಯದ ಮೊದಲ ಹಂತವೆಂದು ಗುರುತಿಸಬಹುದಾಗಿದೆ. ಈ ಪರಿಣಾಮವು ಆಯಾ ಪ್ರದೇಶಕ್ಕನುಗುಣವಾಗಿ ಭಿನ್ನವಾಗಿ ನಿಲ್ಲುವುದರಿಂದ, ಗ್ರಾಮೀಣ ಮಹಿಳೆಯರು ಇದಕ್ಕೆ ಹೆಚ್ಚು ಬಲಿಯಾಗುತ್ತಾರೆ. ಹೀಗೆ ಲಿಂಗಶ್ರೇಣೀಕರಣವೂ ವಿವಿಧ ಜಾತಿ, ವರ್ಗಶ್ರೇಣೀಕರಣದಲ್ಲಿ ಸಮ್ಮಿಲಿತವಾಗಿರುವುದರಿಂದ ಲಿಂಗಾಧಾರಿತ ದೌರ್ಜನ್ಯದ ಪರಿಣಾಮವು ಭಿನ್ನವಾಗಿ ನಿಲ್ಲುತ್ತದೆ.

ಈ ಬಗೆಯ ಶೈಕ್ಷಣಿಕ ವಲಯದಿಂದ ಮಹಿಳೆಯನ್ನು ಬಹು ಶತಮಾನಗಳಿಂದಲೂ ದೂರವೇ ಇರಿಸಲಾಗಿತ್ತು. ಆದರೆ ತೀರ ಇತ್ತೀಚಿನ ಸಂದರ್ಭಗಳಲ್ಲಿ ಈ ಪ್ರವೇಶ ಪ್ರಕ್ರಿಯೆಯು ಸರಳವಾಗಿದೆ, ಹೆಚ್ಚಾಗಿದೆಯೆಂಬುದನ್ನು ಈ ಮೇಲೆ ಸೂಚಿಸಿದ ಎರಡು ಕೋಷ್ಟಕಗಳು ಹುಸಿಗೊಳಿಸುತ್ತವೆ. ಹಂತ ಹಂತವಾಗಿ ಮಹಿಳೆಯರು ಶಾಲಾ ಬಿಡುವಿಕೆಯತ್ತ ಮುಖ ಮಾಡಬೇಕಾಗಿ ಬರುತ್ತೆ. ಇದಕ್ಕೆ ಕಾರಣಗಳು ಕುಟುಂಬ, ಸಂಸ್ಕೃತಿ, ಧರ್ಮ ಇತ್ಯಾದಿಯನ್ನು ಹೇಳಿದರೂ ಇದರ ಹಿಂದಿರುವ ಆಶಯ 'ಪುರುಷ ಪ್ರಧಾನತೆ'ಯನ್ನು ಗಟ್ಟಿಗೊಳಿಸುವುದಾಗಿದೆ. ಮಹಿಳೆಯ ಸಂತಾನಾರೋಗ್ಯದ ಕಾಲಾವಧಿ ಮತ್ತು ಸಾಧನೆಯ ಕಾಲಾವಧಿ ಬಹುತೇಕ ಸಮಾನ ಹಂತದಲ್ಲಿರುವುದರಿಂದ ಸಮಾಜ ರೂಪಿಸಿರುವ ಕಟ್ಟುಪಾಡುಗಳಲ್ಲಿ ಮಹಿಳಾ ಶಿಕ್ಷಣವು ನಿರ್ಬಂಧಿತ ನೆಲೆಯಲ್ಲಿ ಸಾಗುತ್ತದೆಯಾದರೂ ಮಹಿಳೆಯರೂ ಕೆಲವು ನಿಗದಿತ

ಕ್ಷೇತ್ರಗಳಲ್ಲಿ ಮಾತ್ರ ಪಾಲ್ಗೊಳ್ಳುತ್ತಿರುವುದು ಕಂಡು ಬರುತ್ತಿದೆ. ಎಲ್ಲಾ ಕ್ಷೇತ್ರಗಳಲ್ಲೂ ಮಹಿಳೆ ಪಾಲ್ಗೊಳ್ಳುತ್ತಿರುವುದು, ಸಾಧಿಸಿರುವುದು ಹರ್ಷದಾಯಕವೆನ್ನಬಹುದಾದರೂ ಇವುಗಳು ಅಪವಾದಗಳೆನುವಂತಿವೆ. ಮಹಿಳೆಯರ ಉನ್ನತ ಶಿಕ್ಷಣದ ಪ್ರವೇಶವನ್ನು, ಪ್ರವೇಶಿಸುವ ವಲಯಗಳನ್ನು ನೋಡಿದಾಗ ಕೆಲವು ಸಂಗತಿಗಳು ಹೆಚ್ಚು ಸ್ಪಷ್ಟವಾಗುತ್ತವೆ.

**ಕೋಷ್ಟಕ : ೩ ಭಾರತದಲ್ಲಿನ ಉನ್ನತ ಶಿಕ್ಷಣದ ಪ್ರಮುಖ ಜ್ಞಾನಶಾಖೆಗಳಲ್ಲಿ ಶೇ. ೧೦೦ ಜನ ಪುರುಷರಿಗೆ ಮಹಿಳಾ : ಶೈಕ್ಷಣಿಕ ವಲಯದ ಪ್ರವೇಶ**

| ವರ್ಷ | ಕಲಾ | ವಿಜ್ಞಾನ | ವಾಣಿಜ್ಯ | ಇಂಜಿನಿಯರಿಂಗ್ | ವೈದ್ಯಕೀಯ |
|---|---|---|---|---|---|
| ೧೯೫೦-೫೧ | ೬೫.೪ | - | ೦.೫ | ೦.೩ | ೧೮.೫ |
| ೧೯೬೦-೬೧ | ೨೨.೩ | - | ೧.೧ | ೦.೪ | ೨೫.೬ |
| ೧೯೭೦-೭೧ | ೫೦.೨ | ೨೧ | ೬.೨ | ೩.೮ | ೨೫.೩ |
| ೧೯೮೦-೮೧ | ೫೯.೨ | ೩೮.೯ | ೧೮.೫ | ೬.೮ | ೪೦.೪ |
| ೧೯೯೦-೯೧ | ೬೫.೫ | ೫೮.೨ | ೩೧.೬ | ೧೨.೨+ | ೫೨.೧+ |
| ೧೯೯೬-೯೭ | ೭೦.೨ | ೫೪.೨ | ೪೧.೪ | ೧೭.೪ | ೫೪.೮ |

ಈ ಮೇಲಿನ ಅಂಕಿ-ಅಂಶಗಳು ಕಲಾ ವಿಭಾಗದಲ್ಲಿ ಮಹಿಳೆಯ ಪ್ರವೇಶ ನಿರರ್ಗಳವಾಗಿದೆ. ಇನ್ನಿತರ ಭಾಗಗಳಲ್ಲಿನ ಪ್ರವೇಶವು ಮಧ್ಯ ಸ್ಥಿತಿಯಲ್ಲಿದೆ. ವಿಶೇಷವಾಗಿ ಇಂಜಿನಿಯರಿಂಗ್, ವಾಣಿಜ್ಯ ಕ್ಷೇತ್ರಗಳಲ್ಲಿ ಮಹಿಳೆಯ ಪಾಲ್ಗೊಳ್ಳುವಿಕೆಯ ಮಟ್ಟ ತೀರಾ ಗೌಣವಾಗಿದೆ. ಬಹುತೇಕವಾಗಿ ಮಹಿಳೆಯ ಶಿಕ್ಷಣವೂ ಗೃಹ ಸಂಬಂಧಗಳಿಗೆ ಪೂರಕವಾಗಿರಬೇಕು. ಸಂಶೋಧನೆಯಂತಹ ಕಷ್ಟಕರ ಸಂಗತಿಗಳನ್ನು ನಿಭಾಯಿಸುವಲ್ಲಿ ಅವಳು ಅಸಮರ್ಥಳೆಂಬ ಮಿಥ್ಯಾ ಕಲ್ಪನೆ ರೂಪಿಕೆಯ ಉದ್ದೇಶವೇ ಮಹಿಳೆಯ ಶೈಕ್ಷಣಿಕ ವಲಯದ ಪ್ರವೇಶವನ್ನು ನಿರಾಕರಿಸುವುದೇ ಆಗಿದೆ. ಈ ಹಲವಾರು ನಿರ್ಬಂಧಗಳನ್ನು ಮೀರಿ ಶೈಕ್ಷಣಿಕ ವಲಯವನ್ನು ಪ್ರವೇಶಿಸಿದ ಮಹಿಳೆ ನಿರ್ದಿಷ್ಟ ಬಗೆಯ ಶಿಕ್ಷಣಕ್ಕೆ ಸೀಮಿತಗೊಳಿಸುವ ಮೂಲಕ ಅವಳ ಪ್ರಾಬಲ್ಯವನ್ನು ದಮನ ಮಾಡುವ ಸಂಚುಗಳು ದೌರ್ಜನ್ಯ - ಹಿಂಸೆಯ ಮುಂದುವರಿಕೆಯೇ ಆಗಿವೆ. ಮಹಿಳಾ ಶಿಕ್ಷಣವೆಂಬುದು ಪುರುಷ ಪ್ರತಿಷ್ಠೆಯ ಭಾಗವಾಗಿಯೋ, ಕುಟುಂಬ ಕಲ್ಯಾಣಕ್ಕಾಗಿ ನೋಡುವ ಕ್ರಮವು ಮಹಿಳೆಯ ವಿರುದ್ಧ ಎಸಗುವ ಪರೋಕ್ಷ ನೆಲೆಯ ಆಕ್ರಮಣಗಳೆನ್ನಬಹುದು. ಈ ನಿಟ್ಟಿನ ಚೌಕಟ್ಟಿನ ಎಲ್ಲೆ ಮೀರಿ ಮಹಿಳೆಯರು ಸಾಧನೆಯತ್ತ ಮುಖ ಮಾಡಲು ಹೊರಟರೆ ಅವರಿಗೆ ದಕ್ಕಬೇಕಾದ ಕೆಲವು ಸೌಲಭ್ಯಗಳನ್ನು ನಿರಾಕರಿಸುವುದು.

ಮಹಿಳೆಯ ಲೈಂಗಿಕತೆಯನ್ನು ತಳಹದಿಯನ್ನಾಗಿಸಿಕೊಂಡು ಅವಳ ವೈಯಕ್ತಿಕ ಬದುಕಿನ ಮೇಲೆ, ಅಸ್ತಿತ್ವದ ಮೇಲೆ ನಿಯಂತ್ರಣ ಸಾಧಿಸುವುದು. ಶೈಕ್ಷಣಿಕ ವಲಯದ ಅವಳ ಪ್ರವೇಶ ಅವಳಲ್ಲಿ ಸ್ವಾವಲಂಬನೆಯನ್ನು ಮೂಡಿಸಲಾರಂಭಿಸಿದರೆ, ಅವಳು ಪುರುಷ ನಿಯಂತ್ರಣ ತಪ್ಪಿ ಹೋಗುವವಳೆಂಬ

ಆತಂಕ ಪುರುಷ ಸಂಸ್ಕೃತಿಗೆ ಇದ್ದೇ ಇದೆ. ಆ ಕಾರಣವಾಗಿ ಅವಳ ಶೈಕ್ಷಣಿಕ ವಲಯದ ಪ್ರವೇಶ, ಪ್ರಕ್ರಿಯೆಗಳೆಲ್ಲವೂ ಕುಟುಂಬ ಕಲ್ಯಾಣ, ಪುರುಷ ಕಲ್ಯಾಣದಾಚೆಗೆ ಸಾಗಬಾರದೆಂಬುದು ಎಲ್ಲ ಬಗೆಯ ಮಹಿಳಾ ಶಿಕ್ಷಣದಲ್ಲಿ ಪ್ರತಿ ಬಿಂಬಿಸುವಂತೆ ಮಾಡಿದೆ.

ಶಾಲಾ ಬಾಲಕಿಯರ ಅಪಹರಣ, ಶಿಕ್ಷಕನಿಂದಲೇ ವಿದ್ಯಾರ್ಥಿನಿಯ ಮೇಲೆ ಅತ್ಯಾಚಾರ, ಕಾಲೇಜಿನಲ್ಲಿ ಹುಡುಗಿ ಪ್ರೀತಿಸಲಿಲ್ಲವೆಂಬ ಕಾರಣಕ್ಕೆ ಅವಳ ಮೇಲೆ ಆ್ಯಸಿಡ್ ದಾಳಿ, ವಿದ್ಯಾರ್ಥಿಗಳನ್ನು ಪಶ್ನಿಸಿದ್ದಕ್ಕೆ ಅಥವಾ ಕಡಿಮೆ ಅಂಕ ನೀಡಿರುವುದಕ್ಕೆ ಮಹಿಳಾ ಶಿಕ್ಷಕಿಯ ಮಾನಭಂಗ ಇತ್ಯಾದಿ ಸಂಗತಿಗಳು ಮಾಧ್ಯಮದಲ್ಲಿ ಪ್ರತಿನಿತ್ಯವು ಸಹಜ ಸಂಗತಿಯೆಂಬಂತೆ ಕೇಳುತ್ತೇವೆ. ಇವೆಲ್ಲವುಗಳು ಸಹ ಮಹಿಳಾ ಶಿಕ್ಷಣದ ನಿರಾಕರಣೆಗಾಗಿ ನಡೆಯುವ ವಿಕೃತ ರೂಪದ ಹಿಂಸೆ, ದೌರ್ಜನ್ಯಗಳೇ ಆಗಿವೆ. ಇತ್ತೀಚೆಗೆ ಕೇಳಲಾದ ಘಟನೆ ಹೊಸಪೇಟೆಯಲ್ಲಿ ಐದನೇ ತರಗತಿಯ ಮಗುವಿನ ಮೇಲೆ ಅತ್ಯಾಚಾರ ನಡೆದ ಸಂಗತಿಯಿಂದ ತಂದೆ-ತಾಯಿಯರು ಮಕ್ಕಳನ್ನು ಶಿಕ್ಷಣಕ್ಕಾಗಿ ಪ್ರಾಥಮಿಕ ಶಾಲೆಗೆ ಕಳುಹಿಸುವುದೂ ಅಪಾಯಕಾರಿಯೆಂದು ತಲ್ಲಣಕ್ಕೊಳಗಾಗಿದ್ದರು. ಶೈಕ್ಷಣಿಕ ವಲಯದಲ್ಲಿ ಹೆಣ್ಣಾಗಿರುವ ಕಾರಣದಿಂದಲೇ ಈ ಬಗೆಯ ವಿಕೃತ ಕ್ರೌರ್ಯಕ್ಕೆ ಸ್ತ್ರೀ ಸಮುದಾಯ ಒಳಗಾಗುತ್ತಿರುವುದು ಪ್ರಾಥಮಿಕ ಶಿಕ್ಷಣದಿಂದ ಉನ್ನತ ಶಿಕ್ಷಣಗಳವರೆಗಿನ ವಿವಿಧ ಹಂತಗಳಲ್ಲಿ ಕಾಣಬಹುದಾಗಿದೆ.

ರಾಮ್ ಅಹುಜಾರವರ ಅಧ್ಯಯನದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಗಳ ಅವಲೋಕನಗಳಲ್ಲಿ ಶೈಕ್ಷಣಿಕ ವಲಯದಲ್ಲಿ ಮಹಿಳೆಯ ಪ್ರವೇಶದ ನಿರಾಕರಣೆಯನ್ನು ಸ್ಪಷ್ಟವಾಗಿ ವಿವರಿಸುತ್ತಾರೆ. "ಎಲ್ಲ ಸಾಮಾಜಿಕ ಹಂತಗಳಲ್ಲಿ ಮಹಿಳೆಯರ ಅಪಹರಣ, ಅನೈತಿಕ ಸಾಗಾಣಿಕೆ, ಅತ್ಯಾಚಾರ ಇತ್ಯಾದಿಗಳಲ್ಲಿ ಬಲಿಪಶುವಾಗುವ ಅಕ್ಷರಸ್ಥರ ಸಂಖ್ಯೆಗಿಂತ, ಅನಕ್ಷರಸ್ಥರ ಸಂಖ್ಯೆಯು ಹೆಚ್ಚಾಗಿತ್ತಿದೆ (ಉಲ್ಲೇಖ : ವಯೊಲೆನ್ಸ್ ಅಗೆನಸ್ಟ್ ವುಮೆನ್ : ರಾಮ್ ಅಹುಜಾ[4] ಎಂದರೆ, ಶಶಿಪ್ರಭಾ ಜೈನ್‌ರವರ ಅಧ್ಯಯನದ ಪ್ರಕಾರ "ಲೈಂಗಿಕ ದೌರ್ಜನ್ಯದಿಂದ ಶಿಕ್ಷಣದ ಮೇಲಾಗುವ ಪರಿಣಾಮವು ಭೀಕರವಾಗಿದೆ. ಅತ್ಯಾಚಾರದ ಪ್ರಕರಣಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಅಕ್ಷರಸ್ಥರ ಮಹಿಳೆಯರೆ ಇದ್ದಾರೆ, ಇನ್ನೂ ಮುಂದುವರೆದಂತೆ ಎರಡನೆಯ ಹಂತದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಪಡೆದ ಮಹಿಳೆಯರು ಹೆಚ್ಚಾಗಿದ್ದಾರೆ" (ಉಲ್ಲೇಖ : ವಯೊಲೆನ್ಸ್ ಅಗೆನಸ್ಟ್ ವುಮೆನ್ : ಶಶಿಪ್ರಭಾ ಜೈನ್)[5] ಎಂದು ಅಭಿಪ್ರಾಯ ಪಡುತ್ತಾರೆ. ಆದ್ದರಿಂದ ಪ್ರಾಥಮಿಕ ಶಿಕ್ಷಣವನ್ನು ಪಡೆದವರನ್ನು ಶಿಕ್ಷಣ ಪಡೆಯದವರೆಂದೇ ಪರಿಗಣಿಸಬೇಕು. ಯಾಕೆಂದರೆ ಆತ್ಮವಿಶ್ವಾಸವನ್ನು ಗಳಿಸುವಲ್ಲಿ ಈ ಅಂಶವು ಸಹಕಾರಿಯಾಗದು ಎಂದು ಹೇಳುತ್ತಾರೆ.

ಇನ್ನಿತರ ಚಿಂತನೆಗಳಂತೆ ಬಲಿಪಶುಗಳಾದ ಮಹಿಳೆಯರಲ್ಲಿ ೧೫ ಪ್ರತಿಶತದಷ್ಟು ಪ್ರಾಥಮಿಕ ಹಂತದ ಶಿಕ್ಷಣವನ್ನು ಪಡೆದವರೇ ಆಗಿದ್ದಾರೆ. ಜೈನ್‌ರವರು ಹೇಳುವಂತಾದರೆ ವಾಸ್ತವಲ್ಲಿ ೩೦ ಪ್ರತಿಶತ ಮಹಿಳೆಯರನ್ನು ಶಿಕ್ಷಣ ಪಡೆಯದವರೆಂದು ಪರಿಗಣಿಸಲಾಗುತ್ತದೆ ಹಾಗೂ ಮಾಧ್ಯಮಿಕ ಶಿಕ್ಷಣ ಪಡೆದವರು

ಅಥವಾ ಪದವಿಯೊಳಗಿನ ೩೦ ಪ್ರತಿಶತ ಮತ್ತು ೧೫ ಪ್ರತಿಶತ ಮಹಿಳೆಯರು ಉನ್ನತ ಶಿಕ್ಷಣ ಮತ್ತು ಅದಕ್ಕಿಂತ ಹೆಚ್ಚಿನ ಶಿಕ್ಷಣ ಪಡೆದವರಿದ್ದಾರೆಂದು ಹೇಳಲಾಗುತ್ತದೆ. ಮೇಲಿನ ಎರಡು ಬಗೆಯ ಚಿಂತನೆಗಳು ಮಹಿಳಾ ಶಿಕ್ಷಣದ ಕುರಿತು ದ್ವಂದ್ವ ನಿಲುವುಗಳನ್ನು ಹೊಂದಿದೆ. ಈ ಅಂಶಗಳನ್ನಾಧರಿಸಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವು ಅವರು ಶಿಕ್ಷಿತರಾಗಲಿ-ಅಶಿಕ್ಷಿತರಾಗಲಿ ಅದು ತಪ್ಪಿದ್ದಲ್ಲವೆಂಬಂತಿದೆ. ಈ ಮೂಲಕ ಮಹಿಳೆಯ ಶೈಕ್ಷಣಿಕ ವಲಯದ ಪ್ರವೇಶವನ್ನು ಪರೋಕ್ಷವಾಗಿ ನಿರಾಕರಿಸುತ್ತದೆ. ಇನ್ನೊಂದು ನಿಲುವು ಮಹಿಳಾ ಶಿಕ್ಷಣವು ಅಗತ್ಯವಾದುದು, ಈ ಬಗೆಯ ದೌರ್ಜನ್ಯ-ಹಿಂಸೆಗಳ ಪ್ರಮಾಣ ಕಡಿಮೆಯಾಗಬಹುದೆಂದು ಗ್ರಹಿಸಬೇಕಾಗಿದೆ.

ಒಂದು ಹಂತದಲ್ಲಿ ಪಿತೃಸಂಸ್ಕೃತಿಯ ಚಿಂತನೆಗಳು ಮಹಿಳೆಯ ಶೈಕ್ಷಣಿಕ ವಲಯದ ಪ್ರವೇಶದ ನಿರಾಕರಣೆ, ಅದು ಮುಂದುವರೆದಂತೆ, ಈ ವಲಯವನ್ನು ಪ್ರವೇಶಿಸಿದ ಮೇಲೆ ಅವಳು ತನ್ನ ಅಸ್ತಿತ್ವ ರೂಪಿಕೆಗಾಗಿ ಯತ್ನಿಸಲು ಸಾಧ್ಯವಾಗದಂತಹ ಸಂದರ್ಭಗಳನ್ನು ಸೃಷ್ಟಿಸುತ್ತದೆ. ಒಟ್ಟಾರೆಯಾಗಿ ಅವಳು ಶೈಕ್ಷಣಿಕ ವಲಯದಲ್ಲಿ Establish ಆಗಲು ಆಗದಂತಹ ನೆಲೆಯಲ್ಲಿ ದೌರ್ಜನ್ಯಗಳು ಹಿಂಸೆಗಳು ನಡೆಯುತ್ತದೆ.

ಒಟ್ಟಾರೆಯಾಗಿ ಶಿಕ್ಷಣವು ಆತ್ಮವಿಶ್ವಾಸವನ್ನು ಹೆಚ್ಚಿಸಬೇಕು. ಮಹಿಳಾ ಶಿಕ್ಷಣವು ಮಹಿಳೆಯರ ಮೇಲಾಗುವ ಅಕ್ರಮ, ಅನ್ಯಾಯ, ದೌರ್ಜನ್ಯ-ಹಿಂಸೆಗಳಿಲ್ಲದೆ, ತನ್ನನ್ನು ತಾನು ರಕ್ಷಿಸಿಕೊಳ್ಳುವಂತಾಗಬೇಕು. ಆ ಬಗೆಯ ಶಿಕ್ಷಣ ಪದ್ಧತಿಯು ರೂಪಿತವಾಗುವುದರಿಂದ ಶೈಕ್ಷಣಿಕ ವಲಯದಲ್ಲಾಗುವ ಆಕ್ರಮಣಗಳು ನಿಲ್ಲುವುದರ ಜೊತೆಗೆ, ಅಂತಹ ದೌರ್ಜನ್ಯ-ಹಿಂಸೆಗಳಿಗೆ ಕೈ ಹಾಕುವ ಸಾಹಸವನ್ನು ಯಾವುದೇ ವ್ಯಕ್ತಿಯು ಮಾಡದಂತಹ ಕಾನೂನುಗಳು ಜಾರಿಯಾಗಬೇಕು. ಈಗಾಗಲೇ ಜಾರಿಯಿರುವ ಕಾನೂನುಗಳಲ್ಲಿ ಶಿಕ್ಷಣ ಸಂಸ್ಥೆಗಳಲ್ಲಾಗುವ ಲೈಂಗಿಕ ಕಿರುಕುಳವನ್ನು ಹೆಚ್ಚು ಪ್ರತಿಪಾದಿಸಲಾಗಿದೆ. ಆದರೆ ಕಾನೂನುಗಳ ಪುನರ್ವ್ಯಾಖ್ಯಾನಗಳಿಂದ ಒಟ್ಟು ಸಾರ್ವಜನಿಕ ವಲಯಗಳಲ್ಲಿನ ದೌರ್ಜನ್ಯ - ಹಿಂಸೆಯ ತಡೆ ಕಾಯ್ದೆಯು ಜಾರಿಯಾಗಬೇಕು.

**೩.೪. ಆರ್ಥಿಕ ವಲಯ**

ಲಭ್ಯವಿರುವ ಸಂಪನ್ಮೂಲಗಳಿಂದ ಮಾನವ ಉಪಯೋಗಿ ಸರಕು ಸೇವೆಗಳನ್ನು ಉತ್ಪಾದಿಸುವ ಪ್ರಕ್ರಿಯೆಯನ್ನು ಆರ್ಥಿಕ ವ್ಯವಸ್ಥೆ, ಅರ್ಥ ವ್ಯವಸ್ಥೆ ಎಂದು ಕರೆಯಬಹುದು. ಈ ಆರ್ಥಿಕ ವಲಯವು ಹಣ ಮತ್ತು ಮಾರುಕಟ್ಟೆಯನ್ನು ಪ್ರಮುಖವಾಗಿ ಪರಿಗಣಿಸುತ್ತದೆ. ಸರ್ವೇಸಾಮಾನ್ಯವಾಗಿ ಆರ್ಥಿಕ ವಲಯದಲ್ಲಿ ವ್ಯವಹಾರದ ಸಂಗತಿಯು ಮೂಲಭೂತವಾಗಿ ಚರ್ಚೆಗೊಳಪಡುತ್ತದೆ.

ಒಟ್ಟು ಆರ್ಥಿಕ ವ್ಯವಸ್ಥೆಯನ್ನು ಮೂರು ಬಗೆಗಳಲ್ಲಿ ವಿಭಾಗಿಸಲಾಗುತ್ತದೆ. ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆ, ಸಮಾಜವಾದಿ ಆರ್ಥಿಕ ವ್ಯವಸ್ಥೆ ಮತ್ತು ಮಿಶ್ರ ಆರ್ಥಿಕ ವ್ಯವಸ್ಥೆ ಎಂದು

ವಿವರಿಸಲಾಗುತ್ತದೆ. ಅಂತೆಯೇ ಆರ್ಥಿಕ ವಲಯದಲ್ಲಿ ಪ್ರಮುಖ ಚರ್ಚೆಗೆ ಬರುವ ನೆಲೆಗಳೆಂದರೆ ವರಮಾನ ಮತ್ತು ದುಡಿಮೆ. ಈ ವರೆಗಿನ ಸಾಂಪ್ರದಾಯಿಕ ಆರ್ಥಿಕ ವಲಯದಲ್ಲಿ ದುಡಿಮೆಯನ್ನು ೩ ವಲಯಗಳಾಗಿ ವಿಂಗಡನೆ ಮಾಡಲಾಗಿದೆ. ಅವುಗಳಲ್ಲಿ ಪ್ರಾಥಮಿಕ ವಲಯವು ಕೃಷಿ ಸಂಬಂಧಿ ಚಟುವಟಿಕೆ, ಹೈನುಗಾರಿಕೆ, ತೋಟಗಾರಿಕೆ, ಗಣಿಗಾರಿಕೆ, ಅರಣ್ಯೀಕರಣ ಇತ್ಯಾದಿಯನ್ನೊಳಗೊಂಡರೆ, ದ್ವಿತೀಯ ವಲಯವು ಕೈಗಾರಿಕೆ, ಹತ್ತಿ ಬಟ್ಟೆ ಕೈಗಾರಿಕೆ, ಉತ್ಪಾದನಾ ಸರಕು ಮುಂತಾದವುಗಳನ್ನೊಳಗೊಂಡಿದೆ. ತೃತಿಯ ವಲಯವು ಸೇವಾ ಚಟುವಟಿಕೆ, ಬ್ಯಾಂಕಿಂಗ್, ಶಿಕ್ಷಣ, ಆರೋಗ್ಯ ಸರ್ಕಾರಿ, ಖಾಸಗಿ ನೌಕರಿಯನ್ನು ಒಳಗೊಂಡಿರುವ ಮೂರು ವಲಯಗಳಲ್ಲಿ ದುಡಿಮೆಯನ್ನು ಆಧರಿಸಿರುವುದಾದರೆ, ದುಡಿಮೆಗಾರರನ್ನು ಪೂರ್ಣ ಪ್ರಮಾಣದ ಕೆಲಸಗಾರರು ಮತ್ತು ಅಂಚಿನ ಕೆಲಸಗಾರರೆಂದು ಇಬ್ಬಗೆಯಲ್ಲಿ ವರ್ಗೀಕರಿಸಲಾಗುತ್ತವೆ. ಪೂರ್ಣ ಪ್ರಮಾಣದ ಕೆಲಸಗಾರರೆಂದರೆ ವರ್ಷದಲ್ಲಿ ೧೮೦ ದಿನಗಳು ಅಥವಾ ಅದಕ್ಕಿಂತ ಹೆಚ್ಚಿನ ದಿನ ಸೇವೆ ಸಲ್ಲಿಸುವವರಾಗಿರಬೇಕು. ಅಂಚಿನ ದುಡಿಮೆಗಾರರೆಂದರೆ ಈ ನಿಗದಿತ ದಿನಗಳೊಳಗೆ ಸೇವೆ ಸಲ್ಲಿಸಿದವರನ್ನು ಪರಿಗಣಿಸಲಾಗುತ್ತದೆ.

೧೯೯೧ರ ನಂತರ ದುಡಿಮೆಗಾರರನ್ನು ೪ ವರ್ಗಗಳಲ್ಲಿ ಗುರುತಿಸಲಾಗುತ್ತದೆ. ಭೂಮಿ ಇರುವ ದುಡಿಮೆಗಾರರು, ಭೂರಹಿತ ದುಡಿಮೆಗಾರರು, ಗೃಹಕೃತ್ಯ ಕೆಲಸಗಾರರು ಮತ್ತು ಇತರೆ ದುಡಿಮೆಗಾರರು. ಹೀಗೆ ವಿಭಜನೆಯಾದ ಗುಂಪುಗಳಲ್ಲಿ ವರ್ಗ, ಲಿಂಗ, ತಾರತಮ್ಯವಿಲ್ಲವೆಂದು ಹೇಳಲಾಯಿತು.

೭೦ರ ದಶಕದ ನಂತರ ಬೃಹದಾಗಿ ಬೆಳೆದು ಬಂದ ಸ್ತ್ರೀವಾದಿ ಚಿಂತನೆಯು ರಾಷ್ಟ್ರೀಯ ಆದಾಯದಲ್ಲಿ ಮಹಿಳೆಯರ ದುಡಿಮೆಯು ಪರಿಗಣಿಸದಿರುವುದು, ಮಹಿಳೆಯು ಆರ್ಥಿಕ ವಲಯದಿಂದ ದೂರವಿರಿಸುವ ತಂತ್ರಗಾರಿಕೆಯೇ ಆಗಿದೆ. ಉತ್ಪಾದನಾ ಕ್ರಿಯೆಯಲ್ಲಿ ಶ್ರಮದ ಕಾಣಿಕೆಯನ್ನು ದುಡಿಮೆ ಎನ್ನಲಾಗುತ್ತದೆ. ಭೂಮಿ, ಶ್ರಮ, ಬಂಡವಾಳ ಮತ್ತು ಸಂಘಟನೆ ಈ ನಾಲ್ಕು ಉತ್ಪಾದನಾಂಗಗಳ ಒಟ್ಟು ಪ್ರತಿಫಲನವೇ ದುಡಿಮೆ ಎಂದು ನಿರ್ವಚಿಸಲಾದ, ಈ ಅರ್ಥವ್ಯಾಪ್ತಿಯ ಹೊರಗಿನ ಶ್ರಮವನ್ನು ದುಡಿಮೆ ಎಂದು ಪರಿಗಣಿಸುವುದಿಲ್ಲ. ಹೀಗೆ ದುಡಿಮೆ ಎನ್ನುವಂತಹದ್ದು ಉತ್ಪಾದನೆಯನ್ನು ಅವಲಂಬಿಸಿ ಬಂದ ಉತ್ಪನ್ನವನ್ನು ಮಾರುಕಟ್ಟೆಗೆ ರವಾನಿಸಿ ಅವರಿಂದ ಬರುವ ಆದಾಯವನ್ನು ಉತ್ಪಾದನಾಂಗಗಳಿಗೆ ವಿತರಿಸಲಾಗುವುದು. ಹಾಗಾಗಿ ಮಹಿಳೆಯ ಯಾವುದೇ ದುಡಿಮೆಯು ಈ ವ್ಯಾಖ್ಯಾನದೊಳಗೆ ಬರುವುದಿಲ್ಲ. ದುಡಿಮೆ ಮತ್ತು ಹೆಣ್ಣಿನ ದುಡಿಮೆಗಳಲ್ಲಿನ ವ್ಯಾಖ್ಯಾನವು ಭಿನ್ನವಾಗಿದೆ. ಕೌಶಲ್ಯ ಭರಿತ ಅಥವಾ ಕೌಶಲ್ಯ ರಹಿತವೆಂದು ಕೆಲಸಗಳನ್ನು ನಿರ್ಧರಿಸಿ ಮಹಿಳೆಯು ನಿರ್ವಹಿಸುವ ಎಲ್ಲ ಬಗೆಯ ದುಡಿಮೆಯು ಅರೆಕೌಶಲ್ಯ ಮತ್ತು ಕೌಶಲ್ಯ ರಹಿತವೆಂದು ವಿಂಗಡಿಸಲಾಗುತ್ತದೆ. ಹಾಗಾಗಿ ಮಹಿಳೆಯ ಆರ್ಥಿಕ ಚಟುವಟಿಕೆಗಳಲ್ಲಿನ ಸಹಭಾಗಿತ್ವವು, ಅವಳ ಆರ್ಥಿಕ ದುಡಿಮೆಯು ಪ್ರಧಾನವಾದದ್ದಲ್ಲ. ಅದು ಅನುಷಂಗಿಕ, ಪ್ರಾಸಂಗಿಕವಾದದ್ದೆಂದು ಬಿಂಬಿಸಲಾಗಿದೆ.

ಶ್ರಮವಿಭಜನೆಯ ಪರಿಕಲ್ಪನೆಯನ್ನು ಸ್ತ್ರೀ-ಪುರುಷರ ನಡುವೆ ಅಳವಡಿಸಿಕೊಂಡಾಗ ಎದುರಾಗುವ ಕೆಲಸಗಳನ್ನು ವಿಂಗಡಿಸುವುದೇ ಲಿಂಗಸಂಬಂಧಿ ಶ್ರಮವಿಭಜನೆ. ಈ ನಿಟ್ಟಿನಲ್ಲಿ ಹಂಚಿಕೆಯಾದ ಗೃಹಕೃತ್ಯ-ಗೃಹೇತರ ಕೃತ್ಯಗಳು, ಜೈವಿಕತೆಯನ್ನು ಬಳಸಿಕೊಂಡು ಸಾಮಾಜಿಕತೆಯಲ್ಲಿ ಹೇರಲ್ಪಟ್ಟ ಒಂದು ಕ್ರಮವಾಗಿದೆಯೆಂಬುದಕ್ಕಿಂತ, ಜೈವಿಕತೆಯನ್ನು ಕಾರಣವಾಗಿಸುವ ಹಿಂದೆ ಪುರುಷ ಪ್ರಧಾನತೆ ಮತ್ತು ಮಹಿಳೆಯನ್ನು ಸಾರ್ವಜನಿಕ ಕ್ಷೇತ್ರದಿಂದ ಪ್ರತ್ಯೇಕಿಸಿರುವುದೇ ಕಾರಣವೆಂದು ಸ್ತ್ರೀವಾದಿಗಳು ವಿಶ್ಲೇಷಿಸಿದ್ದಾರೆ. ಅಲ್ಲದೆ ಇಲ್ಲಿ ವ್ಯಕ್ತಿಯ ಇಚ್ಛೆ, ಅರ್ಹತೆ, ಕೌಶಲ್ಯ, ಆಸಕ್ತಿ ಆಧಾರವಾಗಿರುವುದಿಲ್ಲ ಮತ್ತು ಸಮಾನ ಮೌಲ್ಯವುಳ್ಳದ್ದಾಗಿರುವುದಿಲ್ಲ.

ದುಡಿಮೆಯು ಪುರುಷರಿಗೆ ಸಂಬಂಧಿಸಿದಂತೆ ಸಾಮಾಜಿಕವಾಗಿದ್ದರೆ, ಮಹಿಳೆಯರಿಗೆ ಜೈವಿಕವಾಗಿದೆ. ಪುರುಷರಿಗೆ ಸಾರ್ವಜನಿಕವಾಗಿಯೂ, ವರಮಾನ ಸಹಿತವೂ ಆಗಿದ್ದರೆ, ಮಹಿಳೆಯರದ್ದು ಖಾಸಗಿಯಾಗಿಯೂ ವರಮಾನ ರಹಿತವೆಂದು ಪರಿಗಣಿಸಲಾಗಿದೆ. ಒಟ್ಟಿನಲ್ಲಿ ಎಲ್ಲ ಬಗೆಯ ಆರ್ಥಿಕ ನಿರ್ವಚನಗಳು, ಪರಿಕಲ್ಪನೆಗಳು ಪುರುಷನನ್ನೇ ಪರಾಮರ್ಶನ ಬಿಂದುವಾಗಿಸಿಕೊಂಡಿವೆ. ಜೆಲ್ಲಾ ಐನ್‌ಸ್ಟೈನ್, ಜುಲಿಯೆಟ್ ಮಿಶೆಲ್, ಶೀಲಾ ರೋಬಾತಮ್, ಮಿಶೆಲ್ ಬ್ಯಾರಟ್ ಮುಂತಾದ ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು ಲಿಂಗಸಂಬಂಧಿ ಶ್ರಮವಿಭಜನೆಯ ಹಿಂದೆ ಪುರುಷ ಪ್ರಧಾನತೆಯೆ ಇದೆ. ಪುರುಷರ ದುಡಿಮೆಯ ಫಲವನ್ನು ಖರ್ಚು ಮಾಡುವ ಬಳಕೆದಾರರೆಂದು ಮಹಿಳೆಯರನ್ನು ಪರಿಗಣಿಸಿರುವುದನ್ನು ಈ ಸ್ತ್ರೀವಾದಿಗಳು ಟೀಕಿಸುತ್ತಾರೆ.

ಕೈಗಾರೀಕರಣದಿಂದ ಮನೆಯಿಂದ ಹೊರಗೆ ನೆಲೆಸಿರುವ ಉತ್ಪಾದನಾ ಕ್ಷೇತ್ರವು, ಗೃಹಕೃತ್ಯಗಳನ್ನು ಒಳಗೊಂಡು ಸಾರ್ವಜನಿಕ ವಲಯಕ್ಕೆ ವರ್ಗವಾಗಬೇಕು. ಕುಟುಂಬವು ವ್ಯವಸ್ಥೆಯ ಉತ್ಪಾದನಾ ಕ್ಷೇತ್ರವಾಗಬೇಕು. ಮಹಿಳೆಯನ್ನು ಗೃಹ ಕೆಲಸಕ್ಕೆ ಸೀಮಿತಗೊಳಿಸಲು ವ್ಯವಸ್ಥೆ ನಿಯಂತ್ರಿತವಾದ ಲಿಂಗತ್ವ, ಸಾಂಸ್ಕೃತಿಕ ಅಂಶಗಳು ಮತ್ತು ಸಾಂಸ್ಥಿಕ ಅಂಶಗಳು ಕಾರಣವಾಗಿವೆ.

ಹೀಗೆ ಸಾರ್ವಜನಿಕ ವಲಯಕ್ಕೆ ಸೇರಿಕೊಂಡ ಕೈಗಾರಿಕೆಗಳಲ್ಲಿ ಕೆಲಸ ನಿರ್ವಹಿಸಲು ಕೌಶಲ್ಯ, ಶಿಕ್ಷಣ, ವಿಶೇಷವಾದ ತರಬೇತಿಯ ಅಗತ್ಯಗಳನ್ನು ವ್ಯಾಖ್ಯಾನಿಸಿ ಪುರುಷರು ಈ ಅವಕಾಶಗಳನ್ನು ಪಡೆಯುವಲ್ಲಿ ಮುಂದಾದರು. ಈ ಸನ್ನಿವೇಶದಲ್ಲಿಯೇ ಮನೆಯ ಹೊರಗಿನ ಮತ್ತು ಮನೆಯ ಒಳಗಿನ ಕೆಲಸಗಳೆಂಬ ವ್ಯತ್ಯಾಸಗಳು ಸೃಷ್ಟಿಯಾಗಿ, ಮನೆಯ ಹೊರಗಿನ ಕೆಲಸಕ್ಕೆ ಸಂಬಳ, ಸಾಮಾಜಿಕ ಮಾನ್ಯತೆಯು ದೊರೆಯುವಂತಾದರೆ, ಮಹಿಳೆಯರ ಗೃಹಕೇಂದ್ರಿತ ಕೆಲಸಕ್ಕೆ ಇವೆರಡೂ ಇಲ್ಲದಂತಾಯಿತು ಹಾಗೂ ಪುರುಷ-ಉತ್ಪಾದಕ, ಮಹಿಳೆ-ಗ್ರಾಹಕಳೆಂದು ನಿರ್ವಚಿಸಲಾಯಿತು.

ಮನುಕುಲದ ಮುಂದುವರಿಕೆಗಾಗಿ ಮಹಿಳೆಯ ಸಂತಾನೋತ್ಪತ್ತಿ ಕಾರ್ಯವು ಅತಿ ಮುಖ್ಯವಾಗಿದ್ದು ತನ್ನ ಬದುಕಿನ ಬಹುಮುಖ್ಯ ಘಟ್ಟವನ್ನು, ದೈಹಿಕ ಸಾಮರ್ಥ್ಯವನ್ನು ಮಹಿಳೆ ಇಲ್ಲಿ ವಿನಿಯೋಗಿಸುವುದರಿಂದ ಇದಕ್ಕೆ ಸೂಕ್ತ ಮಾನ್ಯತೆ ದೊರೆಯಬೇಕು. ಸಂತಾನ ಕ್ರಿಯೆಯನ್ನು ಉತ್ಪಾದನಾ ಕ್ರಿಯೆಯೆಂದು ಪರಿಗಣಿಸಬೇಕೆಂದು ಸ್ತ್ರೀವಾದಿಗಳ ಹಕ್ಕೊತ್ತಾಯವಾಗಿದೆ.

ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನದ ಪ್ರಗತಿಯಿಂದಾಗಿ ಸಂತಾನ ಸಂಬಂಧಿ ಕ್ರಿಯೆಗಳು ಇತ್ತೀಚೆಗೆ ಮಾರುಕಟ್ಟೆಯನ್ನು ಪ್ರವೇಶಿಸುತ್ತಿವೆ. ಪ್ರನಾಳಶಿಶು, ಬಾಡಿಗೆ ತಾಯಿ, ಶಿಶುವಿವಾಹ ಕೇಂದ್ರಗಳು, ಸಂತಾನ ಕ್ರಿಯೆ ಬ್ಯಾಂಕುಗಳು ಸಾಂಪ್ರದಾಯಿಕವಾದ, ಸಹಜವಾದ ಪ್ರಕ್ರಿಯೆಯನ್ನು ಮಾರುಕಟ್ಟೆಗೆ ಪರಿಚಯಿಸಿ, ಅರ್ಥಶಾಸ್ತ್ರದ ವ್ಯಾಖ್ಯಾನಗಳನ್ನೇ ಅಲುಗಾಡಿಸುತ್ತಿವೆ. ಇವುಗಳು ಸಂಪಾದನೆ ಪಡೆದು, ವಿನಿಮಯ ಮೌಲ್ಯದ ಜೊತೆಗೆ ಸದೃಶ್ಯವಾಗಿವೆ. ಹೀಗೆ ಸಾಮಾಜಿಕ ಮಾನ್ಯತೆಯಿರುವ ಸಂತಾನಕ್ರಿಯೆಯೂ ಆರ್ಥಿಕ ಸಂಪಾದನೆ ಇಲ್ಲದಿರುವುದರಿಂದ ಗೌಣವಾಗುವುದು ಶೋಚನೀಯ ಮೇಲೆ ನಮೂದಿಸಿದ ಕೆಲವು ಪರಿವರ್ತನೆಗಳು ಒಟ್ಟು ಸಾಮಾಜಿಕ ಪರಿವರ್ತನೆಗಳಾಗಿರದೇ, ಆ ನಿಟ್ಟಿನಲ್ಲಿನ ಆಶಾಭಾವನೆಯಾಗಿ ಪರಿಗಣಿಸಬಹುದು.

ವಿಶ್ವಸಂಸ್ಥೆಯ ವರದಿಯ ಪ್ರಕಾರ ಜಗತ್ತಿನ ೨/೩ ಕೆಲಸವನ್ನು ಮಹಿಳೆಯರು ಮಾಡುತ್ತಾರೆ. ಭಾರತದಲ್ಲಿ ಮಹಿಳೆಯರ ಕೆಲಸದ ಅವಧಿಯೇ ದೀರ್ಘವೆಂಬ ಸಂಗತಿ ಅಧ್ಯಯನಗಳಿಂದ ಸಾಬೀತಾಗಿದೆ. ಕರ್ನಾಟಕದಲ್ಲಿ ನಡೆಸಲಾದ ಅಧ್ಯಯನ ವರದಿಯೊಂದರ ಪ್ರಕಾರ ಹಳ್ಳಿಗಳ ಒಟ್ಟು ಮಾನವ ಶ್ರಮದಲ್ಲಿ ಶೇ. ೭೦%ರಷ್ಟು ಶ್ರಮವು ಮಹಿಳೆ ಮತ್ತು ಮಕ್ಕಳಿಂದ ಕೂಡಿದೆ. ಮಹಿಳೆಯರು ಇಷ್ಟೆಲ್ಲಾ ಕೆಲಸ ಮಾಡಿದರೂ ಅದು ಆದಾಯ ತರುವಂತಹ ಕೆಲಸವಾಗಿರುವುದಿಲ್ಲ. ಅವು "ಬದುಕಿನ ಉಳಿವಿಗಾಗಿ" ಮಾಡುವಂಥ ಕೆಲಸಗಳಾಗಿರುತ್ತವೆ. ಬೆಲೆಯಿರದ ಈ ಕೆಲಸಗಳು ರಾಷ್ಟ್ರೀಯ ಆದಾಯದಾಚೆಗೆ ಉಳಿಯುತ್ತವೆ.

ದುಡಿಮೆಯು ಸಂಘಟಿತ-ಅಸಂಘಟಿತ ವಲಯಗಳಲ್ಲಿ ವಿಂಗಡಣೆಗೊಳ್ಳುವುದರಿಂದ ಮಹಿಳೆಯರು ಬಡತನ, ಅನಕ್ಷರತೆ ಇತ್ಯಾದಿ ಕಾರಣದಿಂದಾಗಿ ಹೆಚ್ಚಾಗಿ ಅಸಂಘಟಿತ ವಲಯಗಳಲ್ಲಿ ದುಡಿಯುತ್ತಿದ್ದಾರೆ. ಭಾರತದಲ್ಲಿ ಶೇ. ೯೨ರಷ್ಟು ಮಹಿಳೆಯರು ಈ ವಲಯಗಳಲ್ಲಿ ದುಡಿಯುತ್ತಾರೆ. ಹಾಗಾಗಿ ಅವರು ದಿನಗೂಲಿಯನ್ನು ಪಡೆದು ದೈನಂದಿನ ಖರ್ಚಿಗೆ ತೊಡಗಿಸುವುದರಿಂದ, ಅವರ ದುಡಿಮೆ ಉಳಿತಾಯದ ಮೂಲಕ ಕಾಣಿಸುವುದಿಲ್ಲ.

ಆರ್ಥಿಕ ವಲಯವು ಅಧಿಕಾರವಿರುವ ಕ್ಷೇತ್ರವಾಗಿದೆ. ಮಹಿಳೆಯರ ಈ ವಲಯದ ಪ್ರವೇಶವನ್ನು ನಿರಾಕರಿಸುತ್ತದೆ. ಕೆಲವು ಸಂದರ್ಭಗಳಿಂದಾಗಿ ಆರ್ಥಿಕ ವಲಯಕ್ಕೆ ಮಹಿಳೆ ಕಾಲಿಟ್ಟರೂ ಅವಳ ಪ್ರವೇಶ ಪ್ರಕ್ರಿಯೆಯು ಮೊದಲುಗೊಂಡು ಅವಳ ಮೆಲೆ ದೌರ್ಜನ್ಯ-ಹಿಂಸೆಗಳು ನಡೆಯುತ್ತಲೇ ಇವೆ. ಗೋಚರ-ಅಗೋಚರವಾಗಿ ನಡೆಯುವ ದೌರ್ಜನ್ಯ-ಹಿಂಸೆಗಳು ಕೆಲವು ಕ್ಷೇತ್ರಗಳಲ್ಲಿ ಬಹುತೇಕವಾಗಿ ಅಗೋಚರವಾಗಿ, ನಯಗಾರಿಕೆಯಲ್ಲಿಯೇ ಸಾಗುತ್ತವೆ. ಸಾಧಾರಣವಾಗಿ ಯಜಮಾನಿಕೆಯ ಸ್ಥಾಪನೆಯಾಗುವುದೇ ಆರ್ಥಿಕ ಸಬಲೀಕರಣದಿಂದಾಗಿ ಸಂಪನ್ಮೂಲದ ಗಳಿಕೆ, ಆ ಮೂಲಕ ಅವುಗಳ ಮೇಲಿನ ನಿಯಂತ್ರಣವು ಯಾಜಮಾನ್ಯತೆಯನ್ನು ನಿಯಂತ್ರಿಸಿ ಮುಂದುವರೆಸುವಲ್ಲಿ ಸಶಕ್ತವಾಗುತ್ತದೆ. ಈ ಬಗೆಯಲ್ಲಿ ಸ್ಥಾಪಿತವಾಗುವ ಅಧಿಕಾರಕ್ಕೆ ಮೂಲವಾಗಿರುವ ಆರ್ಥಿಕತೆಯಿಂದಾಗಿ ಮಹಿಳೆಗೆ ಅಂಚಿಗೆ ಸರಿಸಲ್ಪಟ್ಟಿರುವುದು

ದೌರ್ಜನ್ಯದ ಪ್ರಾರಭಿಕ ಹಂತದ ಸ್ವರೂಪವೇ ಆಗಿದೆ. ಕೆಲವು ದಶಕಗಳಿಂದ ಉದಾರವಾದಿ ಚಿಂತನೆಯಿಂದ ಸಾರ್ವಜನಿಕ ರಂಗದಲ್ಲಿ ಮಹಿಳೆಯು ಆರ್ಥಿಕ ವಲಯಕ್ಕೆ ಸೇರಿಕೊಳ್ಳಲು ಕೊಂಚ ಅವಕಾಶವಿರುವುದಾದರೂ, ಅಲ್ಲಿನ ಪ್ರತಿಯೊಂದು ಹೆಜ್ಜೆಗೂ ಅವಳು ಹಿಂಸೆ - ದೌರ್ಜನ್ಯಕ್ಕೆ ಮುಖಾಮುಖಿಯಾಗುತ್ತಲೇ ಇದ್ದಾಳೆ.

ಆರ್ಥಿಕ ವಲಯಕ್ಕೆ ಸಂಬಂಧಿಸಿದ ರಾಷ್ಟ್ರೀಯ ಆದಾಯದಲ್ಲಿ ಮಹಿಳಾ ದುಡಿಮೆಯ ಪರಿಗಣನೆಯನ್ನು ನಿರಾಕರಿಸುವುದು, ದೌರ್ಜನ್ಯ-ಹಿಂಸೆಯ ಮುಂದುವರಿಕೆಯ ಹಂತವಾಗಿ ಗುರುತಿಸಬಹುದು. ಪುರುಷರ ದುಡಿಮೆಗಿಂತ ಎರಡು ಪಟ್ಟು ಹೆಚ್ಚಾಗಿ ದುಡಿಯುವ ಮಹಿಳಾ ದುಡಿಮೆಗೆ ಮಾರುಕಟ್ಟೆ ಮೌಲ್ಯವಿಲ್ಲದಂತಾಗಿಸಿ, ಅವಳ ಮೇಲೆ ಕ್ರಮಾನುಗತವಾಗಿ ನಿಯಂತ್ರಣ ಸಾಧಿಸುತ್ತಿದೆ. ಮನುಕುಲದ ಮುಂದುವರಿಕೆಯ ಜವಾಬ್ದಾರಿಯನ್ನು ನಿರ್ವಹಿಸುವ ಮಹಿಳೆಯರ ಸಂತಾನೋತ್ಪತ್ತಿ ಕಾರ್ಯ, ಇತ್ಯಾದಿಯನ್ನು ಅನುಷಂಗಿಕ - ಪ್ರಾಸಂಗಿಕವೆಂದು ಬಿಂಬಿಸುತ್ತಿರುವ ಪಿತೃಸಂಸ್ಕೃತಿಯ ವ್ಯಾಖ್ಯಾನವು ಮಹಿಳೆಗೆ ಆರ್ಥಿಕ ಸ್ವಾವಲಂಬನೆ ದಕ್ಕದಂತೆ ಆಕ್ರಮಣವೆಸಗುತ್ತಿದೆ.

ಜೈವಿಕತೆಯನ್ನು ನೆಪವಾಗಿಸಿಕೊಂಡು ನಡೆಸಲಾಗುತ್ತಿರುವ ಮಹಿಳೆಯರ ಮೇಲಿನ ಹಿಂಸೆ-ದೌರ್ಜನ್ಯಗಳು ಆರ್ಥಿಕ ಸಬಲೀಕರಣವನ್ನು ನಿರಾಕರಿಸುತ್ತಿರುವ ದ್ಯೋತಕವಾಗಿವೆ. ಗೃಹಕೃತ್ಯ-ಗೃಹೇತರ ಕೃತ್ಯಗಳು ಎಂದು ವಿಭಜಿಸುವ ಮೂಲಕ ಮಹಿಳೆಯರ ಕುಟುಂಬದ ಮತ್ತು ಸಾರ್ವಜನಿಕ ವಲಯದ ಆರ್ಥಿಕ ಅಧಿಕಾರವನ್ನು ಕಿತ್ತುಕೊಳ್ಳಲಾಗಿದೆ. ಆಧುನಿಕತೆಯಿಂದಾಗಿ ಸಂತಾನೋತ್ಪತ್ತಿ ಕ್ರಿಯೆಗಳು ಮಾರುಕಟ್ಟೆಯನ್ನು ಪ್ರವೇಶಿಸುತ್ತಿರುವುದು. ಮಹಿಳೆಯರ ಹೆಮ್ಮೆಯ ಪ್ರತೀಕವಾಗದೆ, ದಮನದ ಪ್ರತೀಕವಾಗಿ ನಿಲ್ಲುತ್ತಿದೆ. ಉದಾ:- ಬಾಡಿಗೆ ತಾಯಿ. ಈ ಕ್ರಿಯೆಯು ಭಾರತದಲ್ಲಿ ಬೃಹತ್ ಉದ್ಯಮವಾಗಿ ೩ ಕೋಟಿ ರೂ.ಗಳ ವ್ಯವಹಾರವಾಗಿದೆ. ದೇಶಿಯರು-ವಿದೇಶಿಯರು ಬಾಡಿಗೆ ತಾಯಿಯ ಮೂಲಕ ಹೆಣ್ಣಿನ ಗರ್ಭಾಶಯನ್ನು ಸಾಧಾರಣ ವಸ್ತುವಿನಂತೆ ಪ್ರಯೋಗಕ್ಕೊಳಗೂ ಮಾಡುತ್ತಿದ್ದಾರೆ. ಗಂಡು ಸಂತಾನವನ್ನೇ ಬಾಡಿಗೆ ತಾಯಿಯಿಂದ ಬಯಸುವ ವ್ಯವಸ್ಥೆಯು ಸ್ತ್ರೀಸಂಕುಲದ ವಿನಾಶಕ್ಕೆ ಕೈ ಹಾಕಿರುವುದು ದೌರ್ಜನ್ಯ-ಹಿಂಸೆಗಳ ವಿಕೃತತೆಯನ್ನು ಬಿಂಬಿಸುತ್ತಿವೆ. ಬಡತನವೊ? ಮತ್ತೇನೊ ಕಾರಣಕ್ಕೆ ಬಾಡಿಗೆ ತಾಯಿಯ ಕೆಲಸಕ್ಕೆ ಮುಂದಾಗುವ ಭಾರತೀಯ ಮಹಿಳೆಯರು ಒಂದೆಡೆ ಬದುಕಿನ, ಇನ್ನೊಂದೆಡೆ ಸಾಂಪ್ರದಾಯಿಕ ವಾತಾವರಣದಲ್ಲಿ ಬೆಳೆದ ಪ್ರಭಾವದಿಂದಾಗಿ ನಿರಂತರ ಮಾನಸಿಕ ಹಿಂಸೆಗೊಳಗಾಗುತ್ತಿದ್ದಾರೆ. ಹೆಜ್ಜೆ ಹೆಜ್ಜೆಗೂ ಮಹಿಳೆಯ ನೈತಿಕತೆಯನ್ನು ಪ್ರಶ್ನಿಸುವ ವ್ಯವಸ್ಥೆಯಲ್ಲಿ, ಈ ಬೆಳವಣಿಗೆಯು ಹೆಮ್ಮೆಯೆನ್ನುವ ಬದಲು ವಿಕೃತರೂಪವೆನ್ನಬಹುದು. ಮಹಿಳಾ ದುಡಿಮೆಯ ರೂಪವೆಂದು ಭಾವಿಸಬಹುದಾದ ಈ ಬಾಡಿಗೆ ತಾಯಿಯ ಉದ್ಯಮವು ಸಹ ಮಹಿಳಾ ದುಡಿಮೆಯನ್ನು ಅಪಮೌಲ್ಯೀಕರಣಗೊಳಿಸುತ್ತಿದೆ. ಹಣದ ಆಮಿಷಕ್ಕಾಗಿ ಗಂಡಂದಿರು - ಕುಟುಂಬದವರು ಹೆಣ್ಣನ್ನು ಈ ಕೆಲಸಕ್ಕೆ ಬಲವಂತವಾಗಿ ತೊಡಗಿಸುತ್ತಿರುವುದು ಕಂಡು ಬರುತ್ತಿದೆ. ಭಾರತದಲ್ಲಿ ಬಾಡಿಗೆಯ ತಾಯಿಯ ಬೆಲೆಯು ಕಡಿಮೆಯಿರುವುದರಿಂದ ವಿದೇಶಿಯರು

ಇಲ್ಲಿಗೆ ಹೆಚ್ಚು ಪ್ರವೇಶಿಸುತ್ತಿದ್ದಾರೆ. ಕೆಲವೊಮ್ಮೆ ಈ ಮಗುವಿನ ಹೆರುವಿಕೆಯ ಜವಾಬ್ದಾರಿಯನ್ನು ಹೊತ್ತ ಮಹಿಳೆಗೆ ಗರ್ಭಪಾತವಾದರೆ ಹಣವನ್ನು ನೀಡುವುದಿಲ್ಲ. ಇಲ್ಲಿ ಉದ್ದೇಶಗಳ ಈಡೇರಿಕೆಯೇ ಮುಖ್ಯವೇ ಹೊರತು ಮಹಿಳೆಯ ಆರೋಗ್ಯದ ಕುರಿತಾಗಲಿ, ಅದೊಂದು ಜೀವವೆಂಬುದರ ಕುರಿತಾಗಲಿ ಗಣನೆಗೆ ಬರುವುದಿಲ್ಲ. ಇನ್ನೂ ಕೆಲವೊಮ್ಮೆ ಮಗುಬೇಕೆಂದು ಹೇಳಿ ಹೋದವರು ಮಗುವಿನ ಜನನವಾದರೂ ಮರಳಿ ಬರುವುದೇ ಇಲ್ಲ. ಇಂಥಹ ಸಂದರ್ಭಗಳಲ್ಲಿ ಆ ಮಗುವಿನ ಹೊಣೆ ಬಾಡಿಗೆ ತಾಯಿಯದೇ ಆಗಿರುವುದರಿಂದ ಅವಳು ಇನ್ನಷ್ಟು ಅತಂತ್ರಳಾಗುತ್ತಿದ್ದಾಳೆ. ಜೀ ಕನ್ನಡ ವಾಹಿನಿಯಲ್ಲಿ ಸೋಮವಾರದಿಂದ ಶುಕ್ರವಾರದವರೆಗೂ ಬೆಳಿಗ್ಗೆ ೮.೩೦ಕ್ಕೆ ಪ್ರಸಾರಾಗುವ ವಿನು ಬಳಂಜ ನಿರ್ದೇಶಿದ 'ಜೋಗುಳ' ಧಾರವಾಹಿಯಲ್ಲಿ ಬಾಡಿಗೆ ತಾಯಿಯ ರೂಪದಲ್ಲಿ ಮಹಿಳೆಯ ಮೇಲಾಗುವ ದೌರ್ಜನ್ಯ - ಹಿಂಸೆಯ ಸ್ವರೂಪ ಸ್ಪಷ್ಟವಾಗಿ ಚಿತ್ರಿಸಿರುವುದನ್ನು ಉದಾಹರಿಸಬಹುದು.

ಹೀಗೆ ಮಹಿಳೆಯ ದುಡಿಮೆಯನ್ನು ಆರ್ಥಿಕ ವಲಯದಲ್ಲಿ ಪರಿಗಣಿಸದಿರುವುದರಿಂದ ಮೊದಲುಗೊಂಡು, ಮಹಿಳೆಯು ಆರ್ಥಿಕ ವಲಯದಲ್ಲಿ ನೆಲೆನಿಲ್ಲುವುದು ಅಸಾಧ್ಯವೆನುವಂತಾಗಿಸಲು ದೌರ್ಜನ್ಯ - ಹಿಂಸೆಗಳು ವಿಕೃತತೆಯನ್ನು ತಲುಪುತ್ತಿವೆ. ಹೆಣ್ಣು ಎನ್ನುವ ಕಾರಣದಿಂದಲೇ, ಆರ್ಥಿಕ ವಲಯದ ಅವಳ ಪ್ರವೇಶವನ್ನು ನಿರಾಕರಿಸಲು, ಅವಳಿಗೆ ಸಾಮಾನ್ಯ ಅರ್ಹತೆಗಳಲ್ಲಿವೆಂಬುದನ್ನು ಪುರುಷ ಸಂಸ್ಕೃತಿಯು ಸೃಷ್ಟಿಸಿದೆ. ಉದಾಹರಣೆ:- ಆರ್ಥಿಕ ವಲಯವೇ ವ್ಯವಹಾರ ಲೋಕ. ಇಲ್ಲಿ ಓಡಾಡುವ ಧೈರ್ಯಬೇಕು. ವ್ಯವಹಾರದ ಚಾಕಚಕ್ಯತೆಯಿರಬೇಕು, ಬಂಡವಾಳ ಹೂಡಲು ಸಮರ್ಥ್ವಾಗಿರಬೇಕು, ವಿದ್ಯುನ್ಮಾನಗಳ ಸಂಪರ್ಕವಿರಬೇಕು. ಇದ್ಯಾವುದು ಮಹಿಳೆಗೆ ಇರುವುದಿಲ್ಲವಾದ್ದರಿಂದ ಮಹಿಳೆಯು ಆರ್ಥಿಕ ವಲಯದಲ್ಲಿ ನಿಲ್ಲಲು ಸಾಧ್ಯವಿಲ್ಲವೆಂದು ಹೇಳಲಾಗುತ್ತದೆ. ಆದರೆ ಈ ವಲಯಕ್ಕೆ ಪ್ರವೇಶಿಸಲು ಅವಳಿಗೆ ಶೈಕ್ಷಣಿಕ ವಲಯದ ಪ್ರವೇಶ, ಅಲ್ಲಿ ಈ ಬಗೆಯ ಜ್ಞಾನ, ತಿಳುವಳಿಕೆಗಳು ಲಭ್ಯವಾಗಬೇಕು. ಮಹಿಳಾ ಶಿಕ್ಷಣದ ಕೊರತೆ, ಅಲ್ಲಿರುವ ಹುನ್ನಾರಗಳು ಆರ್ಥಿಕ ವಲಯದ ಅವಳ ಪ್ರವೇಶವನ್ನು ಸ್ಥಗಿತಗೊಳಿಸುತ್ತವೆ. ಹೀಗೆ ಆರ್ಥಿಕ ವಲಯದಲ್ಲಿ ಅವಳು ಬೆಳೆಯಬೇಕಾದ ಎಲ್ಲಾ ವಿಧದ ಮಾರ್ಗಗಳನ್ನು ಮುಚ್ಚಿ ಹಾಕುವ ಅವಳ ಮೇಲಿನ ದೌರ್ಜನ್ಯ-ಹಿಂಸೆಯ ಪ್ರಕ್ರಿಯೆಯು ಅವಳ ಒಟ್ಟು ಸಾಧನೆಯ ಹಾದಿಯಲ್ಲಿ ಅಡೆ-ತಡೆಗಳನ್ನುಂಟು ಮಾಡುತ್ತದೆ.

ಒಟ್ಟಿನಲ್ಲಿ ಆರ್ಥಿಕ ವಲಯವು ಪ್ರಮುಖ ಆರ್ಥಿಕ ಕೇಂದ್ರವಾದ್ದರಿಂದ ಕುಟುಂಬದಲ್ಲಿನ ಆರ್ಥಿಕ ವ್ಯವಹಾರಗಳು ಮತ್ತು ಸಾರ್ವಜನಿಕ ವಲಯದ ಆರ್ಥಿಕ ವ್ಯವಹಾರಗಳನ್ನು ಅವಳು ಅರ್ಥೈಸಿಕೊಳ್ಳದಂತಹ ಪ್ರಸಂಗಗಳನ್ನು ಸೃಷ್ಟಿಸಲಾಗುತ್ತದೆ. ಇಲ್ಲಿನ ಒಟ್ಟು ದೌರ್ಜನ್ಯ-ಹಿಂಸೆಯ ಸ್ವರೂಪವೇ ಅವಳ ಆರ್ಥಿಕ ವಲಯದ ಪ್ರವೇಶದ ನಿರಾಕರಣೆಯಾಗಿದೆ.

ಆರ್ಥಿಕ ವಲಯದ ಪ್ರಮುಖ ಭಾಗವಾದ ಉದ್ಯೋಗ ವಲಯವನ್ನು ಈ ಸಂಶೋಧನೆಯಲ್ಲಿ ಒಂದು ಪ್ರತ್ಯೇಕ ಭಾಗವಾಗಿಯೇ ಚರ್ಚೆಗೊಳಪಡಿಸಲಾಗುತ್ತದೆ. ಸಾರ್ವಜನಿಕ ವಲಯದಲ್ಲಿನ ಎಲ್ಲ

ಭಾಗಗಳಲ್ಲಿ ಮಹಿಳೆಯು ಉದ್ಯೋಗಕ್ಕೆ ಪಾಲ್ಗೊಳ್ಳುತ್ತಿರುವುದರ ಹಿನ್ನೆಲೆಯನ್ನಾಧರಿಸಿ ಈ ಉದ್ಯೋಗ ವಲಯವನ್ನು ಪ್ರತ್ಯೇಕವಾಗಿ ಚರ್ಚೆಗೊಳಪಡಿಸಬೇಕಾದ ಅಗತ್ಯತೆಯಿದೆ.

## ೩.೫. ಉದ್ಯೋಗ ವಲಯ

ಉದ್ಯೋಗಂ ಪುರುಷ ಲಕ್ಷಣಂ, ಗೃಹಿಣಿ ಗೃಹಮುಚ್ಯತೆ.... ಎಂದು ಬಲವಾಗಿ ಬೇರೂರಿರುವ ಸಮಾಜ ವ್ಯವಸ್ಥೆಯಲ್ಲಿ, ಹಗಲಿರುಳು ಮಹಿಳೆ ದುಡಿಯುತ್ತಿದ್ದರೂ, ಅದು ದುಡಿಮೆ ಎನ್ನಿಸದಿರುವುದು ವಿಪರ್ಯಾಸವೇ ಸರಿ. ಸರ್ವೇ ಸಾಮಾನ್ಯವಾಗಿ ಮಹಿಳೆಯನ್ನೊಳಗೊಂಡು ಯಾರನ್ನೇ ಆಗಲೀ 'ನಿಮ್ಮ ಅಮ್ಮ, ಅಕ್ಕ, ಹೆಂಡತಿ ಏನ್ಮಾಡ್ತಾರೆಂದು ಪ್ರಶ್ನಿಸಿದಾಗ, ಏನೂ ಮಾಡಲ್ಲ ಸುಮ್ಮನೆ ಮನೇಲಿರ್ತಾರೆ' ಎಂಬ ಉತ್ತರ ಕೇಳುತ್ತವೆ. ಮನೆಯಲ್ಲಿನ ದುಡಿಮೆ ದುಡಿಮೆಯಲ್ಲವೆಂಬುದನ್ನು ಸಮಾಜದಲ್ಲಿ ಎಷ್ಟು ಭದ್ರವಾಗಿ ನೆಲೆಯೂರಿದೆ. ಉದ್ಯೋಗವೆಂದರೆ, ಕುಟುಂಬದಾಚೆಗೆ ಹೋಗಿ ನಿಗದಿತ ಅವಧಿಯವರೆಗೆ ಕಾರ್ಯ ನಿರ್ವಹಿಸುವುದು ಎಂಬುದಾಗಿದೆ. ಈ ಬಗೆಯ ನಿಗದಿತ ಕೆಲಸಗಳಿಗೆ ಒಂದು ವಲಯಕ್ಕೆ ಸೀಮಿತವಾಗುವುದನ್ನು ಉದ್ಯೋಗ ವಲಯವೆನ್ನಲಾಗುತ್ತದೆ. ಈ ಉದ್ಯೋಗ ವಲಯದಲ್ಲಿ ಮಹಿಳೆಯ ಪಾಲ್ಗೊಳ್ಳುವಿಕೆ, ಅದರಿಂದ ಅವಳ ಸಬಲೀಕರಣವಾಗುತ್ತಿದೆಯೆ? ಒಟ್ಟು ಮಹಿಳಾ ಉದ್ಯೋಗದ ಸ್ವರೂಪ ಉದ್ಯೋಗ ವಲಯದಲ್ಲಿ ಅವಳ ಮೇಲಾಗುತ್ತಿರುವ ಹಿಂಸೆ-ದೌರ್ಜನ್ಯದ ಸ್ವರೂಪ ಮತ್ತು ಈ ಸಂಬಂಧಿತ ಕಾನೂನುಗಳನ್ನು ಇಲ್ಲಿ ಚರ್ಚೆಗೊಳಪಡಿಸಲಾಗುತ್ತಿದೆ.

ಆರ್ಥಿಕ ವಲಯದ ಒಂದು ಪ್ರಮುಖ ಭಾಗವಾಗಿ ಕಾಣಿಸಿಕೊಳ್ಳುವ ಉದ್ಯೋಗ ವಲಯದಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಯು ಆಶಾದಾಯಕ ಸಂಗತಿಯೇ ಸರಿ. ಆದರೆ ಒಟ್ಟು ಅರ್ಥಶಾಸ್ತ್ರದ ಚಿಂತನೆಗಳೆ ಮಹಿಳಾ ದುಡಿಮೆಯನ್ನು ದುಡಿಮೆಯ ವ್ಯಾಖ್ಯಾನಕ್ಕೆ ಸೇರಿಸದಿರುವುದು, ಮಹಿಳಾ ಉದ್ಯೋಗವನ್ನು ಉದ್ಯೋಗವೆಂದು ಪರಿಗಣಿಸುವುದೆಂತು? ಇಂತಹ ಬಿಕ್ಕಟ್ಟಿನ ಸಂದರ್ಭಗಳಲ್ಲಿ ಮಹಿಳೆ ಉದ್ಯೋಗ ವಲಯವನ್ನು ಪ್ರವೇಶಿಸಿದ್ದು, ಅವಳಿಗೆ ಉದ್ಯೋಗಾವಕಾಶಗಳು ಲಭ್ಯವಾಗಿರುವ ಪ್ರಮಾಣವು ಎಷ್ಟು ಎಂಬ ಪ್ರಶ್ನೆಗಳಿಗೆ ಉತ್ತರವನ್ನು ಶೋಧಿಸಿದಾಗ, ೧೯೭೧ರಲ್ಲಿ ಮಹಿಳಾ ಜನಸಂಖ್ಯೆಯ ಮೂರನೆಯ ಒಂದು ಭಾಗದಷ್ಟು ಮಹಿಳೆಯರು ಉದ್ಯೋಗ ವಲಯಕ್ಕೆ ಪ್ರದೇಶ ಪಡೆದಿದ್ದಾರೆಂದು ತಿಳಿದುಬರುತ್ತದೆ. ಈ ನಿಟ್ಟಿನಲ್ಲಿ ಉದ್ಯೋಗ ವಲಯಕ್ಕೆ ಪ್ರವೇಶಿಸಿದ್ದು, ತಜ್ಞ ವೃತ್ತಿಗಳಲ್ಲಿನ ಪಾಲ್ಗೊಳ್ಳುವಿಕೆ ತೀರಾ ಕಡಿಮೆ. ವಾಣಿಜ್ಯ-ವಿಜ್ಞಾನಗಳಲ್ಲಿ ಮಹಿಳೆಯರ ಪಾಲು ತೀರಾ ಗೌಣವೆಂದು ಹಾಗೂ ಅಸಂಘಟಿತ ವಲಯಗಳಲ್ಲಿ ಭಾಗವಹಿಸುವಿಕೆಯ ಪ್ರಮಾಣ ಹೆಚ್ಚೆಂದು ಸಾಕಷ್ಟು ಅಧ್ಯಯನಗಳೂ ಅಂಕಿ-ಸಂಖ್ಯೆಗಳ ಮೂಲಕ ದೃಢಪಡಿಸಿವೆ.

ಉದ್ಯೋಗ ವಲಯಕ್ಕೆ ಮಹಿಳೆ ಪ್ರವೇಶಿಸಲು ನಿಗದಿತ ಶಿಕ್ಷಣ, ತರಬೇತಿಯನ್ನು ಒತ್ತಿ ಹೇಳುವ ಸಾಂಪ್ರದಾಯಿಕ ಸಮಾಜ ವ್ಯವಸ್ಥೆಯು, ಅವಳ ಶೈಕ್ಷಣಿಕ ವಲಯದ ಪ್ರವೇಶವನ್ನು ನಿರಾಕರಿಸುವುದು, ಉದ್ಯೋಗ ವಲಯದಲ್ಲಿ ಪಾಲ್ಗೊಳ್ಳದಂತಾಗಲು ನಡೆಸುತ್ತಿರುವ ರಾಜಕಾರಣವೇ ಆಗಿದೆ. ಈ ಬಗೆಯ

ಸಂದರ್ಭಗಳಲ್ಲಿ ಮಹಿಳೆಯು ಉದ್ಯೋಗ - ಉದ್ಯಮ ಕ್ಷೇತ್ರಗಳಲ್ಲಿ ಪ್ರವೇಶಿಸಿರುವುದು ಬ್ರಿಟಿಷ್ ಅಧಿಪತ್ಯದ ಪರಿಣಾಮದಿಂದಲೇ ಆಗಿವೆ.

ಹೀಗೆ ಲಭ್ಯವಾದ ಉದ್ಯೋಗಾವಕಾಶಗಳು ಮಹಿಳೆಗೆ ಆಯ್ಕೆಯೊ? ಒತ್ತಾಯವೋ? ಎಂದು ಪ್ರಶ್ನಿಸಿಕೊಂಡಾಗ, ಪುರುಷ ಪ್ರತಿಷ್ಠೆಯ ಭಾಗವಾಗಿ ಕಾಣಿಸಿಕೊಳ್ಳುವ ಉದ್ಯೋಗವು ಅವಳ ಆಯ್ಕೆಯಲ್ಲವೆಂಬುದನ್ನು ನಿರ್ಧರಿಸುತ್ತವೆ ಹಾಗೂ ಮಹಿಳೆಯ ಉದ್ಯೋಗವೆಂಬುದು ಮೋಜು, ಐಷರಾಮಿಗಾಗಿಯೆಂಬ ಹಲವಾರು ಮಿಥ್‌ಗಳನ್ನು ಸೃಷ್ಟಿಸಲಾಗುತ್ತದೆ. ಅಲ್ಲದೆ ಅವಳ ಉದ್ಯೋಗಗಳು ಬಿಡುವಿನ ಸಮಯದಲ್ಲಿ ನಿರ್ವಹಿಸುವ ಕೆಲಸಗಳೆಂದೆ ಬಿಂಬಿಸಲಾಗುತ್ತಿದೆ.

ಆರಂಭದ ಹಂತದಲ್ಲಿ ಮಹಿಳಾ ಉದ್ಯೋಗವು ಜೀವನ ನಿರ್ವಹಣೆಗಾಗಿ, ಕುಟುಂಬದ ಸಹಾಯಕ್ಕಾಗಿ ರೂಪಿಸಲಾಯಿತೇ ವಿನಹ ಅವಳ ಸ್ವಾವಲಂಬನೆಯ ಮಾರ್ಗವಾಗಿ ಅಲ್ಲ. ಆ ಕಾರಣವಾಗಿ ಉದ್ಯೋಗವು ಮಹಿಳಾ ಬಿಡುಗಡೆಯ ಸಾಧನವಾಗದೆ, ದಿಗ್ಬಂಧನದ ಮತ್ತೊಂದು ಮಾರ್ಗವಾಯಿತು. ಕೆಲವು ಕಾರಣಗಳಿಂದ ಆರಂಭವಾದ ಮಹಿಳಾ ಉದ್ಯೋಗವು ಅಂದಿನಿಂದ - ಇಂದಿನವರೆಗೂ ವಿಭಿನ್ನ ಆಯಾಮಗಳಲ್ಲಿ ಕಾಣಿಸಿಕೊಳ್ಳುತ್ತಿದೆ.

ಈ ಉದ್ಯೋಗಗಳನ್ನು ೧೯೯೧ ರ ಜನಗಣತಿ ವರದಿಯಲ್ಲಿ ಒಂಬತ್ತು ಬಗೆಗಳಾಗಿ ವಿಂಗಡಿಸಲಾಯಿತು. ಅವುಗಳು ೧. ಕೃಷಿಕಾರ್ಮಿಕರು, ೨. ಗಣಿಗಾರಿಕೆ, ಹೈನುಗಾರಿಕೆ, ಅರಣ್ಯಗಾರಿಕೆ, ತೋಟಗಾರಿಕೆ, ೩. ಸಾಗುವಳಿದಾರರು, ೪. ಕುಟುಂಬ ಸಂಬಂಧಿ ಕೈಗಾರಿಕೆ, ೫. ಕುಟುಂಬೇತರ ಕೈಗಾರಿಕಾ ಚಟುವಟಿಕೆಗಳು, ೬. ಕಟ್ಟಡ ನಿರ್ಮಾಣ, ೭. ವ್ಯಾಪಾರ-ವಾಣಿಜ್ಯ, ೮. ಸಾರಿಗೆ, ಉಗ್ರಾಣ, ಸಂಪರ್ಕ, ೯. ಇತರೆ. ಈ ಬಗೆಯಲ್ಲಿ ವಿಭಜಿಸಲಾದ ಉದ್ಯೋಗಳಲ್ಲಿ ಮಹಿಳೆಯರು ೭೦ ಪ್ರತಿಶತಕ್ಕಿಂತ ಹೆಚ್ಚು ಕೃಷಿ ಸಂಬಂಧಿತ ವಲಯಗಳಲ್ಲಿ ಕಾರ್ಮಿಕರಾಗಿ ಭಾಗವಹಿಸಿರುವುದು ಹೆಚ್ಚಾಗಿ ಕಂಡು ಬರುತ್ತದೆ. ಇನ್ನಿತರ ಪ್ರತಿಶತ ಮಹಿಳೆಯರು ಇತರೆ ವಲಯಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಆದರೆ ಮಹಿಳಾ ದುಡಿಮೆಯನ್ನು ಸಮಾಜೋ-ಆರ್ಥಿಕ ಕಾರಣಗಳಿಗನುಗುಣವಾಗಿ, ಸಮಾನತೆಯೆಡಗಿನ ವರದಿಯು ಮೂರು ಬಗೆಗಳಲ್ಲಿ ವಿಭಜಿಸಿದೆ.

ಮೊದಲ ಗುಂಪು ಹೊಟ್ಟೆ-ಬಟ್ಟೆಗಿಲ್ಲದೆ ಅನಿವಾರ್ಯವಾಗಿ ಉದ್ಯೋಗಕ್ಕೆ ತೊಡಗುವವರು. ಅಸಂಘಟಿತ ವಲಯಗಳಲ್ಲಿ ಇವರು ಹೆಚ್ಚಿನ ಪ್ರಮಾಣದಲ್ಲಿ ಕಾಣಿಸಿಕೊಳ್ಳುತ್ತಾರೆ. ಹೆಚ್ಚು ಅನಕ್ಷರಸ್ಥರಾಗಿರುತ್ತಾರೆ. ಎರಡನೆಯ ಬಗೆಯಲ್ಲಿರುವವರು ಮಧ್ಯಮ ಹಂತದಲ್ಲಿರುವವರಾಗಿದ್ದು, ಕುಟುಂಬದ ಜೀವನ ಮಟ್ಟವನ್ನು ಸುಧಾರಿಸಲು ಯತ್ನಿಸುವ ಈ ಮಹಿಳಾ ಉದ್ಯೋಗಿಗಳು ಕಾರ್ಖಾನೆ, ವೃತ್ತಿಪರ ಚಟುವಟಿಕೆಗಳಲ್ಲಿ ಗ್ರಾಮೀಣ ಭಾಗದ ಸಾಗುವಳಿ ಕೆಲಸಗಳನ್ನು ಮಾಡುತ್ತಿರುತ್ತಾರೆ. ಕೊನೆಯ ಗುಂಪಿನದು ಉದ್ಯೋಗಿಗಳನ್ನು ಸುಸ್ಥಿತಿಯಲ್ಲಿರುವವರು ಎಂದು ಹೇಳಲಾಗಿದೆ. ಉನ್ನತ ಶಿಕ್ಷಣದ ಹಂತದಲ್ಲಿರುವ ಇವರುಗಳು ಸ್ವಾಯತ್ತ ಬದುಕನ್ನು ರೂಪಿಸುವ ಹಿತಕ್ಕಾಗಿ ವೃತ್ತಿಗಳಲ್ಲಿ

ತೊಡಗಿಕೊಂಡಿರುತ್ತಾರೆ. ಇವರು ಸಹ ಕುಟುಂಬದ ಮಟ್ಟವನ್ನು ಔನ್ನತ್ಯಕ್ಕೇರಿಸುವ ಹಂಬಲದಿಂದ ಉದ್ಯೋಗ ವಲಯಕ್ಕೆ ಪ್ರವೇಶಿಸುತ್ತಾರೆ.

ಈ ಮೂರು ಬಗೆಗಳಲ್ಲಿ ಮೊದಲನೆಯ ಗುಂಪಿನಲ್ಲಿಯೇ ಬಹುಸಂಖ್ಯಾತ ಮಹಿಳಾ ಉದ್ಯೋಗಿಗಳನ್ನು ಕಾಣಬಹುದಾಗಿದೆ. ಅದರಲ್ಲೂ ಕೃಷಿ ವಲಯದಲ್ಲಿ ಗಣನೀಯ ಪ್ರಮಾಣದಲ್ಲಿರುತ್ತಾರೆ. ಅದರಲ್ಲೂ ಪರಿಶಿಷ್ಟಜಾತಿ, ಪರಿಶಿಷ್ಟ ಪಂಗಡಗಳವರು ಹೆಚ್ಚಿನ ಸಂಖ್ಯೆಯಲ್ಲಿ ಕಾಣಸಿಕೊಳ್ಳುತ್ತಾರೆ. ಮಹಿಳಾ ದುಡಿಮೆಯನ್ನು ಅಂಚಿಗೆ ಸರಿಸಲ್ಪಟ್ಟಿರುವ ಪ್ರಧಾನ ಧಾರೆಗಳಲ್ಲಿ, ಮಹಿಳೆಯು ಅಂಚಿನದೆಂದೆ ಕಾಣಲಾಗುತ್ತಿರುವ ಅಸಂಘಟಿತ ವಲಯಗಳಲ್ಲಿರುವುದೇ ಹೆಚ್ಚಾಗಿದೆ. ಸರ್ಕಾರ, ಸಂಘ-ಸಂಸ್ಥೆಗಳ ಚೌಕಟ್ಟಿಗೆ ಬರದ ಈ ವಲಯಗಳಲ್ಲಿ ಮಹಿಳಾ ಸ್ಥಿತಿಯು ಅತ್ಯಂತ ಹೀನಾಯವಾಗಿದೆ ಹಾಗೂ ಈ ಕ್ಷೇತ್ರದಲ್ಲಿನ ದುಡಿಮೆಯನ್ನು ಅಷ್ಟಾಗಿ ಗಣನೆಗೆ ತೆಗೆದುಕೊಳ್ಳುತ್ತಿಲ್ಲ. ಕುಟುಂಬದ ಅಗತ್ಯತೆಯ ಭಾಗವಾಗಿ ಉದ್ಯೋಗಕ್ಕೆ ಸೇರಿಕೊಳ್ಳುವ ಮಹಿಳಾ ಸಮುದಾಯದ ಕೂಲಿಯೂ ಕುಟುಂಬಕ್ಕೆ ಸಾಲದಂತಾಗಿ ಅದೃಶ್ಯವಾಗುತ್ತಿವೆ. ಈ ವಲಯಗಳಲ್ಲಿ ಲಿಂಗಾಧಾರಿತ ತಾರತಮ್ಯದಿಂದಾಗಿ ಕೂಲಿಯ ಪ್ರಮಾಣವು ಗೌಣವಾಗಿದೆಯೆಂಬುದನ್ನು ಈ ರೇಖಾಚಿತ್ರದ ಮೂಲಕ ತೋರಿಸಲಾಗುತ್ತದೆ.




ಉದ್ಯೋಗ ವಲಯವು ಪುರುಷ ವಲಯವೆಂದು ಘೋಷಿಸಲಾದ ಸಮಾಜ ವ್ಯವಸ್ಥೆಯಲ್ಲಿ ಶತಮಾನಗಳ ಕಾಲ ಪ್ರವೇಶವನ್ನು ಮಹಿಳೆಗೆ ನಿಷೇಧಿಸಲಾಗಿತ್ತು. ಈ ನಿಷೇಧತೆಯನ್ನು ಮೀರಿ ಮಹಿಳೆ ಉದ್ಯೋಗ ವಲಯಕ್ಕೆ ಪ್ರವೇಶಿಸುವುದರಿಂದ ಹಲವು ಬಗೆಯ ಹಿಂಸೆ - ದೌರ್ಜನ್ಯವನ್ನು ಅನುಭವಿಸಬೇಕಾಗುತ್ತದೆ. ಈ ನಿಟ್ಟಿನಲ್ಲಿ ಕೂಲಿ ತಾರತಮ್ಯವು ಹೆಚ್ಚು ಪ್ರಚಲಿತವಾಗಿದೆ. ಮಹಿಳೆಯ

ಉದ್ಯೋಗಗಳೇ ಕೆಳದರ್ಜೆಯ ಉದ್ಯೋಗವೆಂದು ಪರಿಗಣಿಸಿ ಮಾರುಕಟ್ಟೆಯಲ್ಲಿ ಅವಳ ವೇತನ ಪ್ರಮಾಣವನ್ನು ಗೌಣಗೊಳಿಸಲಾಗಿದೆ. ಆ ಹಿನ್ನೆಲೆಯಲ್ಲಿ ಮೇಲಿನ ಚಿತ್ರದಲ್ಲಿ ಪುರುಷರ ಕೂಲಿಯು EM ಎಂದು (ಉನ್ನತ), ಮಹಿಳೆಯ ಕೂಲಿಯು EF ಎಂದು ಗೌಣವಾಗಿರುತ್ತದೆಯೆಂಬುದನ್ನು ಚಿತ್ರಿಸಲಾಗಿದೆ.

ಹೀಗೆ ಮಹಿಳಾ ಉದ್ಯೋಗವು ದಮನಿತ ಮತ್ತು ಅಂಚಿನ ನೆಲೆಯಲ್ಲಿ ನೋಡಲಾಗುತ್ತದೆ. ಈ ಸಂಗತಿಗಳನ್ನು ಚರ್ಚಿಸುತ್ತಾ ಬಂದಾಗ, ಉದ್ಯೋಗಗಳು ಮಹಿಳೆಗೆ ಭದ್ರತೆ, ಸ್ವಾತಂತ್ರ್ಯ, ಸ್ವಾವಲಂಬನೆಯನ್ನು ಒದಗಿಸಿಕೊಟ್ಟಿದೆಯೆಂಬುದು ಹುಸಿಯಾಗಿವೆ. ಉದ್ಯೋಗವು ಮಹಿಳೆಯರ ಬಿಡುಗಡೆಯ ಸಾಧನವೆಂದು ಹೇಳುವ ಆಧುನಿಕ ವಿಚಾರ ಪ್ರಣಾಳಿಕೆ ಮತ್ತು ಮಾರ್ಕ್ಸ್ ವಿಚಾರ ಪ್ರಣಾಳಿಕೆಗಳೆರಡೂ ಭ್ರಮೆಯನ್ನು ಸೃಷ್ಟಿಸಲು ಮುಂದಾಗಿವೆ ಎಂದು ಹೇಳಬಹುದು.

ಗೃಹಕೃತ್ಯಗಳೇ ಮಹಿಳೆಯ ಪ್ರಮುಖ ಜವಾಬ್ದಾರಿಯೆಂದು ಬಿಂಬಿಸುವ ಸಮಾಜ ವ್ಯವಸ್ಥೆಯಲ್ಲಿ ಉದ್ಯೋಗವೆನ್ನುವುದು ಅದಕ್ಕೆ ಪೂರಕವಾದ ಸಾಧನವಾಗಿ ಮಾತ್ರ ಚಿತ್ರಿಸಲಾಗುತ್ತದೆ. ಮೂರು ಬಗೆಯ ಉದ್ಯೋಗಗಳಲ್ಲಿ ದುಡಿಯುವ ಮಹಿಳೆಯು ಉದ್ಯೋಗಸ್ಥಳಾಗಿ ಪರಿಗಣಿತವಾಗುವುದು ತೀರಾ ಕಡಿಮೆ ಸಂದರ್ಭಗಳಲ್ಲಿ.

ಅಸಂಘಟಿತ ವಲಯಗಳಲ್ಲಿ ಈ ಬಗೆಯಾದರೆ, ಸಂಘಟಿತ ವಲಯದ ಮಹಿಳೆಯ ಉದ್ಯೋಗಗಳೂ ನಿರಾಳತೆಯಿಂದ ಕೂಡಿಕೊಂಡಿಲ್ಲ. ಕುಟುಂಬ ವ್ಯವಸ್ಥೆಯ ಅಧೀನ ಸ್ಥಾನ-ಮಾನಗಳೇ ಇಲ್ಲಿಯೂ ಸಹ ಪ್ರತಿಬಿಂಬಿಸಲ್ಪಟ್ಟಿವೆ. ಬಹುತೇಕ ಮಹಿಳೆಯರು ಕ್ಲರ್ಕ್, ದಾದಿಯರು, ಆಯಗಳು, ಅಟೆಂಡರಳಾಗಿ ಕಾಣಿಸಿಕೊಳ್ಳುತ್ತಾರೆ. ಅಧೀನ ನೆಲೆಯ ಸ್ಥಾಪನೆ ಇಲ್ಲಿಯೂ ಮುಂದುವರೆದಿದೆ. ಉನ್ನತ ಸ್ಥಾನಗಳಲ್ಲಿಯೂ ಮಹಿಳೆಯರೂ ಕಾಣಿಸಿಕೊಳ್ಳುತ್ತಿದ್ದಾರೆಂದರೂ ಪ್ರಮಾಣ ತೀರಾ ಗೌಣವಾಗಿದೆ. ಸೇವಾವಲಯಗಳಲ್ಲಿಯೇ ಮಹಿಳೆಯನ್ನು ನಿಗದಿತಗೊಳಿಸುವ ಸಂಚು ಪುರುಷ ಸಂಸ್ಕೃತಿಯದೇ ಆಗಿದೆ. ಶಿಕ್ಷಕಿಯಿಂದ ಮೊದಲುಗೊಂಡು ವೇಶ್ಯಾವೃತ್ತಿಯವರೆಗೂ ಸಹ ಪುರುಷಾನುಕೂಲಕ್ಕೆ ತಕ್ಕಂತೆ, ಅಗತ್ಯವಾದ ಸೇವಾವಲಯದ ಉದ್ಯೋಗಗಳನ್ನು ಮಹಿಳೆಗೆ ಸೀಮಿತಿಗೊಳಿಸಲಾಗಿದೆ.

ಕುಟುಂಬ ವಲಯದ ಈ ಅಧೀನತೆಯ ವಿಸ್ತರಣೆಯ ಉದ್ದೇಶವಿಷ್ಟೇ ಮಹಿಳಾ ಉದ್ಯೋಗಿಗಳು ಸ್ವಾವಲಂಬಿಗಳಾಗದಂತೆ ನಿಭಾಯಿಸುವುದು, ಉದ್ಯೋಗಸ್ಥಳಾದ ತಕ್ಷಣವೇ ಅವಳು ಪುರುಷನ ಅಗತ್ಯಗಳೇ ಪೂರೈಕೆಯನ್ನೊದಗಿಸುವಲ್ಲಿ ನಿರಾಕರಿಸಲಾಗದಂತಾಗಿಸುವುದು. ಆ ಕಾರಣಕ್ಕೆ ಕೌಟುಂಬಿಕ ವಲಯದ ಚೌಕಟ್ಟಿನ ಗೃಹಿಣಿತ್ವದ ಕೆಲಸಗಳೇ ಉದ್ಯೋಗ ವಲಯದಲ್ಲೂ ಅವಳು ಪೂರೈಸಬೇಕೆಂಬುವಂತೆ, ಪುರುಷ ರೂಪಿ ಉದ್ಯೋಗ ವಲಯದಲ್ಲಿ ಕಾಣಿಸಿಕೊಳ್ಳುತ್ತಿದೆ. ಉದ್ಯೋಗಸ್ಥ ಮಹಿಳೆಯು ಸಾಧನಾ ಸಂಗತಿಗಳತ್ತ ಮೂಖ ಮಾಡದಂತೆ ತಡೆಯುವಲ್ಲಿಂದ ಕಾಣುವ ದೌರ್ಜನ್ಯ - ಹಿಂಸೆಗಳು, ಮರಣಾಂತಿಕ ಹಲ್ಲೆಗಳವರೆಗೂ ಕಾಣಿಸಬಹುದಾಗಿದೆ. ಅವಳ ಸಾಧನೆಯು ಕುಟುಂಬದ ನೆಮ್ಮದಿಗೆ ಭಂಗ

ತರುವಂತಾಗುತ್ತದೆಯೆಂದು ವಿವಿಧ ಆಯಾಮಗಳಲ್ಲಿ ತೋರಿಸಲಾಗುತ್ತದೆ. ಹೆಣ್ಣಿನ ಆರ್ಥಿಕ ಸ್ವಾವಲಂಬನೆಯು ಕುಟುಂಬದ ದುರಂತವೆನುವ ಹಲವು ಬಗೆಯ ಉದಾಹರಣೆಗಳನ್ನು ಸೃಷ್ಟಿಸಲಾಗಿದೆ.

ಈ ಬಗೆಯ ಉದ್ಯೋಗ ವಲಯಕ್ಕೆ ಮಹಿಳೆಯರ ಪ್ರವೇಶ ಅವಳ ಸ್ವ-ಹಿತಾಸಕ್ತಿಯಾಗಲಿ - ಸ್ವಯಂ ಇಚ್ಛೆಯಾಗಲಿ ಅಲ್ಲ. ಇಲ್ಲಿನ ಪ್ರವೇಶಕ್ಕಾಗಿ ಅವರು ಕುಟುಂಬದ ಒಡೆಯನ ಹಾಗೂ ಇತರೆ ಗಂಡಸರ ಒಪ್ಪಿಗೆಯನ್ನು ಪಡೆಯಬೇಕಾದ ಅನಿವಾರ್ಯತೆಯಿದೆ. ಇವತ್ತಿನ ಸಂದರ್ಭಗಳಲ್ಲಿ ಈ ಬಗೆಯ ಅನುಮತಿಯು ಸರಳವಾಗಿ ಸಿಗುತ್ತಿದೆಯೆಂಬುದು ಒಪ್ಪಿತವಾದರೂ, ಅದು ಅವಳ ಆದಾಯದ ಮೇಲಿನ ನಿಯಂತ್ರಣದ ಹುನ್ನಾರವಾಗಿದೆ. ಅಷ್ಟೇ ಅಲ್ಲದೆ ಅವಳು ಕುಟುಂಬದ ಕ್ಷೇಮವನ್ನು ಸಮರ್ಥವಾಗಿ ಪಾಲಿಸಬೇಕೆಂಬ ನಿರ್ಬಂಧಗಳನ್ನು ಹೇರಲಾಗುತ್ತದೆ. ಕೆಲವೊಮ್ಮೆ ಒತ್ತಾಯಪೂರ್ವಕವಾಗಿ ಸೇರಿಸಿದಾಗಲೂ ಈ ಅಲಿಖಿತ ಕಾನೂನುಗಳ ಉಲ್ಲಂಘನೆ ಸಾಧ್ಯವಿಲ್ಲ. ಈ ಬಗೆಯ ನಿರ್ಬಂಧಗಳೊಂದಿಗೆ ಮುಂದುವರಿಯುವ ಉದ್ಯೋಗಸ್ಥ ಮಹಿಳೆಗೆ ಉದ್ಯೋಗ ವಲಯವು ಸುಖದ ಸುಪ್ಪತ್ತಿಗೆಯಾಗಿರದೆ ಅವಳು ಈ ಪ್ರವೇಶದಿಂದ ಕಾಲ್ತೆಗೆಯುವಂತಾಗಿಸಲು ಶೋಷಣಾತ್ಮಕ ಮಾರ್ಗಗಳನ್ನೇ ಪುರುಷ ಚಿಂತನೆ ಶೋಧಿಸುತ್ತಿರುತ್ತದೆ. ದಿನಂಪ್ರತಿ ಮೂರು ಬಗೆಯ ದುಡಿಮೆಯಲ್ಲಿ ಮಹಿಳೆ ತೊಡಗಿಕೊಳ್ಳುತ್ತಿದ್ದರು ಅದು ಮಹತ್ವದ ಅಂಶವಾಗದೇ, ದುಡಿಮೆಯ ವ್ಯಾಖ್ಯಾನದಲ್ಲಿಯೂ ಸೇರಿಸದೇ ಇರುವುದಕ್ಕೆ ಡಾ. ಎಚ್.ಎಸ್. ಶ್ರೀಮತಿಯವರ ಈ ಹೇಳಿಕೆಯ ಉಲ್ಲೇಖವು ಗಮನಾರ್ಹ. "ನಮ್ಮ ಚಿಂತನೆಗಳು ಪುರುಷ ಕೇಂದ್ರದಿಂದ ಹೊರಟು ಕುಟುಂಬದ ಕ್ಷೇಮವನ್ನು ಚಿಂತಿಸುವ ಏಕಪಕ್ಷೀಯ ಗುಣವನ್ನೇ ಹೊಂದಿವೆ. ಮಹಿಳಾ ಪರವಾಗಿ ನಿಲ್ಲುವ ಅಗತ್ಯ ಅವುಗಳಿಗೆ ಕಂಡಂತಿಲ್ಲ" (ಉಲ್ಲೇಖ: ಮಹಿಳಾ ಅಧ್ಯಯನ, ದಕ್ಷಿಣಾಯನ ಸಂಚಿಕೆ, ಜುಲೈ ೨೦೦೦)[೮] ಎಂದು ಡಾ. ಎಚ್.ಎಸ್. ಶ್ರೀಮತಿಯವರು ಅಭಿಪ್ರಾಯವನ್ನು ನೀಡಿದ್ದಾರೆ.

ಮಹಿಳೆಯರ ಉದ್ಯೋಗ ವಲಯದ ಪ್ರವೇಶವನ್ನು ನಿರಾಕರಿಸುವಲ್ಲಿ ಅನೇಕ ಸಿದ್ಧಾಂತಗಳನ್ನು ಪೂರಕವಾಗಿ ರೂಪಿಸಲಾಗಿದೆ. ಉದಾ: ಗ್ಯಾರಿಬೇಕರ್ ಪ್ರತಿಪಾದಿಸುವ ಕುಟುಂಬ ಘಟಕ ಸಿದ್ಧಾಂತದಲ್ಲಿ ಕುಟುಂಬವನ್ನು ಮಾರುಕಟ್ಟೆಗೆ ಹೋಲಿಸಿ, ಈ ಮಾರುಕಟ್ಟೆಯಲ್ಲಿ ದುಡಿಯಲು ಮಹಿಳೆ ಮಾತ್ರ ಸಮರ್ಥಳು, ಗಂಡು-ಹೆಣ್ಣುಗಳಿಬ್ಬರೂ ಅವರವರ ಮಾರುಕಟ್ಟೆಗಳನ್ನು ಬದಲಾಯಿಸಿಕೊಂಡರೆ, ಅಲ್ಲಿ ಅವರು ಸಮರ್ಥವಾಗಿ ನಿಲ್ಲಲು ಕುಶಲತೆಯ ಕೊರತೆಯನ್ನು ಪ್ರತಿಪಾದಿಸುವುದರ ಹಿಂದೆಯೇ ಮಹಿಳೆಯನ್ನು ಕುಟುಂಬಕ್ಕೆ ಬಂಧಿಸುವ ತಂತ್ರಗಾರಿಕೆಯು ಸ್ಪಷ್ಟವಾಗುತ್ತಿದೆ. ನೆಪಮಾತ್ರಕ್ಕೆನುವಂತೆ ಸೃಷ್ಟಿಸಲಾದ ಕುಟುಂಬವನ್ನು ಮಾರುಕಟ್ಟೆಗೆ ಹೋಲಿಸುವ ಪರಿಕಲ್ಪನೆಯು ಅರ್ಥಶಾಸ್ತ್ರದಲ್ಲಿ ಹೊರಗುಳಿಯುವುದಕ್ಕೆ ಗ್ಯಾರಿ ಬೇಕರ್‌ರವರಲ್ಲಿ ಉತ್ತರಗಳೇ ಇಲ್ಲವೆನ್ನಬಹುದು. ಒಟ್ಟು ಸಮಾಜ ವ್ಯವಸ್ಥೆಯಲ್ಲಿನ ಮನುಷ್ಯ ಜೀವಿಗೆ ಸಮಾನ ಬಗೆಯ ತರಬೇತಿಗಳು ದೊರೆಯುವುದಾದಲ್ಲಿ ಗಂಡು-ಹೆಣ್ಣುಗಳಿರ್ವರು ಎರಡು ಬಗೆಯ ಉದ್ಯೋಗಗಳಲ್ಲಿ ಸಮರ್ಥವಾಗಿ ನೆಲೆನಿಲ್ಲಬಹುದೆಂಬುದರ ಕುರಿತು ಬೇಕರ್ ಚಕಾರವೆತ್ತುವುದಿಲ್ಲ.

ದಿನ ದಿನಕ್ಕೂ ಬದಲಾವಣೆಯನ್ನು ಕಾಣುತ್ತಿರುವ ಪರಿವರ್ತನಾಶೀಲ ಸಮಾಜ ವ್ಯವಸ್ಥೆಯಲ್ಲಿ, ಉದ್ಯೋಗವು ಮತ್ತೆ ಕುಟುಂಬವನ್ನು ಪ್ರವೇಶಿಸುತ್ತಿರುವುದು, ಮಹಿಳೆಯನ್ನು ಸಾರ್ವಜನಿಕ ವಲಯದಿಂದ ಗೃಹಬಂಧನಕ್ಕೆ ಸೀಮಿತಗೊಳಿಸುವಲ್ಲಿ ಪಿತೃಸಂಸ್ಕೃತಿಯ ಹೊಸ ರೂಪದ ಹುನ್ನಾರವೆಂದು ಹೇಳಬಹುದಾಗಿದೆ. ಗೃಹದಲ್ಲಿದ್ದುಕೊಂಡೆ ಗುತ್ತಿಗೆ ಆಧಾರದ ಮೇಲೆ ಉದ್ಯೋಗಗಳಲ್ಲಿ ತೊಡಗಿಕೊಳ್ಳುವುದು ಮಹಿಳೆಯರಿಗೆ ಉದ್ಯೋಗ ವಲಯದ ಪ್ರವೇಶವೆಂಬಂತೆ ಮೇಲ್ನೋಟಕ್ಕೆ ಕಾಣಿಸುತ್ತಿರುವಾಗಲೂ ದೌರ್ಜನ್ಯ - ಹಿಂಸೆಯ ಹೊಸ ಆಯಾಮವೆಂದು ಗುರುತಿಸಬಹುದು, ಉದ್ದಿಮೆದಾರರು ಲಾಭದಾಯಕ ದೃಷ್ಟಿಯಿಂದ ಗೃಹದ್ಯೋಗಗಳು ಹೆಚ್ಚಾಗಿ ಕಾಣಿಸಿಕೊಳ್ಳುತ್ತಿವೆ. ಇಲ್ಲಿ ಉದ್ಯೋಗ ಸ್ಥಳದ ಅಗತ್ಯತೆಯಾಗಲಿ, ಶಿಶುಪಾಲನಾ ಕೇಂದ್ರಗಳಾಗಲಿ, ಮಹಿಳೆಯರು ಕುಟುಂಬದಾಚೆಗೆ ಕಾಲಿರಿಸಬೇಕೆಂದಾಗಲಿ, ಸಂಘ-ಸಂಸ್ಥೆಗಳ ಕಿರಿಕಿರಿಯಾಗಲಿ, ಕನಿಷ್ಠ ಕೂಲಿಯ ಕಾನೂನುಗಳ ಪಾಲನೆಯ ಸಂದಿಗ್ಧತೆಗಳಾಗಲಿ ಎದುರಾಗುವುದಿಲ್ಲ. ಮಧ್ಯವರ್ತಿಗಳಿಗೆ ಗುತ್ತಿಗೆ ನೀಡುವ ಮೂಲಕ ಕೆಲಸಗಳನ್ನು ಮುಗಿಸಿಕೊಳ್ಳಬಹುದು. ಬಹುತೇಕ ಮಧ್ಯವರ್ತಿಗಳು ಪುರುಷರೇ ಆಗಿರುವುದರಿಂದ, ಅವರು ತಮ್ಮ ಲಾಭಕ್ಕಾಗಿ ಕಚ್ಚಾ ಸಾಮಗ್ರಿಗಳನ್ನು ಕಡಿಮೆ ಪ್ರಮಾಣವಾಗಲಿ, ಕಳಪೆ ಗುಣಮಟ್ಟದಾಗಲಿ ಒದಗಿಸುವ ಮೂಲಕ ಮಹಿಳಾ ದುಡಿಮೆಯು ನಿರರ್ಥಕವೆಂದು ಬಿಂಬಿಸುವುದರೊಂದಿಗೆ, ಅವಳು ಈ ಬಗೆಯ ಉದ್ಯೋಗಗಳನ್ನು ನಿರಾಕರಿಸಬೇಕೆಂಬ ರಾಜಕಾರಣವೇ ಆಗಿದೆ. ಉದ್ಯೋಗದ ಸ್ವರೂಪಗಳು ಬದಲಾದಂತೆಲ್ಲ ಅಲ್ಲಿನ ದೌರ್ಜನ್ಯ-ಹಿಂಸೆಯ ಸ್ವರೂಪಗಳು ಸಹ ಹೊಸ ಮುಖಗಳಲ್ಲಿ ತೆರೆದುಕೊಳ್ಳುತ್ತವೆ.

ರೋಹಿಣಿ ಹೆನ್ಸ್‌ಮನ್‌ರವರು ಉದ್ಯೋಗ ವಲಯ ಪ್ರವೇಶ ಹಂತದ ದೌರ್ಜನ್ಯವನ್ನು ಸ್ಪಷ್ಟವಾಗಿ ವ್ಯಾಖ್ಯಾನಿಸುತ್ತಾರೆ. "ಮಹಿಳೆಯರನ್ನು ಕುರಿತಂತೆ ತಾರತಮ್ಯವಾದಿ ಧೋರಣೆಯು ಸಮಾಜದಲ್ಲಿ ಆಳವಾಗಿ ಬೇರೂರಿರುವಾಗ ಮತ್ತು ಲಿಂಗಸಂಬಂಧಗಳನ್ನು ಜೈವಿಕ ನಿಯತಿಯ ನೆಲೆಯಲ್ಲಿ ಪರಿಭಾವಿಸಿಕೊಂಡಿರುವಾಗ ಉದ್ಯೋಗಕ್ಕೆ ಸಂಬಂಧಿಸಿದಂತೆ ಲಿಂಗ ಸಮಾನತೆ ಸಾಧಿಸಲು ನಡೆಯುವ ಪ್ರಯತ್ನಗಳು ವಿಫಲವಾಗಿ ಬಿಡುತ್ತವೆ. ಅಸಂಘಟಿತ ವಲಯದಲ್ಲಿ ಮಹಿಳೆಯರ ವೇತನ ಕನಿಷ್ಠತಮವಿರುತ್ತದೆ. ಅವರಿಗೆ ದುಡಿಮೆಯ ಅವಕಾಶಗಳು ಸಮಾನವಾಗಿರುವುದಿಲ್ಲ. ಅವರನ್ನು ರಾತ್ರಿಯ ಪಾಳಿಯಲ್ಲಿ ದುಡಿಯಲು ಒತ್ತಾಯಿಸಲಾಗುತ್ತದೆ. ದುಡಿಮೆ ಕ್ಷೇತ್ರದಲ್ಲಿ ಮಹಿಳಾ ದುಡಿಮೆಗಾರರು ಲೈಂಗಿಕ ಹಿಂಸೆಗೆ ಗುರಿಯಾಗಬೇಕಾಗುತ್ತದೆ. ಕೆಲಸದ ಸ್ಥಳಗಳಲ್ಲಿ ಬಾಲವಾಡಿಗಳಿರುವುದಿಲ್ಲ. ಅವರು ಗೃಹವಾರ್ತೆ ಹಾಗೂ ಮನೆಯ ಹೊರಗಿನ ದುಡಿಮೆಗಳನ್ನು ಸರಿದೂಗಿಸಿಕೊಂಡು ಹೋಗಬೇಕಾಗುತ್ತದೆ. ಅವರು ಸಂಚಾರಕ್ಕೆ ಸಂಬಂಧಿಸಿದಂತೆ ಅನೇಕ ಬಗೆಯ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಹೆರಿಗೆ ಭತ್ಯೆ-ಹೆರಿಗೆ ರಜೆಗಳ ಸೌಲಭ್ಯಗಳಿರುವುದಿಲ್ಲ. ಸಾಮಾಜಿಕ ಭದ್ರತೆಯ ಸೌಲಭ್ಯಗಳಿರುವುದಿಲ್ಲ (ಉದ್ಧೃತ : ಮಹಿಳೆ : ಆರ್ಥಿಕತೆ ಮತ್ತು ಅಭಿವೃದ್ಧಿ).' ವ್ಯವಸ್ಥೆಯಲ್ಲಿ ಮಹಿಳಾ ಸಮುದಾಯಕ್ಕೆ ಉದ್ಯೋಗ ವಲಯದ ಪ್ರವೇಶ ಹಂತದ ನಿರಾಕರಣೆಯೊಂದಿಗೆ, ಪ್ರವೇಶಿಸಿದ ನಂತರ ಅವಳಿಗೆ ದಕ್ಕಬೇಕಾದ ಸೌಲಭ್ಯಗಳನ್ನು ನಿರಾಕರಿಸುವುದರೊಂದಿಗೆ, ಉದ್ಯೋಗ ವಲಯದ ಸಹಭಾಗಿತ್ವವನ್ನು ಮಹಿಳೆ ತಾನಾಗಿಯೇ ತಿರಸ್ಕರಿಸುವಂತೆ

ಅವಳ ಮೇಲೆ ಮಾನಸಿಕ, ಬೌದ್ಧಿಕ, ದೈಹಿಕ ಮತ್ತು ಆರ್ಥಿಕ ದೌರ್ಜನ್ಯಗಳನ್ನು ಅವಳ ಮೇಲೆ ಎಸಗಲಾಗುತ್ತಿದೆಯೆಂಬುದು ಈ ವ್ಯಾಖ್ಯಾನ ಮೂಲಕ ರೋಹಿಣಿಯವರು ಪ್ರತಿನಿಧಿಸಿದ್ದಾರೆ.

೧೯೨೦ ರಿಂದ ಇತ್ತೀಚೆಗೆ ಗಣನೀಯ ಪ್ರಮಾಣದಲ್ಲಿ ಕಾಣಿಸಿಕೊಳ್ಳುತ್ತಿರುವ ಮಹಿಳಾ ಉದ್ಯೋಗಿಗಳು, ಇತ್ತೀಚಿನ ದಿನಗಳಲ್ಲಿ ಎಲ್ಲಾ ಕ್ಷೇತ್ರಗಳಲ್ಲಿನ ಉದ್ಯೋಗಕ್ಕೂ ಲಗ್ಗೆ ಹಾಕುತ್ತಿದ್ದಾರೆ. ಸಾರ್ವಜನಿಕ ವಲಯದ ಪ್ರವೇಶವೇ ನಿಷೇಧಿತವಾದ ಪಿತೃ ಸಂಸ್ಕೃತಿಯಲ್ಲಿ ಮಹಿಳೆಯರು ಸಕ್ರೀಯವಾಗಿ ಪಾಲ್ಗೊಳ್ಳುತ್ತಿರುವುದು ಆಶಾದಾಯಕ ಸಂಗತಿಯಾಗಿದೆ. ಆದರೆ ಈ ಬಗೆಯ ತನ್ನದಲ್ಲದ ವಲಯದಲ್ಲಿ ಮಹಿಳೆಯ ಪ್ರವೇಶವು ಕಷ್ಟಕರ ಸಂಗತಿಯಾಗಿದ್ದು, ಹಲವಾರು ಸಮಸ್ಯೆಗಳಿಗೆ ಬಲಿಪಶುವಾಗುತ್ತಿರುವುದನ್ನು ನಿತ್ಯವು ಕೇಳಬಹುದಾಗಿದೆ. ಈ ಸಮಸ್ಯೆಗಳ ನಿವಾರಣೆಗಾಗಿ ಹಲವಾರು ಕಾಯ್ದೆ ಕಾನೂನುಗಳು ಜಾರಿಗೊಂಡರೂ ಸಹ ಪುರುಷ ಸಂಸ್ಕೃತಿಯಲ್ಲಿ ಅವು ಪುರುಷನ ಆಯುಧಗಳಾಗಿ ಮಹಿಳಾ ಬದುಕಿನ ಆಕ್ರಮಣಕ್ಕೆ ಪೂರಕವಾದ ಅಂಶಗಳಾಗಿ ನಿಲ್ಲುತ್ತಿವೆ. ಭಾರತ ಸರ್ಕಾರವು ೧೮೮೧ರಲ್ಲಿ ಜಾರಿಗೊಳಿಸದ ಕಾರ್ಖಾನೆ ಕಾಯ್ದೆಯು, ೧೮೯೧ರಲ್ಲಿ ಮಹಿಳೆಯರ ದುಡಿಮೆಯ ಅವಧಿಯನ್ನು ೧೧ ಗಂಟೆಗಿಂತ ಹೆಚ್ಚಿರಬಾರದು ಎಂದು ಆದೇಶಿಸಿತು ಹಾಗೂ ಇದೆ ಕಾಯ್ದೆ ೧೯೧೧ರಲ್ಲಿ ಮಹಿಳೆಯರ ರಾತ್ರಿ ಪಾಳಿಯ ದುಡಿಮೆಯನ್ನು ನಿಷೇಧಿಸಿತು. ೧೯೨೩ರಲ್ಲಿ ಜಾರಿಯಾದ ವೇಶ್ಯಾವೃತ್ತಿ ನಿಷೇಧ ಸಂಹಿತೆಯು ವೇಶ್ಯೆಯರ ಮೇಲೆ ನೇರ ಪರಿಣಾಮ ಬೀರಿದ ಮೊದಲ ಸುಧಾರಣಾ ಕಾಯಿದೆಯೆಂದು ಹೇಳಬಹುದು. ಈ ಕಾಯಿದೆಯಲ್ಲಿ ವೇಶ್ಯಾವಾಟಿಕೆಯನ್ನು ಪುರುಷರು ನಡೆಸುವಂತಿಲ್ಲ ಎಂಬ ನಿಷೇಧವನ್ನು ಇದು ಹೇಳಿದೆ ಹೊರತು, ಸ್ತ್ರೀಯರ ನಡೆಸುವುದರ ನಿಷೇಧವನ್ನು ಕುರಿತು ಹೇಳಲಿಲ್ಲ. ಪುರುಷ ಸಂಸ್ಕೃತಿಯಲ್ಲಿ ಅನೇಕ ವೇಶ್ಯಾವಾಟಿಕೆಗಳು ಪುರುಷರು ಮುನ್ನೆಲೆಗೆ ಬರದೆ ಮಹಿಳೆಯರ ಮೂಲಕ ನಡೆಸುತ್ತಿರುವುದರಿಂದ ಈ ಕಾಯ್ದೆಯ ವೈಫಲ್ಯವನ್ನು ಕಾಣಬಹುದಾಗಿದೆ. ಅನೈತಿಕ ಹೆಣ್ಣು ಮಕ್ಕಳನ್ನು ಸಾಗಿಸುವ ಉದ್ದೇಶಗಳಿಂದ ಈ ಕಾಯಿದೆಗೆ ೧೯೨೬ ಮತ್ತು ೧೯೨೭ರಲ್ಲಿ ತಿದ್ದುಪಡಿಗಳನ್ನು ತರಲಾಯಿತು. ಮಹಿಳಾ ದುಡಿಮೆಗಾರರ ದುಡಿಮೆ ಅವಧಿಗೆ ಸಂಬಂಧಿಸಿದಂತೆ ಕೆಲವು ಕಾನೂನುಗಳು ಜಾರಿಗೆ ಬಂದಿವೆ. ಪ್ಲಾಂಟೇಶನ್ ಲೇಬರ್ ಆ್ಯಕ್ಟ್ - ೧೯೫೧ ಮತ್ತು ಮೈನ್ಸ್ ಆ್ಯಕ್ಟ್ - ೧೯೫೨ ಈ ಎರಡು ಕಾಯ್ದೆಗಳು ಮಹಿಳೆಯ ಉದ್ಯೋಗದಲ್ಲಿ ಅವಧಿಯನ್ನು ನಿರ್ದಿಷ್ಟಪಡಿಸಿವೆ. ಮಹಿಳಾ ಉದ್ಯೋಗಿಗಳ ಹಿತರಕ್ಷಣೆಗಾಗಿ ಜಾರಿಗೆ ಬಂದ ವಿಶೇಷ ಕಾಯ್ದೆಗಳು ಸಮಾನ ವೇತನ ಕಾನೂನು ೧೯೭೬ ಮತ್ತು ಮೆಟರನಿಟಿ ಬೆನ್‌ಫಿಟ್ ಆ್ಯಕ್ಟ್ ೧೯೬೧. ಗೃಹೋದ್ಯೋಗಿ ಕಾಯ್ದೆ ಬೀಡಿ ಮತ್ತು ಸಿಗರೇಟು ದುಡಿಮೆಗಾರರ ಕಾನೂನು ೧೯೬೬. ಈ ಕಾಯ್ದೆಯನ್ವಯ ಮಹಿಳಾ ಉದ್ಯೋಗಿಗಳಿಗೆ, ಕನಿಷ್ಠ ಕೂಲಿಯನ್ನು ನೀಡಬೇಕು. ಉದ್ಯೋಗಿಗಳ ಕಲ್ಯಾಣಕ್ಕಾಗಿ ಜಾರಿಗೆ ಬಂದ ಶಾಸನಗಳೆಂದರೆ ಬೀಡಿ ವರ್ಕರ್ಸ್ ವೆಲ್‌ಫೇರ್ ಸೆಲ್ಸ್ ಆ್ಯಕ್ಟ್ ೧೯೭೬ ಮತ್ತು ಬೀಡಿ ವರ್ಕರ್ಸ್ ವೆಲ್‌ಫೇರ್ ಫಂಡ್ ಆ್ಯಕ್ಟ್ ೧೯೭೬, ಇತ್ಯಾದಿ ಕಾಯ್ದೆಗಳು ಜಾರಿಯಾಗಿವೆಯಾದರೂ ಬಹುತೇಕ ಕಾನೂನುಗಳು ಮಹಿಳಾ ಬದುಕನ್ನು ತಲುಪುವಲ್ಲಿ ಯಶಸ್ವಿಯಾಗಿಲ್ಲ. ಸಂಘಟಿತ ಮತ್ತು ಅಸಂಘಟಿತ ವಲಯಗಳಲ್ಲಿ ಜಾರಿಯಾಗಿರುವ ಈ ಕಾನೂನುಗಳಿಗೂ ಅಸಂಘಟಿತ

ವಲಯದ ಮಹಿಳೆಯರಿಗು ಅಜಗಜಾಂತರವಿದೆ. ಶಿಕ್ಷಣ ವಲಯಕ್ಕೆ ಮುಖಾಮುಖಿಯಾಗದ ಮಹಿಳೆಗೆ ಈ ಕಾನೂನಿನ ಅರಿವು ಇರದೆ ಇರುವಂತಹ ಪ್ರಸಂಗಗಳೇ ಹೆಚ್ಚಾಗಿವೆ. ಅಸಂಘಟಿತ ವಲಯದ ಈ ಕಾನೂನಿನ ಬಲೆಗಳಿಂದ ತಪ್ಪಿಸಿಕೊಳ್ಳಲು ಉದ್ದಿಮೆದಾರರು 'ಗುತ್ತಿಗೆ' ಗೃಹದ್ಯೋಗಗಳ ಮಾರ್ಗವನ್ನು ಅನುಸರಿಸುತ್ತಿರುವುದು ಪುರುಷ ಪ್ರಧಾನ ಚಿಂತನೆಯಲ್ಲಿನ ದೌರ್ಜನ್ಯ - ಹಿಂಸೆಯ ಹೊಸ ಮೂಲವೆಂದು ಹೇಳಬಹುದಾಗಿದೆ.

ಹಾಗೂ ಇತ್ತೀಚೆಗೆ ಜಾರಿಯಾದ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆಯನ್ನು ಇಲ್ಲಿ ಪ್ರಸ್ತಾಪಿಸುವುದು ಅಗತ್ಯವೆನಿಸುತ್ತಿದೆ. ಈ ವರೆಗೂ ಮಹಿಳಾ ಉದ್ಯೋಗದ ಕುರಿತು ಹಲವಾರು ಕಾಯ್ದೆಗಳು ಬಂದಿದೆಯಾದರೂ ಅವುಗಳು ಉಪಯುಕ್ತವಾದ ರೀತಿಯಲ್ಲಿ ಸಾಗುವಲ್ಲಿ ಪುರುಷ ಪ್ರಧಾನತೆಯ ಅಡ್ಡಿಯಿದೆ. ಮಹಿಳೆಯರಿಗಾಗಿಯೇ ಜಾರಿಯಾದ ಕಾನೂನುಗಳ ಫಲಿತವೇ ಹೀಗಾದರೆ ಇನ್ನೂ ಸಾಮಾನ್ಯೀಕರಿಸಿದ ಯೋಜನೆಗಳು ಎಷ್ಟರಮಟ್ಟಿಗೆ ಮಹಿಳಾ ಬದುಕಿಗೆ ಸಹಕಾರಿಯಾಗಿದೆಯೆಂಬುದನ್ನರಿಯಲು ೨೦೦೬-೦೭ರಲ್ಲಿ ಜಾರಿಗೆ ಬರಲಾದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯನ್ನು ಅಧ್ಯಯನದಲ್ಲಿ ಸಾಂದರ್ಭಿಕವಾಗಿ ಚರ್ಚಿಸಲಾಗುತ್ತಿದೆ.

ಹಲವು ಬಗೆಯ ಸುಧಾರಣೆಗಳ ಆಶಯವನ್ನು ಹೊತ್ತ ಈ ಯೋಜನೆಯು ಮಹಿಳಾ ಅಭಿವೃದ್ಧಿಯಿಂದ ಮಹಿಳಾ ಸಬಲೀಕರಣವನ್ನು ಉದ್ದೇಶವಾಗಿಸಿಕೊಂಡು, ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಬಂದಾಲಪಲ್ಲಿಯಲ್ಲಿ ಮೊಟ್ಟಮೊದಲ ಬಾರಿಗೆ ಜಾರಿಗೊಂಡಿತು. ಮೊದಲನೆಯದಾಗಿ ೨೦೦ ಜಿಲ್ಲೆಗಳಲ್ಲಿ ಜಾರಿಗೆ ಬಂದು, ೨೦೦೮ ರ ಹೊತ್ತಿಗೆ ತಾಲ್ಲೂಕುಗಳ ಮಟ್ಟದಲ್ಲಿಯೂ ವಿಸ್ತೃತಗೊಂಡು ಗ್ರಾಮ ಪಂಚಾಯಿತಿಯ ವ್ಯಾಪ್ತಿಗೆ ಬಂದಿದ್ದ ಈ ಯೋಜನೆಯಲ್ಲಿ ೯ ಬಗೆಯ ಆದ್ಯತಾ ಕಾಮಗಾರಿಗಳನ್ನು ಗುರುತಿಸಲಾಗಿದೆ. ರಸ್ತೆ ಕಾಮಗಾರಿ, ಜಲ ಸಂರಕ್ಷಣೆ, ತೋಟಗಾರಿಕೆ, ಭೂ ಅಭಿವೃದ್ಧಿ ಇತ್ಯಾದಿ. ಇವುಗಳ ಪಾಲ್ಗೊಳ್ಳುವಿಕೆಯಲ್ಲಿ ಮಹಿಳೆಯರಿಗೆ ಶೇಕಡ ೩೩ ರಷ್ಟು ಉದ್ಯೋಗ ಮೀಸಲಾತಿಯನ್ನು ನೀಡುವುದಾಗಿದೆ. ಗ್ರಾಮಪಂಚಾಯ್ತಿಯಲ್ಲಿ ಈ ಸಂಬಂಧಿತ ಅರ್ಜಿಯನ್ನು ಸಲ್ಲಿಸಿದವರಿಗೆ ೧೫ ದಿನಗಳಲ್ಲಿ ಉದ್ಯೋಗ ಒದಗಿಸದಿದ್ದಲ್ಲಿ, ದಿನಭತ್ಯೆಯ ಕಾಲು ಭಾಗದಷ್ಟು ನಿರುದ್ಯೋಗಿ ಭತ್ಯೆಯನ್ನು, ೩೦ ದಿನಗಳೊಳಗಾಗಿ ಉದ್ಯೋಗ ಒದಗಿಸದಿದ್ದಲ್ಲಿ ದಿನಭತ್ಯೆಯ ಅರ್ಧದಷ್ಟು ಭತ್ಯೆಯನ್ನು ನಿರುದ್ಯೋಗಿ ಭತ್ಯೆಯಾಗಿ ನೀಡಬೇಕು ಎಂದು ಹೇಳಲಾಗಿದೆ. ಮಹಿಳೆಯರಿಗೆ ಕೆಲಸದ ಸ್ಥಳದಲ್ಲಿ ಶೌಚಾಲಯಗಳನ್ನು ೫ ವರ್ಷದೊಳಗಿನ ಮಕ್ಕಳನ್ನು ನೋಡಿಕೊಳ್ಳಲು ದಾರಿಯನ್ನು ನೇಮಿಸುವ ಆದೇಶವನ್ನು ಹೊರಡಿಸಿದೆ.

ಆದರೆ ವಾಸ್ತವದಲ್ಲಿ ಇಂತಹ ಒಂದು ಕಾಯಿದೆಯೂ ಜಾರಿಯಾಗುವುದಾಗಲಿ, ಅದು ಮಹಿಳೆಯರಿಗೆ ಸೌಲಭ್ಯಗಳನ್ನು ಒದಗಿಸುತ್ತದೆಯೆಂಬುದಾಗಲಿ ಗ್ರಾಮೀಣ ಮಹಿಳೆಯರಿಗೆ ಮಾಹಿತಿಯೇ ಇಲ್ಲ. ಹಲವು ಬಗೆಯ ಅವಕಾಶಗಳಿರುವ ಈ ಯೋಜನೆಯ ಕುರಿತು, ಮಹಿಳೆಯರಿಗೆ ಅರಿವನ್ನು ಸಹ ಮೂಡಿಸಿಲ್ಲವೆಂಬುದು ವ್ಯವಸ್ಥೆಯು ಹೊಂದಿರುವ ಏಕಪಕ್ಷ ಧೋರಣೆಯ ಕಾರಣವಾಗಿದೆ. ಬಹುತೇಕ

ಮಹಿಳೆಯರು ಸಾಧಾರಣ ಕೆಲಸಗಳಿಗೆ ಹೋಗುವಂತೆಯೇ ಗ್ರಾಮ ಸಭೆಗಳಲ್ಲಿ ಹೇಳಿದ ಕೆಲಸಗಳನ್ನು ಮಾಡುತ್ತಿದ್ದಾರೆ. ಇಲ್ಲಿರುವ ಸೌಲಭ್ಯಗಳ ಕುರಿತು ಗ್ರಾಮ ಪಂಚಾಯ್ತಿಗಳವರಾಗಲಿ, ಇನ್ನಿತರರಾಗಲಿ ಜನತೆಗೆ ಜಾಗೃತಿಯನ್ನು ಮೂಡಿಸಿಲ್ಲ ಹಾಗೂ ಈ ಕಾಮಗಾರಿಕೆಯಲ್ಲಿ ದುಡಿಯುವವ ಮಹಿಳೆಯ ಗುರುತಿನ ಚೀಟಿಯು ಅವರ ಮನೆಯವರ ಹೆಸರಿನಲ್ಲಿದೆ (ಗಂಡನ, ತಂದೆ, ಅಣ್ಣ, ತಮ್ಮಂದಿರ). ದುಡಿಮೆಯಲ್ಲಿ ಸಿಗುವ ವೇತನದ ಎಲ್ಲ ವಿವರವನ್ನು ಈ ಗುರುತಿನ ಚೀಟಿಯಲ್ಲಿ ದಾಖಲಿಸುವುದರಿಂದ ಪುರುಷ ಪ್ರಧಾನತೆಯು ಮಹಿಳೆಯ ಅಧೀನತೆಯನ್ನು ಮುಂದುವರೆಸುವಲ್ಲಿ ಯಶಸ್ವಿಯಾಗಿದೆ. ಇಲ್ಲಿ ಸೂಚಿಸಿದ ಕಾಮಗಾರಿಗಳೆಲ್ಲವೂ ಕುಟುಂಬ, ಸಮಾಜ ಕಲ್ಯಾಣಕ್ಕಾಗಿವೆಯೇ ವಿನಃ ಮಹಿಳಾ ಕಲ್ಯಾಣಕ್ಕಾಗಿ ಇಲ್ಲ. ಬ್ಯಾಂಕ್ ಮೂಲಕ ಹಣದ ವಿತರಣೆಯಾದರೂ, ವೇತನ ಕೊಡುವಾಗ ತರತಮತೆಯಿಂದಲೇ ನೀಡಲಾಗುತ್ತಿದೆ.

'ಉದ್ಯೋಗ', 'ದುಡಿಮೆ', 'ಪರಿಶ್ರಮ' ಇತ್ಯಾದಿಗಳು ಪುರುಷನಿಗೆ ಸಂಬಂಧಿಸಿದ ಸಂಗತಿಗಳೆಂದು ಹೇಳುವ ಸಾಮಾಜಿಕ ನಂಬಿಕೆಗಳು ಹೊಸ ಆಯಾಮದಿಂದ ಮಹಿಳೆಯ ಚಲನಶೀಲತೆ ಮೇಲೆ ನಿಯಂತ್ರಣ ಸಾಧಿಸುತ್ತಿದೆ. ಆ ಮೂಲಕ ಅವಳ ಕಾರ್ಯಕ್ಷೇತ್ರವನ್ನು ಕುಟುಂಬಕ್ಕೆ ನಿಗದಿತಗೊಳಿಸಲಾಗುತ್ತದೆ. ಈ ಬಗೆಯ ನಿಯಮಗಳು ಪಾಲಿಸಿದಾಗಲೂ - ಉಲ್ಲಂಘಿಸಿದಾಗಲೂ ಮಹಿಳೆಯು ದೌರ್ಜನ್ಯ-ಹಿಂಸೆಗೊಳಗಾಗುತ್ತಿರುವುದು ವಿಪರ್ಯಾಸದ ಸಂಗತಿಯಾಗಿದೆ. ಸಾಧಾರಣವಾಗಿ ಖಾಸಗಿ (ಕೌಟುಂಬಿಕ) ವಲಯ ಮಹಿಳೆಯದು, ಸಾರ್ವಜನಿಕ ವಲಯವು ಪುರುಷನದೆಂದು ಇಂದಿಗೂ ಸಹಜೀಕರಿಸಿಯೇ ಅಂತರ್ಗತಗೊಳಿಸಲಾಗುತ್ತದೆ. ಜೈವಿಕತೆಯನ್ನು ನೆಪವಾಗಿಸುವ ಮೂಲಕ ಅವಳ ಚಲನಶೀಲತೆಯನ್ನು ಮೊದಲುಗೊಂಡು ಒಟ್ಟು ಅವಳ ಬದುಕಿನ ಮೇಲೆ ನಿಯಂತ್ರಣ ಸಾಧಿಸುವ ಉದ್ದೇಶವೇ ಪಿತೃಸಂಸ್ಕೃತಿಗೆ ಇದೆ.

ಸಾರ್ವಜನಿಕ ವಲಯದ ಎಲ್ಲ ಅವಕಾಶಗಳನ್ನು ಮುಚ್ಚಿಡುವ ಮೂಲಕ ಮಹಿಳೆಯ ಮೇಲಿನ ನಿಯಂತ್ರಣವನ್ನು ಗಟ್ಟಿಗೊಳಿಸಲಾಗಿದೆ. ಈ ಬಗೆಯ ಪ್ರವೇಶ ಹಂತದ ನಯಗಾರಿಕೆಯ ನಿರಾಕರಣೆಯು ಮೊದಲ ಹಂತದಲ್ಲಿನ ದೌರ್ಜನ್ಯವೆಂದು ಗ್ರಹಿಸಬಹುದು. ಮುಂದುವರೆದಂತೆ ಸಾಮಾಜಿಕವಾಗಿ ರೂಪಿತವಾದ ಎಲ್ಲ ಸಂಗತಿಗಳಲ್ಲಿಯೂ ಮಹಿಳೆಯನ್ನೂ ಎರಡನೆ ದರ್ಜೆಯ ಪ್ರಜೆಯಾಗಿಸುವಲ್ಲಿ ಮುಂದುವರೆಸಲಾಯಿತು. ಇದಕ್ಕೆ ತರ್ಕವೆನುವಂತೆಯೇ ಸಂತಾನೋತ್ಪತ್ತಿ ಮತ್ತು ಸಂಗೋಪನಾ ಕ್ರಿಯೆಯನ್ನು ವ್ಯಾಖ್ಯಾನಿಸಲಾಯಿತು. ಈ ನಿಟ್ಟಿನ ಪ್ರತಿಕೂಲತೆಯ ಪರಿಣಾಮವು ಮಹಿಳಾ ಉದ್ಯೋಗದ ಮೇಲೂ ಆಯಿತು.

ಸಾಮಾನ್ಯವಾಗಿ ಉದ್ಯೋಗಸ್ಥ ಮಹಿಳೆ ಎಂದಾಕ್ಷಣ ಸಂಭಾವನೆ ತರುವವರನ್ನು ಮಾತ್ರ ಗುರುತಿಸುವುದರೊಂದಿಗೆ ಗೃಹಕೃತ್ಯಗಳು ಶ್ರಮವಲ್ಲ, ಅದಕ್ಕೆ ಸಂಭಾವನೆಯೂ ಇಲ್ಲವೆಂಬ ತಾತ್ಸಾರ ಮನೋಭಾವ ಸಮಾಜದಲ್ಲಿ ಶಾಶ್ವತಗೊಳಿಸಲಾಗುತ್ತಿದೆ. ಎರಡು ವಲಯಗಳಲ್ಲೂ ಸಹ ಮಹಿಳಾ

ಉದ್ಯೋಗಿಗಳು ಸೇವಾ ನೆಲೆಯಲ್ಲಿಯೇ ಮುಂದುವರೆಯುವಂತಾಗಿಸಿರುವುದು, ಮಹಿಳೆಗೆ ಅಧಿಕಾರ ವಲಯದಿಂದ ಹೊರಗಡುವುದಕ್ಕೆ ನಯಗಾರಿಕೆಯಿಂದಲೇ ದೌರ್ಜನ್ಯವನ್ನು ಎಸಗಲಾಗುತ್ತಿದೆ.

ಕುಟುಂಬದ ಆರ್ಥಿಕ ಸ್ಥಿತಿಗಳನ್ನು ಉತ್ತಮಗೊಳಿಸುವ ನಿಟ್ಟಿನಲ್ಲಿ ಉದ್ಯೋಗ ವಲಯಕ್ಕೆ ಪ್ರವೇಶ ಪಡೆದ ಮಹಿಳೆಯು ಅಲ್ಲಿ ಶಾಶ್ವತವಾಗಿ ನೆಲೆನಿಲ್ಲದಂತೆ, ಪುರುಷ ನಿರ್ದೇಶಿತ ನೆಲೆಯಲ್ಲಿಯೇ ಮುಂದುವರೆಯುವಂತಾಯಿತು. ಆದರೆ ಇಂತಹ ಕೆಲವು ಸನ್ನಿವೇಶಗಳನ್ನು ಮೀರಿ, ಮಹಿಳೆ ತನ್ನ ಸಾಧನೆಯತ್ತ ಮುಖ ಮಾಡಲು ಆರಂಭವಾದಾಗ ಅವಳ ಮೇಲಾಗುವ ದೌರ್ಜನ್ಯ-ಹಿಂಸೆಗಳು ವಿಕೃತರೂಪವನ್ನು ತಳೆಯುತ್ತಿರುವ ಆಯಾಮಗಳನ್ನು ಸಮಾಜ ವ್ಯವಸ್ಥೆಯಲ್ಲಿ ಇಂದಿಗೂ ಭೀಕರವಾಗಿ ಕಾಣಿಸಿಕೊಳ್ಳುತ್ತದೆ.

ಒಬ್ಬ ಗೃಹಿಣಿ ಮಾಡುವ ಕೆಲಸ, ಕೆಲಸದವಳು ಮಾಡಿದರೆ, ಅವಳಿಗೆ ಸಂಬಳ ನೀಡಲಾಗುತ್ತದೆ. ಅದುವೇ ಕೆಲಸದವಳ ಆದಾಯವಾದ್ದರಿಂದ ಅದು ಗಣನೆಗೆ ತೆಗೆದುಕೊಳ್ಳುವ ವ್ಯವಸ್ಥೆಯು, ಅವಳು ಮನೆಯಲ್ಲಿ ಮಾಡುವ ಕೆಲಸಗಳನ್ನು ಪರಿಗಣಿಸದಿರುವಂತಹ ಪುರುಷ ಚಿಂತನೆಯಲ್ಲಿನ ಸಂಗತಿಗಳು ಅನುಕೂಲಕ್ಕೆ ತಕ್ಕಂತೆ ತಿರುಚಲಾಗುವುದನ್ನು ಹಾಗೂ ಮಹಿಳೆಯ ಮೇಲೆ ನಿಯಂತ್ರಣ ಸಾಧಿಸುವ ಉದ್ದೇಶವನ್ನು ಹೊಂದಿದೆ.

ಉದ್ಯೋಗಸ್ಥ ಮಹಿಳೆಯು ಸ್ತ್ರೀ ಕುಲದ ಆಶಾದಾಯಕ ಸಂಗತಿಯಾದರೂ, ಸಮಾಜದ ದಿಗ್ಬಂಧನಗಳಾಚೆಗೆ ನಡೆಯಲಾರದಂತೆ ದುರ್ಬಲಳನ್ನಾಗಿ ರೂಪಿಸಲಾಗುತ್ತಿದೆ. ಆ ಕಾರಣಕವಾಗಿಯೇ ಹಲವು ದಶಕಗಳಿಂದ ಉದ್ಯೋಗ ವಲಯವನ್ನು ಪ್ರವೇಶಿಸಿದ ಮಹಿಳೆಯರ ಸಬಲೀಕರಣವು ಸಮರ್ಪಕವಾಗಿ ಆಗುವುದರ ಬದಲು, ವಿವಿಧ ಸ್ವರೂಪದ ಕ್ರೌರ್ಯಕ್ಕೆ ಬಲಿಯಾಗುತ್ತಿರುವುದು ಕಂಡು ಬರುತ್ತಿದೆ. ಉದ್ಯೋಗ ವಲಯದ ಅವಳ ಪ್ರವೇಶವು ಬಿಡುಗಡೆಯಾಗುವ ಬದಲು ದಿಗ್ಬಂದನದ ಸಂಕೋಲೆಯಾಗಿ ನೆಲೆ ನಿಲ್ಲುತ್ತಿದೆ.

ಕುಟುಂಬದ ಬೇಡಿಕೆಗಳ ಪೂರೈಕೆಗಾಗಿ ಉದ್ಯೋಗ ಕ್ಷೇತ್ರಕ್ಕೆ ಕಾಲಿರಿಸಿದ ಮಹಿಳೆಯರು ವೃತ್ತಿ ಮತ್ತು ಕುಟುಂಬದ ನಿರೀಕ್ಷಿತ ಜವಾಬ್ದಾರಿಗಳನ್ನು ನಿಭಾಯಿಸುವಲ್ಲಿ ನರಳುತ್ತಿದ್ದಾರೆ. ಈ ಬಗೆಯ ನರಳಾಟದಿಂದಾಗಿ ಅನೇಕ ಮಹಿಳೆಯರು ಪುರುಷ ಸಂಸ್ಕೃತಿಯ ಅಭಿಲಾಷೆಯಂತೆಯೇ ಪುರುಷ ಬದುಕಿಗೆ ಪೂರಕವಾದ ಉದ್ಯೋಗಗಳಲ್ಲಿ ಮುಂದುವರಿಯುತ್ತಿರುವುದು ಆತ್ಮ ಹಿಂಸೆಯ ಸಂಗತಿಯಾಗಿದೆ ಹಾಗೂ ಇಬ್ಬಗೆಯ ದುಡಿಮೆಯಿಂದ ಬೇಸತ್ತು ಉದ್ಯೋಗಗಳ ನಿರಾಕರಣೆಗೆ ಮುಂದಾಗುತ್ತಿದ್ದಾರೆ. ಬಹುತೇಕ ವಿಧವಾ ಮತ್ತು ಅವಿವಾಹಿತರಿಂದ ಆರಂಭವಾದ ಮಹಿಳಾ ಉದ್ಯೋಗಗಳೆ, ಮಹಿಳೆಯು ಇಂದು ಅವಿವಾಹಿತಳಾಗಿ ಉಳಿಯುವುದಾಗುತ್ತಿದೆ. ದುಡಿದು ಸಂಬಳ ತರುತ್ತಿರುವ ಮಹಿಳೆಯನ್ನು ವಿವಾಹವಾಗಲು ಅಡ್ಡಿಯನ್ನುಂಟುಮಾಡುವ ತಂದೆ-ತಾಯಿ, ಬಂಧುಗಳಿದ್ದಾರೆ. ಹೀಗೆ ಅವಿವಾಹಿತಳಾಗಿ ಉಳಿಸುವ ಕ್ರೌರ್ಯ ಒಂದಾದರೆ, ಮಹಿಳೆಯು ಸಾಮಾಜಿಕ ವ್ಯವಸ್ಥೆಯಲ್ಲಿ ಬರ್ಬರ ಹಿಂಸೆ - ದೌರ್ಜನ್ಯಗಳಿಗೆ ಬಲಿಯಾಗುತ್ತಿರುವ ಹಲವು ಬಗೆಗಳಿವೆ.

ರೂಪಿ ಸಾಮಾಜಿಕ ಸಂರಚನೆಯಲ್ಲಿ ಪ್ರಮುಖವಾಗಿರುವ ರಾಜಕೀಯ ವಲಯಕ್ಕೆ ಸುದೀರ್ಘವಾದ ಇತಿಹಾಸವಿದೆ. ಈ ಸಂಸ್ಥೆಯಿಂದ ಮನುಷ್ಯರು ತಮ್ಮ ಹಕ್ಕುಗಳನ್ನು ಸಾಧಿಸುವ ಬಗೆಗೆ, ಪ್ರಚಲಿತ ವಿದ್ಯಮಾನಗಳ ಬಗೆಗೆ ಸಮರ್ಪಕ ನಡೆ ಸಾಧ್ಯವಾಗುತ್ತದೆ. ಭಾರತ ದೇಶಕ್ಕೆ ಸ್ವಾತಂತ್ರ್ಯವೆಂಬುದು ದೊರೆತು ಅರ್ಧ ಶತಮಾನವೇ ಕಳೆದರೂ ಮಹಿಳೆಯರ ರಾಜಕೀಯ ಸಹಭಾಗಿತ್ವದ ಕುರಿತು ಚರ್ಚಿಸುವುದು, ಲಿಂಗಶ್ರೇಣೀಕೃತ ಸಮಾಜ ವ್ಯವಸ್ಥೆಯಲ್ಲಿ ಸಂಕೀರ್ಣಯತೆನ್ನು ಪ್ರತಿನಿಧಿಸುತ್ತದೆ. ವಿವಿಧ ಸಾರ್ವಜನಿಕ ವಲಯಗಳಲ್ಲಾಗುವ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಕುರುಹುಗಳನ್ನು ರಾಜಕೀಯ ವಲಯದಲ್ಲಿ ಇರುವ ಭೀಕರತೆಯನ್ನು ಗ್ರಹಿಸುವುದರೊಂದಿಗೆ ಸಾಗಬೇಕಾದ ಅಗತ್ಯತೆಯೊಂದು ಸ್ತ್ರೀವಾದಿಗಳ ಮಂದಿನ ಸವಾಲಾಗಿದೆ.

ಶತಕಗಳಷ್ಟು ಸುದೀರ್ಘವಾದ ಚರಿತ್ರೆಯನ್ನು ಹೊಂದಿರುವ ರಾಜಕೀಯ ವಲಯದ ಸ್ವರೂಪ, ಮಹಿಳಾ ರಾಜಕೀಯದ ಸುತ್ತಮುತ್ತ, ಮೀಸಲಾತಿ, ಪಂಚಾಯತ್‌ರಾಜ್, ಗ್ರಾಮಪಂಚಾಯ್ತಿಗಳಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯವನ್ನು ಗ್ರಹಿಸುವುದು ಇಲ್ಲಿ ಪ್ರಧಾನ ಗುರಿಯಾಗಿದೆ.

ಪುರುಷನನ್ನೇ ಪರಾಮರ್ಶನ ಬಿಂದುವಾಗಿರಿಸಿಕೊಂಡು ವ್ಯಾಖ್ಯಾನಗೊಳ್ಳುತ್ತಿರುವ ರಾಜಕೀಯ ವಲಯದಲ್ಲಿ, ಪುರುಷ ಸಮುದಾಯದ ಏಕಸ್ವಾಮ್ಯವಿರುವುದು ಬಲು ಸ್ಪಷ್ಟವಾಗಿ ಗೋಚರಿಸುತ್ತದೆ. ಸ್ತ್ರೀವಾದದ ಚಿಂತನಾಕ್ರಮವೊಂದರಿಂದ ಸಮಸ್ತ ಸಮಾಜದ ಪಾಲ್ಗೊಳ್ಳುವಿಕೆಯಲ್ಲಿ ರಾಜಕೀಯ ವಲಯದಲ್ಲಿ ಮಹಿಳೆ - ಪುರುಷರಿರ್ವರು ಸಮಾನ ನೆಲೆಯಲ್ಲಿ ಕಾಣಿಸಿಕೊಳ್ಳಬೇಕಾದ ಅಗತ್ಯತೆ ಇದೆ. ಪುರುಷ ದಾಸ್ಯದಲ್ಲಿರುವ ಮಹಿಳಾ ಸಮುದಾಯಕ್ಕೆ ತೀರಾ ಇತ್ತೀಚಿನ ದಿನಗಳಲ್ಲಿ ಅದನ್ನು ಪ್ರಶ್ನಿಸುವ ಪ್ರಜ್ಞೆ ಬೆಳೆಯುತ್ತಿದ್ದು, ಇಲ್ಲಿ ರಾಜಕೀಯ ವಲಯದಲ್ಲೆಳುವ ಪ್ರಶ್ನೆಗಳು, ಅದರಿಂದಲೇ ಉಂಟಾಗುವ ದೌರ್ಜನ್ಯಗಳ ಸ್ವರೂಪವನ್ನು ಗ್ರಹಿಸುವ ಪುಟ್ಟ ಪ್ರಯತ್ನವಾಗಿದೆ.'

'ರಾಜಕೀಯ ಅಧಿಕಾರ ಎಂದರೆ ಒಂದು ದೇಶದ ಯಾವುದೇ ಪ್ರಕಾರ್ಯವನ್ನು ನಿರ್ವಹಿಸಲು ಯಾವುದೇ ವ್ಯಕ್ತಿಯಲ್ಲಿ ಅಥವಾ ವ್ಯಕ್ತಿಗಳ ಒಂದು ಗುಂಪಿನಲ್ಲಿ ನಿಹಿತವಾದ ಅಧಿಕಾರ(ಉಲ್ಲೇಖ : ಮಹಿಳಾ ಹಕ್ಕುಗಳು ಮಾನವ ಹಕ್ಕುಗಳ ನೆಲೆಯಲ್ಲಿ)"ವೆಂದು ಡಾ. ಗೀತಾ ಕೃಷ್ಣಮೂರ್ತಿಯವರು ಅಭಿಪ್ರಾಯ ಪಡುತ್ತಾರೆ.

ಅರಿಸ್ಟಾಟಲ್ ಮತ್ತು ಇತರೆ ವಿದ್ವಾಂಸರು - ಮಹಿಳೆಯರು ಚಕ್ರಾಧಿಪತ್ಯವನ್ನು ಆಳಲು ತಕ್ಕವರಲ್ಲ, ಮಹಿಳೆಯರ ಕೆಲಸ ಕಾರ್ಯಗಳು ಅವರ ಕುಶಲ ಸಾಧನೆಗಳು ಅವರನ್ನು ರಾಜಕೀಯ ಚಟುವಟಿಕೆಗಳಲ್ಲಿ ತೊಡಗಲು ಅನರ್ಹನ್ನಾಗಿಸಿವೆ (ಉಲ್ಲೇಖ : ಸಮಗ್ರ ಭಾರತದ ಇತಿಹಾಸ, ಕೆ. ಸದಾಶಿವ).

ಡಾ. ಗೀತಾ ಕೃಷ್ಣಮೂರ್ತಿಯವರ ವ್ಯಾಖ್ಯಾನವು ಲಿಂಗನಿರಪೇಕ್ಷವಾದ ಚಿಂತನೆಯಡಿಯಲ್ಲಿ ರಾಜಕೀಯವನ್ನು ವ್ಯಕ್ತಿ ಅಧಿಕಾರವೆಂದು ವಿವರಿಸುತ್ತದೆ. ಆದರೆ ಅರಿಸ್ಟಾಟಲ್ ಲಿಂಗಪಕ್ಷಪಾತದಿಂದ ಮಹಿಳೆಗೆ ರಾಜಕೀಯ ವಲಯದ ಪ್ರವೇಶವನ್ನೇ ನಿರಾಕರಿಸುತ್ತಾರೆ.

ಸ್ವಾತಂತ್ರ್ಯಪೂರ್ವ ಅವಧಿಯಲ್ಲಿ ಮಹಿಳೆಯರು ರಾಜಕೀಯ ವಲಯವನ್ನು ಪ್ರವೇಶಿಸಿರುವುದು ಪುರುಷ ರೂಪಿಯಾದ ಹೋರಾಟಗಳಲ್ಲಿ, ಖಾಲಿಯಾದ ಸ್ಥಳಗಳನ್ನು ತುಂಬುವಲ್ಲಿ ಪುರುಷ ಬದುಕಿನ ಪೂರಕವಾಗಿ ಪಾಲ್ಗೊಂಡಿದ್ದರು. ಈ ಸಂದರ್ಭದಲ್ಲಿ ಕಾಣಿಸಿಕೊಂಡ ಬಳ್ಳಾರಿ ಸಿದ್ದಮ್ಮ, ಟಿ. ಸುನಂದಮ್ಮ, ನಾಗರತ್ನಮ್ಮ, ಜಯದೇವಿ ತಾಯಿ ಲಿಗಾಡೆ ಮೊದಲಾದವನ್ನು ಉಲ್ಲೇಖಿಸಬಹುದು. ಪ್ರಾರಂಭದಲ್ಲಿ ಪುರುಷ ನಿರ್ದೇಶನಕ್ಕನುಗುಣವಾಗಿಯೇ ರಾಜಕೀಯ ವಲಯವನ್ನು ಪ್ರವೇಶಿಸಿದ ಮಹಿಳೆಯರೂ ಸಹ ಅತ್ಯಾಚಾರ, ಹಿಂಸೆ-ದೌರ್ಜನ್ಯ, ಆಕ್ರಮಣಗಳಿಗೆ, ಬಲಿಯಾದರೂ ಅವುಗಳೆಲ್ಲ ಮೆಟ್ಟಿನಿಲ್ಲುವ ಪ್ರಯತ್ನಗಳನ್ನು ಮಾಡಿ ಮುಂದುವರೆದರು. ಕರನಿರಾಕರಣೆ ಚಳುವಳಿಯು ನಡೆದಿರುವ ಅಂಕೋಲಾ, ಶಿರಸಿ, ಸಿದ್ದಾಪುರಗಳಲ್ಲಿ ಭಾಗವಹಿಸಿದ ಗರ್ಭಿಣಿ ಮಹಿಳೆಯರ ಗರ್ಭಪಾತಗಳು, ಯೌವನಸ್ಥ ಮಹಿಳೆಯರು ಮಾನಭಂಗಗಳಂತಹ ಹಿಂಸಾತ್ಮಕ ವರ್ತನೆಗೆ ಬಲಿಪಶುಳಾದರೂ ಸಹ ಚರಿತ್ರೆಯಲ್ಲಿ ಅದರ ಖಚಿತ ದಾಖಲೆಗಳಿಲ್ಲ.

ಅಲ್ಲದೆ ಸ್ವಾತಂತ್ರ್ಯ ಪೂರ್ವದ ಅವಧಿಯಲ್ಲಿ ರಾಜ್ಯವಾಳಿದ ರಜಿಯಾ ಸುಲ್ತಾನಳು ಮಹಿಳೆಯರ ರಾಜಕೀಯ ವಲಯದಲ್ಲಿ ಸಾಧಿಸಬಹುದಾದ ನೈಪುಣ್ಯಕ್ಕೆ ಪಾತ್ರರಾಗಿದ್ದಾರೆ. ಆದರೆ ರಜೀಯಾ ಒಬ್ಬ ಮುಸ್ಲಿಂ ಮಹಿಳೆಯಾಗಿ ಪರದಾ ಪದ್ಧತಿಯನ್ನು ನಿರಾಕರಿಸಿ ರಾಜಕೀಯ ರಂಗವನ್ನು ಪ್ರವೇಶಿಸಿದ್ದು ಸಮರ್ಥತತೆಯ ಸರಿ. ಆದರೆ ಅವಳು ಪುರುಷ ವೇಷ ಧರಿಸಿ ಬಹಿರಂಗ ದರ್ಬಾರನ್ನು ನಡೆಸಬೇಕಾದ ಅನಿವಾರ್ಯತೆಯು ಪುರುಷ ರಾಜಕಾರಣದ ಪ್ರತೀಕವಾಗಿದೆ. ರಜೀಯಾ ಸುಲ್ತಾನಳ ಸಾಧನೆಯನ್ನು ಕಂಡ ಇತಿಹಾಸಕಾರರೊಬ್ಬರು "ಅವಳು ಪುರುಷನಾಗಿ ಜನಿಸಿದ್ದರೆ ದೆಹಲಿಯ ಸುಲ್ತಾನರಲ್ಲೇ ಯಶಸ್ವಿಯಾದ ಸುಲ್ತಾನನೆಂದು ಕೀರ್ತಿ ಪಡೆಯುತ್ತಿದ್ದಳು" ಎಂಬುದು ಅವಳ ಹೆಣ್ತನದ ನಿರಕಾರಣೆಯ ಮೂಲಕ ಮಾಡುವ ಅವಹೇಳನವಾಗಿದೆ. ಹಾಗೂ ಅವಳು ಹೆಣ್ಣಾಗಿರುವ ಕಾರಣಕ್ಕೆ ಕೆಲವು ವೈಫಲ್ಯಗಳನ್ನು ಅನುಭವಿಸಬೇಕಾಯಿತೆಂದು ಹೇಳುವುದರ ಹಿನ್ನೆಲೆಯಲ್ಲಿ ಲಿಂಗದ ಕಾರಣದಿಂದಲೇ ಅವಳ ಪ್ರಧಾನತೆಯನ್ನು ಸಹಿಸದ ಕುತಂತ್ರಗಳು ಅವಳ ಮೇಲೆ ಆಕ್ರಮಣಗಳನ್ನು ಎಸಗಿದರೆಂಬ ಸೂಕ್ಷ್ಮತೆಯನ್ನು ಅನವಾರಣಗೊಳಿಸುತ್ತದೆಯೆನ್ನಬಹುದು. ಸಾಧನೆ, ಕೀರ್ತಿ, ರಾಜಕೀಯ, ಅಧಿಕಾರ ಎಲ್ಲವೂ ಸಹ ಪುರುಷನ ಸ್ವತ್ತೆಂಬುದು ಪುರುಷ ಸಂಸ್ಕೃತಿಯ ಕುತಂತ್ರತೆಯ ಪರಮಾವಧಿಯೆನ್ನಬಹುದು. ಅದೇ ರೀತಿಯಾಗಿ ಸ್ವಾತಂತ್ರ್ಯನಂತರದಲ್ಲಿ ಸಮರ್ಥ ಮಹಿಳಾ ರಾಜಕಾರಣಿಗಳಾದ ಇಂದಿರಾಗಾಂಧಿ, ಸರೋಜಿನಿ ನಾಯ್ಡುರವರನ್ನು ಈ ಸಾಲಿನಲ್ಲಿ ಗುರುತಿಸಬಹುದು.

"ನಾವು ನಕ್ಷತ್ರಗಳನ್ನು ಮುಟ್ಟುವವರೆಗೂ ಎತ್ತರೆತ್ತರಕ್ಕೆ ಮುಂದು ಮುಂದಕ್ಕೆ ಹೋಗೋಣ, ಅಲ್ಲಿಯೇ ನಿಲ್ಲಿ ಮೇಲಿನ್ನು ಹೋಗಬೇಡಿ ಎಂದು ಯಾರು ತಾನೇ ನಮ್ಮನ್ನು ನಿಲ್ಲಿಸಿಯಾರು? ನಾವು ಚಂದ್ರನಿಗಾಗಿ ಅಳುತ್ತ ಕೂಡುವುದಿಲ್ಲ, ನಾವು ಅದನ್ನು ಆಕಾಶದಿಂದ ಕಿತ್ತು ಏಷಿಯಾದ ಸ್ವಾತಂತ್ರ್ಯದ ಮುಡಿಯಲ್ಲಿ ಧರಿಸುತ್ತೇವೆ" (ಉಲ್ಲೇಖ : ಸರೋಜಿನಿ ದೇವಿ ಜೀವನ ಚರಿತ್ರೆ - ಅನುರಾಧ ಬಿ.ರಾವ್)[೧೦]

ಎಂದು ಸಾರುವ ಸರೋಜಿನಿ ನಾಯ್ಡುರವರ ಮಾತುಗಳು ಮಹಿಳಾ ಸಾಮರ್ಥ್ಯವನ್ನು ಪ್ರತಿನಿಧಿಸುತ್ತದೆ. ಯಾವುದೇ ವಲಯದ ನಿರಾಕರಣೆಗಳನ್ನು, ಸಮಸ್ಯೆಗಳನ್ನು ಲೆಕ್ಕಿಸದೇ ನಾವು ನಮ್ಮ ಗುರಿಗಳನ್ನು ಸಾಧಿಸಬೇಕೆಂಬುದರತ್ತ ಸೆಳೆಯುತ್ತಾರೆ.

ಭಾರತದ ಬೆಸ್ಟ್ ಪ್ರಧಾನಿ ಎಂದೇ ಖ್ಯಾತರಾಗಿರುವ ಇಂದಿರಾಗಾಂಧಿಯವರನ್ನು ಅವರ ಅಂಗ ರಕ್ಷಕರೇ ಕೊಲ್ಲುವಂತಹ ಕ್ರೌರ್ಯ, ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯೊರ್ವಳ ಸಾಮರ್ಥ್ಯವನ್ನು ಸಹಿಸದೆ, ಈ ಬಗೆಯ ಹಿಂಸೆ - ದೌರ್ಜನ್ಯಕ್ಕೆ ಕೈ ಹಾಕುವ ಸಾಹಸ ಮಾಡಲಾಗುತ್ತದೆಂದು ಹೇಳಬಹುದು. ಮಹಿಳೆ ನಿರಂತರವಾಗಿ ತನ್ನ ದಾಸ್ಯವನ್ನು ಒಪ್ಪಿಕೊಂಡು ಬದುಕಬೇಕೆಂಬುದೇ ರಾಜಕೀಯ ವಲಯದಲ್ಲಿನ ಅಧಿಕಾರವನ್ನು ಮಹಿಳೆಯೊಂದಿಗೆ ಹಂಚಿಕೊಳ್ಳಲು ಇಷ್ಟಪಡದ ಅಸ್ವಸ್ಥ ಮನಸ್ಥಿತಿಯನ್ನು ತಲುಪಿರುವ ಪುರುಷ ಸಮುದಾಯ ನಯಗಾರಿಕೆಯಿಂದ, ಜೀವ ತೆಗೆಯುವಂತಹ ಕ್ರೌರ್ಯಕ್ಕೆ, ಹಿಂಸೆ ದೌರ್ಜನ್ಯಕ್ಕೆ ಮುಂದಾಗುತ್ತದೆ.

ಈ ನಿಟ್ಟಿನಲ್ಲಿ ಸಮರ್ಥವಾಗಿ ರಾಜಕೀಯವನ್ನು ನಿಭಾಯಿಸಿರುವ, ನಿಭಾಯಿಸುವ ಮಹಿಳೆಯರನ್ನು ಜೈವಿಕ ಭಿನ್ನತೆಯನ್ನಾಧರಿಸಿ ರೂಪಿಸಲಾದ ಪುರುಷ ರೂಪಿ ಸಾಮಾಜಿಕ ವ್ಯವಸ್ಥೆಯಲ್ಲಿ ದೈಹಿಕತೆಯಿಂದ ಮಹಿಳಾ ಬದುಕನ್ನು ನಿರ್ವಚಿಸುವ, ಆ ಮೂಲಕ ಎಲ್ಲವನ್ನು ಪರಿಶೀಲನೆಗೊಳಪಡಿಸುವ ಪುರುಷ ಸಂಸ್ಕೃತಿಗೆ, ಮಹಿಳಾ ಸಾಮರ್ಥ್ಯಕ್ಕೆ ಎದೆಗೊಟ್ಟು ನಿಲ್ಲುವ ಶಕ್ತಿಯಿಲ್ಲವೆಂದು ಹೇಳುವುದು ಅತಿರೇಕದ ಸಂಗತಿಯೆನಿಸಿದರೂ ವಾಸ್ತವದ ಕಟುಸತ್ಯವಾಗಿದೆ.

ಹೀಗೆ ಪುರಾಣ ಕಾಲದಲ್ಲಿನ ಪ್ರಮೀಳಾ ರಾಜ್ಯದ ಪ್ರಸ್ತಾಪದೊಂದಿಗೆ ಮಹಿಳಾ ರಾಜಕೀಯ ಇತಿಹಾಸ ಪ್ರಾರಂಭವಾಗುತ್ತದಾದರೂ, ಅಲ್ಲೋ, ಇಲ್ಲೋ ಒಬ್ಬೊಬ್ಬ ಸಮರ್ಥ ನಾಯಕಿಯರು ಕಾಣಿಸಿಕೊಳ್ಳುತ್ತಾರೆ. ಕಿತ್ತೂರು ಚೆನ್ನಮ್ಮ, ಬೆಳವಡಿ ಮಲ್ಲಮ್ಮ, ಝಾನ್ಸಿ ರಾಣಿ ಲಕ್ಷ್ಮೀಬಾಯಿ ಮೊದಲಾದವರು ರಾಜಕೀಯ ವಲಯವನ್ನು ಪ್ರವೇಶಿಸಿರುವುದು ಅವರ ಗಂಡಂದಿರ ಗೈರು ಹಾಜರಿಯಲ್ಲಿ, ದತ್ತು ಪುತ್ರನು ಪ್ರಾಪ್ತ ವಯಸ್ಕನಾಗುವವರೆಗೆ ಅವನ ಹೆಸರಿನಲ್ಲಿ ರಾಜ್ಯವಾಳುವ ಸಂದರ್ಭದಲ್ಲಿ ಬಂದವರು ಕೆಲವರಾದರೆ, ರಾಜಕೀಯ ನಾಯಕರ ಪತ್ನಿಯಾಗಿದ್ದಕ್ಕೋ, ಮಗಳಾಗಿದ್ದಕ್ಕೋ, ಅಧಿಕಾರದ ಚುಕ್ಕಾಣಿ ಹಿಡಿದು ತಮ್ಮ ಸಾಮರ್ಥ್ಯವನ್ನು ಪ್ರದರ್ಶಿಸಿದ್ದಾರೆ. ಈ ಬಗೆಯಲ್ಲಿನ ಅನಿವಾರ್ಯ ಕಾರಣಗಳಲ್ಲಿ ಮಹಿಳೆಯರು ರಾಜಕೀಯ ವಲಯವನ್ನು ಪ್ರವೇಶಿಸಿ, ಅವರ ಮೇಲಾಗುವ ದೌರ್ಜನ್ಯ - ಹಿಂಸೆಗಳನ್ನು ಎದುರಿಸುತ್ತಲೇ ಸಮರ್ಥವಾಗಿ ಮುಂದೆ ಸಾಗಿದರೂ, ಮಹಿಳಾ ರಾಜಕೀಯ ಸಹಭಾಗಿತ್ವದ ಪ್ರಶ್ನೆಯೊಂದು ಬಂದಾಗ ಅದಕ್ಕೆ ತಂತ್ರವಾಗಿ ಅವಳ ಸಾಮರ್ಥ್ಯವನ್ನು ಪ್ರಶ್ನಿಸಿ ಪ್ರವೇಶವನ್ನು ನಿಷೇಧಿಸುವ ಮೂಲಕ ಹಿಂಸೆ - ದೌರ್ಜನ್ಯಕ್ಕೆ ಪಿತೃಸಂಸ್ಕೃತಿ ಕೈ ಹಾಕುತ್ತಿರುವುದು, ಮಹಿಳಾ ಅಧೀನ ನೆಲೆಯನ್ನು ಶಾಶ್ವತಗೊಳಿಸುವ, ಅದರಲ್ಲೇ ಮುಂದುವರೆಸಬೇಕೆನ್ನುವ ಮಹದಾಸೆಯನ್ನು ಹೊಂದಿದೆ.

**ರಾಜಕೀಯ ವಲಯದಲ್ಲಿ ಮಹಿಳೆಯ ಪಾಲ್ಗೊಳ್ಳುವಿಕೆ ತೊಡಕುಗಳು**

ಸ್ತ್ರೀವಾದದ ಎಲ್ಲಾ ಹೋರಾಟಗಳೂ ಮಹಿಳೆಯ ಮೇಲಾಗುವ ಶೋಷಣೆಯ ವಿರುದ್ಧವಾಗಿ ಮತ್ತು ಮಹಿಳಾ ಸಬಲೀಕರಣಕ್ಕಾಗಿ ನಡೆಯುತ್ತಿವೆ. ಯಾವುದೇ ವ್ಯಕ್ತಿ ಮತ್ತು ಸಮುದಾಯಗಳು ಅನ್ಯಾಯದ ಶೋಷಣಾತ್ಮಕ ನೆಲೆಯು ಮೀತಿ ಮೀರಿದಾಗಲೆ ಸಿಡಿದೇಳುವ ಅಗತ್ಯ ಬರುವುದು. ಹಾಗೂ ಅವುಗಳು ಅಧಿಕಾರವನ್ನು ಪಡೆಯಲು ಸ್ಪರ್ಧೆಗಳು ನಡೆಸುವುದು. ಮಹಿಳೆಯರ ರಾಜಕೀಯ ವಲಯದ ಪಾಲ್ಗೊಳ್ಳುವಿಕೆಯು ಸಮಾಜದ ಎಲ್ಲಾ ಅಭಿವೃದ್ಧಿ ಸಂಗತಿಗಳನ್ನು ಒಳಗೊಂಡಿರುವುದರಿಂದ ಅದೊಂದು ಸಮಗ್ರ ಪರಿಭಾವನೆ ಹೊರತು, ಸೀಮಿತವಾದದ್ದಲ್ಲ. ಹಾಗಾಗಿ ಮಹಿಳಾ ಸಬಲೀಕರಣಕ್ಕಾಗಿ ರಾಜಕೀಯ ವಲಯದ ಪ್ರವೇಶವು ಅಗತ್ಯವಾಗಿದ್ದು, ಅಲ್ಲಿನ ತೊಡಕುಗಳತ್ತ ಗಮನಹರಿಸಬೇಕು.

ರಾಜಕೀಯ ವಲಯದ ಪ್ರವೇಶ ಪೂರ್ವದಲ್ಲೇ ಕೌಟುಂಬಿಕ ಹಾಗೂ ಸಾಮಾಜಿಕ ನಿರ್ಬಂಧಗಳಿರುತ್ತವೆ. ನಂತರದಲ್ಲಿ ಪಕ್ಷಗಳ ಪೈಪೋಟಿ, ಹಣದ ಅಬ್ಬರಗಳಲ್ಲಿ ಅನೇಕ ಬಾರಿ ಅವರದ್ದು ನೆಪ ಮಾತ್ರದ ಪ್ರವೇಶವೋ? ಮೀಸಲಾತಿಯ ಕಾರಣವೋ? ಎಂಬಂತಾಗುತ್ತದೆ ಹಾಗೂ ಅಲ್ಲಿ ಆ ಮಹಿಳೆಯ ಪರವಾಗಿ ಆ ಕುಟುಂಬದ ಪುರುಷರು ಅಧಿಕಾರವನ್ನು ಚಲಾಯಿಸುತ್ತಿರುತ್ತಾರೆ. ಔಪಚಾರಿಕ ರಾಜಕೀಯ ವಲಯದಲ್ಲಿನ ಹಲವು ಗೋಜಲುಗಳಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆಯ ಪ್ರಮಾಣ ಕಡಿಮೆಯೇ. ಅನೌಪಚಾರಿಕ ರಾಜಕೀಯ ವಲಯದ ಮೂಲಕ ಮಹಿಳೆಯರು ಜಾಗೃತಿ ಮೇಳಗಳಲ್ಲಿ, ಚಳುವಳಿಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ತೊಡಗುತ್ತಾರೆ. ಇದು ಪುರುಷ ಪೂರಕವಾಗಿ ನಿಲ್ಲುವುದರಿಂದ ಇದಕ್ಕೆ ತೀವ್ರ ನಿರ್ಬಂಧಗಳಾಗಲಿ, ದೌರ್ಜನ್ಯ - ಹಿಂಸೆಗಳಾಗಲಿ ಅಷ್ಟಾಗಿ ಕಂಡು ಬರುವುದಿಲ್ಲವೇ ವಿನಃ ಸಂಪೂರ್ಣವಾಗಿ ಇಲ್ಲವೆಂದಲ್ಲ. ಅಷ್ಟಕ್ಕೂ ಅನೌಪಚಾರಿಕ ರಾಜಕೀಯ ವಲಯದ ಮಹಿಳೆಯರು ಕುಟುಂಬದ ನೆಮ್ಮದಿಗೆ ಧಕ್ಕೆ ಬಾರದಂತೆ ಸಮರ್ಪಕವಾಗಿ ನಿರ್ವಹಿಸುತ್ತಾರೆಂದು ಸಹಜವಾಗಿಯೇ ಕೆಲವು ಪುರುಷರು ಇದಕ್ಕೆ ಬೆಂಬಲವಾಗಿ ನಿಲ್ಲುತ್ತಾರೆ. ಆದರೆ ಇದೇ ಬೆಂಬಲ ಔಪಚಾರಿಕ ವ್ಯವಸ್ಥೆಯಲ್ಲಿ ಸಿಗುವುದಿಲ್ಲ. ಮಹಿಳೆಯರು ರಾಜಕೀಯದಲ್ಲಿ ಪ್ರವೇಶಿಸಲು ಸಂವಿಧಾನ ಸಮ್ಮತಿಸಿದರು. ಅಲಿಖಿತವಾಗಿ ಅನೇಕ ಬಗೆಯ ಮಾನದಂಡಗಳನ್ನು ಹೊಂದಿರುವ ಅನಿವಾರ್ಯತೆಯು ಸಮಾಜ ವ್ಯವಸ್ಥೆಯ ಸೃಷ್ಟಿಯಾಗಿದೆ. ಪುರುಷರ ಗೈರು ಹಾಜರಿಯಲ್ಲಾಗಲೀ, ರಾಜಕೀಯ ಹಿನ್ನೆಲೆಯಲ್ಲಿರುವ ಕುಟುಂಬದಿಂದ ಬಂದವರಾಗಲಿ, ಅನುಕಂಪದಿಂದ ಬಂದವರಾಗಲಿ ಹೇಗೆ ಅವರು ರಾಜಕೀಯ ವಲಯವನ್ನು ಪ್ರವೇಶಿಸಿದರೂ ಸಹ ನಿರ್ಧಾರ ಕೈಗೊಳ್ಳುವಂತಹ ಸ್ಥಾನವಾಗಲೀ, ಅಧಿಕಾರವಾಗಲೀ, ಇಲ್ಲದೆ 'ಅಮತಿಗಾಗಿ' ಒದ್ದಾಡುವ ಸಂದರ್ಭಗಳಿವೆಯಾದ್ದರಿಂದ ಮಹಿಳಾ ಮೀಸಲು ಕ್ಷೇತ್ರಗಳ ರಚನೆಯ ಅಗತ್ಯತೆಯಿದೆ.

ಪ್ರಭುತ್ವದ ಹುನ್ನಾರಗಳು, ಅದಕ್ಷತೆ, ರಾಜಕೀಯ ಪಕ್ಷಗಳ ಪೈಪೋಟಿ, ಪಕ್ಷಪಾತಿ ಧೋರಣೆಗಳು, ಭ್ರಷ್ಟಾಚಾರ, ಅರ್ಹತೆ-ಯೋಗ್ಯತೆಯ ನಿರಾಕರಣೆ, ಇತ್ಯಾದಿಗಳು ಮಹಿಳೆ ರಾಜಕೀಯ ವಲಯದ ಪ್ರವೇಶದ ಮೇಲೆ ಪ್ರತಿಕೂಲ ಪರಿಣಾಮಗಳು ಬೀರುತ್ತವೆ. ಸಾಮಾಜಿಕ ರಚನೆ, ನಂಬಿಕೆ, ಮೌಲ್ಯಗಳು ಪ್ರಗತಿಪರವಾಗಿ

ಬೆಳೆಯುವ ಮೂಲಕ ಮಹಿಳೆಯರಲ್ಲಿನ ಜಾಗೃತಿ, ಹೋರಾಟಗಳಿಂದ ಅವರ ರಾಜಕೀಯ ಮುನ್ನಡೆಗೆ ಪೂರಕವಾಗಬೇಕಾಗಿದೆ.

ಹೆಣ್ಣನ್ನು ಸಾಂಪ್ರದಾಯಿಕ ಪ್ರತೀಕಗಳಾಗಿಯೇ ನೋಡುವ ಸಮಾಜ ವ್ಯವಸ್ಥೆಯು ಅದರಲ್ಲಿಯೇ ಅನಿವಾರ್ಯವಾಗಿ ತೊಡಗಿರುವ ಮಹಿಳೆಯರು ಕುಟುಂಬದಾಚೆಗೆ ಬರದಂತೆ ಸೃಷ್ಟಿಸುತ್ತಿರುವ ಸಂಗತಿಗಳೇ ಹೆಚ್ಚಾಗುತ್ತಿವೆ. ಹಾಗೊಮ್ಮೆ ಮಹಿಳೆಯು ಈ ಚೌಕಟ್ಟನ್ನು ಮೀರಿ ಹೊರಬರುವವಳಾದರೂ ರಾಜಕೀಯ ಬಂಡವಾಳವನ್ನು ಸೃಷ್ಟಿಸಿಕೊಳ್ಳುವ ಸಾಮಾಜಿಕ ಭದ್ರತೆಯಾಗಲಿ, ಆರ್ಥಿಕ ದೃಢತೆಯಾಗಲಿ, ಜಾತಿ ಮತದ ಬೆಂಬಲವಾಗಲೀ ಇಲ್ಲ. ಬದಲಿಗೆ, ಹೆಣ್ಣಿನ ಬದುಕು ಯಾವುದೇ ಮೂಲದಿಂದಲೂ ಸಹ 'ಶೀಲ' - 'ಪಾತಿವ್ರತ್ಯ'ದಿಂದ ಬೆಸೆಯುವುದರಿಂದ ಹೊಸಿಲು ದಾಟಿದವಳು ಹೆಣ್ಣಲ್ಲ ಎಂಬಂತಹ ಪ್ರವೇಶ ನಿಷೇಧದ ಸಂಗತಿಗಳೇ ಹೆಚ್ಚಾಗಿವೆ. ಮೇಲೆ ಸೂಚಿಸಿದಂತಹ ಸಂಗತಿಗಳ ಬದಲಾವಣೆಗಳು ಅಲ್ಲಲ್ಲಿ ಕೊಂಚ ಪ್ರಮಾಣದಲ್ಲಿ ಕಂಡು ಬರುವುದಾದರೂ ಅದು ಪುರುಷ ವ್ಯವಸ್ಥೆಯ ಸಂಚುಗಳಲ್ಲಿ ಸಿಲುಕಿ ಮಹಿಳೆಯರ ಬದುಕಿನ ಮೇಲೆ ಪ್ರತಿಕೂಲತೆಗಳನ್ನುಂಟು ಮಾಡುವುದೇ ಆಗಿದೆ.

ರಾಜಕೀಯ ವಲಯದಲ್ಲಿ ಅದರಲ್ಲೂ, ಔಪಚಾರಿಕ ವಲಯದಲ್ಲಿ ಮಹಿಳೆಯರು ಪ್ರವೇಶಾನಂತರ ಇನ್ನಷ್ಟು ಏಕಾತನತೆ, ಭಯ-ಆತಂಕಗಳು, ಜವಾಬ್ದಾರಿಗಳ ಒತ್ತಡ, ಎದುರಾಳಿಗಳ ಟೀಕೆಗಳು, ಇವುಗಳೊಂದಿಗೆ ಆಂತರಿಕವಾಗಿ ಕುಟುಂಬದೊಂದಿಗೆ ನಿರಂತರ ಸಂಪರ್ಕವಿಟ್ಟುಕೊಂಡಿರಬೇಕು. ಹೀಗೆ ಅವಳ ಚಲನಶೀಲತೆಯ ಮೇಲೆ ಸಾಧಿಸುವ ನಿರಂತರವಾದ ನಿಯಂತ್ರಣ, ತನ್ನಿಚ್ಛೆಯಂತೆ ಏನನ್ನು ನಿರ್ಣಯಿಸದೇ ಪುರುಷ ಸಮುದಾಯದ ಅನುಮತಿಗಾಗಿ ಕಾಯುವ, ಅವಲಂಬಿಸುವ ಸ್ಥಿತಿಗಳು.

ಅಷ್ಟೇ ಅಲ್ಲದೆ ಪ್ರವೇಶ ಪೂರ್ವದಲ್ಲಿ ಮಹಿಳೆಯರಿಗೆ ಕುಟುಂಬದ ಸಶಕ್ತ ರಾಜಕೀಯ ಹಿನ್ನೆಲೆ ಇದ್ದು, ಅದನ್ನು ಮುಂದುವರೆಸುವ ಸಂದರ್ಭ ಒದಗಿದಾಗ, ಅವಳ ಆಯ್ಕೆ ಪ್ರಶ್ನೆಯೇ ಇಲ್ಲದೇ ಬಾಹ್ಯ ಒತ್ತಡದ ಕಾರಣವಾಗಿ ಒಪ್ಪಿಕೊಳ್ಳಬಹುದು. ರಾಜಕೀಯ ಜೀವನ ವೈಭೋಗ, ಹಣಗಳಿಕೆ ಮಾರ್ಗ ಎಂದು ಭಾವಿಸಿರುವವರು ಈ ಕಾರಣದಿಂದಲೇ ಅದರಲ್ಲಿ ಪಾಲ್ಗೊಳ್ಳಬೇಕೆಂಬ ಒತ್ತಡಗಳು, ಸಾಮಾಜಿಕವಾಗಿ ಮಹಿಳಾ ಅಭ್ಯರ್ಥಿಗಳ ಬಗ್ಗೆ ಜನರಲ್ಲಿನ ಮನೋಭಾವ ಮತ್ತು ಒಟ್ಟು ರಾಜಕೀಯ ಸಂಸ್ಕೃತಿಯಲ್ಲಿ ಮಹಿಳೆಯ ಭಾಗವಹಿಸುವಿಕೆಯನ್ನು ನಿರಾಕರಿಸುವ ಈ ಸಂಗತಿಗಳೆಲ್ಲವೂ ಸಹ ರಾಜಕೀಯ ವಲಯದಲ್ಲಿನ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ - ಹಿಂಸೆಯ ಭಿನ್ನ ಆಯಾಮಗಳು, ಸ್ವರೂಪಗಳಾಗಿ ಕಾಣಿಸಿಕೊಳ್ಳುತ್ತವೆ.

ಈ ಎಲ್ಲ ಬಗೆಯ ಆಕ್ರಮಣಗಳಿಂದಾಗಿ ಮಹಿಳೆಯರು ರಾಜಕೀಯ ವಲಯವನ್ನು ಪ್ರವೇಶಿಸುವುದನ್ನು ನಿರಾಕರಿಸುತ್ತಿರುವುದರಿಂದ ಪ್ರವೇಶಕ್ಕೆ ಅಗತ್ಯವಾದ ತಂತ್ರಗಾರಿಕೆಯನ್ನು ಸ್ತ್ರೀವಾದಿಗಳು ರೂಪಿಸುತ್ತಿದ್ದಾರೆ. ಪುರುಷ ರಾಜಕಾರಣದ ಪ್ರತಿಯಾಗಿ ಸ್ತ್ರೀ ರಾಜಕಾರಣವೊಂದು ಸೃಷ್ಟಿಸಲೇಬೇಕಾದ ಅನಿವಾರ್ಯತೆಯೊಂದು ಸ್ತ್ರೀವಾದಿಗಳಿಗೆ ಸೃಷ್ಟಿಯಾಗಿದೆ. ಈ ಕಾರ್ಯತಂತ್ರಗಳಲ್ಲಿ ಬಹುಮುಖ್ಯವಾದುದೇ ಮೀಸಲಾತಿ ಕಾಯ್ದೆ.

## ಮೀಸಲಾತಿ ಕಾಯ್ದೆ

ಸಮಾನತೆಯ ಪರಿಕರವಾಗಿ ಕಾರ್ಯನಿರ್ವಹಿಸುವ ಪ್ರಮಾಣ ಆಯಶವೇ ಮೀಸಲಾತಿಯು ಹೊಂದಿದೆ. ವಿವಿಧ ಜಾತಿ, ವರ್ಗ, ಲಿಂಗಗಳಿಗೆ, ಎಲ್ಲ ಕ್ಷೇತ್ರಗಳಲ್ಲೂ ಸಮನವಾದ ಆದ್ಯತೆಯು ಸಾಧ್ಯವಾಗಬೇಕೆಂಬುದೆ ಮೀಸಲಾತಿಯ ಗುರಿಯು ಆಗಿದೆ. ರಾಜಕೀಯ ಮೀಸಲಾತಿಯ ರಚನೆಯು ಸಹ ಇದೇ ಅಂಶಗಳನ್ನು ಆಧರಿಸಿದೆ. ಪ್ರಬಲರು ಎಲ್ಲ ಅವಕಾಶಗಳನ್ನು ತಾವೇ ದಕ್ಕಿಸಿಕೊಳ್ಳುತ್ತಿದ್ದು, ಅಧೀನ ನೆಲೆಯ ಸಮುದಾಯಗಳಿಗೆ ಏನೊಂದು ದಕ್ಕದಂತೆ, ಶತಮಾನಗಳ ಕಾಲ ದಾಸ್ಯದ ನೆಲೆಯಲ್ಲಿಯೇ ಬದುಕು ಮುಗಿಸುವುದನ್ನು ತಡೆಯಲು, ನಿವಾರಿಸಲು ಬಯಕೆಯಿಂದ, ಮಹಿಳಾ ಮೀಸಲಾತಿಯು ಮಹಿಳಾ ಅಧೀನತೆಯಿಂದ ಪ್ರಧಾನ ನೆಲೆಗೆ ಬರುವಂತಾಗಲೂ ರಚಿತವಾಗಿದೆ.

ಸ್ವಾತಂತ್ರೋತ್ತರ ಸಂದರ್ಭದಲ್ಲಿ ರಾಜಕೀಯ ಮೀಸಲಾತಿ ಮಸೂದೆಯು ಹೆಚ್ಚಿನ ಚರ್ಚೆಗೊಳಪಡುತ್ತಿದೆ. ಪಂಚಾಯತ್ ರಾಜ್ ವ್ಯವಸ್ಥೆಯ ಬಗೆಗೆ ಅಧ್ಯಯನ ಮಾಡಿದ ಬಲವಂತರಾಯ್ ಮೆಹ್ತಾ ಸಮಿತಿಯು ೧೯೫೭ರಲ್ಲಿ ಪ್ರಪ್ರಥಮವಾಗಿ ಮಹಿಳಾ ಮೀಸಲಾತಿಯನ್ನು ಪ್ರಸ್ತಾಪಿಸಿತು. ೧೯೭೪ರಲ್ಲಿ ಮಹಿಳೆಯರ ಸಮಸ್ಯೆಗಳ ಕುರಿತು ಕೈಗೊಂಡ ಅಧ್ಯಯನದ ವರದಿಯಾದ "ಸಮಾನತೆಯೆಡೆಗಿನ ವರದಿ"ಯು ಶೇ. ೩೦. ಮೀಸಲಾತಿಯ ಅಗತ್ಯತೆಯನ್ನು ಪ್ರಸ್ತಾಪಿಸಿತು (ಉಲ್ಲೇಖ : Towards Equality Report).[೧೦] ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಶಾಸನಬದ್ಧ ಮೀಸಲಾತಿಯನ್ನು ನೀಡುವ ಪ್ರಯತ್ನವು ದೇಶದಲ್ಲೇ ಮೊದಲ ಬಾರಿಗೆ ಕರ್ನಾಟಕದ ಜನತಾ ಪಕ್ಷದಿಂದ ೧೯೮೩ರಲ್ಲಿ ಕಾಯಿದೆ ತಿದ್ದುಪಡಿ ಮೂಲಕ ೨೫% ಪ್ರತಿಶತದಷ್ಟು ಸ್ಥಾನಗಳನ್ನು ಮೀಸಲಿಡಲಾಯಿತು. ೧೯೮೭ರ ಚುನಾವಣೆಯಲ್ಲಿ ಇದನ್ನು ಜಾರಿಗೆ ತರಲಾಯಿತು. ೧೯೮೮ರಲ್ಲಿ ಮಹಿಳೆಯರಿಗಾಗಿ ರೂಪಿತವಾದ "ರಾಷ್ಟ್ರೀಯ ದೃಷ್ಟಿಕೋನದ ಯೋಜನೆ" ಪಂಚಾಯ್ತಿಯಿಂದ ಲೋಕಸಭೆವರೆಗೂ ಶೇ. ೩೩ರ ಮೀಸಲಾತಿಯನ್ನು ಸಂವಿಧಾನಾತ್ಮಕ ತಿದ್ದುಪಡಿಯಲ್ಲಿ ಪ್ರತಿಪಾದಿಸಿತು.

ಈ ಪಂಚಾಯ್ತಿ ಮೀಸಲಾತಿ ಬಿಲ್ಲ್ ೧೯೯೦ರ ಸಂಸತ್ತಿನಲ್ಲಿ ಸುಲಭವಾಗಿಯೇ ಪರಿಗಣಿತವಾಯ್ತು. ಸಂವಿಧಾನದ ೭೩ ಹಾಗೂ ೭೪ನೇ ತಿದ್ದುಪಡಿಗಳಿಂದಾಗಿ ಸಾಕಷ್ಟು ಮಹಿಳೆಯರು ರಾಜಕೀಯ ವಲಯವನ್ನು ಪ್ರವೇಶಿಸಿದರು. ಸಂವಿಧಾನದ ಕಲಂ ೩೩(A)ಯಲ್ಲಿ ಪ್ರಸ್ತಾಪಿಸಲಾಗಿದೆ. ಸಂವಿಧಾನದ ೭೩ನೇ ತಿದ್ದುಪಡಿಯು ಪಂಚಾಯ್ತಿಗಳಲ್ಲಿನ ಒಟ್ಟು ಸ್ಥಾನದ ೧/೩ರಷ್ಟನ್ನು ಮತ್ತು ೭೪ನೇ ತಿದ್ದುಪಡಿಯು ನಗರ ಪಾಲಿಕೆಗಳಿಗೆ ಇದು ಅನ್ವಯವಾಗುವಂತೆ ಮಾಡಿದೆ. ಆದರೆ ಇದು ಲೋಕಸಭೆ ಮತ್ತು ವಿಧಾನ ಸಭೆಗಳಲ್ಲಿ, ಉನ್ನತ ರಾಜಕೀಯ ನೆಲೆಗಳಲ್ಲಿ ಜಾರಿಗೊಳ್ಳುತ್ತಿಲ್ಲ. ಪಂಚಾಯ್ತರಾಜ್‌ದಲ್ಲಿ ನೀಡಲಾಗಿರುವ ಮೀಸಲಾತಿಯು ಬಹುತೇಕವಾಗಿ ಸೇವಾ ವಲಯಗಳೆಂದು ಪರಿಗಣಿತವಾದ್ದರಿಂದ, ಸುಲಭವಾಗಿ ಅಂಗೀಕೃತವಾಯಿತು. ಆದರೆ ಉನ್ನತ ನೆಲೆಗಳು ಅಧಿಕಾರ ಕೇಂದ್ರಗಳಾಗಿರುವುದರಿಂದ ಜೊತೆಗೆ ಪುರುಷ ರಾಜಕಾರಣಿಗಳು ತಮ್ಮ ಸ್ಥಾನವನ್ನು ತ್ಯಜಿಸಬೇಕಾಗುತ್ತದೆ. ಇದರಿಂದ ಯಾವುದೇ ಪಕ್ಷಗಳೂ ಸಹಿತ ತಮಗಾಗುವ ಹಾನಿಯನ್ನು ಸಮಾಜಿಕವಾಗಿ ದತ್ತವಾಗಿರುವ ಅಧಿಕಾರವನ್ನು ಕಳೆದುಕೊಳ್ಳುವುದರಿಂದ ಮೇಲ್ನೋಟಕ್ಕೆ

ಮೀಸಲಾಯಿತಿಯನ್ನು ಚರ್ಚಿಸುತ್ತವೆಯೇ ವಿನಃ ಅದನ್ನು ಮಹಿಳೆಗೆ ನೀಡುವ ಉದ್ದೇಶದಿಂದಲ್ಲ. ಹಾಗಾಗಿ ಮಹಿಳಾ ಮೀಸಲಾತಿಯ ಕಾಯ್ದೆಯ ಮೇಲೆ ಆಕ್ರಮಣಗಳನ್ನು ಎಸಲಾಗುತ್ತದೆ. ಕೇವಲ ಚುನಾವಣಾ ಸಂದರ್ಭದಲ್ಲಿ ವೇದಿಕೆಗಳಲ್ಲಿ, ಪಕ್ಷದ ಪ್ರಣಾಳಿಕೆಗಳಿಗೆ ಸೀಮಿತಗೊಳಿಸಿ ಆ ಮೂಲಕ "ಓಟ್‌ಬ್ಯಾಂಕ್ ರಾಜಕಾರಣ" ಮಾಡುತ್ತಿದೆ.

೧೯೫೨ ರಿಂದ ಆವರೆಗೆ ನಡೆದ ಮಹಾ ಚುನಾವಣೆಯಲ್ಲಿ ಮಹಿಳಾ ಸಂಸದರ ಪಾಲು ಶೇ. ೯ಕ್ಕಿಂತ ಹೆಚ್ಚಿಲ್ಲ. ಈ ಮೀಸಲಾತಿಗೆ ಎದುರಾಗಿ ಮಹಿಳಾ ಮೀಸಲಾತಿಯಲ್ಲಿ, ಒಳ ಮೀಸಲಾತಿ ಇರಬೇಕೆಂಬ ವಾದ ವಿರೋಧವು ಪುರುಷ ರಾಜಕಾರಣದಿಂದಾಗಿ, ಮಹಿಳಾ ಮೀಸಲಾತಿ ಕಾಯ್ದೆಯ ಮೇಲಿನ ಆಕ್ರಮಣಗಳೇ ಆಗಿವೆ. ಅಲ್ಲದೆ ಮೀಸಲಾತಿಯ ಪರ್ಯಾಯವಾಗಿ ಪುರುಷ ರಾಜಕಾರಣಿಗಳಿಂದ ಕೈತಪ್ಪಿ ಹೋಗುವ ೧೮೧ ಹೊಸ ಕ್ಷೇತ್ರಗಳನ್ನು ಸೃಷ್ಟಿ ಮಾಡಬೇಕೆಂಬ ಹೊಸ ಹೊಸ ತಂತ್ರಗಳನ್ನು ಸೃಷ್ಟಿಸುತ್ತಿದೆ.

ಮಹಿಳೆಯ ರಾಜಕೀಯ ವಲಯದ ಪ್ರವೇಶದ ಹಂತದ ನಿರಾಕರಣೆಯೇ ಮೊದಲ ಸ್ತರದ ದೌರ್ಜನ್ಯವಾಗಿದೆ. ಆದರೆ ಈ ಗಡಿಯನ್ನು ಮೀರಿ ಮಹಿಳೆಯರು ಅಲ್ಲಲ್ಲಿ ಬೆರಳೆಣಿಕೆಯಷ್ಟು, ಅಪವಾದಗಳೆಂಬಂತೆ ಕಾಣಿಸಿಕೊಳ್ಳುತ್ತಿದ್ದು, ಅಲ್ಲಿಯೂ ನೆಲೆನಿಲ್ಲದಂತಾಗಲೂ ಹಲವಾರು ಬಗೆಯ ದೌರ್ಜನ್ಯ-ಹಿಂಸೆಗಳಿಗೊಳಗಾಗುತ್ತಲೇ ಇದ್ದಾರೆ. ಆದರೆ ಇಂತಹ ಸಂದಿಗ್ಧತೆಗಳಾಚೆಗೂ ಮೀಸಲಾತಿಯಂತಹ ಕಾಯ್ದೆಗಳು ರೂಪಿತವಾದರೂ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಅವುಗಳು ಅಧಿಕಾರದ ನೆಲೆಯನ್ನು ಮಹಿಳೆಯು ಪಡೆಯದಂತಾಗಲೂ ವಿಭಿನ್ನ ಬಗೆಯಲ್ಲಿನ ಅವುಗಳು ಅಧಿಕಾರದ ನೆಲೆಯನ್ನು ಮಹಿಳೆಯು ಪಡೆಯದಂತಾಗಲೂ ವಿಭಿನ್ನ ಬಗೆಯಲ್ಲಿನ ಆಕ್ರಮಣಗಳು ಕಾಣಿಸಿಕೊಳ್ಳುತ್ತವೆ. ಇವುಗಳ ಮಧ್ಯೆಯೇ ರಾಜಕೀಯ ವಲಯದ ಅಧಿಕಾರವನ್ನು ಪಡೆದು ನಿಭಾಯಿಸುವಲ್ಲಿ ಯಶಸ್ವಿಯಾಗದಂತೆ ನಡೆಯುವ ಆಕ್ರಮಣಗಳಿಂದಾಗಿ ಮಹಿಳೆಗೆ ರಾಜಕೀಯ ವಲಯದ ಅಧಿಕಾರ ಕನಸಿನ ಗಂಟೆಂದು ಹಿಂದೇಟು ಹಾಕಬೇಕೆಂಬ ಪಿತೃಸಂಸ್ಕೃತಿಯ ಬಯಕೆಯ ಈಡೇರಿಕೆಯು ಸಫಲವಾಗುತ್ತಲೇ ಇದೆ.

ವಿವಿಧ ಜಾತಿ-ವರ್ಗ-ವರ್ಣಗಳಲ್ಲಿ ಹಂಚಿ ಹೋಗಿರುವ ಮಹಿಳಾ ಸಮುದಾಯವನ್ನೇ 'Women as a Caste' ಎಂದು ಪರಿಭಾವಿಸಲಾಗಿದೆ. ಈ ಹಿನ್ನೆಲೆಯಲ್ಲಿ ಮಹಿಳಾ ಸಮುದಾಯವನ್ನು ಒಡೆಯಲು ಹೆಣ್ಣು-ಹೆಣ್ಣಿಗೆ ಶತ್ರುವೆಂಬ ಸಂಗತಿಗಳನ್ನು ಬೆಳೆಸಲು ಪುರುಷ ರಾಜಕೀಯವು ಒಳ ಮೀಸಲಾತಿಯ ಪ್ರಸ್ತಾಪವೆತ್ತುತ್ತಿದೆ. ಒಳ ಮೀಸಲಾತಿಯನ್ನು ಕೊಡುವುದೇ ಆದರೆ ಪುರುಷರಿಗಾಗಿ ಮೀಸಲಿರಿಸಿದ ಜಾತಿ ಮೀಸಲಾತಿಯಲ್ಲಿ ನೀಡಬಹುದೆಂಬ ಸ್ತ್ರೀವಾದಿಗಳ ಪ್ರಶ್ನೆಯು ಮಹತ್ವದ್ದೇ ಆಗಿದೆ. ಈ ಬಗೆಯ ಆಕ್ರಮಣಗಳಿಗೆ ಬಲಿಯಾಗದೆ ಸ್ತ್ರೀ-ಪುರುಷ ಸಮಾನತೆಯ ಪರಿಕರವಾಗಿ ಒದಗಬಹುದಾದ ಮಹಿಳಾ ಮೀಸಲಾತಿಯನ್ನು ಪಡೆದು, ಈ ಸೌಲಭ್ಯದ 'ಸಾಮಾಜಿಕ ನ್ಯಾಯ'ದ ಬಗೆಗೆ ನಂತರದಲ್ಲಿ ವಿವೇಚಿಸಬಹುದಾಗಿದೆ.

**ಪಂಚಾಯತ್‌ರಾಜ್ ವ್ಯವಸ್ಥೆ**

ಸ್ವತಂತ್ರ ಭಾರತದಲ್ಲಿ ಗಣರಾಜ್ಯದ ಸ್ಥಾಪನೆಯಾದ ನಂತರದಲ್ಲಿ ಗ್ರಾಮ ಪಂಚಾಯ್ತಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಯಿತು. ಪಂಚಾಯ್ತಿಗಳು ಪ್ರಾಚೀನ ಕಾಲದಿಂದಲೂ ಕಂಡು ಬರುತ್ತವೆ. ಅವು ಸಮರ್ಪಕವಾಗಿ, ಕಾರ್ಯನಿರ್ವಹಿಸುತ್ತಿದ್ದವು ಎಂಬುದಕ್ಕೆ ಸರ್ ಚಾರ್ಲ್ಸ್ ಮೆಟ್ಕಾಫ್ ಅವರ ಅಭಿಪ್ರಾಯವೊ ಗಮನಾರ್ಹವಾಗಿದೆ. "ಪ್ರಾಚೀನ ಭಾರತೀಯ ಪಂಚಾಯ್ತಿಗಳು ಗಣರಾಜ್ಯಗಳಂತಿದ್ದವು" (ಉಧೃತ : ಗ್ರಾಮ ಪಂಚಾಯ್ತಿ ವ್ಯವಸ್ಥೆಯಲ್ಲಿ ಮಹಿಳಾ ಸಮುದಾಯದ ಭಾಗವಹಿಸುಕೆ).[೨] ಮುಂದುವರೆದಂತೆ ಕರಾಳಯುಗ - ಕಗ್ಗತ್ತಲೆಯ ಯುಗವೆಂದು ಹೇಳಲಾಗುವ ಮುಸ್ಲಿಂರ ಕಾಲದಲ್ಲಿ ಗ್ರಾಮಪಂಚಾಯ್ತಿಗಳು ಅವನತಿಯಾದವು. ಬ್ರಿಟಿಷರ ಆಡಳಿತಾವಧಿಯಲ್ಲಿ ಅಂಚಿಗೆ ಸರಿಸಲಾದ ಗ್ರಾಮಪಂಚಾಯ್ತಿಗಳು ಕೆಲವು ಕಾಲಾನಂತರ ಬ್ರಿಟಿಷ್ ಚಿಂತಕರ ಮತ್ತು ಆಡಳಿತಗಾರರಿಂದಲೇ ಪ್ರಶಂಸೆಗೊಳಪಟ್ಟವು. ಮುಂಬರುವ ವರ್ಷಗಳಲ್ಲಿ ಸ್ಥಳೀಯ ಸರ್ಕಾರಗಳಲ್ಲಿ ಜನರ ಪಾಲ್ಗೊಳ್ಳುವಿಕೆಯು ಗಣನೀಯ ಪ್ರಮಾಣದಲ್ಲಿರಲಿಲ್ಲವೆಂಬುದನ್ನು ಮನಗಂಡು ೧೯೫೭ರಲ್ಲಿ ಬಲವಂತರಾಯ ಜಿ. ಮೆಹ್ತಾ ಸಮಿತಿಯು ಗ್ರಾಮಾಭಿವೃದ್ಧಿಗಾಗಿ ಗ್ರಾಮ, ಮಧ್ಯಂತರ ಮತ್ತು ಉನ್ನತ ವ್ಯವಸ್ಥೆಗಳೆಂದು ಮೂರು ಹಂತಗಳಲ್ಲಿ ಶಿಫಾರಸ್ಸು ಮಾಡಿತು. ಆದರೂ ಸಹ ಪಂಚಾಯ್ತಿ ಸಂಸ್ಥೆಗಳ ನಿಷ್ಕ್ರಿಯತೆಯಿಂದಾಗಿ ಇದು ವೈಫಲ್ಯವಾದಾಗ ೧೯೮೩ರಲ್ಲಿ ಅಶೋಕ ಮೆಹ್ತಾ ಸಮಿತಿಯ ಅಧ್ಯಯನದ ಶಿಫಾರಸ್ಸಿನ ನಂತರ, ೧೯೮೫ರಲ್ಲಿ ರಚನೆಯಾದ ಕಾನೂನಿನಡಿಯಲ್ಲಿ ಶೇ. ೨೫ರಷ್ಟು ಮೀಸಲಾತಿಯನ್ನು ಮಹಿಳೆಗೆ ಕಲ್ಪಿಸಲಾಯಿತು.

ರಾಜೀವ್‌ಗಾಂಧಿಯವರಿಗೆ ದೊರೆಯದ ಬೆಂಬಲದಿಂದಾಗಿ ಅವರ ಕನಸ್ಸನ್ನು ಪಿ.ವಿ. ನರಸಿಂಹರಾವ್‌ರವರ ಅಧಿಕಾರಾವಧಿಯಲ್ಲಿ ಸಂವಿಧಾನ ೭೩ನೇ ತಿದ್ದುಪಡಿಗೆ ೧೯೯೨ರಲ್ಲಿ ಸಮ್ಮತಿ ದೊರೆಯಿತು. ಈ ತಿದ್ದುಪಡಿಯಿಂದಾಗಿ ಮಹಿಳೆಯರಿಗೆ ಗ್ರಾಮ ಪಂಚಾಯ್ತಿಯಲ್ಲಿ ಶೇ. ೩೩.೩ ಮೀಸಲಾತಿ ಲಭ್ಯವಾಯಿತು. ಆದರೆ ೧೯೭೪ರಲ್ಲಿ (NEW) National Council for Women ಸಲ್ಲಿಸಿದ ವರದಿಯಲ್ಲಿ ಮಹಿಳಾ ಪಾಲ್ಗೊಳ್ಳುವಿಕೆಯು ಕಡಿಮೆಯಿರುವುದನ್ನು ಸೂಚಿಸಿತು. ಈ ಹಿನ್ನೆಲೆಯಲ್ಲಿ ೧೯೯೭ರಲ್ಲಿ ಭಾರತ ಸರ್ಕಾರ ೭೩ ಮತ್ತು ೭೪, ೮೧ನೇ ಸಂವಿಧಾನಾತ್ಮಕ ತಿದ್ದುಪಡಿಯಿಂದಾಗಿ ಸ್ಥಳೀಯ ಸಂಸ್ಥೆಗಳು ಮತ್ತು ಗ್ರಾಮ ಪಂಚಾಯ್ತಿಯಲ್ಲಿ ಶೇ. ೩೩ರಷ್ಟು ಮೀಸಲಾತಿ ಒದಗಿಸಿತು. ಈ ನಿಟ್ಟಿನಲ್ಲಿ ಮೀಸಲಾತಿಯನ್ನು ಪಡೆದ ಪಂಚಾಯತ್ ರಾಜ್ ವ್ಯವಸ್ಥೆಯು ಮೂರು ಹಂತಗಳಲ್ಲಿ ವಿಂಗಡಣೆಯಾಯಿತು. ಡಾ. ಮನಮೋಹನಸಿಂಗ್ ಅವರ ಈಗಿನ (೨೦೦೨) ಅವಧಿಯಲ್ಲಿ, ಇತ್ತೀಚೆಗಷ್ಟೆ ಗ್ರಾಮಪಂಚಾಯ್ತಿಯಲ್ಲಿ ೫೦% ಮೀಸಲಾತಿಯನ್ನು ಒದಗಿಸಲಾಗಿದೆ.

**ಗ್ರಾಮಪಂಚಾಯತಿ**

೫೦೦೦ ದಿಂದ ೭೦೦೦ ಜನಸಂಖ್ಯೆಯುಳ್ಳ ಗ್ರಾಮ ಅಥವಾ ಗ್ರಾಮಗಳ ಗುಂಪನ್ನು ಹೊಂದಿದ್ದರೆ ಅಲ್ಲಿ ಗ್ರಾಮಪಂಚಾಯ್ತಿಯು ಸ್ಥಾಪಿತವಾಗಬೇಕು. ಕೆಲವು ಜಿಲ್ಲೆಗಳಲ್ಲಿ ಈ ಜನಸಂಖ್ಯೆಯನ್ನು ೨,೫೦೦ಕ್ಕೂ

ಮಿತಿಗೊಳಿಸಲಾಗಿದೆ. ೪೦೦ ಜನಸಂಖ್ಯೆಗೆ ಒಟ್ಟು ಸದಸ್ಯರಿರುವಂತೆ, ಜನಸಾಂದ್ರತೆಯ ಆಧಾರದ ಮೇಲೆ ಗ್ರಾಮಪಂಚಾಯ್ತಿ ಸದಸ್ಯರ ನಿರ್ಧಾರವಾಗುತ್ತದೆ. ಒಟ್ಟು ಸ್ಥಾನಗಳಲ್ಲಿ ಶೇ. ೧೮ ಪರಿಶಿಷ್ಟ ಜಾತಿ - ಪರಿಶಿಷ್ಟ ಪಂಗಡಗಳಿಗಾದರೆ, ೧/೩ ಸ್ಥಾನ ಮಹಿಳೆಯರಿಗೆ ಮೀಸಲಿರಿಸಲಾಗಿದೆ. ಒಬ್ಬ ಅಧ್ಯಕ್ಷ - ಉಪಾಧ್ಯಕ್ಷರನ್ನು ಇದು ಹೊಂದಿರುತ್ತದೆ. ಗ್ರಾಮ ಪಂಚಾಯ್ತಿ ಕಛೇರಿಯಲ್ಲಿ ಪ್ರತಿ ೨ ತಿಂಗಳಿಗೊಮ್ಮೆಯಾದರೂ ಸಭೆ ಸೇರುವುದು ಕಡ್ಡಾಯವಾಗಿದೆ.

**ತಾಲ್ಲೂಕು ಪಂಚಾಯ್ತಿ**

ತಾಲ್ಲೂಕು ಮಟ್ಟದ ಈ ಪಂಚಾಯ್ತಿಯಲ್ಲಿ ಪ್ರತಿ ೧೦,೦೦೦ ಸಾವಿರ ಜನಸಂಖ್ಯೆಗೆ ಒಬ್ಬ ಸದಸ್ಯರಿರುತ್ತಾರೆ. ಇವರು ಕನಿಷ್ಟ ೨೦ ವರ್ಷದ ವಯೋಮಾನದವರಾಗಿರಬೇಕು. ಚುನಾಯಿತ ಸದಸ್ಯರೂ ಮತ್ತು ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಲೋಕಸಭಾ, ರಾಜ್ಯಸಭಾ, ಶಾಸನಸಭಾ ಮತ್ತು ವಿಧಾನ ಪರಿಷತ್ತಿನ ಸದಸ್ಯರು ಸಹ ಇಲ್ಲಿ ಸದಸ್ಯರಾಗಿರುತ್ತಾರೆ. ತಾಲ್ಲೂಕು ಪಂಚಾಯಿತಿಯ ಒಟ್ಟು ಸದಸ್ಯರಲ್ಲಿ ಶೇ. ೧೮ (೧೫+೩) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟಿನವರಿಗೆ ಮತ್ತು ಮಹಿಳೆಗೆ ೧/೩ ಭಾಗ ಮೀಸಲಾಯಿತಿರುತ್ತದೆ. ತಾಲ್ಲೂಕ ಪಂಚಾಯ್ತಿಯು ಸಾಮಾನ್ಯ ಸ್ಥಾಯಿ ಸಮಿತಿ, ಹಣಕಾಸು ಲೆಕ್ಕ ಪರಿಶೋಧನೆ ಮತ್ತು ಯೋಜನಾ ಸಮಿತಿ ಹಾಗೂ ಸಾಮಾಜಿಕ ನ್ಯಾಯ ಸಮಿತಿ ಎಂಬ ಮೂರು ಬಗೆಯ ಸಮಿತಿಗಳನ್ನು ರಚಿಸಲಾಗಿರುತ್ತದೆ.

**ಜಿಲ್ಲಾ ಪಂಚಾಯಿತಿ**

ಪ್ರತಿ ೪೦,೦೦೦ ಜನಸಂಖ್ಯೆಗೊಬ್ಬರಂತೆ, ಜನಸಂಖ್ಯೆಗನುಗುಣವಾಗಿ ಸದಸ್ಯರಿರುವ ಈ ಪಂಚಾಯ್ತಿಯು ಜಿಲ್ಲೆಗೊಂದರಂತೆ ರೂಪಿಸಲಾಗಿದೆ. ಕಡಿಮೆ ಜನಸಂಖ್ಯೆಯನ್ನು ಹೊಂದಿರುವ ಜಿಲ್ಲೆಗಳಲ್ಲಿ ೩೦,೦೦೦ ಜನಸಂಖ್ಯೆಗೊಬ್ಬರು ಸದಸ್ಯರನ್ನು ನೇಮಿಸಲಾಗುತ್ತದೆ. ಜಿಲ್ಲೆಗೆ ಸಂಬಂಧಪಟ್ಟ ಲೋಕಸಭೆ, ರಾಜ್ಯಸಭೆ, ವಿಧಾನ ಪರಿಷತ್ ಸದಸ್ಯರೂ, ಜಿಲ್ಲಾ ತಾಲ್ಲೂಕು ಪಂಚಾಯಿತಿಗಳ ಅಧ್ಯಕ್ಷರೂ ಸಹ ಜಿಲ್ಲಾ ಪಂಚಾಯ್ತಿಯ ಸದಸ್ಯರಾಗಿರುತ್ತಾರೆ. ಇಲ್ಲಿನ ಒಟ್ಟು ಸದಸ್ಯರಿಗೆ ಶೇ. ೧೮ರಷ್ಟು ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ೧/೩ ಭಾಗ ಹಿಂದುಳಿದ ವರ್ಗಗಳಿಗೆ, ೧/೩ ಭಾಗ ಮಹಿಳಾ ಮೀಸಲಾತಿಯ ಪ್ರಮಾಣ ಅಧ್ಯಕ್ಷ ಮತ್ತು ಉಪಾಧ್ಯಕ್ಷರುಗಳಿಗೆ ಅನ್ವಯಿಸುತ್ತದೆ.

ಪಂಚಾಯತ್‌ರಾಜ್‌ನ ಮೊದಲ ಹಂತದ ಗ್ರಾಮ ಪಂಚಾಯ್ತಿಯ ಅಧ್ಯಕ್ಷ - ಉಪಾಧ್ಯಕ್ಷ ಮಹಿಳೆಯನ್ನು ಕ್ಷೇತ್ರಕಾರ್ಯದ ಸಂದರ್ಶಿಸಿ ಮೂಲಕ ಅವರ ಮೇಲಾಗುವ ಹಿಂಸೆ - ದೌರ್ಜನ್ಯಗಳನ್ನು ಗ್ರಹಿಸಲು ಪ್ರಕರಣಗಳು ವಿಶ್ಲೇಷಣೆಗೊಳಪಡಿಸುವ ಹಿನ್ನೆಲೆಯಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆಯ ಸ್ಥೂಲ ಚಿತ್ರಣವನ್ನು ಇಲ್ಲಿ ದಾಖಲಿಸಲಾಗಿದೆ.

ಈ ಬಗೆಯ ಮೀಸಲಾತಿಯು ಜಾರಿಯಾದರೂ ಸಹ ಮಹಿಳೆಯರೂ ಪಿತೃ ಸಂಸ್ಕೃತಿಯಲ್ಲಿ ನಾಮ ಮಾತ್ರ ಅಧಿಕಾರಿಗಳಾಗುತ್ತಿದ್ದಾರೆ ಹಾಗೂ ಮಹಿಳೆಯರನ್ನು ಚುನಾವಣೆಗೆ ನಿಲ್ಲಿಸಿ ಗೆಲ್ಲಿಸುವ ಮುಖೇನ ಸಂಪೂರ್ಣ ಅಧಿಕಾರವು ಪುರುಷನ ಕಪಿಮುಷ್ಠಿಯಲ್ಲೇ ಸಿಲುಕಿಕೊಂಡಿದೆ. ಈ ನೆಲೆಯ ಮೂಲಕ

ಮಹಿಳೆಯರು, ಈ ಕೆಳಹಂತದ ಕ್ಷೇತ್ರಗಳನ್ನೇ ಯಶಸ್ವಿಯಾಗಿ ನಿಭಾಯಿಸುವಲ್ಲಿ ವಿಫಲವಾಗುತ್ತಿದ್ದಾರೆಂಬ ವದಂತಿಗಳನ್ನು ಹರಡುವ ಮೂಲಕ ಮಹಿಳೆಗೆ ಈ ಪ್ರವೇಶವನ್ನು ನಿರಾಕರಿಸುವ ಹುನ್ನಾರ ಸಮಾಜ ವ್ಯವಸ್ಥೆಗಿದೆ. ಈ ಸಂಗತಿಗಳ ಅರಿವೇ ಇಲ್ಲದ ಮಹಿಳೆಯರು ಸಹಜವಾಗಿಯೇ ರಾಜಕೀಯ ವೈಫಲ್ಯವನ್ನು ಕಾಣುತ್ತಿದ್ದಾರೆ. ಕುಟುಂಬದ ಅಧೀನ ನೆಲೆಯ ಸ್ಥಾನಮಾನಕ್ಕೆ ತಳಕು ಹಾಕಿಕೊಂಡಿರುವ ಮಹಿಳೆಯರನ್ನು ಗ್ರಾಮಪಂಚಾಯ್ತಿಯಲ್ಲಿನ ಅಧಿಕಾರಗಳು ಸೇವಾವಲಯಗಳಾಗಿದ್ದು, ಬಹುತೇಕ ನಾಮಮಾತ್ರವೇ ಆಗಿದೆ. ಇದು ಕೇವಲ ರಾಜಕೀಯ ವಲಯದ ತಿಳುವಳಿಕೆಯ ಸಮಸ್ಯೆಯಷ್ಟೇ ಅಲ್ಲದೆ ಪುರುಷರ ಸಂಗತಿಗಳಲ್ಲಿ ಈ ಅಂಶಗಳು ಕಾಣಿಸಿದರೂ ವ್ಯವಸ್ಥೆಯಲ್ಲಿ ಅವುಗಳು ಅಷ್ಟಾಗಿ ಬೆಳಕಿಗೆ ಬರುವುದಿಲ್ಲ.

ಕೆಲವು ಕಡೆಯಲ್ಲಿ ವಾಸ್ತವವು ಆಶ್ಚರ್ಯವನ್ನು ಮೂಡಿಸುವಂತಿದೆ. ಸಂಪೂರ್ಣ ಮಹಿಳಾ ಪಂಚಾಯ್ತಿಗಳನ್ನು ರಚಿಸಿಕೊಳ್ಳುವ ಮೂಲಕವಾಗಿ ಮಹಿಳಾ ಸಮುದಾಯ ಹೊಸ ವ್ಯವಸ್ಥೆಯತ್ತ ಹೆಜ್ಜೆಯಿಟ್ಟಿದೆ. ಇದಕ್ಕೆಲ್ಲಾ ಕಳಶವಿಟ್ಟಂತೆ. ಆಂಧ್ರದ 'ಕುಲ್ಕಾ' ಗ್ರಾಮಪಂಚಾಯ್ತಿಯ ಸರಪಂಚರಾದ 'ಫಾತೀಮಾಬೀಬಿ'ಯವರು ಉತ್ತಮ ಬಗೆಯ ಆಡಳಿತ ನಿರ್ವಹಣೆಗಾಗಿ ವಿಶ್ವಸಂಸ್ಥೆಯ ಪ್ರಶಸ್ತಿಯನ್ನು ಗಳಿಸಿರುವುದು, ಮಹಿಳಾ ಮೀಸಲಾತಿ ತಿದ್ದುಪಡಿಗಳಿಂದಾದ ಯಶಸ್ಸಿನ ದ್ಯೋತಕವಾಗಿದೆ. ಮೀಸಲಾತಿಗೂ ಹೆಚ್ಚು ಆಯ್ಕೆಯಾದ ಮಹಿಳೆಯರು ಗ್ರಾಮಗಳ ರಾಜಕೀಯ ಚಿತ್ರಣವನ್ನು, ಸಾಮಾಜಿಕ-ಆರ್ಥಿಕ ನೆಲೆಯನ್ನು, ಹಣ, ಜಾತಿಯಾಧಾರಿತವಾಗಿ ಅಧಿಕಾರದ ಪ್ರಬಲತೆಯನ್ನು ಅಲುಗಾಡಿಸಿದಾಗ 'ಪುರುಷ ಸಮಾಜ' ಆಶ್ಚರ್ಯಗೊಂಡಿತು. ಇದೊಂದು ಅನಾಹುತವೆಂಬಂತೆ ಪ್ರತಿಕ್ರಿಯೆಗಳು ಕೇಳಿ ಬಂದವು. ಹೀಗೆ ಪಾಲ್ಗೊಂಡ ಮಹಿಳೆಯರ ವ್ಯಕ್ತಿತ್ವವನ್ನು ನಾಶಗೊಳಿಸುವಂತಹ ಚಟುವಟಿಕೆಯಲ್ಲಿ ನಿರತರಾದರು.

ಒಟ್ಟು ರಾಜಕೀಯ ವಲಯದಲ್ಲಿ ಮಹಿಳೆಯರ ಪ್ರವೇಶವು ಸಾಕಷ್ಟು ಸಂಕೀರ್ಣತೆಗಳಿಂದ, ಹಿಂಸೆ-ದೌರ್ಜನ್ಯಗಳ ನೆಲೆಬೀಡಾಗಿದೆ. ಮೊಟ್ಟಮೊದಲನೆಯದಾಗಿ ರಾಜಕೀಯ ವಲಯದಲ್ಲಿ ಅವಳ ಪ್ರವೇಶವೂ ಸಾಧ್ಯವೇ ಇಲ್ಲವೆನ್ನುವಂತಹ ಸಂಗತಿಗಳು ಸಾಕಷ್ಟಿವೆ. ಅಂಥದರಲ್ಲಿ ಮಹಿಳೆಯರೂ ಪಾಲ್ಗೊಂಡು ಧ್ವನಿಯೆತ್ತುವ ಸಂದರ್ಭಗಳನ್ನು ಮುಚ್ಚಿ ಹಾಕುವಂತಹ ವಾತಾವರಣವು ರಾಜಕೀಯ ವಲಯದಲ್ಲಿ ಸೃಷ್ಟಿಗೊಂಡಿದೆ. ಕೆಲವೊಮ್ಮೆ ಮೇಲ್ನೋಟಕ್ಕೆ ರಾಜಕೀಯ ವಲಯವನ್ನು ಪ್ರವೇಶಿಸಿದ ಸೋನಿಯಾಗಾಂಧಿ, ಸುಷ್ಮಾ ಸ್ವರಾಜ್‌ರಂಥವರಿಗೆ ಲೈಂಗಿಕ ಆಕ್ರಮಣಗಳು ಆಗದೆ ಇರಬಹುದು, ಇತರೆ ಬಗೆಯ ಮಾನಸಿಕ ಹಿಂಸೆ - ದೌರ್ಜನ್ಯಗಳು ಇಲ್ಲವೆಂದು ಹೇಳಲಾಗುವುದಿಲ್ಲ. ತೀರಾ ಇತ್ತೀಚೆಗಷ್ಟೇ ಚರ್ಚಿತವಾದ ರಾಜಕೀಯ ವಲಯದ ಶೋಭಾ ಕರಂದ್ಲಾಜೆ ಮತ್ತು ಚಿತ್ರ ನಟಿ ಶೃತಿಯವರ ಪ್ರಕರಣಗಳು. ಮಹಿಳೆಯರು ರಾಜಕೀಯ ವಲಯದಿಂದ ಹಿಂದಿರುಗುವಂತಹ ಸೂಕ್ಷ್ಮಾತಿಸೂಕ್ಷ್ಮವಾದ ದೌರ್ಜನ್ಯಗಳನ್ನು ಗುರುತಿಸಬಹುದು. ರಾಜಕೀಯ ವಲಯದ ಪ್ರವೇಶವು ಒಂದು ಹಂತದ ನಿರಾಕರಣೆಯ ದೌರ್ಜನ್ಯವಾದರೆ, ಅಲ್ಲಿ ಪಾಲ್ಗೊಂಡ ಮೇಲೆ ಅವರಿಗೆ ನಿಗದಿತವಾಗಿರುವ ಖಾತೆಗಳು ಸಹ ಕೌಟುಂಬಿಕ ವಲಯದ ವಿಸ್ತೃತ ರೂಪವೇ ಎಂಬುದು, ಮಹಿಳೆ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಕುಟುಂಬ ಕಲ್ಯಾಣ ಸಚಿವರ ಹುದ್ದೆಗಳನ್ನು ನೀಡಲಾಗುತ್ತದೆಯೇ ವಿನಃ ಹಣಕಾಸು, ಗಣಿ, ಇಂಧನ, ಸಾರಿಗೆಯಂತಹ ಇಲಾಖೆಗಳನ್ನು

ಒದಗಿಸುವುದಿಲ್ಲ. ಈ ನಿಟ್ಟಿನಲ್ಲಿ ಮಹಿಳೆ ಮತ್ತು ಮಕ್ಕಳ ಕಲ್ಯಾಣ ಇಲಾಖೆಯನ್ನು ತಿರಸ್ಕರಿಸಿ, ಪಂಚಾಯ್ತುರಾಜ್ ಇಲಾಖೆಯನ್ನು ಹಟದಿಂದ ಪಡೆಯಲು ಮುಂತಾದ ಶೋಭಾ ಕರಂದ್ಲಾಜೆಯವರು ಇತಿಹಾಸದಲ್ಲಿ ದಾಖಲೆಯನ್ನು ಸೃಷ್ಟಿಸಿದರು ಹಾಗೂ ಈ ಕಾರಣಗಳಿಂದಾಗಿಯೇ ಅವರು ಪ್ರವೇಶದಿಂದ - ಈವರೆಗಿನ ಪ್ರಕ್ರಿಯೆಗಳ ಯಶಸ್ಸನ್ನು ಗೌರವಿಸುವ ಮನಸ್ಸಿಲ್ಲದ ಪುರುಷ ಸಂಸ್ಕೃತಿ ಅವರ ಚಾರಿತ್ರ್ಯ ವಧೆಯನ್ನು ಮಾಡುವ ಮೂಲಕ, ಮಾನಸಿಕ ದೌರ್ಜನ್ಯ-ಹಿಂಸೆಯನ್ನು ನೀಡುವುದರೊಂದಿಗೆ ಅವಹೇಳನ ಮಾಡಲಾಗುತ್ತಿದೆ.

ಅದೇ ರೀತಿಯಾಗಿ ಚಲನಚಿತ್ರರಂಗದ ಹೆಚ್ಚು ಸ್ಥಿರ ಮಾದರಿ ಪಾತ್ರಗಳಲ್ಲಿ ಕಾಣಿಸಿಕೊಂಡ ಪ್ರಖ್ಯಾತ ನಟಿಯಾದ ಶೃತಿಯವರು. ತಮ್ಮ ಕೌಟುಂಬಿಕ ವಿರಸದ ಕಾರಣದಿಂದಾಗಿ ವಿಚ್ಛೇದನವನ್ನು ಪಡೆದಿರುವುದಕ್ಕೆ ಅವರು ಅಧ್ಯಕ್ಷರಾದ ಮಹಿಳಾ ಪಕ್ಷಕ್ಕೆ ರಾಜಿನಾಮೆ ಕೊಡಬೇಕು. ಇದು ಸ್ತ್ರೀ ಕುಲಕ್ಕೆ ಕಳಂಕವೆಂದು ಜಗಜ್ಜಾಹೀರಗೊಳಿಸಿತು. ಈ ಬಗೆಯ ಆಕ್ರಮಣಗಳಿಗೆ, ಹಿಂಸೆ-ದೌಜನ್ಯಗಳಿಗೆ ಯಾವುದೇ ಕಾನೂನು ಸಹ ಉತ್ತರಿಸದು. ಈ ಬಗೆಯ ಸಂದರ್ಭಗಳು ಪುರುಷನಿಗೆ ಬಂದೊದಗಿದಾಗ ವ್ಯವಸ್ಥೆ ಅದಕ್ಕೆ ನೀಡಿದ ಪ್ರತಿಕ್ರಿಯೆಯ ಏನು? ಎಂಬ ಪ್ರಶ್ನೆಗೆ ಉತ್ತರಗಳೇ ಇಲ್ಲ. ಸಾಧನೆಯ ಮೇರು ಪರ್ವತವನ್ನೇರಿದ ಈ ಮಹಿಳೆಯರ ಪಾಡೇ ಈ ಬಗೆಯ ಆಕ್ರಮಣಕ್ಕೊಳಗಾದರೆ, ಸಾಮಾನ್ಯ ಹಂತದಲ್ಲಿನ ರಾಜಕೀಯ ವಲಯದಲ್ಲಿನ ಮಹಿಳೆಯರ ಆಕ್ರಮಣಗಳು ಊಹೆಗೂ ನಿಲುಕದಷ್ಟು ಕ್ರೂರವಾಗಿವೆ. ರಾಜಕೀಯ ವಲಯವೂ ಕಟ್ಟಾ ಪುರುಷಮಯವಾಗಿದೆ. ಇಲ್ಲಿನ ಮಹಿಳೆಯರೂ ಕೌಟುಂಬಿಕ ವಲಯದ ಅಧೀನ ಸ್ತರಗಳಲ್ಲಿ, ಪುರುಷರು ಪ್ರಧಾನಸ್ತರಗಳಲ್ಲಿ ಗೋಚರವಾಗುವುದು ಸ್ಪಷ್ಟವಾಗಿದೆ.

ವಿವಿಧ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ಹಿಂಸೆ, ದೌರ್ಜನ್ಯಗಳ ಸ್ವರೂಪವನ್ನು ಗ್ರಹಿಸುವಲ್ಲಿ ಒಟ್ಟು ಧಾರ್ಮಿಕ, ಆರೋಗ್ಯ, ಶಿಕ್ಷಣ, ಆರ್ಥಿಕ, ಉದ್ಯೋಗ, ರಾಜಕೀಯವೆಂಬ ಆರು ವಲಯಗಳಾಗಿ ವಿಭಾಗಿಸಿಕೊಳ್ಳಲಾಗಿದೆ. ಇಲ್ಲಿ ಉದ್ಯೋಗ ವಲಯವು ಆರ್ಥಿಕ ವಲಯದ ಒಂದು ಭಾಗವಾಗಿ ಕಂಡರೂ ಸಹಿತ, ಇನ್ನಿತರ ವಲಯಗಳಲ್ಲಿ ಮಹಿಳೆಯು ಉದ್ಯೋಗಕ್ಕೆ ತೊಡಗುತ್ತಿರುವುದು ಕಾಣಬಹುದಾಗಿದೆ. ಆ ಕಾರಣವಾಗಿ ಉದ್ಯೋಗ ವಲಯವನ್ನು ಪ್ರತ್ಯೇಕ ಚರ್ಚೆಗೊಳಪಡಿಸುವ ಅಗತ್ಯತೆಯನ್ನು ಮನಗಂಡು ಆರು ವಲಯಗಳಾಗಿಸಿಕೊಳ್ಳಲಾಗಿದೆ.

ಒಟ್ಟಾರೆ ಸಾರ್ವಜನಿಕ ವಲಯದಲ್ಲಿ ಹೆಂಗಸಿನ ಮೇಲೆ ನಡೆಯುವ ಹಿಂಸೆ, ದೌರ್ಜನ್ಯಗಳು ಯಜಮಾನ ನೆಲೆಯ ಅಸಹನೆಯಿಂದ ಹುಟ್ಟುತ್ತವೆ. ಸ್ಪರ್ಧಾತ್ಮಕವಾದ ಜಗತ್ತಿನಲ್ಲಿ ಹೆಣ್ಣಿನ ಪ್ರವೇಶವನ್ನು ನಿಷೇಧಿಸಿ ಪುರುಷ ಚಿಂತನೆಯು ತನ್ನದೇ ವಲಯವನ್ನಾಗಿ ವ್ಯವಸ್ಥೆಯನ್ನು ರೂಪಿಸಿಕೊಳ್ಳಲಾಗಿದೆ. ಆದರೆ ಕಾಲಾನುಕ್ರಮವಾಗಿ ಬಿರುಕು ಬಿಡುತ್ತಿರುವ ಈ ವ್ಯವಸ್ಥೆಯಲ್ಲಿ ಮಹಿಳೆಯು ಕ್ರಮಾನುಗತವಾಗಿ ಪ್ರವೇಶವನ್ನು ಪಡೆಯುತ್ತಿದ್ದಾಳೆ. ಈ ಬಗೆಯ ಅಸಹನೆಯ ಪ್ರತೀಕವಾಗಿ ಹೆಣ್ಣನ್ನು ಗೃಹಬಂಧಿಯಾಗಿಸಲಾಗಿತ್ತು. ಈ ಬಂಧನವನ್ನು ಮಹಿಳೆಯರು ಭೇದಿಸಿ ಹೊರಬರುವ ಯತ್ನಗಳಲ್ಲಿ ಕೊಂಚ ಪ್ರಮಾಣದ ಯಶಸ್ಸನ್ನು

ಪಡೆಯುತ್ತಿದ್ದಾರೆ. ಹೀಗೆ ಅವಳ ಯಶಸ್ಸಿನದತ್ತ ಸಾಧನೆಗಳು ಪುರುಷ ಸಂಸ್ಕೃತಿಯ ಬೇರುಗಳಿಗೆ ಅಭದ್ರತೆಯ ಬೇದರಿಕೆಯೊಡ್ಡಿದಂತಾದಂತೆಯೇ, ಏಕಚಕ್ರಾಧಿಪತ್ಯದ ತನ್ನ ಒಡೆತನವನ್ನು ಬಿಟ್ಟುಕೊಡಲು ಅಥವಾ ತನ್ನ ಅಧಿಕಾರವನ್ನು ಕಳೆದುಕೊಳ್ಳುವ ಹಂತವು ಸಮೀಪಿಸಿದಂತೆಲ್ಲ. ಅಸಹನೆಯ ಪ್ರಮಾಣವು ಹೆಚ್ಚಾಗುತ್ತಲೇ ವಿಕೃತ ಸ್ವರೂಪದ ಹಿಂಸೆ - ದೌರ್ಜನ್ಯಗಳಲ್ಲಿ ಕಾಣಿಸಿಕೊಳ್ಳುತ್ತಿದೆ. ಇದಕ್ಕೆ ಆಧಾರವಾಗಿ ಕೆಲವು ಅಂಕಿ-ಅಂಶಗಳನ್ನು ಹೇಳಬಹುದಾದರೂ ಇದು ಸಮಗ್ರವಾದ ಮಾಹಿತಿಯನ್ನು ಒದಗಿಸುವಲ್ಲಿ ವಿಫಲವಾಗುತ್ತಿದೆ. ಯಾಕೆಂದರೆ ದೌರ್ಜನ್ಯ - ಹಿಂಸೆಯು ಮೂರ್ತರೂಪದಷ್ಟೆ, ಅಮೂರ್ತತೆಯಲ್ಲೂ ಇದೆ. ಉದಾ: ಎಲ್ಲಾ ವಲಯಗಳಲ್ಲೂ ಸ್ತ್ರೀ-ಪುರುಷರಿಗೆ ಸಮಾನತೆಯಿದೆನ್ನುವುದು ಸಂವಿಧಾನದ ದಾಖಲಾತಿಯಲ್ಲಿದೆ. ಆದರೆ ವಾಸ್ತವದಲ್ಲಿರುವ ಅಂಕಿ-ಅಂಶಗಳಿಗೂ ಇದಕ್ಕೂ ತುಲನೆಯಾಗುವುದಿಲ್ಲ. ಯಾವುದೇ ಸಂಘಟಿತ, ಅಸಂಘಟಿತವಲಯದಲ್ಲಿ ಗುಣಾತ್ಮಕವಾಗಿಯೂ ಮಹಿಳೆಗೆ ಅವಕಾಶಗಳು ಲಭ್ಯವಿಲ್ಲ, ಇದಕ್ಕೆ ಮೂಲಕಾರಣ ಪುರುಷ ಪ್ರಧಾನತೆ ಮತ್ತು ಆ ಚಿಂತನೆಗಳನ್ನಾಧರಿಸಿ ರೂಪಿತವಾದಂತಹ ವ್ಯವಸ್ಥೆಯೇ ಆಗಿದೆ.

ಇಂಥ ಬಿಕಟ್ಟಿನ ಪರಿಸ್ಥಿತಿಗಳಲ್ಲಿಯೂ ಪ್ರತಿ ವಲಯಗಳಲ್ಲೂ ಮಹಿಳೆಯು ಪ್ರವೇಶಿಸುತ್ತಿದ್ದಾಳೆ. ಈ ವ್ಯವಸ್ಥೆಯ ಒಳಗಡೆ ನಡೆಯುವ ಹಿಂಸೆ - ದೌಜನ್ಯಗಳು ವಿವಿಧ ವಲಯಗಳಲ್ಲಿ ನಡೆಯುವ ಸ್ವರೂಪವು ಭಿನ್ನವಾದರೂ, ಉದ್ದೇಶ ಒಂದೇ ಆಗಿದೆ. ಅದು ವ್ಯಕ್ತಿಗತ ದೌರ್ಜನ್ಯ, ಹಿಂಸೆಯಾಗಲಿ, ಗುಂಪಿನದೇ ಆಗಿರಲಿ, ಅಲ್ಲಿ ಸೃಷ್ಟಿಯಾಗುವ ಯಜಮಾನಿಕೆ - ಅಧೀನ ನೆಲೆಯು ಈ ವಲಯಗಳಲ್ಲಿ ಸ್ಥಾನ ಮತ್ತು ಹುದ್ದೆಗಳ ಹಂಚಿಕೆಯಲ್ಲಿಯೂ ಅಡಕಗೊಂಡಿದೆ. ಹೆಣ್ಣಾಗಿರುವ ಕಾರಣದಿಂದಲೇ ಅವಳು ಅನುಭವಿಸುವ ಅಭದ್ರತೆ-ಅರಕ್ಷತತೆಯಿಂದಾಗುವ ದೌರ್ಜನ್ಯ - ಹಿಂಸೆಗಳು ತುಂಬಾ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿನ ಮಹಿಳೆಯರ ಸ್ಥಿತಿ, ತೃತೀಯ ದೇಶಗಳಲ್ಲಿನ ಸಾಮಾನ್ಯ ವ್ಯತ್ಯಾಸಗಳೇನು ಆಗಿಲ್ಲ. ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿರುವ, ಕೈತುಂಬ ಹಣ ಸಂಪಾದಿಸುವ, ಒಳ್ಳೆಯ ಅಧಿಕಾರ, ಸ್ಥಾನಗಳಲ್ಲಿರುವ ಮಹಿಳೆಯರೂ ಇದ್ದಾರಾದರೂ ಅವುಗಳು ಅಪವಾದಗಳೆಂಬಂತಿವೆ.

ಮೇಲ್ನೋಟಕ್ಕೆ ಸಂಘಟಿತ ವಲಯಗಳಲ್ಲಿ ದೌರ್ಜನ್ಯಗಳು ಇಲ್ಲವೆಂದು ಹೇಳಲಾದರೂ ಅದರೊಳಗಿರುವ ಮಹಿಳೆಯರ ಮೇಲೆ ದೈಹಿಕ ಆಕ್ರಮಣ, ಲೈಂಗಿಕ ಆಕ್ರಮಣದ ಪ್ರಮಾಣಕ್ಕಿಂತ ಬೌದ್ಧಿಕ ಆಕ್ರಮಣಗಳು ಹೆಚ್ಚಾಗಿರಬಹುದಾಗಿದೆ. ಸಂಘಟಿತ ವಲಯ ಹೆಚ್ಚು ಮುಸುಕನ್ನೊಳಗೊಂಡಿದೆ. ಆದರೆ ಇಲ್ಲಿ ನಡೆಯುವ ಸಂಗತಿಗಳು ಪ್ರತಿಯೊಬ್ಬರು ಬಲ್ಲರಾದರೂ, ಅನಾವರಣಗೊಳಿಸುವುದಿಲ್ಲ. ಮನೆಯ ಪರಿಚಿತ ವಲಯದಲ್ಲಿ ಅಪಾಯಕಾರಿ ಸಂದರ್ಭಗಳಲ್ಲಿದ್ದಾಳೆಂದರೆ, ಅಪರಿಚಿತ ವಲಯದಲ್ಲಿಯೂ ಇದರ ಪ್ರಮಾಣ ಇನ್ನಷ್ಟು ಭೀಕರವಾಗಿರುವುದು ಆಶ್ಚರ್ಯವೇನಲ್ಲ ಎಂಬುದು ಈ ವಿವಿಧ ವಲಯಗಳಲ್ಲಿ ದೌರ್ಜನ್ಯ - ಹಿಂಸೆಯ ಸ್ವರೂಪದ ವಿಶ್ಲೇಷಣೆಯಲ್ಲಿ ಸ್ಪಷ್ಟಪಡಿಸಲಾಗಿದೆ. ಈ ಎಲ್ಲಾ ವಲಯಗಳೂ ಸಹ ಒಂದಕ್ಕೊಂದು ಪೂರಕವಾಗಿವೆ. ಶಿಕ್ಷಣವಿಲ್ಲದ ಹೊರತು ಸಂಪಾದನೆ ಸಾಧ್ಯವೆ? ಆರೋಗ್ಯದ ಹೊರತು ದುಡಿಮೆ ಸಾಧ್ಯವೆ? ಎಂಬುದಕ್ಕೆ ನಿರ್ದಿಷ್ಟ ಉತ್ತರವನ್ನು ನೀಡುವುದು ಕಷ್ಟದಾಯಕವಾದುದು.

ಈ ವಿವರವಾದ ಚರ್ಚೆಗಳ ಹಿನ್ನೆಲೆಯಲ್ಲಿ ಎರಡು ವಲಯಗಳಲ್ಲಿನ ನಿಗದಿತ ಸಂಗತಿಗಳನ್ನಾಧರಿಸಿ ಕ್ಷೇತ್ರಕಾರ್ಯಕ್ಕೆ ಆಯ್ದುಕೊಳ್ಳಲಾಗಿದೆ. ಒಂದು ರಾಜಕೀಯ ವಲಯ, ಇದು ಅಧಿಕಾರದ ತವರು, ಇಲ್ಲಿನ ಸಬಲೀಕರಣ ಎಲ್ಲ ಬಗೆಯಲ್ಲೂ ಅನುಕೂಲಕರ, ಅಧಿಕಾರದ ಕೇಂದ್ರ ಬಿಂದುವಾದ ಈ ವಲಯದಲ್ಲಿ ಮಹಿಳೆಯ ಪ್ರವೇಶ ಸಾಸಿವೆಯಷ್ಟು ಸಾಧ್ಯವಾಗಿಲ್ಲ. ಅಲ್ಲಲ್ಲೇ ಕೆಲವು ಮಹಿಳೆಯರು ಕಾಣಿಸಿಕೊಂಡರೂ ವ್ಯವಸ್ಥೆಯು ಅವರನ್ನು ಪುರುಷ ಚಿಂತನೆಯ ಪೋಷಕರನ್ನಾಗಿಸಿದೆ.

ಈ ವಲಯದಲ್ಲಿ ಕೊಂಚ ಪ್ರಮಾಣದ ಅಧಿಕಾರಗಳು ಮಹಿಳೆಗೆ ಕೆಳ ನೆಲೆಯಿಂದ ಸಿಗುತ್ತಿವೆ. ಕಾರಣವೆಂದರೆ, ಇಲ್ಲಿ ಮಹಿಳಾ ಅಧೀನತೆಯನ್ನು ಮುಂದುವರೆಸುವ ಪುರುಷ ರಾಜಕಾರಣ, ಮಹಿಳೆಯು ಇಲ್ಲಿ ನಾಮಮಾತ್ರ ಅಧಿಕಾರಿ, ಆಡಳಿತ ನಿರ್ವಹಣೆ, ನಿರ್ಧಾರ ಕೈಗೊಳ್ಳುವ ಹಕ್ಕು ಎಲ್ಲವೂ ಪುರುಷನವೇ, ಮಹಿಳೆಯನ್ನು ಇಲ್ಲಿ ರಬ್ಬರ್ ಸ್ಟ್ಯಾಂಪ್ ತರಹ ಉಪಯೋಗಿಸಿಕೊಳ್ಳಲು ಹೆಚ್ಚು ಸಾಧ್ಯವಾಗುತ್ತಿದೆ. ಈ ಸಂಗತಿಯು ಸಹ ದೌರ್ಜನ್ಯದ ಎರಡನೆ ಘಟ್ಟವಾಗಿದೆ. ಈ ನಿಟ್ಟಿನಲ್ಲಿ ಕೊಂಚ ಜಾಣ್ಮೆಯಿಂದ ಅಧಿಕಾರವನ್ನು, ತನಗೆ ದಕ್ಕಬೇಕಾದ ಹಕ್ಕನ್ನು ಪ್ರಶ್ನಿಸಿದ ಮಹಿಳೆಯರ ಮೇಲಾಗುವ ಆಕ್ರಮಣಗಳನ್ನು ಚರ್ಚಿಸಲು ಗ್ರಾಮಪಂಚಾಯ್ತಿ ಅಧ್ಯಕ್ಷ - ಉಪಾಧ್ಯಕ್ಷ ಮಹಿಳೆಯರ ಪ್ರಕರಣಗಳನ್ನು ಅಧ್ಯಯನ ಮಾಡಿ ವಿಶ್ಲೇಷಣೆಗೊಳಪಡಿಸಲಾಗುತ್ತದೆ.

ಅಂತೆಯೇ ಇನ್ನೊಂದು ಉದ್ಯೋಗ ವಲಯವನ್ನು ಆಯ್ದುಕೊಳ್ಳಲಾಗಿದ್ದು, ರಕ್ಷಣಾಂಗದ ಭಾಗವಾಗಿರುವ ಮಹಿಳಾ ಪೋಲೀಸ್ ಪೇದೆಗಳು, ಸ್ವತಃ ಸುರಕ್ಷಿತರೇ? ಎಂದರೆ ಉತ್ತರ ಶೂನ್ಯ, ಅವಳ ಬದುಕು ಸಹ ಹೆಣ್ಣಾಗಿ ಈ ವೃತ್ತಿಯಲ್ಲಿರುವುದರಿಂದಲೇ ಹಿಂಸೆಗೊಳಗಾಗುತ್ತಿರುವ ಸಂದರ್ಭಗಳನ್ನು ಶೋಧಿಸಲು ಮಹಿಳಾ ಪೋಲಿಸ್ ಪೇದೆಗಳನ್ನು ಸಂದರ್ಶಿಸುವ ಮೂಲಕ ಪ್ರಕರಣಗಳನ್ನು ವಿಶ್ಲೇಷಣೆಗೊಳಪಡಿಸಲಾಗುತ್ತಿದ್ದು, ಕ್ಷೇತ್ರಕಾರ್ಯದ ಸ್ವರೂಪ, ವಿಶ್ಲೇಷಣೆ, ವರದಿ ಎಂಬ ಮೂರು ಅಂಶಗಳನ್ನು ಹಿನ್ನೆಲೆಯಲ್ಲಿ ಮುಂದಿನ ಅಧ್ಯಾಯವನ್ನು ವಿಭಾಗೀಕರಿಸಿಕೊಳ್ಳಲಾಗಿದೆ.

---

**ಅಡಿಟಿಪ್ಪಣಿಗಳು:**

೧ ಮಹಿಳಾ ಆರೋಗ್ಯ ಯೋಜನೆಗಳು: ಕಾರ್ಯಗತಗೊಳಿಸುವಿಕೆಯಲ್ಲಿ ಮಹಿಳೆಯರ ಅರಿವಿನ ಪಾತ್ರ, ಶಿವಪ್ಪ ಬಸಪ್ಪ, ೨೦೦೭, ಪು.ಸಂ. ೨೩
೨ ದಾಂಪತ್ಯ ವೈದ್ಯಶಾಸ್ತ್ರ, ಡಾ. ಟಿ.ಎಸ್.ಸತ್ಯನಾರಾಯಣರಾವ್, ೨೦೦೦, ಪು.ಸಂ. ೧೭
3 Binannail Report, 1992-93, WHO, Pg. No. 58
೪ ಮಾನಸ, ಜುಲೈ-ಆಗಷ್ಟ, ೧೯೯೭, ಪು.ಸಂ. ೯
೫ ಸ್ತ್ರೀವಾದಿ ಪ್ರವೇಶಿಕ, ಕನ್ನಡ ಲೇಖಕಿಯರ ಸಂಘ, ಪು.ಸಂ. ೧೫೫
6 Violence Against Women, Ram Ahuja, Pg. No. 155
7 Violence Against Women, Shashi Prabha Jain, Pg. No. 30
೮ ಮಹಿಳಾ ಅಧ್ಯಯನ ದಕ್ಷಿಣಾಯನ ಸಂಚಿಕೆ, ೨೦೦೦, ಜುಲೈ ೮೧-೮೨
೯ ಮಹಿಳೆ : ಆರ್ಥಿಕತೆ ಮತ್ತು ಅಭಿವೃದ್ಧಿ, ಡಾ. ಟಿ.ಆರ್. ಚಂದ್ರಶೇಖರ್, ೨೦೦೧, ಪು.ಸಂ. ೧೧೨
೧೦ ಮಹಿಳಾ ಹಕ್ಕುಗಳು, ಮಾನವ ಹಕ್ಕುಗಳ ನೆಲೆಯಲ್ಲಿ, ಡಾ. ಗೀತಾ ಕೃಷ್ಣಮೂರ್ತಿ, ೨೦೦೯, ಪು.ಸಂ. ೩೯
೧೧ ಸಮಗ್ರ ಭಾರತದ ಇತಿಹಾಸ, ಕೆ. ಸದಾಶಿವ, ಪು.ಸಂ. ೬೮
೧೨ ಸರೋಜಿನಿ ದೇವಿ ಜೀವನ ಚರಿತ್ರೆ, ಅನುರಾಧ ಬಿ. ರಾವ್, ಪು.ಸಂ. ೧೫
೧೩ Towards equality Report, 1996, Pg.No. 303
೧೪ ಗ್ರಾಮ ಪಂಚಾಯತಿ ವ್ಯವಸ್ಥೆಯಲ್ಲಿ ಮಹಿಳಾ ಸಮುದಾಯದ ಭಾಗವಹಿಸುವಿಕೆ, ೨೦೦೮, ಪು.ಸಂ. ೫೪
೧೫ ಮಹಿಳಾ ಸಾಮಾಜಿಕತೆ, ಜ್ಯೋತಿ ಶಶಿಕುಮಾರ, ೨೦೦೯, ಪು.ಸಂ. ೧೨೦

# ಅಧ್ಯಾಯ ನಾಲ್ಕು

# ಕ್ಷೇತ್ರಕಾರ್ಯ ಕೇಂದ್ರಿತ ವರದಿ

ಳ.೧ ಕ್ಷೇತ್ರಕಾರ್ಯದ ಉದ್ದೇಶ ಮತ್ತು ಸ್ವರೂಪ

ಳ.೨. ಕ್ಷೇತ್ರಕಾರ್ಯದ ವಿಶ್ಲೇಷಣೆ

ಳ.೩. ಕ್ಷೇತ್ರಕಾರ್ಯ ಕೇಂದ್ರಿತ ವರದಿ

## ಅಧ್ಯಾಯ ೪

# ಕ್ಷೇತ್ರಕಾರ್ಯ ಕೇಂದ್ರಿತ ವರದಿ

ಪ್ರಸ್ತುತ ಸಂಶೋಧನಾ ಅಧ್ಯಯನದಲ್ಲಿ ಕ್ಷೇತ್ರಕಾರ್ಯವು ಬಹು ಪ್ರಮುಖವಾದಂತಹ ಅಂಶ. ಸಾಧಾರಣವಾಗಿ ಆಕರಗಳು ಅಥವಾ ಮೂಲ ಸಾಮಗ್ರಿಗಳು ಇರುವಲ್ಲಿಗೆ ಹೋಗಿ ಮಾಹಿತಿ ಸಂಗ್ರಹಿಸುವುದಕ್ಕೆ ಕ್ಷೇತ್ರಕಾರ್ಯವೆಂದು ಕರೆಯುತ್ತಾರೆ. ಸಂಶೋಧಕರು ವ್ಯಾಪಕವಾದ ಕ್ಷೇತ್ರಕಾರ್ಯವು ಕೈಗೊಂಡು, ಮಾಹಿತಿಯನ್ನು ವಿಶ್ಲೇಷಣೆಗೊಳಪಡಿಸಿದಾಗ ವಿಷಯದಲ್ಲಿ ಖಚಿತತೆ ಮತ್ತು ತರ್ಕಬದ್ಧವಾದ ಆಧಾರಗಳನ್ನು ಒದಗಿಸಬಹುದಾಗಿದೆ. ಈ ಬಗೆಯ ಮಾಹಿತಿ ಸಂಗ್ರಹಣೆಯನ್ನು ಪ್ರಾಥಮಿಕ ಮೂಲ ಮತ್ತು ಮಾಧ್ಯಮಿಕ ಮೂಲದಿಂದ ಸಂಗ್ರಹಿಸಬಹುದಾಗಿದೆ. ಪ್ರಾಥಮಿಕ ಮೂಲದ ಮಾಹಿತಿಯೆಂದರೆ ಸಂಶೋಧನೆ ಆಯ್ದುಕೊಂಡಿರುವ ವಿಷಯಕ್ಕನುಗುಣವಾಗಿ ಕ್ಷೇತ್ರಕಾರ್ಯವನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಈ ನಿಟ್ಟಿನಲ್ಲಿ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ಕುರಿತ ಗ್ರಹಿಕೆಯ ಅಗತ್ಯತೆಯ ಭಾಗವಾಗಿ ಕ್ಷೇತ್ರಕಾರ್ಯವನ್ನು ರೂಪಿಸಿಕೊಳ್ಳಲಾಗಿದೆ ಹಾಗೂ ಈ ಅಧ್ಯಾಯವನ್ನು ಒಟ್ಟು ಮೂರು ಪ್ರಮುಖ ಘಟ್ಟಗಳಲ್ಲಿ ವಿಭಾಗಿಸಿಕೊಳ್ಳಲಾಗಿದೆ. ಕ್ಷೇತ್ರಕಾರ್ಯದ ಉದ್ದೇಶ ಮತ್ತು ಸ್ವರೂಪ, ಕ್ಷೇತ್ರಕಾರ್ಯದ ವಿಶ್ಲೇಷಣೆ, ಕ್ಷೇತ್ರಕಾರ್ಯ ಕೇಂದ್ರಿತ ವರದಿ ಎಂಬ ಉಪಶೀರ್ಷಿಕೆಯಡಿಯಲ್ಲಿ ಚರ್ಚೆಗೊಳಪಡಿಸಲಾಗುತ್ತದೆ.

ಪ್ರತಿಯೊಂದು ಸಂಶೋಧನೆಯು ತನ್ನದೇ ಆದ ಗುರಿ, ಉದ್ದೇಶಗಳನ್ನು ಹೊಂದಿರುವಂತೆ, ಸಾಂಪ್ರದಾಯಿಕ ಸಂಶೋಧನೆಯ ಚೌಕಟ್ಟಿನೊಳಗಿನ ಗುರಿ, ಉದ್ದೇಶಗಳಿಗಿಂತ, ಸ್ತ್ರೀವಾದಿ ಸಂಶೋಧನೆಯ ಗುರಿ, ಉದ್ದೇಶಗಳು ಭಿನ್ನವಾಗಿರುವುದೇ ಪ್ರಮುಖವಾದ ಕಾರಣವಾದ್ದರಿಂದ ಇಲ್ಲಿನ ವಿಧಾನಗಳು ಭಿನ್ನವಾಗಿರುವಂತೆ ಕ್ಷೇತ್ರಕಾರ್ಯದ ಸ್ವರೂಪವು ವಿಭಿನ್ನವಾಗಿದೆ. ಮಹಿಳಾ ಬದುಕನ್ನು ಕೇಂದ್ರವಾಗಿರಿಸಿಕೊಂಡು ಹೊರಟ ಚಿಂತನೆಗಳಿಗೆ ಸಾಂಪ್ರದಾಯಿಕ ವಿಧಾನಗಳಲ್ಲಿ ಮಾರ್ಪಟುಗಳು ಅಗತ್ಯವಾಗಿವೆ. ಆದ್ದರಿಂದಾಗಿ ಒಟ್ಟು ಕ್ಷೇತ್ರಕಾರ್ಯದ ಸ್ವರೂಪವನ್ನು ಇಲ್ಲಿ ದಾಖಲಿಸುವ ಅಗತ್ಯತೆಯಿದೆ.

### ೪.೧. ಕ್ಷೇತ್ರಕಾರ್ಯ ಉದ್ದೇಶ ಮತ್ತು ಸ್ವರೂಪ

ಸಾಮಾಜಿಕ ವ್ಯವಸ್ಥೆಯಲ್ಲಿನ ಪುರುಷ ಪ್ರಧಾನ ಚಿಂತನೆಯನ್ನಾಧರಿಸಿದ ಒಟ್ಟು ಚರಿತ್ರೆಯೊಳಗಡೆ ಈ ಜ್ಞಾನ ಸಂಪಾದನೆಯೆನ್ನುವುದು ಇನ್ನೊಬ್ಬರನ್ನು ಆಳುವ ಅಸ್ತ್ರವಾಗಿದೆ. ಹಾಗೆಯೇ ಅದು ಇನ್ನೊಬ್ಬರಿಗೆ

ತಲುಪಿದಿರುವ ಹಾಗೆ ಮಾಡುವುದಕ್ಕಾಗಿ, ಇದು ಎಲ್ಲರಿಗೂ ತಲುಪದಿರುವ ಸಾಧ್ಯವೆಂಬ ಸಂಗತಿಯನ್ನೋದನ್ನೇ ಮರೆಮಾಚಿಸಲಾಗಿದೆ. ಹಾಗಾಗಿ ಆ ಜ್ಞಾನ ವಲಯಗಳಿಗೆ ಕೆಲವು ಸಮುದಾಯಗಳ ಪ್ರವೇಶವಿಲ್ಲ, ಬಹು ಬಗೆಯ ಕಾರಣಗಳಿಂದ ಈ ಜ್ಞಾನದ ಬಾಗಿಲಿನಾಚೆಗೆ ನಿಲ್ಲುವಂತಹ ಸಮುದಾಯವೆಂದು ಕೆಲವು ಸಮುದಾಯಗಳಿಗೆ ನಿರ್ಬಂಧಿಸಲಾಗಿದೆ. ಈ ಬಗೆಯ ನಿರ್ಬಂಧ, ಪ್ರವೇಶ ನಿಷೇಧ ವಲಯಗಳಲ್ಲಿ, ಮಹಿಳಾ ಸಮುದಾಯದ ಪ್ರವೇಶವನ್ನು ನಿರ್ಬಂಧಿಸಿ ನಿಯಂತ್ರಿಸುವಲ್ಲಿ ಸಾರ್ವಜನಿಕ ವಲಯವು ಒಂದಾಗಿದೆಯೆಂಬುದಕ್ಕೆ ಹಲವು ಬಗೆಯ ಕಾರಣಗಳನ್ನು ಅಧ್ಯಯನದ ಪ್ರಾರಂಭದಿಂದ ಈವರೆಗೂ ಚರ್ಚಿಸಲಾಗಿದೆ.

ಇಂತಹ ಸಮುದಾಯದ ಸಮಸ್ಯೆಯನ್ನು ಆಧರಿಸಿ ಅಧ್ಯಯನವನ್ನು ಕೈಗೊಂಡಾಗ, ಅಲ್ಲಿನ ಸಮಸ್ಯೆಗಳು ಅನುಭವಲೋಕಕ್ಕೆ ಬರುತ್ತವೆಯಾದರೂ, ಅವುಗಳು ವಸ್ತು ಲೋಕದ ಸಮಸ್ಯೆಯಂತೆ ಕಾಣಿಸುವುದಿಲ್ಲ. ಬಾಹ್ಯ ಇಂದ್ರಿಯಗಳಿಗೆ, ಈ ಸಮಸ್ಯೆಯನ್ನು ಅನುಭವಿಸುವಂತೆ ಮಾಡುವುದು ಅಸಾಧ್ಯವಾದುದು. ಹಾಗಾದರೆ ಈ ಬಗೆಯ ಅನುಭವಲೋಕಕ್ಕೆ ಬರುವ ಸಂಗತಿಯು ನಿಜವಾ? ಸುಳ್ಳಾ? ಎಂಬುದಕ್ಕೆ, ಈ ಸಮಸ್ಯೆಯು ಒಟ್ಟು ಸಮುದಾಯದ ಸಮಸ್ಯೆಯೆಂಬುದಕ್ಕೆ ಸಮೀಕ್ಷಾ ಮಾದರಿಯನ್ನು ಅನುಸರಿಸಿದಾಗ, ಇದರ ವಿವರಗಳಲ್ಲಿನ ವ್ಯತ್ಯಾಸವನ್ನು ಗ್ರಹಿಸುವ ಮೂಲಕ, ಇದು ಒಟ್ಟು ಸಮುದಾಯದ ಬಹುಮುಖ್ಯವಾದ ಸಮಸ್ಯೆಯಾಗಿದೆ. ಇದರ ವ್ಯಾಪ್ತಿ ಮತ್ತು ಆಳವನ್ನು ಗ್ರಹಿಸಬೇಕಾದರೆ, ಸೈದ್ಧಾಂತಿಕ ಚರ್ಚೆಯನ್ನಾಧರಿಸಿ ಕ್ಷೇತ್ರಕಾರ್ಯವನ್ನು ಕೈಗೊಳ್ಳುವುದು ಅವಶ್ಯಕವಾದುದು. ಆದ್ದರಿಂದ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ - ಹಿಂಸೆಯು ಒಟ್ಟು ಮಹಿಳಾ ಸಮುದಾಯದ ಸಮಸ್ಯೆಯಾಗಿದ್ದು, ಹಲವು ವಿವರಗಳಲ್ಲಿ ಇದು ಭಿನ್ನವಾಗಿದೆಯೆಂಬುದಕ್ಕೆ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಗಿದೆ. ಪ್ರಸ್ತುತ ವಿಷಯವನ್ನು ಸಂಶೋಧನೆಗೆ ಆರಿಸಿಕೊಂಡ ಆರಂಭಿಕ ಹಂತದಲ್ಲಿ ಸಾರ್ವಜನಿಕ ವಲಯಗಳಲ್ಲಿ ಹಿಂಸೆ - ದೌರ್ಜನಗಳಿರುತ್ತವೆಯೇ? ಅಲ್ಲಿ ಇರುವುದು ಕೇವಲ ಲೈಂಗಿಕ ಕಿರುಕುಳವಷ್ಟೇ ಎಂಬ ಪ್ರಶ್ನೆಗಳು ಕೆಲವು ವಿಷಯ ತಜ್ಞರಿಂದಲೇ ಎದುರಾದವು ಸ್ವತಃ ಸಾರ್ವಜನಿಕ ವಲಯದಲ್ಲಿ ಭಾಗವಹಿಸುವುದರೊಂದಿಗೆ ಅಲ್ಲಿ ಹಲವು ಬಗೆಯ ಹಿಂಸೆ - ದೌರ್ಜನ್ಯಕ್ಕೊಳಕ್ಕಾಗುತ್ತಿರುವವರಿಗೂ ಅದೊಂದು ಸಮಸ್ಯೆಯೆಂದು, ಅರಿವಿಗೆ ಬಾರದಂತಹ ಭ್ರಮಾತ್ಮಕ ಸ್ಥಿತಿಯಲ್ಲಿ ಮಹಿಳೆಯರನ್ನು ಇರಿಸುವಂತಹ ಸಂದಿಗ್ಧತೆಯು ಪುರುಷ ಪ್ರಧಾನತೆಯಿಂದಾದ ಕೊಡುಗೆಯಾಗಿದೆ.

ಹೀಗೆ ಸಮಸ್ಯೆಯನ್ನು ಸಮಸ್ಯೆಯೆಂದು ಗುರುತಿಸಿಕೊಳ್ಳುವುದೇ ಸ್ತ್ರೀವಾದಿ ಸಂಶೋಧಕರಿಗೆ ಬೃಹತ್ತಾದ ಸವಾಲಾಗಿದೆ ಎಂಬುದಕ್ಕೆ, ಮೇಲಿನ ಉದಾಹರಣೆಯೊಂದು ಸಾಕೆನ್ನಬಹುದು. ಈ ಬಗೆಯ ಹಲವು ಮಾದರಿಗಳು ಸಹ ದೊರೆಯುತ್ತವೆ.

ಸ್ತ್ರೀವಾದಿ ಸಂಶೋಧನೆಗಳು ಕೈಗೆತ್ತಿಕೊಳ್ಳಬೇಕಾದ ಸಮಸ್ಯೆಗಳು ವರ್ತಮಾನದ ಮತ್ತು ಭವಿಷ್ಯದ ಮಹಿಳಾ ಬದುಕಿನ ಸುಸಂಗತತೆಯನ್ನು ಕೇಂದ್ರೀಕರಿಸಿಕೊಂಡಿದೆ. ಅದರಲ್ಲೂ ದೌರ್ಜನ್ಯ - ಹಿಂಸೆಯಂತಹ

ಜ್ವಲಂತ ಸಮಸ್ಯೆಯನ್ನು ಆಧರಿಸಿ ಅಧ್ಯಯನಕ್ಕೆ ತೊಡಗಿಸಿಕೊಂಡಾಗ, ಸಮುದಾಯದೊಂದಿಗೆ ಕ್ರಿಯಾತ್ಮಕವಾಗಿ ಬೆರೆತು ಸಮಸ್ಯೆಗಳ ಹಲವು ಆಯಾಮಗಳನ್ನು ಕಂಡುಕೊಳ್ಳುವುದು ಅಗತ್ಯವಾದ್ದರಿಂದ, ಕ್ರಿಯಾತ್ಮಕ ಸಂಶೋಧನೆಯ ವಿಧಾನವನ್ನು ಅನುಸರಿಸಲಾಗಿದೆ. ಈ ಮೂಲಕ ಸಮಸ್ಯೆಯೊಂದು ಗ್ರಹಿಕೆಗೆ ಬಂದಾಗ ಅದನ್ನು ಪರಿಹರಿಸುವುದು ಸಾಧ್ಯವಾಗದಾದರೂ, ಅದನ್ನು ನಿಭಾಯಿಸುವಲ್ಲಿ ಸಂದರ್ಭಾನಾನುಸಾರವಾದ ಕ್ರಮವನ್ನು ಕೈಗೊಳ್ಳಲು ಸಾಧ್ಯವಾಗಬಹುದು.

ಈವರೆಗಿನ ಸಾಂಪ್ರದಾಯಿಕ ಚಿಂತನೆಗಳೆಲ್ಲವೂ 'ಲಿಂಗನಿರಪೇಕ್ಷ'ವೆಂದು ಹೇಳಿವೆಯಾದರೂ, ಇವುಗಳು ಲಿಂಗ ಪಕ್ಷಪಾತ ನಿಲುವನ್ನೇ ಆಧರಿಸಿವೆ. ಮೇಲ್ನೋಟಕ್ಕೆ ಸಾಂಪ್ರದಾಯಿಕ ಸಂಶೋಧನಾ ವಿಧಾನಗಳು ಒಂದು ಪಕ್ಷದ ಪರವಾಗಿ ಆಲೋಚಿಸುವ ಈ ಬಗೆಯ ಕ್ರಮವನ್ನು ನಿರಾಕರಿಸುತ್ತವೆ. ಆದರೆ ಅಧೀನ ನೆಲೆಯ ಸಮುದಾಯದ ಸಮಸ್ಯೆಯನ್ನು ಸಂಶೋಧನೆಗೊಳಪಡಿಸಿದಾಗ, ಅಲ್ಲಿನ ಬಿಡುಗಡೆಯ ಅಗತ್ಯಕ್ಕಾಗಿ ಒಂದು ಪಕ್ಷದ ಪರವಾಗಿ ನಿಲ್ಲುವುದು ಸೂಕ್ತವೆಂಬುದಕ್ಕಾಗಿ ಶಿಫಾರಸ್ಸು ಮಾದರಿಯನ್ನು ಪ್ರಕರಣಗಳ ವಿಶ್ಲೇಷಣೆಯ ಸಂದರ್ಭದಲ್ಲಿ ಬಳಸಿಕೊಳ್ಳಲಾಗುತ್ತಿದೆ.

ಯಾವುದೇ ಚಿಂತನೆಯ ವರ್ತಮಾನದ ಅಗತ್ಯತೆಯಿರುವುದು ಸುಸಂಗತವಾದ ಭೂತ ಮತ್ತು ಭವಿಷ್ಯದ ಅರಿವಿಗಾಗಿ, ಆ ಕಾರಣವಾಗಿ ಕ್ಷೇತ್ರಕಾರ್ಯವನ್ನು ಕೈಗೊಳ್ಳುವ ಪೂರ್ವಭಾವಿಯಾಗಿ, ಪ್ರಸಕ್ತ ವಿಷಯಕ್ಕೆ ಸಂಬಂಧಿಸಿದಂತೆ ಈವರೆಗೂ ನಡೆದಿರುವ ಕ್ಷೇತ್ರಕಾರ್ಯಗಳಾಗಲಿ, ಪೂರಕಾಂಶಗಳಾಗಲಿ ಪರಿಶೀಲಿಸುವ ಮೂಲಕ ಅಲ್ಲಿನ ಅನುಕೂಲ ಮತ್ತು ಅನಾನುಕೂಲಗಳಿಂದಾಗಿರುವ ಫಲಿತಗಳನ್ನಾಧರಿಸಿದ ಚಾರಿತ್ರಿಕ ಮೌಲ್ಯಮಾಪನದಿಂದಾಗಿ ಮುಂದಿನ ಮಾರ್ಗಗಳಲ್ಲಾಗಬೇಕಾದ ಬದಲಾವಣೆಗಳನ್ನು, ಕೈಗೊಳ್ಳಬೇಕಾದ ಕ್ರಮಗಳನ್ನು ರೂಪಿಸಿಕೊಳ್ಳುವ ಜರೂರಿದೆ. ಬಹುತೇಕ ಮಹಿಳಾ ವಿಷಯಗಳು, ಸಮಸ್ಯೆಗಳು ನೈಜ ಫಲಿತ(ಸೂಕ್ತ ಫಲಿತ)ವನ್ನು ಪಡೆಯುವಲ್ಲಿ ವಿಫಲವಾಗಿರುವುದಕ್ಕೆ ಸೂಕ್ತ ಬಗೆಯ ಚಾರಿತ್ರಿಕ ಮೌಲ್ಯಮಾಪನವನ್ನು ಕೈಗೊಳ್ಳದಿರುವುದೇ ಆಗಿದೆ. ಉದಾ:- ಮಹಿಳೆಯರ ವಿರುದ್ಧ ನಡೆಯುವ ಹಿಂಸೆ - ದೌರ್ಜನ್ಯದ ಭಾಗವಾದ ವರದಕ್ಷಿಣೆಯ ಕುರಿತ ಚಿಂತನೆ, ಚರ್ಚೆ, ಕಾಯಿದೆ, ಕಾನೂನುಗಳು ಜಾರಿಯಾಗುತ್ತಿರುವುದು ದಶಕಗಳಿಂದಲೂ ಕಾಣಸುತ್ತಿವೆಯಾದರೂ, ವಾಸ್ತವದ ಸಂಗತಿಗೆ ಬಂದಾಗ ಈ ಸಮಸ್ಯೆಯ ಕರಾಳ ಮುಖಗಳು ಎಲ್ಲೆಡೆಯೂ ಕಾಣಿಸಿಕೊಳ್ಳುತ್ತಿರುವುದಕ್ಕೆ ಕಾರಣ. ಅದರ ಮಾರ್ಗಗಳನ್ನು ಶೋಧಿಸಲಾಗುತ್ತಿದೆಯೆ ಹೊರತು ಅದರ ಮೂಲ ಕಾರಣದತ್ತ ಗಮನಹರಿಸಲಾಗಿಲ್ಲದಿರುವುದು.

ವರದಕ್ಷಿಣೆ ಸಮಸ್ಯೆಗೂ, ಕುಟುಂಬದಲ್ಲಿ ಹೆಣ್ಣು ಅಧೀನ ನೆಲೆಯಲ್ಲಿ ಉಳಿಯಬೇಕಾದ ಸಮಸ್ಯೆಗೂ, ಆಸ್ತಿಹಕ್ಕಿನ ಸಮಸ್ಯೆಗೂ ಸಂಬಂಧವಿದೆ. ಆಸ್ತಿಹಕ್ಕಿನ ಸಮಸ್ಯೆಯು ಅವಳ ಸಂತಾನದ ಹಕ್ಕನ್ನು, ದೈನಂದಿನ ಬದುಕಿನ ಹಕ್ಕನ್ನು ಇತ್ಯಾದಿ ಹಲವು ಬಗೆಯ ಹಕ್ಕುಗಳನ್ನು ಕಿತ್ತುಕೊಂಡಿದೆಯಾದ್ದರಿಂದ ಕ್ಷೇತ್ರಕಾರ್ಯಗಳು, ಚಿಂತನೆಗಳು, ಹೋರಾಟಗಳು ಮೂಲದಿಂದ ಆರಂಭವಾದರೆ ಕಾಯ್ದೆ, ಕಾನೂನುಗಳ, ಸಕಾರಾತ್ಮಕ ಫಲಿತಗಳನ್ನು ಸಹ ಕಾಣಬಹುದಾಗಿದೆ. ಕಾನೂನು

ಜಾರಿಯಾಗುವ, ಬದುಕಿಗೆ ಅನ್ವಯಿಸುವ ಪ್ರಶ್ನೆಗಳು ಭಿನ್ನ ಚರ್ಚೆಗೆ ಸೇರುತ್ತವೆ. ಆದ್ದರಿಂದ ಪ್ರಕರಣಗಳ ಅಧ್ಯಯನ, ಸಂದರ್ಶನ, ಪ್ರಶ್ನಾವಳಿ ಇತ್ಯಾದಿಗಳ ಚಾರಿತ್ರಿಕ ಮೌಲ್ಯಮಾಪನವು ಅಗತ್ಯವಾಗಿ ಕೈಗೊಳ್ಳುವ ಮೂಲಕ ಮುಂದಿನ ಕ್ಷೇತ್ರಕಾರ್ಯದ ಮಾರ್ಗಗಳಲ್ಲಿ ಬದಲಾವಣೆಗಳಾಗಬಹುದು. ಇವತ್ತಿನ ಇವತ್ತಿನ ಸಂದರ್ಭದಲ್ಲಿ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರು ಕಷ್ಟವಾದರೂ ಅಲ್ಲಿ ಪಾಲ್ಗೊಳ್ಳಬೇಕು. ಯಾಕೆಂದರೆ ಈ ಉತ್ಪಾದನಾ ವಲಯಕ್ಕೆ ಕಾಲಿರಿಸಿದ ತಕ್ಷಣ, ಕೌಟುಂಬಿಕ ವಲಯದಲ್ಲಿನ ಸೇವಾ ವಲಯದಿಂದ ಮುಕ್ತಿಯಿಲ್ಲ, ಸಾರ್ವಜನಿಕ ವಲಯದಲ್ಲೂ ಇದರ ವಿಸ್ತರಣೆಯೇ ಆದರೂ, ಅಧೀನ ನೆಲೆಯಿಂದ ತಪ್ಪಿಸಿಕೊಳ್ಳಲು ಉತ್ಪದನಾ ವಲಯದ ಮೇಲಿನ ನಿಯಂತ್ರಣವು ಅತ್ಯಗತ್ಯ ಹಾಗೂ ಈ ಅಧೀನ ನೆಲೆಯಿಂದ ತಪ್ಪಿಸಿಕೊಂಡಾಗಲೇ ಉತ್ಪಾದನಾ ವಲಯದ ಮೇಲಿನ ನಿಯಂತ್ರಣ ಸಾಧ್ಯವಾಗುವುದು. ಆ ಕಾರಣದಿಂದಾಗಿ ಮಹಿಳೆಗೆ ಎರಡೂ ವಲಯಗಳಲ್ಲಿನ ಕೆಲಸಗಳ ನಿಭಾಯಿಸುವಿಕೆ ಅಗತ್ಯವಾಗಿದೆ. ಹೀಗೆ ಸಾರ್ವಜನಿಕ ವಲಯದಲ್ಲಿ ಮಹಿಳೆಯು ಪ್ರವೇಶಿಸಿ ಇಬ್ಬಗೆಯ ದುಡಿಮೆಯನ್ನು ನಿರ್ಭಾಯಿಸುತ್ತಿರುವಲ್ಲಿನ ದೌರ್ಜನ್ಯ-ಹಿಂಸೆಯನ್ನು ಮೊದಲುಗೊಂಡು, ನಿಭಾಯಿಸಿದ ಮೇಲೂ ಅವಳ ಮೇಲಿನ ಆಕ್ರಮಣಗಳ ಸ್ವರೂಪ ಭಿನ್ನವಾಗಿ ಕಾಣಿಸಿಕೊಳ್ಳುತ್ತಿವೆ. ಈ ಅಂಶಗಳನ್ನಾಧರಿಸಿ, ಸಂಗ್ರಹಿಸಿದ ಪ್ರಕರಣಗಳನ್ನು ವಿಶ್ಲೇಷಣೆಗೊಳಪಡಿಸಲಾಗುತ್ತಿದೆ. ಈ ನೆಲೆಯಿಂದ ಹೊರಟಾಗ ಅಲ್ಲಿನ ಪ್ರಕರಣಗಳ ಗ್ರಹಿಕೆಯ ಆಳ, ವ್ಯಾಪ್ತಿಯು, ವಿಸ್ತಾರವಾಗುತ್ತದೆಯೆಂಬುದರಿಂದ ಈ ಮಾದರಿಯನ್ನು ಬಳಸಿಕೊಳ್ಳಲಾಗಿದೆ.

ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ವಿಷಯವನ್ನು ಗ್ರಹಿಸಿಕೊಳ್ಳಲು, ಸೈದ್ಧಾಂತಿಕ ಚರ್ಚೆಗಳಿಗೆ ಆಧಾರವಾಗಿ ವಾಸ್ತವದ ಸಂಗತಿಗಳತ್ತ ಮುಖಾಮುಖಿಯಾಗಬೇಕಾದುದು ಹೆಚ್ಚು ಅಗತ್ಯವಾಗಿದೆ. ಈಗಾಗಲೇ ಜಾರಿಯಾಗಿರುವ ಕಾನೂನುಗಳು, ಬೆಳೆದು ಬಂದ ಚಿಂತನೆಗಳನ್ನು, ವಿಮರ್ಶಿಸಿ, ವಿಶ್ಲೇಷಣೆಗೊಳಪಡಿಸುವುದು ಒಂದು ಬಗೆಯಾದರೆ, ಆ ಚಿಂತನೆಗಳನ್ನಾಧರಿಸಿ ನೇರವಾಗಿ ಹಿಂಸೆ-ದೌರ್ಜನ್ಯಗಳಿಗೊಳಗಾದ ಮಹಿಳೆಯರನ್ನು ಸಂದರ್ಶಿಸುವ ಮೂಲಕ ಪ್ರಕರಣಗಳನ್ನು ಅಧ್ಯಯನ ಮಾಡಿ ವಿಶ್ಲೇಷಣೆಗೊಳಪಡಿಸುವುದು ಇನ್ನೊಂದು ಬಗೆ. ಪ್ರಸ್ತುತ ಸಂಶೋಧನೆಯಲ್ಲಿ ಪ್ರಮುಖವಾಗಿ ಎರಡನೆಯ ಬಗೆಯನ್ನು ಅನುಸರಿಸಲಾಗುತ್ತಿದೆಯಾದ್ದರಿಂದ ಪ್ರಕರಣ ಅಧ್ಯಯನವನ್ನು ವಿಶೇಷವಾಗಿ ಆಯ್ದುಕೊಳ್ಳಲಾಗಿದೆ.

ಸಂಶೋಧನಾ ವಿಷಯಕ್ಕೆ ಅನುಗುಣವಾಗಿ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯವನ್ನು ವಿವರಿಸಿಕೊಳ್ಳಲು ಪ್ರಾತಿನಿಧಿಕವಾಗಿ ರಾಜಕೀಯ ವಲಯದ ಗ್ರಾಮಪಂಚಾಯ್ತಿಯ ಅಧ್ಯಕ್ಷ-ಉಪಾಧ್ಯಕ್ಷರಾದ ಮಹಿಳೆಯರನ್ನು ಮತ್ತು ಉದ್ಯೋಗ ವಲಯದ ಮಹಿಳಾ ಪೋಲಿಸ್ ಪೇದೆಗಳನ್ನು ಅಧ್ಯಯನಕ್ಕೊಳಪಡಿಸಲು ಗುಲಬರ್ಗಾ ಮತ್ತು ಜೇವರ್ಗಿ ತಾಲೂಕಿನ ಗ್ರಾಮ ಪಂಚಾಯ್ತಿಗಳು - ಪೋಲಿಸ್ ಠಾಣೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಬಗೆಯ ಕ್ಷೇತ್ರಕಾರ್ಯಕ್ಕೆ ತೊಡಗುವುದಕ್ಕಿಂತ ಪೂರ್ವಭಾವಿಯಾಗಿ ಸಮಾಜ ವ್ಯವಸ್ಥೆಯ ಸೂಚಿತಗಳಾದ ಜಾತಿ, ವಯಸ್ಸು, ವಿದ್ಯಾರ್ಹತೆಗಳನ್ನಾಧರಿಸಿ, ಪ್ರಕರಣಗಳನ್ನು ಲೈಂಗಿಕ, ಆರ್ಥಿಕ, ಶೈಕ್ಷಣಿಕ ಮತ್ತು ಇತರೆ ದೌರ್ಜನ್ಯಗಳೆಂದು

ನಾಲ್ಕು ಬಗೆಯ ಗುಂಪುಗಳನ್ನಾಗಿ ವಿಂಗಡಿಸಿಕೊಂಡು ಅಧ್ಯಯನಕ್ಕೊಳಪಡಿಸಲಾಗಿದೆ. ಈ ರೀತಿಯ ಪ್ರಕರಣ ಅಧ್ಯಯನಗಳಲ್ಲಿ ಸಂದರ್ಶನ ವಿಧಾನವನ್ನು ಬಳಸಿಕೊಳ್ಳಲಾಗಿದೆ. ಸಾಂಪ್ರದಾಯಿಕ ಸಂಶೋಧನಾ ವಿಧಾನದಲ್ಲಿಯೂ ಈ ವಿಧಾನಗಳನ್ನು ಬಳಸಿಕೊಳ್ಳಲಾಗುತ್ತದೆ. ಆದರೆ ಸ್ತ್ರೀವಾದಿ ಸಂಶೋಧನಾ ವಿಧಾನದಲ್ಲಿ ಇದನ್ನು ಕೆಲವು ವ್ಯತ್ಯಾಸಗಳೊಂದಿಗೆ ಬಳಸಲಾಗುತ್ತದೆ.

**ಸಂದರ್ಶನ**

ಸಂದರ್ಶನವೆಂದರೆ ಮೇಲ್ನೋಟಕ್ಕೆ ಕಾಣಿಸುವುದಕ್ಕಿಂತ ಭಿನ್ನವಾಗಿ, ಆಳವಾಗಿ, ಒಳಗೆ ಅಡಕವಾಗಿರುವ ಸಂಗತಿಗಳನ್ನು ಕುರಿತು ಮಾಹಿತಿ, ಅರಿವನ್ನು ಪಡೆಯುವುದು ಎಂದರ್ಥ. ಆದರೆ ಹಲವು ಬಗೆಯ ಸಂಶೋಧನೆಗೆ ಸಂಬಂಧಿಸಿದಂತೆ ಸಿದ್ಧ ರೂಪದ ಮಾಹಿತಿಗಳು ಸಾಕಷ್ಟು ಲಭ್ಯವಾಗುತ್ತವೆ. ಈ ಮಾಹಿತಿಗಳನ್ನು ಆಧರಿಸಿ ವ್ಯಕ್ತಿ ಮತ್ತು ಕ್ಷೇತ್ರಗಳನ್ನು ಆಯ್ಕೆ ಮಾಡಿಕೊಂಡು ಸಂದರ್ಶನಕ್ಕೆ ತೊಡಗುವುದು ಬಹುಮುಖ್ಯವಾದುದು. ಆದರೆ ಈ ಆಯ್ಕೆ, ಸಂದರ್ಶನಕ್ಕೆ ಹೊರಡುವ ಮೊದಲು ಕೆಲವು ಪೂರ್ವಸಿದ್ಧತೆಗಳು ಅತ್ಯಗತ್ಯ, ನಮಗೆ ಅಗತ್ಯವಾದ ಮಾಹಿತಿಯನ್ನು ಪಡೆಯಲು ಈ ತಯಾರಿಯು ಬೇಕಾಗುತ್ತದೆ. ಸಾರ್ವಜನಿಕ ವಲಯದಲ್ಲಿನ ಮಹಿಳೆಯರ ವಿರುದ್ಧ ನಡೆಯುವ ಹಿಂಸೆ-ದೌರ್ಜನ್ಯಗಳನ್ನು ಗ್ರಹಿಸಲು ಉದ್ಯೋಗ ವಲಯ, ರಾಜಕೀಯ ವಲಯದ ಮಹಿಳಾ ಪೋಲಿಸ್ ಮತ್ತು ಗ್ರಾಮ ಪಂಚಾಯ್ತಿ ಅಧ್ಯಕ್ಷರ-ಉಪಾಧ್ಯಕ್ಷರ ಸಮಸ್ಯೆಗಳನ್ನು ತಿಳಿದುಕೊಳ್ಳಲು ಕೆಲವು ಮಾಹಿತಿಗಳು ಸಿದ್ಧ ರೂಪದಲ್ಲಿ ದೊರೆಯುತ್ತವೆ. ಉದಾ: ಬಳ್ಳಾರಿ ಜಿಲ್ಲೆಯಲ್ಲಿ ೨೦೦೬ ರಿಂದ ೨೦೧೦ರ ಅವಧಿಯವರೆಗೆ ಎಷ್ಟು ಮಹಿಳಾ ಪೋಲಿಸ್ ಪೇದೆಗಳು ನೇಮಕವಾಯಿತು, ಎಷ್ಟು ಸಲದ ಚುನಾವಣೆಗಳಲ್ಲಿ ಗ್ರಾಮ ಪಂಚಾಯ್ತಿಗೆ ಅಧ್ಯಕ್ಷರು, ಉಪಾಧ್ಯಕ್ಷರು ಆಯ್ಕೆಯಾದರೂ, ಅವರ ವಯಸ್ಸು, ಜಾತಿ ಇತ್ಯಾದಿ ಮಾಹಿತಿಗಳು ಅಂಕಿ-ಸಂಖ್ಯೆಗಳಲ್ಲಿ ಲಭ್ಯವಾಗುತ್ತವೆ. ಆದರೆ ಪ್ರಸ್ತುತ ಸಂಶೋಧನೆಗೆ ಸಂಬಂಧಿಸಿದಂತೆ ಈ ವಲಯಗಳಲ್ಲಿನ ಮಹಿಳೆಯರ ಮೇಲೆ ದೌರ್ಜನ್ಯಗಳಾಗುತ್ತಿವೆಯೆ? ಯಾವ ಬಗೆಗಳಲ್ಲಿ ಹಿಂಸೆ - ದೌರ್ಜನ್ಯಗಳಾಗುತ್ತಿವೆ? ಪ್ರಮಾಣವೆಷ್ಟು? ಎಂಬುದಕ್ಕೆ ಖಚಿತ ಮಾಹಿತಿ ಸಿಗುವುದು ಕಷ್ಟಕರ ಸಂಗತಿಯೇ.

ಇಂತಹ ಸಂದರ್ಭಗಳಲ್ಲಿ ಕೆಲವು ಪ್ರಕರಣಗಳನ್ನು ಅಧ್ಯಯನ ಮಾಡಲು ನೇರವಾಗಿ ಸಂದರ್ಶನಕ್ಕೆ ತೊಡಗುವುದು ವಿಷಯದ ಖಚಿತತೆಗೆ ಹೆಚ್ಚು ಸೂಕ್ತ. ನೇರ ಸಂದರ್ಶನದಲ್ಲಿ ಎಲ್ಲ ಮಾಹಿತಿ ಲಭ್ಯವಾಗುತ್ತದೆಯೆಂಬುದಕ್ಕಿಂತ ಸ್ತ್ರೀವಾದಿ ಸಂಶೋಧಕರು ಅವರ ಮಾತಿನ ಮೌನ, ಹಾವ-ಭಾವ, ತೊದಲುವಿಕೆ, ಮರೆಮಾಚುವಿಕೆಗಳನ್ನು ಅವಲೋಕಿಸುವ ಮೂಲಕ ಗ್ರಹಿಸಬೇಕಾದ ಸಂದರ್ಭಗಳೇ ಹೆಚ್ಚು. ಇಂತಹ ಕ್ರಮವು ಸಂಶೋಧನಾ ಸಮಸ್ಯೆಯ ಸ್ವರೂಪವನ್ನು ಹೆಚ್ಚು ಖಚಿತವಾಗಿ ಗ್ರಹಿಸಲು ಸಹಾಯಕವಾಗುತ್ತದೆ. ಅಲ್ಲದೆ ಕೇವಲ ಈ ಹುದ್ದೆಯಲ್ಲಿರುವ ಮಹಿಳೆಯರನ್ನು ಸಂದರ್ಶಿಸುವ ಮೂಲಕ ಮಾಹಿತಿಯನ್ನು ಪಡೆದರೆ ಅದು ಏಕಪಕ್ಷೀಯ ಚಿಂತನೆಯಾಗುತ್ತದೆ. ಆ ಕಾರಣವಾಗಿ, ಪ್ರಸ್ತುತ ಸಂಶೋಧನೆಯಲ್ಲಿ ಪುರುಷರನ್ನು, ಈ ಹುದ್ದೆಯಾಚೆಗಿರುವ ವ್ಯಕ್ತಿಗಳನ್ನು ಸಂದರ್ಶನಕ್ಕೊಳಪಡಿಸಲಾಗಿದೆ.

ಇದನ್ನು ಎರಡು ಗುಂಪುಗಳಲ್ಲಿ ವಿಭಾಗಿಸಿಕೊಳ್ಳಲಾಗಿದೆ.

೧. ಅದೇ ವಲಯದಲ್ಲಿರುವ ಪುರುಷರೊಂದಿಗೆ ಸಂದರ್ಶನ

೨. ಆ ವಲಯದಾಚೆಗಿರುವ ಪುರುಷ-ಸ್ತ್ರೀಯರೊಂದಿಗೆ ಸಂದರ್ಶನ

ಇದರಲ್ಲಿ ಸಂಗ್ರಹಿತ ಮಾಹಿತಿಗನುಗುಣವಾಗಿ ವಿಶ್ಲೇಷಣೆಯಲ್ಲಿ ಮತ್ತೆ ಎರಡು ಗುಂಪುಗಳಾಗಿ ವಿಂಗಡಿಸಿಕೊಳ್ಳಲಾಗಿದೆ.

೧. ಸಾಂಪ್ರದಾಯಿಕ ಮನೋಭಾವದವರು

೨. ವೈಚಾರಿಕ ಮನೋಭಾವದವರು

ಈ ಸಮುದಾಯಕ್ಕೆ ಸಂದರ್ಶಿಸಿದ ವಿವರಣೆಯನ್ನು ಕ್ಷೇತ್ರಕಾರ್ಯದ ಸ್ವರೂಪದ ನಂತರದಲ್ಲಿ ವಿವರಿಸಲಾಗುತ್ತದೆ. ಈ ಸಂದರ್ಶವನ್ನು ಸಾಂಪ್ರದಾಯಿಕ ಸಂಶೋಧನಾ ವಿಧಾನದಲ್ಲಿಯೂ ಮಾಡಲಾಗುತ್ತದೆ. ಆದರೆ ಸ್ತ್ರೀವಾದಿ ಸಂಶೋಧನೆಯಲ್ಲಿ ಸಂದರ್ಶನಕ್ಕೆ ತೊಡಗುವವರು ಸಿದ್ಧ ಮಾದರಿಯನ್ನೊಂದು ರೂಪಿಸಿಕೊಂಡು ಸಾಗುವ ಸಂಗತಿಯಲ್ಲ. ಉದಾ:- ಕೆಲವು ಪ್ರಶ್ನೆಗಳನ್ನು ರೂಪಿಸಿಕೊಂಡು ಅದಕ್ಕೆ ಉತ್ತರಗಳನ್ನು ಗುರುತು ಹಾಕಿಕೊಳ್ಳುವುದರ ಮೂಲಕ ಸಂದರ್ಶನ ಮುಗಿಯುತ್ತದೆ. ವಸ್ತುಲೋಕಕ್ಕೆ ಸಂಬಂಧಿಸಿದ ಸಂಶೋಧನೆಗೆ ಇದು ಸರಿ. ಆದರೆ ಸಮುದಾಯ ಅಧ್ಯಯನಗಳಲ್ಲಿ, ಮಹಿಳಾ ಅಧ್ಯಯನದಲ್ಲಿ ಈ ಬಗೆಯ ಕ್ರಮದಿಂದ ಮಹಿಳಾ ಬದುಕಿನ ಸಮಸ್ಯೆಗಳನ್ನು ಗ್ರಹಿಸುವುದು ಅಸಾಧ್ಯವಾದುದು. ಮಹಿಳೆಯರ ವಿರುದ್ಧ ನಡೆಯುವ ಹಿಂಸೆ, ದೌರ್ಜನ್ಯಗಳನ್ನು ಗ್ರಹಿಸಲು ಸಂದರ್ಶನದ ಕೆಲವು ವಿಧಾನಗಳನ್ನು ಬಳಸಲಾಗುತ್ತದೆ. ೧. ಪ್ರಶ್ನಾವಳಿ, ೨. ನೇರ ಸಂದರ್ಶನ, ೩. ಪ್ರಕರಣ ಅಧ್ಯಯನ ಇದನ್ನು ಸಾಂಪ್ರದಾಯಿಕ ಚಿಂತನೆಗಳು ಸಹ ಬಳಸುತ್ತವೆ. ಸ್ತ್ರೀವಾದಿ ಅಧ್ಯಯನಗಳಲ್ಲಿ ಇದರ ಭಿನ್ನತೆಯನ್ನು ಪ್ರಸ್ತಾಪಿಸುತ್ತಲೇ ಪ್ರಸ್ತುತ ಅಧ್ಯಯನದಲ್ಲಿ ಇದನ್ನು ಬಳಸಿಕೊಂಡು ಅಪೇಕ್ಷಿತ ಮಾಹಿತಿಯನ್ನು ಪಡೆಯಲು ಸಾಧ್ಯವಾಗಿರುವುದನ್ನು ವಿವರಿಸಲಾಗುತ್ತದೆ.

• **ಪ್ರಶ್ನಾವಳಿ**

ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಮಾಹಿತಿಯನ್ನು ಪಡೆಯಲು ಕೆಲವು ಪ್ರಶ್ನೆಗಳನ್ನು ರೂಪಿಸಿಕೊಳ್ಳುವ ಮೂಲಕ ಸಂದರ್ಶವನ್ನು ಕೈಗೊಳ್ಳಲಾಯಿತು. ಈ ರಚಿತ ಪ್ರಶ್ನಾವಳಿಯನ್ನು ಸಾಮಾನ್ಯವಾದ ಮಾಹಿತಿ ಪಡೆಯಲು ಬಳಸಲಾಗುತ್ತದೆ. ಉದಾ: ಹೆಸರು, ವಯಸ್ಸು, ಜಾತಿ, ವಿವಾಹಿತರಾ? ಮಕ್ಕಳೆಷ್ಟು ಎಂಬಿತ್ಯಾದಿ ಸಂಗತಿಗಳನ್ನು ತಿಳಿದುಕೊಳ್ಳಬಹುದು. ಈ ಮಾಹಿತಿಯನ್ನು ನೇರ ಸಂದರ್ಶನದ ಮೂಲಕವೂ, ಅಂಚೆ, ದೂರವಾಣಿಗಳ ಮೂಲಕವು ಸಂಗ್ರಹಿಸಬಹುದು ಹಾಗೂ ಈ ಪ್ರಶ್ನೆಗಳನ್ನು ಯಾರೇ ಕೇಳಿದರೂ ಉತ್ತರ ಒಂದೇ ಇರುತ್ತದೆ. ಭಾವನೆಗಳಿಗೆ, ಚಿಂತನೆಗಳಿಗೆ ಸಂಬಂಧಪಡದ, ವ್ಯವಹಾರಿಕ, ಭೌತಿಕ, ವಸ್ತುಲೋಕದ ಸಂಗತಿಗಳಿಗೆ ಈ ರಚಿತ ಪ್ರಶ್ನಾವಳಿ ಸಾಕು ಹಾಗೂ ಯಾವುದೇ

ಸಮಸ್ಯೆಯೊಳಗಿನ ಲೋಕಕ್ಕೆ ಪ್ರವೇಶಿಸಲು ಇರಬೇಕಾದ ಸ್ಥೂಲ ಪರಿಚಯಕ್ಕೆ ಇದು ಅಗತ್ಯವಾಗಿದೆ. ಇಲ್ಲಿ ಯಾವುದೇ ಬಗೆಯ ಗೊಂದಲಗಳಿಲ್ಲದೆ ಪೂರ್ವಭಾವಿಯಾಗಿ ಪ್ರಶ್ನೆಗಳನ್ನು ರಚಿಸಿಕೊಳ್ಳುವುದರಿಂದಲೇ ಇದನ್ನು ರಚಿತ ಪ್ರಶ್ನಾವಳಿಗಳು ಎನ್ನಲಾಗುತ್ತದೆ. ಆದರೆ ಸ್ತ್ರೀ ಕೇಂದ್ರಿತ ಸಮಸ್ಯೆಯನ್ನು ಆಯ್ದುಕೊಂಡ ಈ ಸಂಶೋಧನೆಗೆ ಇದಿಷ್ಟೇ ಮಾಹಿತಿಯಿಂದ ಸಂಶೋಧನಾ ಕಾರ್ಯವು ಪೂರ್ತಿಯಾಗುವುದಿಲ್ಲ.

ಯಾರಿಗೆ ಭವಿಷ್ಯದ ಬಗೆಗೆ ಗೊಂದಲಗಳಿಲ್ಲವೋ? ಭಯ, ಆತಂಕ, ತಲ್ಲಣಗಳಿಲ್ಲವೋ? ಮುಂದೇನು ಎನ್ನುವ ಯೋಚನೆಗಳಿಲ್ಲವೋ? ಅಂತಹವರು ಮಾತ್ರ ಖಚಿತ ಪ್ರಶ್ನೆಗೆ ಖಚಿತವಾದ ಉತ್ತರಗಳನ್ನು ಕೊಡಬಲ್ಲರು. ಸಮಾಜ ವ್ಯವಸ್ಥೆಯಲ್ಲಿ ಮಹಿಳಾ ಬದುಕು ತನ್ನ ದೈನಿಕಗಳಿಂದ ಮೊದಲುಗೊಂಡು, ಪ್ರಧಾನಧಾರೆಯ ನಿದರ್ಶನದಂತೆ ಸಾಗಬೇಕಾದಂತಹ ಸಂದರ್ಭದಲ್ಲಿ ಅವಳ ಬದುಕಿನ ಮೇಲಾಗುತ್ತಿರುವ ಆಕ್ರಮಣಗಳನ್ನು ಅವಳು ಹಂಚಿಕೊಳ್ಳುವುದರಿಂದಾಗಿ, ಆ ಸಮಸ್ಯೆಯ ನಿವಾರಣೆಯಾಗುವ ಬದಲು, ಆಕ್ರಮಣದ ಪ್ರಮಾಣ ಇನ್ನಷ್ಟು ಭೀಕರತೆಗಿಳಿಯುವ ಸಂದರ್ಭವೇ ಹೆಚ್ಚು. ಆದ್ದರಿಂದ ಅದನ್ನು ಹಂಚಿಕೊಳ್ಳುವುದಕ್ಕಿಂತ ಮೌನವಾಗಿ, ಅವುಗಳನ್ನು ಅನುಭವಿಸದೇ ವಿಧಿಯಲ್ಲ ಎಂಬ ಸನ್ನಿವೇಶಗಳಿರುವುದರಿಂದ ರಚಿತ ಪ್ರಶ್ನಾವಳಿಯಷ್ಟೇ ಆಧರಿಸಿ ಪಡೆದ ಮಾಹಿತಿ ಸಾಕಾಗುವುದಿಲ್ಲ.

ಒಟ್ಟು ಮಹಿಳಾ ಬದುಕು ಸಾಮಾಜಿಕವಾಗಿ ಅಭದ್ರವಾಗಿರುವಂಥ, ಅರಕ್ಷತೆಯಿಂದ ಕೂಡಿರುವಂತಹ, ಆತ್ಮವಿಶ್ವಾಸಕ್ಕೆಡೆಕೊಡದಿರುವಂತಹ, ಭೂತ-ಭವಿಷ್ಯತ್ತುಗಳ ಬಗೆಗೆ ಒಂದು ನಿಶ್ಚಿತ ನಿಲುವನ್ನು ತಾಳದೆ ಇರುವಂತಹ ಸಾಮಾಜಿಕ ಬದುಕು ಮಹಿಳೆಗೆ ಕಟ್ಟಲ್ಪಟ್ಟಿದೆಯಾದ್ದರಿಂದ ಹಲವು ಬಗೆಯ ಮಾತುಕತೆಯಲ್ಲಿ ಸ್ತ್ರೀ ಸಮುದಾಯ ನೇರವಾಗಿ ಮಾತನಾಡದಿರುವ, ಸ್ಪಷ್ಟವಾಗಿ ಹೇಳದಿರುವ, ಖಚಿತವಾಗಿಲ್ಲದಿರುವ ಸಂಗತಿಗಳೇ ಹೆಚ್ಚು. ಆದರೆ ಸ್ತ್ರೀವಾದಿ ಸಂಶೋಧನೆಯು ಈ ಪ್ರಶ್ನೆಗಳ ಉತ್ತರವನ್ನೇ ಹೆಚ್ಚು ಅವಲಂಬಿಸಿದೆಯಾದ್ದರಿಂದ, ದೌರ್ಜನ್ಯ-ಹಿಂಸೆಯನ್ನಾಧರಿಸಿ ಹೊರಟ ಈ ಸಂಶೋಧನೆಯು ಸಹ ಇದಕ್ಕೆ ಹೊರತಲ್ಲ. ಆದ್ದರಿಂದ ಸಂದರ್ಶನದಲ್ಲಿ ಭಾಗವಹಿಸಿದಾಗ ನೇರವಾದ ಪ್ರಶ್ನೆಗಳಿಗಿಂತ, ಅವರಿಗೆ ಪ್ರಶ್ನೆಗಳೆನಿಸುವ ಬದಲು, ಒಂದು ಆಪ್ತ ಸಮಾಲೋಚನೆಯೆಂಬಂತಹ ಮಾತುಕತೆಯಲ್ಲಿ ಅರಚಿತ ಪ್ರಶ್ನಾವಳಿಯ ಪಾಲು ಹೆಚ್ಚಿನದಾದ್ದರಿಂದ ಅದನ್ನು ಬಳಸಿಕೊಳ್ಳಲಾಗಿದೆ. ಅರಚಿತ ಪ್ರಶ್ನಾವಳಿಯೆಂದ ಮಾತ್ರಕ್ಕೆ ಪೂರ್ವಸಿದ್ಧತೆಯಿಲ್ಲವೆಂದರ್ಥವಲ್ಲ. ಅಲ್ಲಿಯೂ ಪೂರ್ವಭಾವಿಯಾಗಿ ಆಲೋಚಿಸಿ, ಅಪೇಕ್ಷಿತ ಮಾಹಿತಿಗಳನ್ನು ಪಡೆಯುವ ಅಗತ್ಯತೆಯನ್ನು ಮಾಡಿಕೊಳ್ಳಲಾಗಿದ್ದು. ಆತ್ಮೀಯತೆಯನ್ನು ಸಾಧಿಸುವ ಮೂಲಕ ಭಾವನಾಲೋಕಕ್ಕೆ ಧಕ್ಕೆ ಬರದಂತೆ. ಸೂಕ್ಷ್ಮವಾಗಿ ಮಾಹಿತಿಯನ್ನು ಪಡೆಯಲಾಗಿದೆ.

**• ನೇರ ಸಂದರ್ಶನ**

ಸಾರ್ವಜನಿಕ ವಲಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಮಹಿಳಾ ಪೋಲಿಸ್ ಪೇದೆಗಳು ಮತ್ತು ಗ್ರಾಮಪಂಚಾಯ್ತಿ ಅಧ್ಯಕ್ಷ-ಉಪಾಧ್ಯಕ್ಷರಿಗೆ ನೇರವಾಗಿ ಸಂದರ್ಶಿಸಲಾಯಿತು. ಮೊದಲ ಭೇಟಿಗಳಲ್ಲಿ

ತೀರಾ ಸೀಮಿತವಾದ, ಅಸ್ಪಷ್ಟ, ಗೊಂದಲಗಳನ್ನು ಸೃಷ್ಟಿಸುವಂತಹ ಉತ್ತರಗಳೇ ದೊರೆತವು. ದೌರ್ಜನ್ಯ-ಹಿಂಸೆಯ ಸ್ಥೂಲ ಎಳೆಗಳು ಇಲ್ಲವೇನೊ? ಎಂಬಂತೆ ಮಾಹಿತಿಗಳು ಲಭ್ಯವಾದವು. ಆದರೆ ಮಹಿಳಾ ಬದುಕಿನ ಸೂಕ್ಷ್ಮ ಸಂಗತಿಗಳನ್ನು ಅಧ್ಯಯನಕ್ಕೊಳಪಡಿಸಿದಾಗ ಈ ಪ್ರಕ್ರಿಯೆಗೆ ನಿಗದಿತ ನಿಯಮವೆನ್ನುವುದಿರುವುದಿಲ್ಲ. ಒಮ್ಮೆ ಸಂಗ್ರಹಿಸಿದ ಮಾಹಿತಿ ಮುಂದಿನ ಕೆಲವು ದಿನಗಳಲ್ಲೆ ಭಿನ್ನವಾಗಿ ನಿಲ್ಲುವ ಸಾಧ್ಯತೆಯು ಹೆಚ್ಚು. ಹಾಗಾಗಿ ಒಂದೇ ಭೇಟಿಯಲ್ಲಿ ಸಂದರ್ಶನ ಮುಗಿದ ಮೇಲೆ ಅಷ್ಟೇ ಮಾಹಿತಿಯೆಂದು ವಿಶ್ಲೇಷಣೆಗೊಳಪಡಿಸಿದಾಗ ಫಲಿತವೂ ಸಹ ಅಸ್ಪಷ್ಟವಾಗಿಯೇ ಉಳಿದು, ಸಮಸ್ಯೆಯ ನಿಭಾಸುವಿಕೆಯು ಸಹ ಸಾಧ್ಯವಾಗುವುದಿಲ್ಲ. ಆದ್ದರಿಂದ ಸುತ್ತಲಿನ ಕ್ಷೇತ್ರ, ಸಂದರ್ಭಗಳನ್ನಾಧರಿಸಿ ಪರ್ಯಾಯ ಬಗೆಗಳಲ್ಲಿ ಮಾತಿಗಿಳಿಯುವ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಯಿತು. ಈ ಬಗೆಯ ವಿಷಯಗಳಲ್ಲಿ ಸಂದರ್ಶನಕ್ಕೆ ತೊಡಗಿದಾಗ ಮೊದಲ ಹಂತದಲ್ಲಿ ಮಾಹಿತಿಗಳನ್ನು ಪಡೆಯುವಾಗ ಸಮಸ್ಯೆಗಳೇ ಇಲ್ಲವೆಂಬ ಉತ್ತರಗಳು ಸಾಕಷ್ಟು ಗೊಂದಲವನ್ನುಂಟು ಮಾಡಿದವು. ಆಗ ಆ ವ್ಯಕ್ತಿಗಳ ಆಪ್ತಲೋಕದಲ್ಲಿರುವವರೊಂದಿಗೆ ಸಂದರ್ಶನಕ್ಕೆ ಹೋದರೂ ಮೊದಲಮೊದಲು ಮೂಕ ಪ್ರೇಕ್ಷಕರಂತಿದ್ದು. ನಿಧಾನವಾಗಿ ಮಾತಿನ ಮಧ್ಯದಲ್ಲಿ ಒಂದೊಂದೆ ಪ್ರಶ್ನೆಗಳನ್ನು ಪ್ರಶ್ನೆಗಳೆನಿಸಿದ ಹಾಗೆ ಮಾತನಾಡುವ ಮೂಲಕ ಆ ವಲಯದಲ್ಲಾಗುವ ದೌರ್ಜನ್ಯ-ಹಿಂಸೆಯ ಸ್ವರೂಪವನ್ನು ಸೂಕ್ಷ್ಮವಾಗಿ ಗ್ರಹಿಸಲಾಯಿತು. ಜೊತೆಗೆ ಇದು ಸ್ವ-ಸಮಸ್ಯೆಯಾಗಿ ಸ್ವೀಕರಿಸುವ ಮೂಲಕ ವ್ಯಕ್ತಿಗಳಿಗೆ ಆಪ್ತವಾಗುವುದರೊಂದಿಗೆ ಹೆಚ್ಚಿನ ಮಾಹಿತಿಯನ್ನು ಇಲ್ಲಿ ಪಡೆಯಲು ಸಹಾಯಕವಾಗಿದೆ. ನೇರ ಸಂದರ್ಶನದಲ್ಲಿ ಸುತ್ತಣದ ಪರಿಸರದ ಅವಲೋಕನದಿಂದ ಸಮಸ್ಯೆಯ ಎಳೆಯನ್ನು ಗ್ರಹಿಸಲು ಅನುಕೂಲವಾದ್ದರಿಂದ ಈ ವಿಧಾನ ಹೆಚ್ಚು ಉಪಯುಕ್ತ.

- **ಪ್ರಕರಣ ಅಧ್ಯಯನ**

ಸಂಶೋಧನೆಯ ವಿಷಯಾನುಸಾರವಾಗಿ ದೌರ್ಜನ್ಯ-ಹಿಂಸೆಯ ಸ್ವರೂಪ, ಅಲ್ಲಿ ಪ್ರತಿಬಿಂಬಿತವಾಗುವ ಅಧೀನ-ಪ್ರಧಾನ ನೆಲೆಗಳನ್ನು ಅರಿಯಲು ಯಾವುದೋ ಒಬ್ಬ ವ್ಯಕ್ತಿಯ ಸಂದರ್ಶನದಿಂದ ಸಾಧ್ಯವಿಲ್ಲ. ಹೀಗೆ ಒಂದೇ ಸಮಸ್ಯೆಯ ವಿವಿಧ ಸ್ವರೂಪಗಳನ್ನು ಅರಿಯಲು ವಿವಿಧ ವ್ಯಕ್ತಿಗಳನ್ನು ಸಂದರ್ಶಿಸಿ ಮಾಹಿತಿ ಸಂಗ್ರಹಿಸುವುದರೊಂದಿಗೆ, ಅವುಗಳನ್ನು ಒಂದೊಂದು ಗುಂಪುಗಳಲ್ಲಿ ದಾಖಲಿಸುವ ಮೂಲಕ ಒಂದೇ ಸಾಮ್ಯತೆಯನ್ನು ಹೋಲುವ ವಿವರಗಳ ಹತ್ತು ಪ್ರಕರಣಗಳನ್ನು ಅಧ್ಯಯನ ಮಾಡಿದಾಗಲೂ, ಅದನ್ನು ಒಂದೇ ಪ್ರಕರಣವೆಂದು ಪರಿಗಣಿಸಲಾಗಿದೆ. ದೌರ್ಜನ್ಯ-ಹಿಂಸೆಯ ಮೂಲ ಉದ್ದೇಶ ಅಧೀನ ನೆಲೆಯ ಸಮುದಾಯವು ಅದೇ ನೆಲೆಯಲ್ಲಿಯೇ ಮುಂದುವರಿಯಲು ಯಾಜಮಾನ್ಯ ನೆಲೆಯ ಸಮುದಾಯವು ಬಳಸುವ ಅಸ್ತ್ರವೆನ್ನಬಹುದು. ಈ ಸಂಗತಿಯು ಸಾರ್ವಜನಿಕ ವಲಯದಲ್ಲಿನ ಎರಡು ವಲಯಗಳಲ್ಲಿ ಪ್ರಕರಣಗಳನ್ನು ಅಧ್ಯಯನ ಮಾಡುವಲ್ಲಿ ಪ್ರತಿಬಿಂಬಿತವಾಗುವ ಯಾಜಮಾನ್ಯ-ಅಧೀನ ನೆಲೆಯ ಅಂಶಗಳನ್ನು ಪ್ರತಿಯೊಂದು ಪ್ರಕರಣಗಳಲ್ಲೂ ಗುರುತಿಸಲಾಯಿತು. ಒಂದೊಂದು ಪ್ರಕರಣಗಳನ್ನು ಅಧ್ಯಯನ ಮಾಡುವಾಗಲೂ ಸಹ ಒಟ್ಟು ಸಾರ್ವಜನಿಕ ವಲಯದಲ್ಲಿ ಮಹಿಳೆಯರ ಮೇಲಾಗುವ

ದೌರ್ಜನ್ಯ-ಹಿಂಸೆಯನ್ನು ಪ್ರತಿನಿಧಿಸುವ ಸಮುದಾಯದ ಸಮಸ್ಯೆಯ ಸ್ವರೂಪವನ್ನು ಕಾಣಲಾಗಿದೆ. ಹಾಗೂ ವ್ಯಕ್ತಿ ವಿವರಗಳನ್ನು ಆಳವಾಗಿ ಗ್ರಹಿಸುವ ಮೂಲಕ ಮಾಹಿತಿಯನ್ನು ಪಡೆಯುವಾಗಲೂ ಅಲ್ಲಿನ ಮಹಿಳೆಯರ ವೈಯಕ್ತಿಕ ಬದುಕನ್ನು ಅತಿಕ್ರಮಿಸದಂತಹ ಸಂಗತಿಯ ಕುರಿತು ಸಾಕಷ್ಟು ಜಾಗೃತೆಯನ್ನುವಹಿಸಿ ಪ್ರಕರಣಗಳನ್ನು ಸಂಗ್ರಹಿಸಲಾಗಿದೆ.

ಸಾಂಪ್ರದಾಯಿಕ ಸಂಶೋಧನಾ ವಿಧಿ-ವಿಧಾನಗಳು ಸಂಶೋಧಕರು ಮತ್ತು ಸಂದರ್ಶಿನಿಯ ಮಧ್ಯದಲ್ಲಿ ಒಂದು ಅಂತರವಿರಬೇಕು. ಭಾವನಾತ್ಮಕ ನಂಟಿರುವುದು, ಆಪ್ತತೆಯನ್ನು ಸಾಧಿಸುವುದು ಸಂಪೂರ್ಣವಾಗಿ ನಿರಾಕರಿಸುತ್ತದೆ. ಆದರೆ ಸ್ತ್ರೀವಾದಿ ಸಂಶೋಧನೆಯಲ್ಲಿ ದೌರ್ಜನ್ಯ-ಹಿಂಸೆಯ ನೈಜ ಸ್ಥಿತಿಯನ್ನು ಗ್ರಹಿಸಲು ಅಥವಾ ಸಾಮೀಪ್ಯವನ್ನು ಸಾಧಿಸಲು ಈ ವಿಧಾನವನ್ನು ವಿಶೇಷವಾಗಿ ಬಳಸಿಕೊಳ್ಳಲಾಗಿದೆ ಹಾಗೂ ಸಾಂಪ್ರದಾಯಿಕ ಚಿಂತನೆಗಳಲ್ಲಿ ಭಾವನಾತ್ಮಕ ಸಂಬಂಧದ ಅಗತ್ಯತೆಯನ್ನು ನಿರಾಕರಿಸುವುದರಿಂದ, ಮಹಿಳೆಯ ವೈಯಕ್ತಿಕ ಬದುಕನ್ನು ಅತಿಕ್ರಮಿಸುವಂತಹ ಸಂಗತಿಗಳು ಈ ವಿಧಾನವನ್ನು ಅನುಸರಿಸಿದ ಸಂಗತಿಯಲ್ಲಿ ಹೆಚ್ಚು ಸ್ಪಷ್ಟವಾಗುತ್ತದೆ.

ಉದಾ:- ಅತ್ಯಾಚಾರದ ಪ್ರಕರಣವನ್ನು ಸಂದರ್ಶಿಸುವಾಗ ಅಥವಾ ನ್ಯಾಯಾಲಯದಲ್ಲಿ ವಿಚಾರಿಸುವಾಗ, ವಕೀಲರು ಕೇಳುವ ಪ್ರಶ್ನೆಗಳು, ಅತ್ಯಾಚಾರ ಹೇಗಾಯ್ತು? ಸಮಯ ಸರಿಯಾಗಿ ಹೇಳ್ತೀರಾ? ಮೈಮೇಲಿನ ಬಟ್ಟೆಗಳು ಹರಿದಿದ್ದವಾ? ಪರಚಿದ ಗಾಯಗಳು ಎಲ್ಲಾಗಿವೆ? ಎಂಬ ಪ್ರಶ್ನೆಗಳು ಅತ್ಯಾಚಾರಾವಾದುದಕ್ಕಿಂತ, ಹೆಚ್ಚಿನ ಹಿಂಸೆಯನ್ನುಂಟುಮಾಡುತ್ತವೆ. ಅವರ ಖಾಸಗಿ ವಲಯದ ಅತಿಕ್ರಮಣವು ಅತಿ ಸಾಮಾನ್ಯೀಕರಿಸಲಾಗುತ್ತದೆ. ವ್ಯಕ್ತಿಗತ ವಿವರಗಳನ್ನು ಅರಿಯಲು ಮಹಿಳೆಯ ಬದುಕಿನೊಳಗೆ ಪ್ರವೇಶಿಸಿದಾಗಲೂ, ಹಲವು ವಿವರಗಳು ಹೇಳದಂತಹ ಸಂಗತಿಗಳನ್ನು ಹೇಳಿದ ಮೇಲೆಯೂ ಅವರ ಬದುಕನ್ನು ಗೌರವಿಸುವುದು ಬಹುಮುಖ್ಯವಾದ ಅಂಶ.

ಮಹಿಳೆಯ ಮೇಲಿನ ಹಿಂಸೆ-ದೌರ್ಜನ್ಯಗಳು ಘೋರ ಪ್ರಮಾಣದಲ್ಲಿ ನಡೆಯುತ್ತಿರುವಾಗಲೂ, ಇಂತಹ ಭೀಕರ ಸಮಸ್ಯೆಯು ಅವಳ ಬದುಕಿನೊಳಗಿದೆಯೇ ವಿನಹ ಬದುಕಿನಾಚೆಗಿಲ್ಲ. ಈ ಬಗೆಯ ಸಮಸ್ಯೆಗಳೊಂದಿಗೆ ಹೋರಾಡುವ ಸ್ಥಿತಿ ಅವಳದಾಗಿದೆ ಎಂಬುದು ಮುಂದೆ ವಿಶ್ಲೇಷಿಸುವ ಎಲ್ಲ ಪ್ರಕರಣಗಳಲ್ಲಿಯೂ ಕಾಣಬಹುದಾಗಿದೆ. ಈ ಪ್ರಕರಣಗಳ ಮೂಲಕ ಸಮುದಾಯದ ಪ್ರಶ್ನೆಯೊಂದು, ಮಹಿಳಾ ಬದುಕಿನ ಸಮಸ್ಯೆಯೊಂದನ್ನು ಪ್ರತಿನಿಧಿಸುವಲ್ಲಿ ಬಳಸಲಾಗಿದೆ. ಈ ಬಗೆಯ ಪ್ರಕರಣ ಅಧ್ಯಯನ, ಸಂದರ್ಶನವನ್ನು ಕೈಗೊಂಡಾಗ ಮುಖ್ಯವಾಗಿ ಅನುಸರಿಸಿದ್ದು ವ್ಯಕ್ತಿನಿಷ್ಠ ಸಂಶೋಧ ವಿಧಾನ. ಈ ಆಯಾಮಗಳನ್ನು ಕ್ಷೇತ್ರಕಾರ್ಯದ ಮಾಹಿತಿ ಸಂಗ್ರಹಣೆಯಲ್ಲಿ ಬಳಸಲಾಗಿದೆ.

- **ವಸ್ತುನಿಷ್ಠತೆ ಮತ್ತು ವ್ಯಕ್ತಿನಿಷ್ಠತೆ**

ಸ್ತ್ರೀವಾದಿ ಸಂಶೋಧನಾ ವೈಧಾನಿಕತೆಯಲ್ಲಿ ಈ ಎರಡು ವಿಧಾನಗಳನ್ನು ಬಳಸಲಾಗುತ್ತದೆ. ದೌರ್ಜನ್ಯ-ಹಿಂಸೆಯ ಸಮಸ್ಯೆಯನ್ನು ಆಧರಿಸಿ ಹೊರಟಿರುವ ಈ ಸಂಶೋಧನೆಯಲ್ಲಿ ಸಾರ್ವಜನಿಕ

ವಲಯದಲ್ಲಿನ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ-ಹಿಂಸೆಯ ಪ್ರಸ್ತಾಪವಾದ ತಕ್ಷಣವೇ ಗಮನಸೆಳೆಯುವುದು. ಕೆಲಸದ ಸ್ಥಳದಲ್ಲಿನ ಲೈಂಗಿಕ ಕಿರುಕುಳ, ಈ ಕುರಿತು ಸಾಕಷ್ಟು ಬಗೆಯ ಅಂಕಿ-ಸಂಖ್ಯೆಗಳು, ವಸ್ತುನಿಷ್ಠ ಮಾಹಿತಿಗಳು, ಅತ್ಯಾಚಾರ ಪ್ರಕರಣಗಳ ದಾಖಲಾತಿಗಳು, ಅಪಹರಣ, ಆ್ಯಸಿಡ್ ದಾಳಿಯ ದಾಖಲೆಗಳು. ಅಂದರೆ ಭೌತಿಕ ವಿವರಗಳು ಸಾಕಷ್ಟು ಪ್ರಮಾಣದಲ್ಲಿ ದೊರೆತಿವೆ. ಆದರೆ ಈ ದಾಖಲೆಗಳೆಲ್ಲವೂ ಸತ್ಯವೇ? ಅತ್ಯಾಚಾರದಂತಹ ಸಮಸ್ಯೆಗಳು ದಾಖಲಾಗದ ಸಂದರ್ಭ ಹೆಚ್ಚಾಗಿರುವುದರಿಂದ, ದಾಖಲಾಗದ ಪ್ರಕರಣಗಳು ಎಷ್ಟಿವೆ? ಕೇವಲ ಅತ್ಯಾಚಾರ, ಅಪಹರಣ, ಆ್ಯಸಿಡ್ ದಾಳಿಗಳು ಮಾತ್ರ ದೌರ್ಜನ್ಯವೆಂದಾದರೆ ಸಾಮಾನ್ಯೀಕರಿಸಿದ ಚಿಂತನೆಯೆಂತೆಯೆ ದೌರ್ಜನ್ಯವೆಂದರೆ ದೈಹಿಕ ಆಕ್ರಮಣವೆಂಬತಾಗುತ್ತದೆ. ಈ ಬಗೆಯ ಆ್ಯಸಿಡ್ ದಾಳಿಗಳ, ಅತ್ಯಾಚಾರದ, ಅಪಹರಣದ ಹಿಂಸೆ - ದೌರ್ಜನ್ಯಗಳೆಸಗುವ ಮತ್ತು ಆಕ್ರಮಣಕ್ಕೊಳಗಾವುದರ ಹಿಂದಿನ ಮಾನಸಿಕ ಅಸ್ವಸ್ಥ ಸ್ಥಿತಿಯು ಪರಿಗಣನೆಗೆ ಬರುವುದಿಲ್ಲ.

ಹಾಗೆಯೇ ಕೆಲಸದ ಸ್ಥಳದಲ್ಲಿನ ಲೈಂಗಿಕ ಕಿರುಕುಳಕ್ಕೆ ರಕ್ಷಣೆ ದೊರೆತರೆ, ಅದರಾಚೆಗಿನ ಸ್ಥಳಗಳಲ್ಲಿನ ಮಹಿಳಾ ಬದುಕಿನ ಹೊಣೆ ಹೊರುವವರು ಯಾರು? ಎಂಬುದಕ್ಕೆ ಕೇವಲ ವಸ್ತು ವಿವರಗಳ ಮಾಹಿತಿಯು ಸಾಲದು. ಇದನ್ನು ತಳಹದಿಯಾಗಿಸಿಕೊಳ್ಳುವುದರೊಂದಿಗೆ ವ್ಯಕ್ತಿ ವಿವರಗಳನ್ನು ತುಲನೆ ಮಾಡುವುದು ಅಗತ್ಯ. ದೌರ್ಜನ್ಯ-ಹಿಂಸೆಯೆಂದರೆ ಕಣ್ಣಿಗೆ ಕಾಣದಂತಹ, ಅನುಭವಕ್ಕೆ ಬಾರದಂತಹ ಅಂಶಗಳು, ದಾಖಲಾಗದ ಪ್ರಕರಣಗಳು ಎಷ್ಟೋ ಬಗೆಯಲ್ಲಿವೆ. ಆದ್ದರಿಂದ ಪ್ರಜ್ಞಾಪೂರ್ವಕ ವ್ಯಕ್ತಿನಿಷ್ಠತೆಯನ್ನುಸರಿಸಿ ಕ್ಷೇತ್ರಕಾರ್ಯದಿಂದ ಮಾಹಿತಿ ಸಂಗ್ರಹಿಸುವಲ್ಲಿ ಬಳಸಲಾಗಿದೆ. ಕೆಲವು ದಾಖಲಿತ ವರದಿಗಳನ್ನು ನೋಡುವುದರೊಂದಿಗೆ, ನೇರ ಕ್ಷೇತ್ರಕ್ಕೆ ಹೋಗಿ ವ್ಯಕ್ತಿಗಳನ್ನು ಸಂದರ್ಶಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಹೀಗೆ ಪಡೆಯಲಾದ ಮಾಹಿತಿಗಳನ್ನು, ಪ್ರಕರಣಗಳನ್ನು ಜಾತಿ, ವರ್ಗ, ವಿದ್ಯಾರ್ಹತೆ ಇತ್ಯಾದಿಗಳಲ್ಲಿ ಸಂಗ್ರಹಿಸಿದ ಪ್ರಕರಣಗಳ ಅಂಕಿ-ಸಂಖ್ಯೆಗಳನ್ನು ಒದಗಿಸಲು ಮತ್ತು ಈ ವಸ್ತುನಿಷ್ಠ ಮಾಹಿತಿಗಳೊಂದಿಗೆ ಸಮಗ್ರ ಮಾಹಿತಿಗಳನ್ನು ವಿಶ್ಲೇಷಣೆಗೊಳಪಡಿಸಲಾಗಿದೆ. ದೌರ್ಜನ್ಯ-ಹಿಂಸೆಗಳು ಬದುಕಿನ ಬಾಹ್ಯ ಸಂಗತಿಗಳಿಗಿಂತ, ಆಂತರ್ಯದ ಸಂಗತಿಗಳಲ್ಲಿ ಹುಟ್ಟಿರುವ ಸಮಸ್ಯೆಗಳನ್ನು ವ್ಯಕ್ತಿನಿಷ್ಠ ವಿಧಾನವನ್ನು ಬಳಸುವ ಮೂಲಕ ಮಹಿಳಾ ಬದುಕಿನಲ್ಲಾಗುತ್ತಿರುವ ಆಕ್ರಮಣಗಳನ್ನು ಗ್ರಹಿಸಲು ಈ ಆಯಾಮಗಳನ್ನು ಕ್ಷೇತ್ರಕಾರ್ಯದಲ್ಲಿಯೂ ಬಳಸಲಾಗಿದೆ.

- **ಲಿಂಗ ಪಾತ್ರಗಳ ಸಂಶೋಧನಾ ವಿಧಾನ**

ಸಮಾಜ ವ್ಯವಸ್ಥೆಯಲ್ಲಿ ಬದುಕಿನ ನಿರ್ವಹಣೆಗೆ ಪ್ರತಿಯೊಬ್ಬ ಸದಸ್ಯರು ಕೂಡ ಕೆಲವು ಪಾತ್ರಗಳನ್ನು ನಿರ್ವಹಿಸಬೇಕಾಗುತ್ತದೆ. ಈ ಪಾತ್ರಗಳ ಹಂಚಿಕೆಯಲ್ಲಿಯೂ ಸಹ ಲಿಂಗರಾಜಕಾರಣವನ್ನು ಕಾಣಿಸಿಕೊಳ್ಳುತ್ತದೆ. ಮಹಿಳೆಗೆ ಹಂಚಲಾದ ಪಾತ್ರಗಳು ಸೇವಾ ವಲಯವನ್ನು ಮಾತ್ರ ಆಧರಿಸಿವೆ. ಮಹಿಳೆಯ ಅಧೀನ ಸ್ಥಿತಿಯ ಸ್ಥಾಪನೆ ಮತ್ತು ಅದರ ಮುಂದುವರಿಕೆಗೆ ಲಿಂಗ ಪಾತ್ರಗಳ ಹಂಚಿಕೆ ಅತಿ

ಉಪಯುಕ್ತವಾದ ಅಸ್ತ್ರವಾಗಿ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಬಳಸಲಾಗುತ್ತಿದೆ. ಮಹಿಳೆಯರ ವಿರುದ್ಧ ನಡೆಯುವ ಹಿಂಸೆ-ದೌರ್ಜನ್ಯದ ಸಮಸ್ಯೆಯಲ್ಲಿ ಲಿಂಗಪಾತ್ರಗಳ ಪ್ರಭಾವವು ಯಾವ ನೆಲೆಯಲ್ಲಿದೆಯೆಂಬುದನ್ನು ಗ್ರಹಿಸಲು ಈ ವಿಧಾನವು ಬಳಸಲಾಗುತ್ತಿದೆ. ಪ್ರಕರಣಗಳನ್ನು ಅಧ್ಯಯನ ಮಾಡುವಲ್ಲಿ ಯಜಮಾನಿಕೆಯ ನೆಲೆಯಲ್ಲಿರುವ ಲಿಂಗ ಪಾತ್ರಗಳು, ಅಧೀನ ನೆಲೆಯ ಲಿಂಗ ಪಾತ್ರಗಳ ಮೇಲೆ ಬೀರುವ ಪರಿಣಾಮವನ್ನು ಚರ್ಚಿಸಲು ಸಹಕಾರಿಯಾಗಿದೆ. ಕ್ಷೇತ್ರ ಕಾರ್ಯಕ್ಕೆ ಆಯ್ದುಕೊಂಡ ವಲಯಗಳಲ್ಲಿನ ವ್ಯಕ್ತಿಗಳನ್ನು ಸಂದರ್ಶನಕ್ಕೊಳಪಡಿಸುವಾಗ ಹೆಣ್ಣಾಗಿರುವ ಕಾರಣಕ್ಕೆ ಸಾರ್ವಜನಿಕ ವಲಯಗಳಲ್ಲಿ ಹಂಚಲಾದ ಲಿಂಗ ಪಾತ್ರಗಳು ಸ್ತ್ರೀ ಸಮುದಾಯವನ್ನು ಅಧೀನ ನೆಲೆಯಲ್ಲಿರಿಸಿರುವ ಉದ್ದೇಶವು ಸ್ಪಷ್ಟವಾಗುತ್ತದೆ. 'ವೈಯಕ್ತಿಕತೆಯೇ ನಮ್ಮ ರಾಜಕಾರಣ'ವೆಂಬ ವಿಧಾನವನ್ನು ಬಳಸುವಾಗ ಈ ಲಿಂಗ ಪಾತ್ರಗಳನ್ನು ಪರಿವರ್ತಿಸಿ ನೋಡಿದಾಗ ಮಹಿಳಾ ಪೋಲಿಸ್ ಪೇದೆಯಾಗಲಿ ಮತ್ತು ಗ್ರಾಮ ಪಂಚಾಯ್ತಿಯ ಅಧ್ಯಕ್ಷ-ಉಪಾಧ್ಯಕ್ಷ ಮಹಿಳೆಯರನ್ನು ಅಧೀನ ಸ್ಥಿತಿಯಲ್ಲಿನ ಇರಿಸುವಿಕೆಯು ಅನಾವರಣಗೊಳ್ಳುತ್ತದೆ. ಈ ಬಗೆಯ ವಿಧಾನವನ್ನು ಮಾಹಿತಿ ಸಂಗ್ರಹಿಸುವಲ್ಲಿಯೂ ಸಂಗ್ರಹಿಸಿದ ಪ್ರಕರಣಗಳ ವಿಶ್ಲೇಷಣೆಯಲ್ಲಿ ಉಪಯುಕ್ತವಾಗಿದೆಯೆಂಬುದನ್ನು, ಮುಂದಿನ ಕ್ಷೇತ್ರಕಾರ್ಯದ ವಿಶ್ಲೇಷಣೆಯಲ್ಲಿ ಸ್ಪಷ್ಟಪಡಿಸಲಾಗಿದೆ.

- **ಲೈಂಗಿಕತಾವಾದಿಯಲ್ಲದ ಸಂಶೋಧನಾ ವಿಧಾನ**

ಪುರುಷ ರಾಜಕಾರಣದ ಪ್ರತಿಯಾಗಿ ಮಹಿಳಾ ರಾಜಕಾರಣದ ಅಗತ್ಯತೆಯನ್ನು ಈ ಅಧ್ಯಯನದಲ್ಲಿ ಹೇಳಲಾಗಿದೆಯಾದರೂ ಅಂತಿಮವಾಗಿ ಲೈಂಗಿಕತಾವಾದಿಯಲ್ಲದ ಸಂಶೋಧನ ವಿಧಾನವನ್ನು ಅನುಸರಿಸಲಾಗುತ್ತಿದೆ. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಪ್ರಕರಣ ಅಧ್ಯಯನಗಳು ಪ್ರಮುಖವಾದ ವಿಧಾನವಾಗಿ ಇಲ್ಲಿ ಬಳಸಲಾಗುತ್ತಿದೆಯೆಂದು ಹೇಳಲಾಗಿದೆ. ಈ ರೀತಿಯ ವ್ಯಕ್ತಿಗಳನ್ನು ಸಂದರ್ಶಿಸುವಾಗ, ಪ್ರಕರಣಗಳನ್ನು ದಾಖಲಿಸುವಾಗ ಈ ವಿಧಾನವು ಉಪಯುಕ್ತವಾಗಿ ಬಳಸಲಾಗಿದೆ. ಮಹಿಳೆಯರ ವಿರುದ್ಧ ದೌರ್ಜನ್ಯಗಳಾಗುತ್ತಿರುವುದು ವಾಸ್ತವದ ಸಂಗತಿಯಾಗಿದೆ. ಆದರೆ ಎಲ್ಲ ಪ್ರಕರಣಗಳನ್ನು ಅಧ್ಯಯನ ಮಾಡುತ್ತಿರುವಾಗ, ವ್ಯಕ್ತಿಗಳನ್ನು ಸಂದರ್ಶಿಸುವಾಗ ವಿವರಿಸುವ ಸಂಗತಿಗಳೆಲ್ಲವೂ ಸತ್ಯವಾಗಿರುವುದಿಲ್ಲವೆಂಬುದು ಎಷ್ಟು ಖಚಿತವೋ, ಎಲ್ಲ ಸತ್ಯಗಳನ್ನು ಹೊರಹಾಕಲಾಗುವುದಿಲ್ಲವೆಂದು ಅಷ್ಟೇ ಪ್ರಮಾಣದ ಸಂಗತಿಯಾಗಿದೆ. ದೌರ್ಜನ್ಯ-ಹಿಂಸೆಗಳು ಅನುಭವಿಸುತ್ತಿರುವ ಅದರಲ್ಲೂ ಈ ರಾಜಕೀಯ ವಲಯ ಮತ್ತು ಉದ್ಯೋಗ ವಲಯಗಳಲ್ಲಿ ಆಯ್ಕೆ ಮಾಡಿಕೊಂಡಿರುವಲ್ಲಿಯಂತೂ ಸಹ ವಿಷಯವನ್ನು ಹೊರತೆಗೆಯುವುದು ಕಷ್ಟ. ಆದರೆ ಕೆಲವು ಸಂದರ್ಶನಗಳಲ್ಲಿನ ಮಹಿಳೆಯರು ಅತಿಕ್ರೂರವಾದ ತಮ್ಮಷ್ಟಕ್ಕೆ ಸೃಷ್ಟಿಸಿಕೊಂಡೋ, ಇನ್ನಾವುದೋ ವೈಯಕ್ತಿಕ ವೈರದ ಕಾರಣದಿಂದಲೋ ಹೇಳಿರುವಂತಹ ಘಟನೆಗಳು ಎದುರಾಗಿವೆ. ಆ ನಿಟ್ಟಿನಲ್ಲಿ ಆ ಪ್ರಕರಣಗಳನ್ನು ಲೈಂಗಿಕತಾವಾದಿಯಲ್ಲದ ವಿಧಾನದಿಂದ, ಮುಕ್ತ ಮನಸ್ಸಿನಿಂದ ನೋಡುವಲ್ಲಿ ಈ ವಿಧಾನವು ಬಳಸಿಕೊಳ್ಳಲಾಗಿದೆ. ಈ ವಿಧಾನವನ್ನು ಕೇವಲ ಸ್ತ್ರೀವಾದಿ ಸಂಶೋಧಕರಷ್ಟೇ ಅಲ್ಲದೆ ಸಾಂಪ್ರದಾಯಿಕ ಚಿಂತಕರು ಅಳವಡಿಸಿಕೊಳ್ಳಬಹುದಾದ ಸೂಕ್ತ ವಿಧಾನವಾಗಿದೆ. ಸ್ತ್ರೀವಾದಿ ವೈಧಾನಿಕತೆಯಲ್ಲಿ ಇದನ್ನು ಹೆಚ್ಚು ಕೇಂದ್ರೀಕರಿಸಲಾಗುತ್ತದೆ.

ಮೇಲಿನ ವಿಧಾನಗಳೆಲ್ಲವೂ ಕ್ಷೇತ್ರಕಾರ್ಯದಲ್ಲಿನ ಮಾಹಿತಿಗಳನ್ನು ಸಂಗ್ರಹಿಸಲು, ವಿಶೇಷವಾಗಿ, ಸಂದರ್ಶನ, ಪ್ರಕರಣಗಳ ದಾಖಲಾತಿ, ಅಪೇಕ್ಷಿತ ಮಾಹಿತಿಯನ್ನು ಪಡೆಯುವಲ್ಲಿ, ಎದುರಾದ ಸಮಸ್ಯೆಗಳನ್ನು ನಿಭಾಯಿಸಲು, ನಿವಾರಿಸಿಕೊಂಡು ಮಾಹಿತಿಗಳನ್ನು ಪಡೆಯುವಲ್ಲಿ ಬಳಸಿಕೊಳ್ಳಲಾಗಿದೆ.

ಈ ನಿಟ್ಟಿನಲ್ಲಿ ಕ್ಷೇತ್ರಕಾರ್ಯದಲ್ಲಿ ಹಿಂಸೆ-ದೌರ್ಜನ್ಯಕ್ಕೆ ಒಳಗಾದ ವ್ಯಕ್ತಿಗಳನ್ನು ಸಂದರ್ಶಿಸುವುದರೊಂದಿಗೆ, ಅದೇ ವಲಯಗಳಲ್ಲಿ ಕಾರ್ಯನಿರ್ವಹಿಸುವ ಇತರೆ ಪುರುಷ ಪೋಲಿಸರಿಗೆ, ಪುರುಷ ರಾಜಕಾರಣಿಗಳಿಗೆ ಸಂದರ್ಶಿಸಲಾಯಿತು ಮತ್ತು ಈ ವಲಯದಾಚೆಗಿರುವ ಸ್ತ್ರೀ-ಪುರುಷ ಸಮುದಾಯಗಳನ್ನು ಸಂದರ್ಶನಕ್ಕೊಳಪಡಿಸಿದಾಗ ಸಂಗ್ರಹಿಸಿದ ಮಾಹಿತಿಗನುಗುಣವಾಗಿ ಕೆಲವು ಗುಂಪುಗಳನ್ನಾಗಿ ವಿಭಾಗಿಸಲಾಗಿದೆ.

• **ಸಾಂಪ್ರದಾಯಿಕ ಧೋರಣೆಯನ್ನು ಹೊಂದಿರುವ ಪೋಲಿಸರು**

ಈ ಬಗೆಯ ಗುಂಪಾಗಿ ವಿಭಾಗಿಸಲು ಇರುವ ಮೂಲ ಕಾರಣ, ಕೆಲವು ಪೋಲಿಸರಿಗೆ ಸಂದರ್ಶಿಸಿ, ಮಹಿಳೆಯರು ಈ ವಲಯಕ್ಕೆ ಪ್ರವೇಶಿಸುವುದರ ಬಗೆಗೆ ಕೆಲವು ಪ್ರಶ್ನೆಗಳನ್ನು ಕೇಳಿದಾಗ ಇಬ್ಬಗೆಯ ಧೋರಣೆಗಳು ಕಾಣಿಸಿಕೊಂಡವು, ಅವುಗಳ ಆಧಾರದ ಮೇಲೆ ಗುಂಪುಗಳಾಗಿ ವಿಭಾಗಿಸಲಾಗಿದೆ.

ಈ ಗುಂಪಿನವರ ಅಭಿಪ್ರಾಯವು ಮಹಿಳೆಯರು ಈ ವಲಯಕ್ಕೆ ಪ್ರವೇಶಿಸುವುದು ಅಪಾಯಕಾರಿ ಸಂಗತಿಯೇ ಆಗಿದೆ. ಯಾಕೆಂದರೆ ಬಲಿಷ್ಠ ಪುರುಷರಿಗೆ ಒಗ್ಗದಂತಹ ಭೀಕರವಾದ ವಲಯವಿದು. ಆದ್ದರಿಂದ ಮಹಿಳೆಯರು ಮನೆಯಲ್ಲಿರುವುದೇ ಸೂಕ್ತ. ಇಷ್ಟಪಟ್ಟಲ್ಲಿ ಶಿಕ್ಷಕ ವೃತ್ತಿಗೂ, ನರ್ಸಗಳಾಗಿಯೋ, ಅಂಗನವಾಡಿ ಕಾರ್ಯಕರ್ತೆಯರಾಗಿಯೋ ಸೇರಿಕೊಳ್ಳಬಹುದು. ಅಲ್ಲಿನ ವಾತಾವರಣವು ಇಲ್ಲಿಯಷ್ಟು ಭೀಕರವಾಗಿಲ್ಲವೆಂಬ ಅಭಿಪ್ರಾಯ ಹೇಳುತ್ತಲೇ ಮಹಿಳೆಯರಿಗೆ ಈ ಪ್ರವೇಶದ ನಿಷೇಧ ಮತ್ತು ಇಲ್ಲಿ ನಡೆಯುವ ಕ್ರೌರ್ಯದ ಒಳ ಮುಖಗಳನ್ನು ಹೊರಹಾಕಿರುವುದು ಕಂಡು ಬರುತ್ತದೆ. ಮಹಿಳೆಯರ ವಿರುದ್ಧ ನಡೆಯುವ ಮೊದಲ ಹಂತದ ದೌರ್ಜನ್ಯ-ಹಿಂಸೆಯನ್ನು ಮೊದಲುಗೊಂಡು, ಮಹಿಳೆಯರನ್ನು ಮತ್ತೆ ಗೃಹಬಂಧನಕ್ಕೆ ಸೀಮಿತವಾಗಿಸುವ ಸಾಂಪ್ರದಾಯಿಕ ಧೋರಣೆ ಮತ್ತು ಪುರುಷ ಪ್ರಧಾನ ವ್ಯವಸ್ಥೆಯ ಕ್ರೌರ್ಯತೆಯನ್ನು ಗ್ರಹಿಸುವ ಮೂಲಕ ವ್ಯವಸ್ಥೆಯಲ್ಲಿ ನಡೆಯುವ, ಅದರಲ್ಲೂ ಈ ವಲಯದಲ್ಲಿ ನಡೆಯುವ ಆಕ್ರಮಣಗಳ ಹಲವು ಆಯಾಮಗಳನ್ನು ಗ್ರಹಿಸಲು ಅನುಕೂಲವಾಯಿತು.

• **ವೈಚಾರಿಕ ನಿಲುವನ್ನು ತಳೆದಿರುವ ಪೋಲಿಸರು**

ಈ ಗುಂಪಿನವರ ಅಭಿಪ್ರಾಯವು ಮಹಿಳೆಯರು ಈ ದಿನ ಎಲ್ಲ ವಲಯಗಳಿಗೂ ಕಾಲಿಡುತ್ತಿರುವುದು ಕಾಣಸುತ್ತಿದೆ. ಪ್ರಮಾಣದಲ್ಲಿ ಹೆಚ್ಚು ಕಡಿಮೆಯ ವ್ಯತ್ಯಾಸವಿರಬಹುದು. ಅವರ ವೃತ್ತಿಯಲ್ಲಿ ಅವರುಗಳ ಗಮನಕ್ಕೆ ಬಂದಂತೆ ಮಹಿಳೆಯರು ಪುರುಷ ಪೋಲಿಸರಿಗಿಂತ ಹೆಚ್ಚು ನಿಷ್ಠೆ, ಶ್ರದ್ಧೆಯಿಂದ ವಹಿಸಿದ ಕಾರ್ಯವನ್ನು ಹೆಚ್ಚು ಅಚ್ಚುಕಟ್ಟಾಗಿ ನಿಭಾಯಿಸುತ್ತಾರೆ ಹಾಗೂ ಅವರುಗಳು ಈ ವಲಯಗಳಲ್ಲಿರುವುದರಿಂದ ಮಹಿಳೆಯರ ಪ್ರಕರಣಗಳ ದಾಖಲಾತಿಗೆ, ಸಮಸ್ಯೆಗಳ ನಿವಾರಣೆಗೆ ಸಹಾಯಕವಾಗಿದೆ. ಮೊದಲಗಿಂತಲೂ ಈಗ ಮಹಿಳೆಯ ಸಮಸ್ಯೆಗಳ ದಾಖಲಾತಿಗಳ ಸಂಖ್ಯೆ ಏರಿದೆ.

ಕುಟುಂಬದವರಾದರೆ, ಇಲ್ಲವೆ ಗೌಡರು, ಪಟೇಲ ಮನೆಯುವರಾದರೆ ಸೂಕ್ತ, ಒಟ್ಟಾರೆ ರಾಜಕೀಯದ ಅರಿವಿರುವ, ಹಿನ್ನೆಲೆಯಿರುವ ಕುಟುಂಬಗಳಿಂದ ಬಂದವರಾದರೆ ಅಷ್ಟಾಗಿ ಸಮಸ್ಯೆಗಳಿರುವುದಿಲ್ಲ. ಸಮಸ್ಯೆಗಳಾದರೆ ಅವರು ಅದನ್ನು ನಿಭಾಯಿಸಲು ಶಕ್ತರಾಗಿರುತ್ತಾರೆ. ಜನ ಸಾಮಾನ್ಯ ಮಹಿಳೆಯರು ಬರಬಹುದಾದರೂ ಅವರು ಇಲ್ಲಿ ನೆಲೆನಿಲ್ಲುವುದು ಕಷ್ಟವೆಂಬುದನ್ನು ಸೂಚಿಸುತ್ತಾರೆ. ಕೆಲವು ಜನಸಾಮಾನ್ಯ ಮಹಿಳೆಯರ ಸಾಧನೆಯ ಉದಾಹರಣೆಗಳು ನೀಡಿದರೆ ಅವೆಲ್ಲವೂ ಅಪವಾದಗಳೆಂಬ ಧೋರಣೆಗೆ ಬರುತ್ತಾರೆ.

- ವಲಯದಾಚೆಗಿರುವ ಜನಾಭಿಪ್ರಾಯ

ಬಹುಪಾಲು ಇಲ್ಲಿನ ಅಭಿಪ್ರಾಯಗಳಲ್ಲಿ ಗಣನೀಯವಾದ ವ್ಯತ್ಯಾಸಗಳೇನಿಲ್ಲ. ಯಾವುದೇ ವಲಯಕ್ಕಿಂತ ರಾಜಕೀಯ ವಲಯವೂ ಸಾಕಷ್ಟು ಭೀಕರಗಳಿಂದ ಕೂಡಿದೆ. ಮಾಧ್ಯಮದ ಉದಾಹರಣೆಗಳನ್ನೆ ಕೊಡುವ ಜನರಿಗೆ ಅದರ ಪ್ರಭಾವ ಎಷ್ಟಾಗಿದೆಯೆಂಬುದನ್ನು ಗುರುತಿಸಬಹುದು. ಕೆಲವು ಸ್ತ್ರೀ-ಪುರುಷರಿಗೆ ಸೋನಿಯಗಾಂಧಿ, ಸುಷ್ಮಾಸ್ವರಾಜ್‌ರು ಆದರ್ಶವಾದರೆ ಬಹುಪಾಲು ಜನರಿಗೆ ಅವರು ಏನೆಲ್ಲಾ ಕಷ್ಟಪಟ್ಟು ಮೇಲೆ ಬಂದರೂ ಸೋನಿಯಾಗಾಂಧಿ ಪ್ರಧಾನಿಯಾಗಲು ಸಾಧ್ಯವಾಗದಿರುವುದು ಹೆಣ್ಣಾಗಿರುವುದಕ್ಕೆ ಎಂಬ ಅಭಿಪ್ರಾಯವಿದೆ. ತೀರಾ ಕಡಿಮೆ ಪ್ರಮಾಣದ ಜನರು ಮಹಿಳೆಯರ ರಾಜಕೀಯ ಪ್ರವೇಶಕ್ಕೆ ಬೆಂಬಲ ನೀಡಿದ್ದಾರೆ. ಇವರು ಸಹ ರಾಜಕೀಯಕ್ಕೆ ಶ್ರೀಮಂತರು, ಮನೆತನದಲ್ಲಿ ಯಾರಾದರೂ ಈ ವಲಯದಲ್ಲಿದ್ದು ನಿಭಾಯಿಸುವವರಿದ್ದರೆ ಸೂಕ್ತವೆನ್ನುತ್ತಾರೆ. ಹಾಗಾದರೆ ಮಹಿಳೆಯರು ರಬ್ಬರ್ ಸ್ಟ್ಯಾಂಪ್‌ಗಳಾಗುತ್ತಾರೆಂಬ ಪ್ರಶ್ನೆಗೆ, ಅದನ್ನು ಒಪ್ಪುವುದಿಲ್ಲ. ಮಹಿಳೆಯರಿಗೆ ಆಸರೆಯಾಗಿರುತ್ತಾರೆನಿಸುವ ಈ ನಿಲುವು ಪುರುಷರದೇ ಆಗಿದೆ.

ಒಟ್ಟು ಈ ಜನ ಸಮುದಾಯದ ಸಂದರ್ಶನದಲ್ಲಿ ಮಹಿಳೆಯರ ಸಾರ್ವಜನಿಕ ವಲಯದ ಪ್ರವೇಶ ನಿರಾಕರಣೆಯ ಛಾಯೆಯು ಹೆಚ್ಚು ಕಾಣಿಸಿಕೊಳ್ಳುತ್ತದೆ. ಎಷ್ಟೇ ವಿಚಾರವಂತರೆಂದರೂ ಅವರ ಮಾತಿನ ಎಳೆಗಳು ನೇರ ನಿರಾಕರಣೆಗಿಂತ, ಪರೋಕ್ಷ ನಿರಾಕರಣೆಯನ್ನು ಸೂಚಿಸುತ್ತದೆ. ಇನ್ನೊಂದು ಬಹುಮುಖ್ಯ ಅಂಶವೆಂದರೆ ಬೇರೆ ವಲಯಗಳಿಗೆ ಹೋಗುವ ಮೂಲಕ ನಿರಾಕರಣೆಯ ಸೂಚನೆ ಒಂದು ಆಯಾಮವಾದರೆ, ಈ ವಲಯದಲ್ಲಿ ದೌರ್ಜನ್ಯ-ಹಿಂಸೆಯ ಕರಾಳ ಛಾಯೆಗಳನ್ನು ಬೀರುವ ಇನ್ನೊಂದು ಮುಖವನ್ನು ಪರಿಶೀಲಿಸಬಹುದು. ಬಹುಪಾಲು ಮಹಿಳೆಯರೇ ಇದರ ನಿರಾಕರಣೆ ಬಿಂಬಿಸುವುದು, ಕಾರ್ಯವನ್ನು ಹೆಚ್ಚು ಅಚ್ಚುಕಟ್ಟಾಗಿ ನಿಭಾಯಿಸುತ್ತಾರೆ. ಹಾಗೂ ಅವರುಗಳು ಈ ವಲಯಗಳಲ್ಲಿರುವುದರಿಂದ ಮಹಿಳೆಯರ ಪ್ರಕರಣಗಳ ದಾಖಲಾತಿಗೆ, ಸಮಸ್ಯೆಗಳ ನಿವಾರಣೆಗೆ ಸಹಾಯಕವಾಗಿದೆ. ಮೊದಲಗಿಂತಲೂ ಈಗ ಮಹಿಳೆಯ ಸಮಸ್ಯೆಗಳ ದಾಖಲಾತಿಗಳ ಸಂಖ್ಯೆ ಏರಿದೆ. ಇದರರ್ಥ ಮಹಿಳೆಯರ ಮೇಲೆ ಆಕ್ರಮಣಗಳು ಹೆಚ್ಚಾಗಿರುವುದು ಸಂತಸದ ಸಂಗತಿಯಲ್ಲ. ಮೊದಲಿನಿಂದಲು ಮಹಿಳೆಯರಿಗೆ ಸಮಸ್ಯೆಗಳಿದ್ದರೂ ಅವುಗಳು ತೆರೆಮರೆಯಾಗುಳಿಯಿತ್ತಿದ್ದವು ಎನ್ನುವ

ಇವರುಗಳು ಮಹಿಳಾ ಪೋಲಿಸರ ಸಮಸ್ಯೆಗಳ ಕುರಿತು ಮೌನತಾಳಿರುವುದೇ ಹೆಚ್ಚು. ಈ ಬಗೆಯ ಅಭಿಪ್ರಾಯ ತಾಳಿದ ಪುರುಷ ಪೋಲಿಸರ ಸಂಖ್ಯೆ ಸಾಂಪ್ರದಾಯಿಕ ಧೋರಣೆಯಿರುವ ಪೋಲಿಸರಿಗಿಂತ ಬಹುಪಾಲು ಕಡಿಮೆಯಿದೆ.

**೪.೨ ಕ್ಷೇತ್ರಕಾರ್ಯದ ವಿಶ್ಲೇಷಣೆ**

ಸ್ತ್ರೀವಾದಿ ಚಿಂತನೆಯ ಮೂಲವೆ ಕೇವಲ ಬೌದ್ಧಿಕ ಕ್ರಿಯೆ ಮತ್ತು ಚಟುವಟಿಕೆಯಷ್ಟೆ ಅಲ್ಲ. ಬದಲಾಗಿ ಇದು ಕ್ರಿಯಾಶೀಲವಾಗಲೇಬೇಕಾದಂತಹ ಮಾರ್ಗವನ್ನು ಶೋಧಿಸುವ ಅಗತ್ಯತೆಯಿದೆ. ಕೇವಲ ಬೌದ್ಧಿಕ ನೆಲೆಯ ಚಿಂತನೆಗಳನ್ನು ರೂಪಿಸುವುದರಿಂದ ಯಾವುದೇ ಪ್ರಯೋಜನವಾಗದು. ರೂಪಿತವಾದ ಚಿಂತನೆಯಿಂದ ಜನ್ಮ ತಳೆಯುವ ಜ್ಞಾನವು ಕ್ರಿಯಾತ್ಮಕವಾಗಿ ತೊಡಗಿಕೊಂಡು ಅದು ಮಹಿಳಾ ಬದುಕಿನಲ್ಲಿ ಸಕಾರಾತ್ಮಕವಾದ ಪರಿಣಾಮವನ್ನು ಪಡೆಯುವಲ್ಲಿ ಸಫಲವಾಗುವ ಅಗತ್ಯತೆಯಿದೆ. ಈ ಬಗೆಯ ಯಶಸ್ಸನ್ನು ಪಡೆಯುವಲ್ಲಿ ಚಿಂತನೆಗಳು ಸಹಕಾರಿಯಾಗದಿದ್ದರೆ, ಎಷ್ಟೇ ಬಗೆಯ ಉತ್ತಮ ಪ್ರಮಾಣದ ಚಿಂತನೆಗಳು ಬೆಳೆದು ಬಂದರೂ ಅವು ಉಪಯುಕ್ತವೆನಿಸುವುದಿಲ್ಲ. ಈ ನಿಟ್ಟಿನಲ್ಲಿ ಸ್ತ್ರೀವಾದಿಗಳು ಬಳಸುವ ವೈಯಕ್ತಿಕತೆಯೇ ನಮ್ಮ ರಾಜಕಾರಣವೆಂಬುದು ಬೌದ್ಧಿಕ ಪ್ರಗತಿಯಷ್ಟೇ ಅಲ್ಲ. ವೈಯಕ್ತಿಕವಾಗಿ ಮಹಿಳಾ ಬದುಕಿನಲ್ಲಿ ಆಗಬೇಕಾದ ಪ್ರಗತಿಯತ್ತದ ನಡೆಯನ್ನು ಆಧರಿಸಿದೆ. ಪ್ರಸ್ತುತ ಅಧ್ಯಯನವು ಸಹ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ಹಿಂಸೆ - ದೌರ್ಜನ್ಯಗಳನ್ನು ನಿವಾರಿಸುವಲ್ಲಿ, ನಿಭಾಯಿಸುವಲ್ಲಿ ಸಹಾಯಕವಾಗಬೇಕೆಂಬ ಉದ್ದೇಶದ ಹಿನ್ನೆಲೆಯಲ್ಲಿಯೇ ರೂಪಿತವಾದುದಾಗಿದೆಯಾದ್ದರಿಂದ, ಸಾರ್ವಜನಿಕ ವಲಯಗಳಲ್ಲಿ ಹಿಂಸೆ - ದೌರ್ಜನ್ಯಕ್ಕೊಳಗಾಗುತ್ತಿರುವ ಮಹಿಳಾ ಸಮುದಾಯವನ್ನು ಸಂದರ್ಶನಕ್ಕೊಳಪಡಿಸುವ ಮೂಲಕ ಸಮಸ್ಯೆಯ ವಾಸ್ತವಿಕತೆಯನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

ವಿಸ್ತೃತವಾದ ಸಾರ್ವಜನಿಕ ವಲಯದಲ್ಲಿ, ಎಲ್ಲಾ ವಲಯಗಳಲ್ಲಿನ ಮಹಿಳಾ ಸಮುದಾಯವನ್ನು ವಿಶ್ಲೇಷಣೆಗೆ ಒಳಪಡಿಸುವುದು ಕಷ್ಟಕರ ಹಾಗೂ ಅಧ್ಯಯನದ ಕಾಲಮಿತಿಯಲ್ಲಿ ಸಮರ್ಪಕವಲ್ಲವೆಂಬುದರ ಹಿನ್ನೆಲೆಯಲ್ಲಿ, ಈ ಬಗೆಯ ದೌರ್ಜನ್ಯ - ಹಿಂಸೆಯ ಆಳವಾದ ಕುರುಹುಗಳನ್ನು ಕಾಣಿಸಿಕೊಳ್ಳುವ ರಾಜಕೀಯ ವಲಯ ಮತ್ತು ಉದ್ಯೋಗ ವಲಯದಲ್ಲಿನ, ಮಹಿಳಾ ಪೋಲಿಸ್ ಪೇದೆಗಳು ಮತ್ತು ಗ್ರಾಮ ಪಂಚಾಯ್ತಿಯ ಅಧ್ಯಕ್ಷ - ಉಪಾಧ್ಯಕ್ಷರನ್ನು ಮಾತ್ರ ಸಂದರ್ಶಿಸಲಾಗಿದೆ. ಇಲ್ಲಿನ ಉನ್ನತ ಹುದ್ದೆಗಳಲ್ಲಿರುವ ಮಹಿಳೆಯನ್ನು ಸಂದರ್ಶಿಸಿರುವುದಾದರೂ ಸಾಂದರ್ಭಿಕ ಚರ್ಚೆಗೆ ಪೂರಕವಾಗಿ ಬಳಸಲಾಗಿದೆ. ಇದೇ ಬಗೆಯ ಮಹಿಳಾ ಸಮುದಾಯವನ್ನು ಆರಿಸಿಕೊಳ್ಳಲು ಸಂಶೋಧನೆಗೆ ತನ್ನದೇ ಆದ ಕಾರಣವಿದೆ. ಉದಾ: ಒಟ್ಟು ಸಮಾಜದ ರಕ್ಷಣೆಗಾಗಿ ರೂಪಿತವಾಗಿರುವ ಮತ್ತು ರಕ್ಷಣಾಂಗದ ಭಾಗವಾಗಿ ಪೋಲಿಸ್ ಇಲಾಖೆಯಲ್ಲಿ ಸ್ವತಃ ಪೋಲಿಸರು ಸುರಕ್ಷಿತರೆ? ಎಂಬ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳಲು ಈ ಸಮುದಾಯವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಲ್ಲಿ ಮಹಿಳಾ ಪೋಲಿಸ್

ಪೇದೆಗಳನ್ನು ವಿಶೇಷವಾಗಿ ಸಂದರ್ಶನಕ್ಕೊಳಪಡಿಸಿದರು ಪೂರಕವಾಗಿ ಅಥವಾ ತುಲನಾತ್ಮಕವಾದ ಚರ್ಚೆಯನ್ನು ಬೆಳೆಸಲು ಕೆಲವು ಪುರುಷ ಪೇದೆಗಳ ಮೇಲಾಗುವ ದೌರ್ಜನ್ಯ - ಹಿಂಸೆಗಳನ್ನು ಗಮನಿಸಲಾಗಿದೆ. ಆದರೆ ಪ್ರಕರಣಗಳನ್ನು ಇಲ್ಲಿ ದಾಖಲಿಸಿಲ್ಲ. ಕೆಲವು ಪ್ರಕರಣಗಳ ಒಳ ವಿವರಗಳಲ್ಲಿ ಇದು ಕಾಣಿಸಿಕೊಳ್ಳಬಹುದಾದರೂ ಮಹಿಳೆಯ ಸಂದರ್ಭದ ಹಿನ್ನೆಲೆಯಲ್ಲಿ ಇದು ಹೇಗೆ ಭಿನ್ನವಾಗಿ ನಿಲ್ಲುತ್ತದೆಯೆಂಬುದನ್ನು ಗ್ರಹಿಸಲಾಗಿದೆ. ಪ್ರಸ್ತುತ ಅಧ್ಯಯನವು ಸ್ತ್ರೀ ಕೇಂದ್ರಿತವಾದುದರಿಂದ ಮಹಿಳಾ ಬದುಕಿನ ಮೇಲೆ ಯಾವ ನೆಲೆಯಲ್ಲಿ ಪರಿಣಾಮಗಳನ್ನು ಬೀರುತ್ತಲಿದೆಯೆಂಬ ಗ್ರಹಿಕೆಯು ಅಗತ್ಯವಾಗಿದೆ.

ಈ ರೀತಿಯ ಧೋರಣೆಗಳು ರಾಜಕೀಯ ವಲಯಕ್ಕೂ ಅನ್ವಯಿಸಲಾಗಿದೆ. ದೇಶದ ಒಟ್ಟು ಏಳ್ಗೆಯೇ ಇದರೊಳಗೆ ಅಡಕವಾಗಿರುವುದರಿಂದ ಹಾಗೂ ರಾಜಕೀಯ ವಲಯದ ಅತ್ಯಂತ ಕೆಳಸ್ತರದಲ್ಲಿರುವ ಪಂಚಾಯ್ತಿಯ ನೆಲೆಯಲ್ಲಿ ಮಾತ್ರ ನೀಡಲಾಗಿರುವ, ಮಹಿಳಾ ಮೀಸಲಾತಿಯ ಸಾಧಕ-ಬಾಧಕಗಳೇನು? ಮಹಿಳಾ ಬದುಕಿಗೆ ಇದರ ಉಪಯುಕ್ತತೆ ಮತ್ತು ನಿರುಪಯುಕ್ತತೆಯ ಬಗೆಯನ್ನು ಪರಿಶೀಲಿಸುವ ಮುಖೇನ, ಅಲ್ಲಾಗುವ ದೌರ್ಜನ್ಯ - ಹಿಂಸೆಯ ಸ್ವರೂಪವನ್ನು ವಾಸ್ತವಕ್ಕೆ ಮುಖಾಮುಖಿಯಾಗಿ ಚರ್ಚೆಗೊಳಪಡಿಸುವ ಉದ್ದೇಶದಿಂದ ಗ್ರಾಮ ಪಂಚಾಯ್ತಿಯಲ್ಲಿನ ಮಹಿಳಾ ಸಮುದಾಯವನ್ನು ಆಧರಿಸಿ ಸುಮಾರು ಪ್ರಕರಣಗಳನ್ನು ಅಧ್ಯಯನ ಮಾಡಲಾಗಿದೆ. ಆದರೆ ಇಲ್ಲಿ ಆಯ್ದ ಒಟ್ಟು ೨೦ ಪ್ರಕರಣಗಳನ್ನು ಅನುಬಂಧದಲ್ಲಿ ದಾಖಲಿಸಲಾಗಿದೆ.

ಈ ಎರಡು ವಲಯಗಳನ್ನು ಆಧರಿಸಿ ಒಟ್ಟು ಸಾರ್ವಜನಿಕ ವಲಯವನ್ನು ಸಮೀಕ್ಷಿಸುವ ಹಿನ್ನೆಲೆಯಲ್ಲಿ ಆಯ್ದ ಪ್ರಕರಣಗಳ ವಿಶ್ಲೇಷಣೆಯನ್ನು ಮಾಡಲಾಗುತ್ತಿದೆ ಹಾಗೂ ಈ ಸಮುದಾಯಗಳನ್ನು ಸಾರ್ವಜನಿಕ ವಲಯದ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ - ಹಿಂಸೆಯ ಪ್ರಾತಿನಿಧಿಕ ಭಾಗವಾಗಿ ನೋಡಲಾಗುತ್ತಿದೆ ಮತ್ತು ಇಲ್ಲಿನ ಪ್ರಕರಣಗಳಲ್ಲಿ ಬಹುತೇಕವಾಗಿ ಎಲ್ಲ ಜಾತಿ, ವಯೋಮಿತಿ, ವಿವಾಹಿತ, ಅವಿವಾಹಿತ, ವಿಧವೆ, ವಿಚ್ಛೇದಿತ, ಅಕ್ಷರಸ್ಥ - ಅನಕ್ಷರಸ್ಥ ಮಹಿಳೆಯರನ್ನು ಒಳಗೊಂಡಿರುವಂತೆ ಆಯ್ಕೆ ಮಾಡಿಕೊಂಡು ದಾಖಲಿಸಲಾಗಿದೆ. ಇಲ್ಲಿ ೧೦ ಗ್ರಾಮ ಪಂಚಾಯ್ತಿ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಮಹಿಳೆಯರ ಮತ್ತು ೯ ಮಹಿಳಾ ಪೋಲಿಸ್ ಪೇದೆಯ ಪ್ರಕರಣಗಳು ಮತ್ತು ೦೧ ಪಿ.ಎಸ್.ಐ.ಯ ಪ್ರಕರಣವನ್ನು ಯಾವುದೇ ಉನ್ನತ ಹಂತದಲ್ಲಿಯೂ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ - ಹಿಂಸೆಯ ಸ್ವರೂಪವನ್ನು ಪರಿಶೀಲಿಸಲು ದಾಖಲಿಸಿ ವಿಶ್ಲೇಷಣೆಗೊಳಪಡಿಸಲಾಗಿದೆ.

**ಆಯ್ದ ಪ್ರಕರಣಗಳ ವಿಶ್ಲೇಷಣೆ**

ಯಾವುದೇ ಒಂದು ಸಂಶೋಧನಾ ಅಧ್ಯಯನದಲ್ಲಿ ಮಾಹಿತಿ ಸಂಗ್ರಹಣೆಯಷ್ಟೇ ಪ್ರಮುಖವಾದ ಘಟ್ಟ, ಸಂಗ್ರಹಿಸಿದ ಮಾಹಿತಿಯ ವಿಶ್ಲೇಷಣೆಯೂ ಆಗಿರುತ್ತದೆ. ಈ ಬಗೆಯ ವಿಶ್ಲೇಷಣೆಯೆ ಅಧ್ಯಯನದ ಅರ್ಥವಾ ಆಯ್ದುಕೊಂಡ ಸಮಸ್ಯೆಯ ತಾತ್ತ್ವಿಕತೆಯನ್ನು ರೂಪಿಸುವಲ್ಲಿ ಉಪಯುಕ್ತವಾಗುತ್ತದೆಯೆನ್ನಬಹುದು.

ಸುಮಾರು ಅರವತ್ತರ ದಶಕದಿಂದಲೂ ಈ ವರೆಗೂ ಮಹಿಳಾ ಸಮಸ್ಯೆಗಳನ್ನು ಗಂಭೀರವಾದ ಚರ್ಚೆಗೊಳಡಿಸಿದಾಗ, ಅದರ ಮೂಲ ನೆಲೆಯು ಪುರುಷ ಪ್ರಧಾನತೆಯೇ ಆಗಿದೆ ಎಂಬುದನ್ನು ವಿವಿಧ ಸ್ತ್ರೀವಾದಗಳು ಭಿನ್ನವಾದ ಆಯಾಮಗಳ ಮೂಲಕ ಪ್ರತಿಪಾದಿಸಿವೆ. ಹಾಗೂ ಅವುಗಳ ನಿವಾರಣೆಗೆ ಪರಿಹಾರಗಳನ್ನು ಸಹ ರೂಪಿಸುತ್ತಲೇ ಬಂದಿವೆ. ಈ ಬಗೆಯ ಪ್ರಯತ್ನಗಳಿಂದ ಮಹಿಳಾ ಬದುಕು ಮೊದಲಿಗಿಂತಲೂ ಈಗಿನ ಹಂತದಲ್ಲಿ ಕೆಲವು ಬದಲಾವಣೆಗಳನ್ನು ಕಾಣುವುದು ಒಪ್ಪಿತವಾದರೂ, ಇದರ ಪ್ರಮಾಣದಲ್ಲೋ ಬದಲಾಗುತ್ತಿರುವ ಆಧುನಿಕ ಪಿತೃಸಂಸ್ಕೃತಿಯ ರೂಪವು ಅಷ್ಟೇ ವೇಗವಾಗಿ, ಗಟ್ಟಿಯಾಗಿ ತನ್ನ ಸ್ಥಾನವನ್ನು ಅಲುಗಾಡದಂತೆ ಭದ್ರಪಡಿಸಿಕೊಳ್ಳುತ್ತದೆ ಎನ್ನುವುದಕ್ಕೆ ಸಾರ್ವಜನಿಕ ವಲಯದಲ್ಲಿ ಮಹಿಳೆಯರ ವಿರುದ್ಧ ನಡೆಯುವ ವಿಕೃತ ಬಗೆಯ ದೌರ್ಜನ್ಯ - ಹಿಂಸೆಗಳಲ್ಲಿ ಕಾಣಬಹುದಾಗಿದೆ.

ಉದಾ:- ತಂತ್ರಜ್ಞಾನ - ವಿಜ್ಞಾನದ ನವೀನ ಬಗೆಯ ಶೋಧಗಳು ಹೊಸ ತಾಯ್ತನದ ವ್ಯಾಖ್ಯಾನಗಳನ್ನು ಹುಟ್ಟು ಹಾಕುತ್ತಿದೆ. ಒಂದೆಡೆ ಪುರಾತನ ಕಾಲದಿಂದ ಬೇರೂರಿಸಲಾಗಿರುವ, ಹೆಣ್ಣಿನ ಹೊಣೆ ಮಾತ್ರವೆಂದು ಪ್ರತಿಬಂಬಿತವಾದಂತಹ ಶೀಲ, ಪಾತಿವ್ರತ್ಯದಂತಹ ಸಂಗತಿಗಳು ಇಂದು ಬಾಡಿಗೆ ತಾಯಿ, ಪ್ರನಾಳ ಶಿಶುಗಳ ಮೂಲಕ ನಶಿಸಿಹೋಗುತ್ತಿದೆಯೇ ಹಾಗೂ ಬಂಜೆತನದಂತಹ ಸಮಸ್ಯೆಗಳಿಗೆ, ಅಪವಾದಗಳಿಗೆ ಗುರಿಯಾಗುತ್ತಿರುವುದನ್ನು ತಪ್ಪಿಸಲಾಗುತ್ತಿದೆಯೇ ಎಂದು ಸಂಭ್ರಮ ಪಡುವುದರ ಜೊತೆಗೆ ಅಷ್ಟೇ ವೇಗವಾಗಿ ಇವುಗಳು ಒಂದು ಉದ್ಯಮವಾಗಿ, ಬೃಹತ್ ಪ್ರಮಾಣದಲ್ಲಿ ಬೆಳೆಯುವ ಮೂಲಕ ಮಹಿಳೆಯರ ದೇಹವನ್ನು ಸರಕಾಗಿ, ಅವಳ ಗರ್ಭಾಶಯವನ್ನು ಪ್ರಯೋಗಾಲಯವಾಗಿ ಬಳಸಿಕೊಳ್ಳುತ್ತಿವೆ. ಅಲ್ಲದೆ ಸಾರ್ವಜನಿಕ ವಲಯದಲ್ಲಿನ ಒಂದು ಉದ್ಯೋಗವೆಂಬಂತೆ ಬಳಸುವ ಪರಿಯೊಂದಿಗೆ ಅದೇ ಮಾದರಿಯ (ಪುರಾತನ) ಆದರ್ಶ ನಾರಿಯರ ಮತ್ತು ವೇಶ್ಯೆಯರ ಮಾದರಿಗಳನ್ನು ಬಾಡಿಗೆ ತಾಯಿಯಂತಹ ಮಾದರಿಗಳ ಮೂಲಕ ಹೊಸ ರೂಪದಲ್ಲಿ ಪುರುಷ ಪ್ರಧಾನತೆಯನ್ನು ಸ್ಥಿರೀಕರಿಸುವಲ್ಲಿ 'ಆಧುನಿಕ ಪಿತೃಪ್ರಧಾನತೆಯ ಸ್ವರೂಪ'ವನ್ನು ಕಾಣಬಹುದಾಗಿದೆಯಲ್ಲದೆ, 'ಇಂದಿನ ಬಾಡಿಗೆ ತಾಯಿಯು ಅಂದಿನ ಮಾಧವಿಯ ಪ್ರತಿರೂಪ' ಅಥವಾ ಅಂದಿನ ಮಾಧವಿ ಇಂದಿನ ಬಾಡಿಗೆ ತಾಯಿಯ ಪ್ರತಿರೂಪವೆಂದೇ ಹೇಳಬಹುದು. ಮಾಧವಿಯ ಸಂದರ್ಭದಲ್ಲಿ ಅವಳ ಸೌಂದರ್ಯ ಮತ್ತು ಯೌವ್ವನದ ಕಾರಣಕ್ಕೆ ಮಹಾರಾಜನ ಮಗಳಾದರು, ಗಾಲವನ ಗುರುಕಾಣಿಕೆಗೆ ಬಲಿಯಾಗುತ್ತಾಳೆ. ಆದರೆ ಇಂದಿನ ಬಾಡಿಗೆ ತಾಯಿ ಬಡತನದ ಕಾರಣಕ್ಕಾಗಿಯೋ ಅಥವಾ ಕೌಟುಂಬಿಕ ಸಮಸ್ಯೆಗಳ ನಿವಾರಣೆಗಾಗಿಯೋ ಬಲಿಯಾಗುತ್ತಿದ್ದಾಳೆ. ಎರಡು ಸಂದರ್ಭಗಳಲ್ಲಿಯೂ ಮಹಿಳೆಯು ಪುರುಷ ಸರಕಾಗಿ ಬಳಕೆಯಾಗುತ್ತಿರುವುದು ಹಾಗೂ ಗಂಡು ಸಂತಾನವನ್ನೇ ಹೆತ್ತುಕೊಡುವಂತಹ ಸಾದೃಶ್ಯಗಳನ್ನು ಕಾಣಬಹುದು. ಇನ್ನೊಂದು ಆಯಾಮದಲ್ಲಿ ಇದು ಮಿಥ್ ಮತ್ತು ವಾಸ್ತವದ ಘರ್ಷಣೆಯಾಗಿಯೂ ಕಾಣಿಸಿಕೊಳ್ಳುತ್ತಿದೆ. ಮಾಧವಿ ಪೌರಾಣಿಕ ಕಾಲದ ಹಿಂಸೆ - ದೌರ್ಜನ್ಯದ ಪ್ರತೀಕವಾದರೆ, ಬಾಡಿಗೆ ತಾಯಿ ಆಧುನಿಕ ಕಾಲದ ಹಿಂಸೆ - ದೌರ್ಜನ್ಯದ ವಾಸ್ತವದ ಪ್ರತೀಕವಾಗಿ ನಿಲ್ಲುತ್ತಾಳೆ. ಇಲ್ಲಿ ಕೌಟುಂಬಿಕ

ವಲಯದ ವಿಸ್ತೃತ ರೂಪ ಸಾರ್ವಜನಿಕ ವಲಯಗಳಲ್ಲಿನ ಹಿಂಸೆ - ದೌರ್ಜನ್ಯದಲ್ಲಿಯೂ ಕಾಣಬಹುದಲ್ಲದೆ, ಯಾಜಮಾನ್ಯತೆ ಮತ್ತು ಅಧೀನ ನೆಲೆಯ ಸ್ಥಿರೀಕರಣ ಲಕ್ಷಣಗಳು ಕಾಣಿಸಿಕೊಳ್ಳುತ್ತಿವೆ.

ಸಮಾಜ ವ್ಯವಸ್ಥೆಯ ಹಿತಕ್ಕೆ ಧಕ್ಕೆ ತರುವಂತಹ ಹಿಂಸೆ - ದೌರ್ಜನ್ಯಗಳು ಸ್ತ್ರೀ-ಪುರುಷರಿರ್ವರು ಎಸಗುತ್ತಾರಾದರೂ, ಎಸಗುವ ಸಂದರ್ಭಗಳು, ಪರಿಣಾಮಗಳು ಭಿನ್ನವಾಗಿ ರೂಪು ತಳೆಯುತ್ತವೆ. ಅಸಹಾಯಕತೆಯ ಪ್ರತೀಕವಾಗಿ, ಅಧಿಕಾರದ ಸಹಚರಿಯಾಗಿ ಸಾಗುವ ಹಿಂಸೆ - ದೌರ್ಜನ್ಯಗಳು ಮಹಿಳಾ ನೆಲೆಯಲ್ಲಿ ಅಸಹಾಯಕತೆಯನ್ನು ಕೇಂದ್ರೀಕರಿಸಿ ವ್ಯಾಖ್ಯಾನಿಸಲಾಗುತ್ತದೆ. ಪುರುಷ ಸಮುದಾಯದ ಅಸಹಾಯಕತೆಯನ್ನು ಮರೆಮಾಚಿ ಅಧಿಕಾರವಾಗಿ ಪ್ರತಿನಿಧಿತವಾಗುವ ವಿಪರ್ಯಾಸವನ್ನು ವ್ಯವಸ್ಥೆಯಲ್ಲಿ ಕಾಣಬಹುದೆಂಬುದನ್ನು ಸ್ತ್ರೀಕೇಂದ್ರಿತ ಚಿಂತನೆಯಲ್ಲಿ ಸ್ತ್ರೀವಾದಿ ಸಂಶೋಧನಾ ವೈಧಾನಿಕತೆಯನ್ನು ಅಳವಡಿಸಿಕೊಳ್ಳುವ ಮೂಲಕ ಸ್ಪಷ್ಟಪಡಿಸಬಹುದಾಗಿದೆ.

ಸಾಮಾಜಿಕತೆಯೊಂದಿಗೆ ಹೆಣೆದುಕೊಂಡಿರುವ ಮಹಿಳಾ ಬದುಕನ್ನು ಪುರುಷ ಚಿಂತನೆಯು ಶರಣಾಗತಿ, ಹೊಂದಾಣಿಕೆಯ ನೆಲೆಯನ್ನೆ ನಿರೀಕ್ಷಿಸುತ್ತದೆ. ಇವೆರಡು ಗುಣಗಳನ್ನು ಮೈಗೂಡಿಸಿಕೊಂಡಾಗಲೂ ಹಾಗೂ ಇದನ್ನು ಮೀರಿ ಪ್ರತಿರೋಧವನ್ನು ಒಡ್ಡಿದಾಗಲೂ ಸಹ ಹಿಂಸೆ - ದೌರ್ಜನ್ಯಗಳಿಗೆ ಒಳಗಾಗುತ್ತಾಳೆಂಬ ನಿದರ್ಶನಗಳು ಈ ಪ್ರಕರಣಗಳಲ್ಲಿ ಕಾಣಬಹುದಾಗಿದೆ.

ಎರಡು ವಲಯಗಳಿಂದ ದಾಖಲಿಸಲಾಗಿರುವ ಪ್ರಕರಣಗಳ ಜಾತಿ, ಶಿಕ್ಷಣ, ವಯಸ್ಸು ಮೊದಲಾದ ಕೆಲವು ಸೂಚಿಗಳನ್ನು ಬಳಸಿ ವಿಶೇಷ ವಿಶ್ಲೇಷಣೆಗೊಳಪಡಿಸಲಾಗುತ್ತಿದೆ ಹಾಗೂ ಪ್ರಕರಣಗಳ ಆಯ್ಕೆಗಳಲ್ಲಿ ನಾಲ್ಕು ಪ್ರಮುಖ ಗುಂಪುಗಳಾಗಿ ವಿಭಾಗಿಸಿಕೊಳ್ಳಲಾಗಿದ್ದು, ಅವುಗಳನ್ನು ಅದೇ ಹಿನ್ನೆಲೆಯನ್ನಾಧರಿಸಿ ದಾಖಲಿಸಲಾಗಿದೆ. ಒಟ್ಟು ಇಪ್ಪತ್ತು ಪ್ರಕರಣಗಳನ್ನು ವಿಭಾಗೀಕರಣವು ಈ ಕೆಳಗಿನ ೪ ಗುಂಪುಗಳನ್ನು ಆಧರಿಸಿ ವಿಶ್ಲೇಣೆಗೊಳಪಡಿಸಲಾಗುತ್ತಿದೆ.

- ಲೈಂಗಿಕ ದೌರ್ಜನ್ಯ

ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ಹಿಂಸೆ - ದೌರ್ಜನ್ಯಗಳು, ಕೇವಲ ಲೈಂಗಿಕ ದೌರ್ಜನ್ಯಗಳು ಎಂಬ ಗ್ರಹಿಕೆಯಿದೆ. ಈ ಬಗೆಯ ಗ್ರಹಿಕೆಯನ್ನಾಧರಿಸಿ ಕಾಯಿದೆ-ಕಾನೂನುಗಳು ಸಹ ಜಾರಿಯಾಗಿವೆ. ಲೈಂಗಿಕ ದೌರ್ಜನ್ಯವು ಎಲ್ಲ ಮಹಿಳೆಯರ ಮೇಲೆ ಆಗುತ್ತದೆಯೆಂಬುದು ಅತಿರೇಕದ ಅಂಶವಾಗುತ್ತದೆ. ಆದರೆ ಲೈಂಗಿಕ ದೌರ್ಜನ್ಯದಾಚೆಗೆ ನಿಲ್ಲುವ ಇತರೆ ಬಗೆಯ ದೌರ್ಜನ್ಯಗಳು, ದೌರ್ಜನ್ಯ - ಹಿಂಸೆಯ ವ್ಯಾಖ್ಯಾನದೊಳಗೆ ಬಾರದಿರುವಂತಹ ಹಲವು ಆಯಾಮಗಳು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಇಂತಹ ತಾತ್ತ್ವಿಕತೆಯನ್ನು ಆಧರಿಸಿ ಕ್ಷೇತ್ರಕಾರ್ಯದ ಅಗತ್ಯತೆಯನ್ನು ಮನಗಂಡು ಲೈಂಗಿಕ ದೌರ್ಜನ್ಯಗಳು ಯಾವುವೆಂಬುದು ಗುರುತಿಸುವ ಮೂಲಕ, ಯಾವ ಸಮುದಾಯದ ಮಹಿಳೆಯರ ಮೇಲೆ ಈ ಆಕ್ರಮಣಗಳು ಜರುಗುತ್ತಿವೆಯೆಂಬ ಸಂಗತಿಯನ್ನು ಶೋಧಿಸುವ ನೆಲೆಯಲ್ಲಿ, ಸಮಸ್ತ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ

ದೌರ್ಜನ್ಯವನ್ನು ಪ್ರತಿನಿಧಿಸುವ ಎರಡು ವಲಯಗಳ ಆಯ್ಕೆಯನ್ನಾಧರಿಸಿ ದಾಖಲಿಸುವ ಪ್ರಕರಣಗಳಲ್ಲಿ ಈ ಗುಂಪನ್ನು ವಿಶೇಷವಾಗಿ ಪರಿಗಣಿಸಲಾಗಿದೆ.

ಮಹಿಳೆಯ ಯಾವುದೇ ಸಮಸ್ಯೆಯ ಮೂಲವು ಲೈಂಗಿಕತೆಯನ್ನಾಧರಿಸಿಯೇ ಸೃಷ್ಟಿಯಾಗುವುದು ಎಲ್ಲ ಆಯಾಮಗಳಲ್ಲಿಯೂ ಕಂಡು ಬರುತ್ತದೆಯಾದ್ದರಿಂದ, ಸಾರ್ವಜನಿಕ ವಲಯವೂ ಸಹ ಇದಕ್ಕೆ ಹೊರತಾಗಿಲ್ಲವೆಂಬುದಕ್ಕೆ ಉದ್ಯೋಗ ವಲಯದಲ್ಲಿನ ಮಹಿಳಾ ಪೋಲಿಸ್ ಪೇದೆಗಳ ಮೇಲಾಗುವ ಮತ್ತು ರಾಜಕೀಯ ವಲಯದ ಗ್ರಾಮಪಂಚಾಯ್ತಿ ಅಧ್ಯಕ್ಷ - ಉಪಾಧ್ಯಕ್ಷರ ಮೇಲಾಗುತ್ತಿರುವ ಪರಿಣಾಮಗಳಲ್ಲಿ ಕಾಣಬಹುದಾಗಿದೆ. ಈ ಎರಡು ವಲಯಗಳಲ್ಲಿ ಲೈಂಗಿಕತೆಯನ್ನಾಧರಿಸಿಯೇ ನಡೆದ ದೌರ್ಜನ್ಯಗಳು ಉದಾ:- ಅತ್ಯಾಚಾರ, ಚುಡಾಯಿಸುವಿಕೆ ಇತ್ಯಾದಿಯನ್ನು ಒಳಗೊಂಡಿದೆ. ಸಾಧಾರಣವಾಗಿ ಸಾರ್ವಜನಿಕ ವಲಯಗಳಲ್ಲಿ ಪ್ರವೇಶಿಸಿದ ಎಲ್ಲ ಮಹಿಳೆಯರ ಮೇಲೆ ಅತ್ಯಾಚಾರಗಳಾಗುವುದಿಲ್ಲವೇ ವಿನಹ ಅವರುಗಳ ಮೇಲೆ ದೌರ್ಜನ್ಯ - ಹಿಂಸೆಯಾಗುತ್ತದೆಯೆಂಬುದು ನಿರ್ವಿವಾದದ ಅಂಶವಾಗಿದೆ.

ಈ ಗುಂಪಿಗೆ ಸೇರಿಸಿಕೊಳ್ಳಲಾದ ಒಟ್ಟು ಐದು ಪ್ರಕರಣಗಳು. ಲೈಂಗಿಕ ದೌರ್ಜನ್ಯದ ವಿವಿಧ ಆಯಾಮಗಳನ್ನು ಬಿಂಬಿಸುವ, ಪ್ರತಿಯೊಂದು ಪ್ರಕರಣವು ಭಿನ್ನವಾಗಿ ನಿಲ್ಲುವುದಾದರೂ ದೌರ್ಜನ್ಯ-ಹಿಂಸೆ ಮೂಲ ಧ್ಯೇಯ - ಉದ್ದೇಶ ಒಂದೇ ಆಗಿರುವುದು ಗುರುತಿಸಬಹುದಾಗಿದೆ. ತನ್ನ ಮೇಲೆ ತನಗಾಗುವ ಅವಹೇಳನವನ್ನು ಸಹಿಸದೆ, ಪ್ರತಿಭಟನೆಯನ್ನು ತೋರಿಸಿದ್ದಕ್ಕಾಗಿಯೇ ದೌರ್ಜನ್ಯಕ್ಕೆ ಒಳಗಾಗುವ ಸಂಗತಿಯನ್ನು, ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಗೆ ರೂಪಿಸಲಾದ ಸೌಂದರ್ಯದ ಪರಿಕಲ್ಪನೆಯಾಚೆಗೆ ನಿಲ್ಲುವ ಪ್ರಕರಣ ೨ರ ಕಮಲಮ್ಮ, ಪ್ರಕರಣ ೩ರ ಮೂರರ ಪರಿಣಿತರ ಮೆಲಾಗಿರುವ ದೌರ್ಜನ್ಯ - ಹಿಂಸೆಗಳು, ಕುರೂಪಿಯಾದ ಕಾರಣಕ್ಕಾಗಿಯೇ ಅವರ ಲೈಂಗಿಕತೆಯ ಮೇಲೆ ದಾಳಿಯಾಗಿರುವ ಭಿನ್ನ ಸ್ವರೂಪಗಳನ್ನು ವಿವರಿಸುತ್ತವೆ. "ನಾನು ಸುಂದರವಾಗಿಲ್ಲಂತೆ ಅದೇ ಯೋಚನೆಲ್ಲಿ ನಮ್ಮಪ್ಪ ಸತ್ತರು, ನಾನು ಕೆಲಸಕ್ಕೆ ಸೇರಿದಲ್ಲಿನೂ ಇಡೀ ಕರ್ನಾಟಕದ ಪೋಲಿಸ್ ಇಲಾಖೆಯಲ್ಲಿಯೇ ನನ್ನಂತ ಸುಂದರಿ ಇಲ್ಲಂತ ಅನ್ನೋದು, ನಾನು ಪಿಎಸ್ಐ ಚೆಂಬರ್‌ಗೆ ಹೋದರೆ ನನ್ನ ಕುರೂಪವು ಅವರ ಪ್ರಮೋಶನ್‌ಗೆ ಅಡ್ಡಿಯಾಗುತ್ತೆ" ಅಂತ ಹೇಳುವ ಕಮಲಮ್ಮ (ಪ್ರಕರಣ:೨, ಪು.ಸಂ.೧೯೭).

"ನಿನ್ನ ಮುಖಕ್ಕೆ ಯಾ ಗಂಡನು ಮದ್ವಿ ಆಗಲ್ಲ, ಎಮ್ಮಿ ಇದ್ದಂಗ ಇದಿ ನಿಮ್ಮಪ್ಪ ದುಡ್ಡಿಗಿ ಸಾಯ್ತಾನ, ನಿನ್ನ ಮದ್ವಿ ಆದಾಗೆ. ಯಾಕ ವಯಸ್ಸು ಹಾಳು ಮಾಡ್ಕೊತಿ, ನನ್ನಂಥವನಿಗೆ ಸೆಟ್ಟ ಮಾಡಕೊಂಡ್ರ ಆಯ್ತು" ಅಂತ ಹೇಳುವ ಪರಿಣಿತಳ ಅನುಭವ (ಪ್ರಕರಣ:೩, ಪು.ಸಂ.೨೦೧ ). ಮದವಿ ವಿಷಯ ಹೇಳಿ ದಿನಾ ಮಾಡುವಂಗ ಮನಿಕೆಲಸ ಮುಗಿಸಿಕೊಟ್ಟು ಹೇಳಿ ಬರಾಕ ಹೋದೆ, ಇದ್ದಕ್ಕಿದ್ದಂತೆ ಹೊರಗಿನ ಕದ ಯಾರೋ ಹಾಕಿದ್ರು, ಮೈಯೆಲ್ಲಾ ತಣ್ಣಗಾಗಿ, ಎದೆ ಹೊಡಕೊತಿತ್ತು, ಹೋಗಿ ಕಾಲಿಗೆ ಬಿದ್ದೆ. ನಾ ನಿಮ್ಮ ತಂಗಿ ಸಮ ಸಾಯಬ್ರೆ ನನಗೇನು ಮಾಡಬೇಡ್ರಿ. ಮದ್ವಿ ಮಾಡಿ ಕಳಸ್ರಿ ಕೆಲಸಾನುಬಿಡ್ತಿನಿ. ನಿಮ್ಮನಿ ಕೆಲಸಷ್ಟೇ ಮಾಡಿ ಕುಡತಿನಿ ಅಂದೆ ಕೇಳಲಿಲ್ಲ. ಒತ್ತಿ ಹಿಡಿದು ಬಿಡಲಿಲ್ಲ. ನನ್ನ ತಂಗಿಯಾಗಿ

ನನ್ನಲಿಂದ ದೂರ ಹೋಗಬೇಡ ನಾನಗ ಇಟಕೊತಿನಿ. ಎರಡು ಕೆಲಸ ಆರಾಮಗಿ ಮಾಡು ಹೆಚ್ಚಗಿ ಡ್ಯೂಟಿಹಾಕಲ್ಲ. ಪ್ರಮೋಶನ್, ಟ್ರಾನ್ಸ್‌ಪರ್ ಏನು ಬೇಡಾ. ನಾ ಇಲ್ಲಿ ಇರಾತನಕಾ ಕೆಲಸಾ ಮಾಡು. ಆಮೇಲೆ ನಾಹೋದ ಕಡಿ ಕರಕೊಂಡ ಹೋಗ್ತಿನಿ.... (ಪ್ರಕರಣ:೦೮, ಪು.ಸಂ.೨೧೬). "ಈಗ ಮೀಶ್ಯಾ ನಾಯ್ಯಾಗ ಹೊಲಸ್ಯಾರ, ಅಂವ ನನ ಗಂಡಿದ್ದಾಗಿಂದ ಇಟಗೊಂಡನಾಂತ ಊರ ಜನಾ ಮಾತಾಡ್ತಾರ. ಅವನ ಹೆಂಡ್ತಿನೂ ಇದು ನಂಬ್ಯಾಳ. ಅಂವ ನಮ್ಮಣ್ಣನ ಸರಿ ಹಾನ. ನನಗಂಡನ ಖಾಸಾ ದೊಸ್ತ ಅದಕ ಅಂವ ಸತ್ತಮ್ಯಾಲ್ ಮನಿದೆಲ್ಲಾ ಮಗ ದೊಡ್ಡವಾಗತನ ಅವನೇ ಮಾಡ್ಯಾನ. ನನ ಆಸರ ಆಗಲೆಂದ ಇಲೆಷನ್ ನಿಲ್ಲಿಸಿ ಗೆದಸ್ಯಾನ ಊರಾನ ಮಂದಿಗಿ ತ್ಯಾಡೆ ನಾ ಎನಂತ ಗೊತ್ತಾದ" (ಪ್ರಕರಣ:೧೧, ಪು.ಸಂ. ೨೨೬).

"ನಾ ಕೆಲಸಾ ಮಾಡಕ ಗೌಡರ ಗದ್ದಿಗಿ ದಿನಾ ಹೋಗಂಗ ಹೋದೆ, ಅಲ್ಲೆದಕ ಹೆಬ್ಬಟ್ಟು ಹಾಕಂದ್ರ ರೀ ನನಗಂಡಗ ಕೇಳಿ ಹಾಕ್ತಿನಂದೆ. ಅಂದ್ರನೂ ಕೇಳಲಿಲ್ಲ ಹಾಕಂದ್ರು, ಇಲ್ಲಂತ ಹಟಕ ಬಿದ್ದ ಹಾಕಲ್ಲಂದ್ರ. ಸಂಜೆ ಆರೈತು, ಏಳೈತು ಬಿಡಲಿಲ್ಲ ಅಲ್ಲೆ ತ್ಯಾಟದ ಮನೆಗಾ ಕೂಡಿ ಹಾಕದ್ರು. ನನಗಂಡ ಬಂದ ಕೇಳಿದ್ರೆ ಪಂಚೆತಿ ಕೆಲಸಕ ಪ್ಯಾಟಗಿ ಹೋಗಿನಂತ್ಹೇಳಿದ್ರು. ಎದರಾಡ್ತಿನೆಂತ ಎರಡೇಟು ಹೊಡೆದ್ರು ಗೌಡ್ರು ನನ್‌ಮ್ಯಾಲ್ ಬಿದ್ದ ನಂದೆಲ್ಲಾನ ಕಿತಗಂಡ್ರು, ಇನ್ ಮ್ಯಾಲ ಎಲ್ಲಾ ಕಾಗದಕ ನೀನೆ ಮನ್ಯಾಗ ಕುತು ಹೆಬ್ಬಟ್ಟಾಕಿ ಕಳಸ್ತಿದಿ ನೋಡ" (ಪ್ರಕರಣ ೧೫, ಪು.ಸಂ. ೨೩೬).

ಈ ಪ್ರಕರಣಗಳು ವಿವರಗಳಲ್ಲಿ ಭಿನ್ನತೆಯನ್ನು ಹೊಂದಿರುವುದಾದರೂ ಸಹಿತ, ಮಹಿಳೆಯ ಮೇಲಿನ ಲೈಂಗಿಕ ಆಕ್ರಮಣವೇ ಇಲ್ಲಿಯ ಉದ್ದೇಶವಾಗಿದೆಯೆಂಬುದನ್ನು ಕಾಣಬಹುದು. ಮೂರನೆಯ ಪ್ರಕರಣವು ಸಾರ್ವಜನಿಕ ವಲಯದ ಮಹಿಳೆಯ ಪ್ರವೇಶದ ಅನಿವಾರ್ಯತೆಯು ಕೌಟುಂಬಿಕ ಮೂಲದಿಂದ ಸೃಷ್ಟಿಯಾದುದು, ವಿವಾಹವೇ ಅವಳ ಬದುಕಿನ ಆತ್ಯಂತಿಕ ಸಂಗತಿಯಾಗಿ ನಿಲ್ಲುವಲ್ಲಿ ಅವಳಿಗೆ ಉದ್ಯೋಗದ ಅವಶ್ಯಕತೆಯನ್ನು ವಿವರಿಸುತ್ತದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಕಟ್ಟಲ್ಪಟ್ಟ ಸೌಂದರ್ಯದ ಪರಿಕಲ್ಪನೆಯ ಆಚೆಗೆ ನಿಲ್ಲುವ ಮಹಿಳೆಯ ಸಾಲಿನಲ್ಲಿ ಸೇರಿಸುವುದರಿಂದ, ಅವಳ ಕುರೂಪವನ್ನು ಹಿಯ್ಯಾಳಿಸುತ್ತಲೇ ಲೈಂಗಿಕ ತೃಷೆಯನ್ನು ತೀರಿಸಿಕೊಳ್ಳುವ ತಂತ್ರಗಾರಿಕೆಯಲ್ಲಿ, ವೈಭವೀಕರಣ - ನಿರಾಕರಣೆಯೊಂದಿಗೆ ಅವಳ ಮೇಲಾಗಿರುವ ಆಕ್ರಮಣವನ್ನು ಪ್ರಕರಣ ಎರಡು ವಿವರಿಸುತ್ತದೆ.

ಉಳಿದ ಪ್ರಕರಣಗಳಲ್ಲಿನ ಆಕ್ರಮಣಗಳು, ವಿಧವೇ, ವಿವಾಹಿತ, ಅವಿವಾಹಿತರಾದ ಹಾಗೂ ಮಹಿಳೆಯರ ಮೇಲಾಗಿರುವ ಲೈಂಗಿಕ ದೌರ್ಜನ್ಯಕ್ಕೆ ಜಾತಿ - ಅನಕ್ಷರತೆಯು ಪೂರಕವಾಗಿ ನಿಲ್ಲುವುದರೊಂದಿಗೆ ಈ ಪ್ರಕರಣಗಳ ಒಟ್ಟು ಸಾರಾಂಶವು ಮಹಿಳೆಯರು ಯಾವುದೇ ಹಂತದಲ್ಲಿಯೂ ಒಂದಲ್ಲಾ ಒಂದು ಬಗೆಯ ಹಿಂಸೆ - ದೌರ್ಜನ್ಯಗಳಿಗೆ ಒಳಗಾಗುತ್ತಿದ್ದಾರೆಂಬ ತೀರ್ಮಾನಕ್ಕೆ ಬರಲು, ಅಧ್ಯಯನದ ತಾತ್ವಿಕ ಚಿಂತನೆಗೆ ಕ್ಷೇತ್ರಕಾರ್ಯದಿಂದ ಲಭ್ಯವಾದ ಮಾಹಿತಿಯು ಆಧಾರವಾಗಿ ನಿಲ್ಲುತ್ತದೆ.

ಈ ಐದು ಪ್ರಕರಣದ ಸಂಭಾಷಣೆಗಳೂ ಸಹ ಮಹಿಳೆಯರ ಮೇಲಾಗುವ ಲೈಂಗಿಕ ದೌರ್ಜನ್ಯ ಭಿನ್ನತೆಗಳು ವಿವರಿಸುವುದರೊಂದಿಗೆ ಒಟ್ಟು ದೌರ್ಜನ್ಯ ಹಿಂಸೆಯ ಸ್ವರೂಪವನ್ನು ಸ್ಪಷ್ಟಪಡಿಸುತ್ತದೆ.

- **ಆರ್ಥಿಕ ದೌರ್ಜನ್ಯ**

ಮಹಿಳೆಯ ಆರ್ಥಿಕ ಸ್ವಾವಲಂಬನೆಯಿಂದಷ್ಟೇ ಅವಳ ಸಮಸ್ಯೆಗಳ ನಿರ್ವಾರಣೆಯಾಗುತ್ತವೆಯೆಂಬುದು ಸಾಧ್ಯವಿಲ್ಲವೆಂಬುದಕ್ಕೆ ಹಲವು ಅಂಶಗಳು ಆಧಾರವಾಗಿ ನಿಲ್ಲುತ್ತವೆ. ಪಿತೃ ಸಂಸ್ಕೃತಿಯ ಬದಲಾಗುತ್ತಿರುವ ರೂಪಗಳಲ್ಲಿ ಮಹಿಳಾ ಅಧೀನತೆಯ ಸ್ವರೂಪವನ್ನು ಬದಲಾದ ರೀತಿಯಲ್ಲಿ ಸೃಷ್ಟಿಸುತ್ತಲೇ ಸಾಗುತ್ತಿದೆ. ಹಾಗಾಗಿ ಆರ್ಥಿಕವಾಗಿ ಸಬಲವಾಗಿರುವಾಗಲೂ - ದುರ್ಬಲವಾಗಿರುವಾಗಲೂ ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯಗಳನ್ನು ಇಲ್ಲಿ ದಾಖಲಿಸಲಾದ ಕೆಲವು ಪ್ರಕರಣಗಳಲ್ಲಿ ಗುರುತಿಸಬಹುದು.

'ನನ್ ಆಸರಾಕಂತ್ಹೇಳಿ ಡ್ಯೂಟಿ ಕೊಡ್ಸಿ, ನಮ್ಮಣ್ಣ ತಂದ ಅನುಕೂಲ ಮಾಡಕೊಂಡಾರ ಸಂಬಳದ ಐದ್ ಪೈಸೆ ತೊರಸಲ್ಲಾ. ಎಲ್ಲಾ ಅಕೌಂಟಗಿ ಬಂದಿದ್ದು, ATM ಲಿಂದ ತೆಗಿತಾನ, ಆರಾಮಿಲ್ಲಂದ್ರನೂ ನೋಡಲ್ಲ. ಮನ್ಯಾಗೂ ಸುಖಾಯಿಲ್ಲ. ಕೆಲಸದಾಗನೂ ಸುಖಾಯಿಲ್ಲ. ನಮ್ ಸ್ಟೇಶನ್‌ದಾಗ ಹೆಚ್.ಸಿ. ಆಡಾದಕ ಸಾಕಾಗ್ಯದ, ಹರ‍್ಯಾದ ವಯಸ್ಸ ಯಾಕ್ ಹಾಳ ಮಾಡ್ಕೊತಿದಿ. ಇನ್ನೊಂದ ಮದವಿ ಮಾಡಕೋ ಆಗಲ್ಲಂದ್ರ, ಇಷ್ಟ ದುಡಿತಿದಿ ಯಾರಿಗಾನ, ನನ್ನಂತವರಿಗೆ ನೇಮಕ ಮಾಡಕೋ ಏನಾಗಲಾರದಂಗ ನೋಡಿಕೊಡಿನಿ (ಪ್ರಕರಣ:೫, ಪು.ಸಂ.೨೦೮).

"ಮೊದಲಿನಿಂದನು ದುಡಿದೆದ್ದಲ್ಲ ನನ ಗಂಡನ ಕೈದಾಗ ಕೋಡೋದು, ಖರ್ಚಿಗಿ ಅವರು ಕೊಟ್ಟಷ್ಟು ಇಟಕೊದು, ಅವರಿಗಿ ಅನಿಸಿದ್ರ ತರ‍್ತಾರ. ಇಲ್ಲಂದ್ರ ಯಾವನಿಗಿಟಕೊಂಡು ಮೆರಿಬೆಕಾಗ್ಯಾದಂತರ ಅದಕೇನು ಕೇಳಂಗಿಲ್ಲ. ಒಮ್ಮಿ ಹಿಂಗೆ ಸಮಸ್ಯೆ ಆಗಿತ್ತು. ಒಂದು ಹುಡುಗರ ಗುಂಪು ಬೆನ್ನು ಹತ್ತಿತ್ತು. ರಾತ್ರಿ ಹತ್ತಾಗಿತ್ತು, ಇವರು ಊರಾಗಿರಲಿಲ್ಲ ಹತ್ತು ರೂಪಾಯಿ ಅಷ್ಟೇ ಇತ್ತು. ಎಟತ್ತಿದ್ದರೂ ಬಸ್ಸಿಗೆ ಬರಬೇಕು. ಫೋನ್‌ನಾಗನು ಹೇಳಬೇಕೆಂದ್ರೆ ದುಡ್ಡ ಇರಲಿಲ್ಲ. ಹೆದರಿ ಸತ್ತಿದ್ದೆ, ಅಂಗೆ ದೇವರ ದೊಡ್ಡಾಂವದಾನ ಮನಿಗಿ ಬಂದು ಸೇರದೆ ಏನ್ಮಾಡ್ತಿದಿ ಹಿಂಗೆ ಬಾಳೇವು" (ಪ್ರಕರಣ:೦೭, ಪು.ಸಂ. ೨೧೩.)

"ಆಸ್ತಿ ಆಶ್ಯಾಕ ನಮ್ಮ ತಂದೆ - ತಾಯಿನ ಕೊಂದ ನನಗಂಡ, ನನಗೂ ಕೊಲೆ ಮಾಡೋಕೆ ಪ್ರಯತ್ನ ಮಾಡಿದ್ದ, ತಂದೆ ರಾಜಕೀಯದಲ್ಲಿ ಹೆಸರ ಮಾಡಿದ್ದಕ್ಕೆ ಇಷ್ಟೆಲ್ಲಾ ಆಯ್ತು. ನನ್ನ ಗಂಡನಂತವರನ್ನು ಬಗ್ಗು ಬಡಿಯೋಕೆ ರಾಜಕೀಗಿ ಬಂದಿದ್ದು, ಎಲ್ಲಾ ಮಗನದೇ ಆಸರೆ. ಆಸ್ತಿ ಇದ್ದಿದಕ್ಕೆ ಊರವರನೂ ಸಪೋರ್ಟ್ ಮಾಡ್ತಾರೆ. ಎಷ್ಟೋ ಸಲ ಆಸ್ತಿ ಬಿಟ್ ಕೊಡಬೇಕಂತ ಬೆದರಿಕೆಗಳು ಬಂದ್ವು, ಇದೆಲ್ಲಾ ರಾಜಕೀಗಿ ಬಂದ ಮೇಲೆ ಲಂಚಾ ತಗೊಂಡ ದುಡಿದಿದ್ದು ಅಂತ ಬಾಯಿಗ ಬಂದಂಗ ಮಾತಾಡ್ತಾರ ಆಸ್ತಿ ಇದ್ರ ಒಂದು ಪ್ರಾಬಲಂ, ಇಲ್ಲಂದ್ರ ಒಂದು ಪ್ರಾಬಲಂ" (ಪ್ರಕರಣ:೧೪, ಪು.ಸಂ೨೩೪).

"ಊರಿಂದು ರೊಕ್ಕಾ ತಿಂದನಂತ ಬಂದಿತ್ತು. ಎಲ್ಲಾ ಜನಾ ಪಂಚಾಯ್ತಿದು ಮನಿಗಿ ಬಂದಾರ, ಇಂವಾ ನೋಡಿದರೆ ಅವಗ ಭಾನಗೆ ಕರಿಲಾಕ ಹೋಗ್ಯಾರ ಈದಗ ಒಂದ ವಾರ ಬರಲಂತೇಳದ, ಅವರು

ಎಲ್ಲಾ ಹೇಳಿ ಹ್ಯಾದ್ರು, ಊರಿಂದ ಬಂದ್ ಮ್ಯಾಲ ಹೋಗಂದ್ರ ಒರಗ ಓಗಲಾಕ ತಯಾರಿಲ್ಲ. ನಮ್ಮ ಮಾವ ಇದ್ದರ ಕೆತ್ತಾ ಖಾಯಾ ತೆರಾ ಮರದ ಪೈಸಾ ದೆಕ ಚೊಡ ಜಾಂದೆ ಅಂತರಾ ರಸ್ತಿಗಿ ನಿಂತು, ಆಖರಿಗಿ ಪೋಲಿಸರ ಬಂದು ಒದ್ದು ಎಳಕಂಡ ಹ್ಯಾದರು. ಅದಕೇನೆ ನಮಗೆ ಮನಿಲಿಂದ ಒರಗೆ ಹಾಕ್ಯಾರ" (ಪ್ರಕರಣ:೧೯, ಪು.ಸಂ.೨೪೩).

ವೈಧವ್ಯದ ಬದುಕಿಗೆ ಆರ್ಥಿಕ ಆಸರೆಯ ನೆಪದಲ್ಲಿ ಸಾರ್ವಜನಿಕ ವಲಯದಲ್ಲಿ ಉದ್ಯೋಗ ಪ್ರವೇಶ ಪಡೆಯುವಂತಾಗಿಸಿದ ಸಂದರ್ಭ ಹಾಗೂ ಅವಳ ಆರ್ಥಿಕ ಅನುಕೂಲಗಳು ಅವಳಿಗೆ ಅನಗತ್ಯವೆಂದು ಬಿಂಬಿಸುವುದರೊಂದಿಗೆ ಅವಳ ಸಂಪಾದನೆಯ ಮೇಲೆ ಹಕ್ಕು ಸ್ಥಾಪಿಸುವಂತಹ ಸನ್ನಿವೇಶಗಳು ದೌರ್ಜನ್ಯ-ಹಿಂಸೆಯ ಒಂದು ಆಯಾಮವನ್ನು ಪ್ರತಿಬಿಂಬಿಸಿದರೆ, ಅದೇ ವೈಧವ್ಯದ ಕಾರಣದಿಂದಲೆ ಉದ್ಯೋಗ ವಲಯದಲ್ಲಿನ ಕಾಮುಕರಿಗೆ ಬಲಿಯಾಗಬೇಕಾದಂತಹ ಸಂದರ್ಭಗಳನ್ನು ಪ್ರಕರಣ ಐದು ವಿವರಿಸುವಾದದರೆ, ೦೭ನೇ ಪ್ರಕರಣವು ಆರ್ಥಿಕ ಸಬಲತೆ (ತನ್ನತನದಲ್ಲದೆ)ಯಿಂದ ಉದ್ಯೋಗ ವಲಯದಲ್ಲಾಗುವ ದೌರ್ಜನ್ಯ-ಹಿಂಸೆಗಳನ್ನು ಅರಿಯದಂತಹ ಭ್ರಮಾತ್ಮಕ ಸ್ಥಿತಿಯನ್ನು ಅರ್ಥೈಸಿಕೊಳ್ಳಲು ಸಹಾಯಕವಾಗಿದೆ.

ತಂದೆಯ ಸಮಸ್ತ ಆಸ್ತಿಗೆ ಒಡೆತನವನ್ನು ಹೊಂದಿರುವುದರಿಂದ ಇವಳನ್ನು ಅತಂತ್ರವಾಗಿಸುವುದಕ್ಕಾಗಿ ತಂದೆ-ತಾಯಿಯರನ್ನು ಅವಳ ಗಂಡ ಕೊಲ್ಲುವ ಮೂಲಕ ಆರ್ಥಿಕ ಒಡೆತನವನ್ನು ಸಾಧಿಸಲು, ಅವಳನ್ನೂ ಕೊಲ್ಲುವ ಪ್ರಯತ್ನ ಮಾಡಿರುವ ಘಟನೆಯೆ, ಅವಳು ರಾಜಕಿಯ ವಲಯವನ್ನು ಪ್ರವೇಶಿಸುವಂತಾಗಿದ್ದು ಮಗನ ಮೂಲಕ ಅಧಿಕಾರ ನಿಭಾಯಿಸುತ್ತಿರುವುದು ಪ್ರಕರಣ ೧೪ರಲ್ಲಿ ಕಂಡು ಬಂದರೆ ರಾಜಕೀಯಕ್ಕಾಗಿ ಸಂಪೂರ್ಣ ಆಸ್ತಿ-ಸಂಪತ್ತನ್ನು ಕಳೆದುಕೊಂಡು ಬೀದಿ ಪಾಲಾಗಿರುವ, ಆರ್ಥಿಕ ಅತಂತ್ರತೆಯನ್ನು ಅನುಭವಿಸುವಂತಹ ಹಿಂಸೆಗೊಳಗಾದ ಘಟನೆ. ಪ್ರಕರಣ ೧೯ ಪ್ರತಿನಿಧಿಸುತ್ತದೆ.

ಈ ನಾಲ್ಕು ಪ್ರಕರಣಗಳು ಹೆಣ್ಣಿನ ಆರ್ಥಿಕ ಸಬಲತೆಯ ವಿವಿಧ ಆಯಾಮಗಳನ್ನು ಪ್ರತಿನಿಧಿಸುತ್ತವೆ. ಭಿನ್ನ ವಿವರಗಳಾದರೂ ಆರ್ಥಿಕತೆಯ ಕಾರಣದಿಂದಲೆ ಹಿಂಸೆ-ದೌರ್ಜನ್ಯಕ್ಕೆ ಒಳಗಾಗುವ ಸಂದರ್ಭಗಳನ್ನು ಹೀಗೆ ಗ್ರಹಿಸಬಹುದು.

- **ಶೈಕ್ಷಣಿಕ ದೌರ್ಜನ್ಯ**

ಶಿಕ್ಷಣದ ಕೊರತೆ ಮತ್ತು ಶಿಕ್ಷಣ ಪಡೆದಿರುವಾಗಲೂ ಎದುರಿಸಬೇಕಾದ ಹಿಂಸೆ - ದೌರ್ಜನ್ಯ ಗಮನಿಸಲು ಈ ಗುಂಪನ್ನು ರೂಪಿಸಿಕೊಳ್ಳಲಾಗಿದೆ. ಉದ್ಯೋಗ ವಲಯದಲ್ಲಿ ಬರುವ ಊರ್ಮಿಳಾ, ವಿಮಲಾಕ್ಷಿಯವರ ಪ್ರಕರಣಗಳಲ್ಲಿ ಶಿಕ್ಷಿತರಾದರೂ ಅವರ ಮೇಲಾಗುವ ಹಿಂಸೆ-ದೌರ್ಜನ್ಯಗಳಿಗೆ ಪ್ರತಿರೋಧವನ್ನು ಒಡ್ಡಿರುವುದರಿಂದ ಹೆಚ್ಚಿನ ಪ್ರಮಾಣದ ಹಿಂಸೆಗೊಳಗಾಗಿರುವ ಸಂದರ್ಭವನ್ನು ವಿವರಿಸುತ್ತವೆ. ಆದರೆ ಪ್ರಕರಣ ೧೬ ಮತ್ತು ೧೮, ೨೦ರಲ್ಲಿ ಶಿಕ್ಷಣದ ಕೊರತೆ ಅಥವಾ ಅನಕ್ಷರತೆಯಿಂದ ಹಿಂಸೆ-ದೌರ್ಜನ್ಯಗಳಿಗೆ ಒಳಗಾಗುವ ಸಂಗತಿಗಳತ್ತ ಗಮನಹರಿಸುತ್ತವೆ.

ಉದಾಹರಣೆಗೆ : "ತುಂಬು ಕ್ಯೂಟಿದ್ದಿನಿ ಅಂತಾ ಒಬ್ಬರು ಸೀನಿಯರ್. ಪಿ.ಸಿ. ತುಂಬಾ ಟಾರ್ಚರ್ ಮಾಡ್ತಿದ್ರು ನಾನು ಒಂದಿನಾ ಅವರಿಗೆ ಸೆಲ್ಯೂಟ್ ಹೊಡಿಲಿಲ್ಲ. ಅದರ ಪರಿಣಾಮ ತುಂಬಾ ಅನುಭವಸದೆ ಪಿ.ಎಸ್.ಐ. ಸಾಹೇಬ್ರೂ ಆ ಪಿ.ಸಿ. ತುಂಬಾ influence ಇರೋ ವ್ಯಕ್ತಿಯಂತಾ ಹೇಳಿದ್ರೂ, ಅವನ ಯಾವ ಮಾತು ತೆಗೆದ್ಕಾಕ್ತಿರಲಿಲ್ಲ. ಅವರುದ್ದೇಶ ಅವನ ಹೇಳದಂಗೆ ಕೇಳಿ adjust ಆಗಿರಬೇಕು. ಏನಾಗುತ್ತೊ ನೋಡೆ ಬಿಡೋಣಂತ Iam Also Eduated ಇದೆಕೆಲ್ಲಾ ಹೆದರಬಾದು ಅನ್ನಕೊಂಡಿದ್ದೆ" (ಪ್ರಕರಣ:೦೯, ಪು.ಸಂ. ೨೧೯).

"ನಮ್ಮ field ಭಾರಿ ಡೆಂಜರ್ ಎಷ್ಟೇ ಓದಿದ್ರೂ ಗಂಡೆದೆಯವರೇ ಇಲ್ಲಿ ದಕ್ಕೊದು, ನಾ ಭಾಳ ಜೋರಿದ್ದಿನಿ, ಹೆಚ್ಚು ಓದಿದ್ದಿನಿ ೧ ರೂಪಾಯಿ ಲಂಚ ತಂಗೊಳಲ್ಲ ಅಂದ್ರ ಯಾರು ನಂಬೋದಿಲ್ಲ ನಾನೇ ಪಿ.ಸಿ. ಲಿಂದ ಪಿ.ಎಸ್.ಐ. ಆಗಿದ್ದು Educationನಿಂದ ಆದ್ರು, ಎಲ್ಲಾ ಎಲಿಜಿಬಲಿಟಿ ಇದ್ರು ಎಷ್ಟು ಜನಾ ನಂದಾಗಬಾರದು ಅಂತ ಪಟ್ ಹಿಡಿದು, ಏನೆಲ್ಲಾ ಮಾಡಿದ್ರು. ನನಗೆ ಬಂದಿರೋ ಮೇಲಿನ ಪ್ರೆಝರಿಂದ ನಮ್ಮಲ್ಲಿ ಬಂದಾಗಿಂದ ಒಂದೇ ಸ್ಟೇಶನ್‌ಗಿದ್ದ (Influenceನಿಂದ) ಪಿ.ಸಿ. ಟ್ರಾನ್ಸ್‌ಫರ್ ಮಾಡಿದಕ್ಕೆ ಓದಿದ್ದು ಕೊಬ್ಬು ಅಂತಾ ರಾಮಾಯಣ ಆಗ್ಹೊಯ್ತು" (ಪ್ರಕರಣ-೧೦, ಪು.ಸಂ. ೨೨೩).

"ಒಂದ ಸಭಿಗೆ ಕರಿದಿದ್ರು ಹೋಗಿದ್ದೆ, ಹೊರಗ ಕಟ್ಟಿ ಮ್ಯಾಲ ಕುಂತ ಬಂದೆ, ಅವತ್ತ ಅದು ಎದಕ ಹೆಬ್ಬಟ್ಟ ಹಾಕಂತ ಕಾಗದ ಹೊರಗೆ ಕಳಸಿದ್ರು ಅದಕ ಹಾಕಿನಿ ಎರಡ ತಿಂಗಳ ಆದ ಮ್ಯಾಲ ಯಾರೋ ಮ್ಯಾಲಿನವರು ಬಂದು ರೊಕ್ಕ ತಿಂದಿದಿ ಅಂತಂದು ೫೦೦೦/- ದಂಡಾ ಹಾಕ್ಯರರ್ರಿ, ನಂಗೊಂದು ಗೊತ್ತಿಲ್ಲ. ಗೌಡ್ರ ಮನಿಗಿ ಆರ ಸಲ ಹೋಗಿನಿ ಸಿಕ್ಕಿಲ್ಲ. ಮನ್ನಿ, ಮನ್ನಿ ಸಿಕ್ಕಿದ್ರರಿ, ಹೌದ ಕಟ್ಟಬೇಕು ನಿಮ್ಮ ಕೇರಿ ಬಂಡಿ ಹಾಕಿಸಿದಂತ ಸುಳ್ಳು ಹೇಳಿದಿ. ಅದಕ ಸಯಿ ಮಾಡಿದಿ. ನಾ ಊರಾಗ ಇಲ್ಲದಾಗ, ಅದಕ ಅವು ರೂಪಾಯಿ ಯಾರ ತಗಂಡರೋ ನಂಗೊತ್ತಿಲ್ಲಂದ್ರು. ಸಾಲ ಕಟ್ಟಾಕ ರೊಕ್ಕಯಿಲ್ಲ. ಟೆಶನಕ ಒಯ್ದರಿ ನಮ್ಮವ್ವ ಕಂಗಾಲಾಗಿ ಮೆತ್ತನ ಮುದಕಿ ಗೌಡರ ಬಲ್ಲಿಂದ ೬ರ ಬಡ್ಡಿಗಿ ೫೦೦೦.೦೦ ತಂದು ಕಟ್ಟಿ ನಂಗ ಬಿಡಸಿ ಕರಕಂಡ ಬಂದಾಳ, ಕೇರಿಯವರಿಗೆಲ್ಲ ಗೊತ್ತಾದರಿ ನನ ಪರಸ್ಥಿತಿ. ಅಂದರನ ರೊಕ್ಕ ರುಪ್ಪೆ ಗೌಡಗ ಸುರದಾಳ, ಪಟ್ಟಕ ಹಾಕಂಡಿದ್ದನಲ ಅವರಪ್ಪ ಅದಕ ಮಗನಮ್ಯಾಲ ಆಶಿ ಮಾಡಿ ಅವನಿಗೆ ಇಟಕೋಬೇಕಂತಳಂತ ಮಾತಾಡ್ತಾರ, ಊರಾಗ ಒಂದಿನಾ ಚಪ್ಪಲಿಲೆ ಹೊಡದಾರ ರೊಕ್ಕತಿಂದಿನಂತ...." (ಪ್ರಕರಣ:೧೬, ಪು.ಸಂ. ೨೩೮).

"ಊರಾಗ ಶಾಲಿ ಓದಿದ ಹುಡುಗರು ನಮ್ಮಂದಿ ಮತ್ತ ಗೌಡರ ಮಂದಿ ಎಲ್ಲ ಮಕ್ಕಳು ಸೇರಿ ಸಭಾದಾಗ ನಾನು ಗೌಡರ ಪಕ್ಕಕೆ ಕೂಡಬೇಕೆಂತ ಕೂಡಿಸಿ, ದೊಡ್ಡ ಜಗಳಾನೇ ಆಯ್ತು ಟೇಶನ್, ಮಣ್ಣ್ ಮಸಿಯೆಲ್ಲಾ ಆಯ್ತು. ಮರದಿನ ನನಗ, ನನ ಗಂಡಗ ಗೌಡರ ಮನಿಗ ಕರಿಸಿದ್ರು ನೀ ರಾಜಿನಾಮಾ ಕುಡು ಎಲ್ಲಾ ನಿನಲಿಂದೆ ಆಗದು ಅಂತ ಹೇಳಿದ್ರೂ, ನಾವು ಅದಕ ಒಪ್ಪಕಂಡ್ವಿ ಇದೆಲ್ಲಾ

ಕೇಳಿದ ಗೌಡ್ರ ಮಗ ಊರಿಗೆಲ್ಲಾ ಹೇಳಿದ, ನಮ್ಮಪ್ಪ ಮನಿಗ ಕರಸಿ ಹೆದರ್‍ಯಾಸರಂತ. ಅದಕ ಉಳಿದವರೆಲ್ಲಾ ಸೇರಿ ಪತ್ರಕ ಹೆಬ್ಬೆಟ್ಟಾಕಬಾರದಂತ ಹೇಳಿದ್ರು, ಅಂಗೆಮಾಡಿನಿ ನಾವು ಶಾಲಿ ಕಲತರ ನಮಗನು ಎಲ್ಲಾ ತಿಳಿತಿತ್ತು. ಇಲ್ಲದಕ ಹಿಂಗಾಗದ ಕತಿ" (ಪ್ರಕರಣ:೧೮, ಪು.ಸಂ. ೨೪೧).

ಮೂರ ವರಷದಲಿಂದ ನನಗೆ ತಗಲಾಕಂಡನ ನಮ್ಮ ಅಳಿಯ ನಾನ ನಿಂದರ ಬೇಕಂತ, ನಿನ್ನ ಹೆಣ್ತಿಗಿ ನಿಂದ್ರುಸೆಪ್ಪ ಓದ್ಯಾಳ, ಬರದಾಳ ಎಲ್ಲಿ ತಿಳಿತದಂದ್ರು, ಅಕಿ ಹರೆದಕಿ ನಾಕ ಮಂದಿ ಕಣ್ಣಿಗಿ ಬಿದ್ದರ ಬಿಡದಿಲ್ಲತ್ತಿ ಸುಮಕ ನಿನ ನಿಂದ್ರುಂತ ಈ ವರಷ ತಿಕಿಟ ತಗಂದೆ ಬಂದ ಮಗಳಿಗಿ ಬಾಳಿ ಖುಷಿಯದ ನನ ಗಂಡಗ ಎಷ್ಟರ ಪ್ರೀತಿ ಅದ ಅವರ ಅತ್ತೆ ಮ್ಯಾಲಂತ" ಹ್ಯಾದ ವಾರ ನಮ್ಮ ಅಳಿಯ ಊರಿಗೆ ಹೋಗಿದ್ರು ಆವಾಗ ಗೌಡರು ಯಾವುದರದ ೧ ಲಕ್ಷ ರೂಪಾಯಿದ ಕಾಗದಕ ಹೆಬ್ಬಟ್ಟ ಹಾಕಂತ ಕಳಿಸಿದ್ರು, ನನ್‌ಮಗಳ್ ಓದಿ ಗಂಡಗ ಹೇಳಿದ್ಲು, ಅದಕ ಅಕಿ ಊರಾಗಿಲ್ಲವರಿಬ್ಬರು ಅಂತ್ಹೇಳಿ ಕಳಸಿದ್ರು, ಚಂಜಿಗೆ ಗೌಡರೆ ಬಂದಾಗ ನಮ ತಮ್ಮ ಇದ್ದ ಅವನು ಹಂಗೆ ಹೇಳಿ ಕಳಸಿದ, ರಾತ್ರಿ ನಮ್ಮಳಿಯ ಬಂದು ನೋಡಿ, ಗಂಡಾ ಹೆಂಡ್ತಿ ಇಬ್ಬರು ಕೂಡಿ ಸುಳ್ಳ ಲೆಕ್ಕಾ ಅದಂತ ತಿಳಕಂಡ್ರು. ಸಯಿ ಮಾಡಿದ್ರ ನಮ್ಮ ತಲಿಗೆ ಬರ್ತಿತ್ತು" (ಪ್ರಕರಣ:೨೦, ಪು.ಸಂ.೨೪೪).

ಈ ಐದು ಪ್ರಕರಣಗಳಲ್ಲಿ ನಡೆದ ಸಂಭಾಷಣೆಯ ಆಯ್ದ ಭಾಗಗಳನ್ನು ದಾಖಲಿಸಲಾಗಿದೆ. ಮೊದಲನೆಯ ಎರಡು ಪ್ರಕರಣಗಳಲ್ಲಿ ಶಿಕ್ಷಣದಿಂದ ತನ್ನ ಮೇಲಾಗುವ ಆಕ್ರಮಣಕ್ಕೆ ಪ್ರತಿಭಟಿಸಿದ್ದರಿಂದಲೆ. ಅದರ ಪರಿಣಾಮಗಳು ಮತ್ತೆ ಪ್ರತಿಭಟಿಸಿದವಳ ಮೇಲೆ ಹೆಣ್ಣಾಗಿರುವ ಕಾರಣಕ್ಕೆ ಆಗುವ ದಾಳಿಯನ್ನು, ಎರಡನೆ ಹಂತದಲ್ಲಿ ಉನ್ನತ ಹುದ್ದೆಯಲ್ಲಿ ತನ್ನ ಕರ್ತವ್ಯವನ್ನು ತಾನು ನಿಭಾಯಿಸುತ್ತಿರುವಾಗಲೂ ಓದಿದ ಕೊಬ್ಬೆಂದು ಹಿಂಸೆ-ದೌರ್ಜನ್ಯಕ್ಕೊಳಪಡಿಸುವ ಆಯಾಮ ಒಟ್ಟು ಪ್ರಕರಣಗಳನ್ನು ಗಮನಿಸಿದಾಗ ತಿಳಿದು ಬರುತ್ತದೆ. ನಂತರದ ಎರಡು ಪ್ರಕರಣಗಳ ಸಂಭಾಷಣೆಗಳು ಶಿಕ್ಷಣವಿಲ್ಲದ್ದಕೆ ಅನುಭವಿಸುತ್ತಿರುವ ಹಿಂಸೆ - ದೌರ್ಜನ್ಯ ಮತ್ತು ಶಿಕ್ಷಣದ ಅಗತ್ಯತೆ ಮಹತ್ವವನ್ನು ವಿವರಿಸುತ್ತವೆ. ಕೊನೆಯ ಪ್ರಕರಣ ಮಹಿಳೆ ಶಿಕ್ಷಿತಳಾಗಿದ್ದಕ್ಕೆ ರಾಜಕೀಯ ವಲಯದಿಂದ ವಂಚಿತಳಾಗಿದ್ದು, ಶಿಕ್ಷಣವಿಲ್ಲದ್ದಕ್ಕೆ ಸದಾ ಅವಲಂಬಿತಳಾಗಬೇಕಾದ ಮಹಿಳೆಯರಿರ್ವರನ್ನು ಪ್ರತಿನಿಧಿಸುತ್ತದೆ. ವಿವಿಧ ಆಯಾಮಗಳಲ್ಲಿನ ನಯಗಾರಿಕೆಯ ಹಿಂಸೆ - ದೌರ್ಜನ್ಯಗಳು ಅನುಭವಿಸುತ್ತಿರುವುದು ಗಮನಕ್ಕೆ ಬಾರದಂತಹ ಸ್ಥಿತಿ ತನ್ನ ಈ ಎಲ್ಲ ಸಮಸ್ಯೆಗಳಿಗೆ ಕಾರಣ ತನ್ನೊಳಗೆ ಶೋಧಿಸುವ, ತಾನೇ ಅಸಮರ್ಥಳೆಂದು ಆರೋಪಿಸಿಕೊಳ್ಳುವಂತಹ ಅಂಶಗಳು ಅದರಲ್ಲಿವೆ. ಅದಕ್ಕೆ ಮೂಲಕಾರಣ ಸಾಮಾಜಿಕ ವ್ಯವಸ್ಥೆಯಲ್ಲಿದೆಯೆಂಬುದನ್ನು ಕಂಡುಕೊಳ್ಳಬಹುದಾಗಿದೆ.

ಈ ಹಿನ್ನೆಲೆಯಿಂದ ಮಹಿಳಾ ಸಮುದಾಯಕ್ಕೆ ವಂಚಿತವಾಗಿಸುತ್ತಿರುವ ಶಿಕ್ಷಣದಿಂದ ಮತ್ತು ಆ ಕಾರಣದಿಂದ ಸಮಸ್ಯೆಗಳಾಗುವ ದೌರ್ಜನ್ಯ-ಹಿಂಸೆ ಮತ್ತು ಲಭ್ಯವಾಗುತ್ತಿರುವ ಶಿಕ್ಷಣದ ಸ್ವರೂಪದಲ್ಲಾಗುವ ದೋಷಗಳಿಂದ ಸಮಸ್ಯೆಗಳನ್ನು ನಿಭಾಯಿಸುವಲ್ಲಿ ವಿಫಲವಾಗುತ್ತಿರುವುದನ್ನು ಸ್ಪಷ್ಟಪಡಿಸುತ್ತಿವೆ. ಇಲ್ಲಿ

ಶಿಕ್ಷಣವಿದ್ದರೂ ಅಧಿಕಾರವನ್ನು ಚಲಾಯಿಸದಂತಹ ಸಾಮಾಜಿಕ ವ್ಯವಸ್ಥೆ, ಅದೇ ಶಿಕ್ಷಣದಿಂದ ವಂಚಿತಳಾಗಿರುವ ಮಹಿಳೆಯರು ಅಧಿಕಾರವನ್ನು ಚಲಾಯಿಸಂದತಹ ವ್ಯವಸ್ಥೆಯನ್ನು ಪುರುಷ ಚಿಂತನೆಗಳು ಬಲಪಡಿಸಿವೆ.

• ಇತರೆ ದೌರ್ಜನ್ಯ

ಲೈಂಗಿಕ, ಆರ್ಥಿಕ ಶೈಕ್ಷಣಿಕ ದೌರ್ಜನ್ಯಗಳಾಚೆಗೆ ನಿಲ್ಲುವ, ಹಿಂಸೆ-ದೌರ್ಜನ್ಯಗಳೆಂದು ಪರಿಗಣಿಸಲಾಗದಂತಹ ಸೂಕ್ಷ್ಮತೆಗಳು ಕಾಣಿಸಿಕೊಳ್ಳುವ ಪ್ರಕರಣಗಳನ್ನು ಇತರೆ ದೌರ್ಜನ್ಯಗಳ ಗುಂಪಿನಲ್ಲಿ ದಾಖಲಿಸಲಾಗಿದೆ. ದಾಖಲಾದ ಪ್ರಕರಣಗಳಲ್ಲಿ ಭಿನ್ನ ಸ್ವರೂಪದ ದೌರ್ಜನ್ಯಗಳು ಕಾಣಿಸಿಕೊಳ್ಳುತ್ತವೆ. ಒಂದನೆ ಪ್ರಕರಣದಲ್ಲಿ ಬರುವ ನಾಗವೇಣಿಯ ಸಂದರ್ಭವು ವಿವಾಹ ಸಂಬಂಧಿತವಾಗಿ ನಡೆದ ಕಲಹಗಳಿಂದಾಗಿ ಉದ್ಯೋಗವನ್ನು ಆಯ್ಕೆ ಮಾಡಿಕೊಂಡು, ಅಲ್ಲಿನ ಅಧಿಕಾರ ಶಾಹಿಯಿಂದ ಅನುಭವಿಸುವ ದೌರ್ಜನ್ಯವನ್ನು ವಿವರಿಸುತ್ತದೆ (ಪ್ರಕರಣ:೧, ಪು.ಸಂ. ೧೯೩).

ಬಡತನದ ಕಾರಣಕ್ಕಾಗಿ ಉದ್ಯೋಗ ವಲಯವನ್ನು ಪ್ರವೇಶಿಸಿದ ಪ್ರಕರಣ ನಾಲ್ಕರ ಸಂಧ್ಯಾರಾಣಿಯದು. "ಅವನಿಗೊಪ್ಪಗೊಂಡಿಲ್ಲಂತ ನನ್‌ಮ್ಯಾಲ ಒಂದೆರಡ ಸಲ ಕೆಟ್ಟ ಸುದ್ದಿ ಹಬ್ಬಿಸಿದ. ಎಸ್.ಪಿ. ಸಾಯೆಬ್ರ ಕರಿಸಿದ್ರು ಎಲ್ಲಾ ಮಾತಾಡಿ ನಾ ಏನು ತಪ್ಪ ಮಾಡಿಲ್ಲಂತ ಸೂಕ್ಷ್ಮದಾಗ ಹೇಳಿ ಬಂದೆ. ಮತ್ತೆ ಮತ್ತೆ ಹಿಂಗೆ ಆಯ್ತು ನನ್ನ ಮ್ಯಾಲ ಕೈ ಹಾಕಕೆ ಬಂದ ಚಪ್ಪಲಿ ತಗೊಂಡ ನಿಂತೆ ಸುಮ್ನೆ ಹೋದ, ಸಾಕಾಗಿ ಒಂದು ವಾರದಾಗ ಎಲ್ಲಾ ನನ್ನ ಗಂಡಗ ಹೇಳ್ದೆ. ಎಲ್ಲಾ ಕುಂತು ಯಚನಾ ಮಾಡಿ ಕೆಲಸ ಬಿಡಬೇಕಂತಾಯ್ತು. ಒಂದ ವಾರ ಆಯ್ತು ಬಿಟ್ಟು ಮೊದಲ ರಾಜಿನಾಮ ತಗೊಲಲಿಲ್ಲ. ಆಮೇಲೆ ಮ್ಯಾಲಿನವರಗ್ಹೇಳಿ ಆರೋಗ್ಯ ಸರಿಯಲ್ಲಂತ್ಹೇಳಿದ ಮ್ಯಾಲ ತಗೊಂಡ್ರು ಪತ್ರ ಎಲ್ಲಾ ಆದ ಮ್ಯಾಲ ಎಸ್.ಪಿ. ಹತ್ರ ಹೋಗಿ ಎಲ್ಲಾ ಹೇಳಿ ಬಂದೆ ಹೆಣ್ಮಕ್ಕಳ ಮಾನ ಹರಾಜ ಮಾಡಕ ಕೆಲಸ ಕೊಡ್ತಿರಂತ ಹೇಳಿದೆ. ಎಸ್.ಪಿ. ಮೊದಲೆ ಹೇಳಿದ್ರೆ ಟ್ರಾನ್ಸ್ ಫರ್ ಅಥವಾ ಲೇಡಿಜ್ ಪಿಎಸ್‌ಐ ಇರೋ ಸ್ಟೇಶನ್‌ಗೆ ಕೊಡ್ತಸತಿದ್ದೆ ಅಂದ್ರು. ಸಹವಾಸವೇ ಬೇಡ ಅಂತ ಕೈ ಮುಗಿದು ಬಂದೆ. ಕೂಲಿ ಮಾಡ್ತಿದ್ದೀನಿ, ಗಂಜಿ ಕುಡದ್ರು ಆರಾಮಗಿದ್ದೀನಿ (ಪ್ರಕರಣ:೪, ಪು.ಸಂ. ೨೦೫)

ಇಲ್ಲಿ ಕಿರುಕುಳ, ದೌರ್ಜನ್ಯ-ಹಿಂಸೆಯನ್ನು ಎದುರಿಸಲಾಗದೆ ಉದ್ಯೋಗವನ್ನು ತೊರೆಯುವ ಅಂಶ, ಉದ್ಯೋಗವನ್ನು ಪಡೆದು ಅಲ್ಲಿನ ಆಕ್ರಮಣಗಳ ಸಹಿಸಲಾಗದೆ ಅನಿವಾರ್ಯವಾಗಿ ಅಧಿಕಾರಿಯನ್ನು (೪೫ ವರ್ಷದ) ವಿವಾಹವಾಗುವ ಮೂಲಕ ತನ್ನ ಪ್ರಿಯಕರನನ್ನು ಕಳೆದುಕೊಳ್ಳುವ, ಕೊನೆಗೆ ಒಂಟಿ ಬದುಕನ್ನೆ ಸಾಗಿಸುವಂತಹ ಅನಿವಾರ್ಯತೆಯನ್ನು ಪ್ರಕರಣ ಆರರಲ್ಲಿ ಕಾಣುತ್ತೇವೆ (ಪ್ರಕರಣ:೬, ಪು.ಸಂ. ೨೧೦). ಗಂಡನ ಬಹುಪತ್ನಿತ್ವದಿಂದ, ನಿರಾಕರಣೆಗೊಳಗಾದ್ದರಿಂದ ಬದುಕುವ ಆಸರೆಗಾಗಿ ಅಧಿಕಾರವನ್ನು ಪಡೆಯಲು ರಾಜಕೀಯ ಪ್ರವೇಶಿಸಿದ್ದು, ಅಧಿಕಾರವನ್ನು ಇವಳ ಹೆಸರಿನಲ್ಲಿ ಸಹೋದರನೆ ನಿಭಾಯಿಸುವ ಪ್ರಸಂಗವನ್ನು ವಿವರಿಸುವ (ಪ್ರಕರಣ:೧೨, ಪು.ಸಂ.೨೨೯) ವಿದ್ಯಾವಂತೆಯಾದರೂ ರಾಜಕೀಯ

ಪ್ರವೇಶಿಸಿದ್ದು, ಅಲ್ಲಿ ಅಧಿಕಾರ ದೊರೆತಿದ್ದು ಪತಿಯ ಪರಿಶ್ರಮದಿಂದ ಆ ಕಾರಣವಾಗಿ ತಾನು ಅಧಿಕಾರವನ್ನು ಚಲಾಯಿಸಲು ನಿರಾಕರಿಸುವಂತಹ ಅಂಶ ಮತ್ತು ಅಲ್ಲಿ ಸ್ವಲ್ಪ ವ್ಯತ್ಯಾಸವಾದರೂ ತರಾಟೆಗೆ ತೆಗೆದುಕೊಳ್ಳುವ ಭಯದಿಂದ ನೆಪ ಮಾತ್ರದಲ್ಲಿ ಅಧಿಕಾರದಲ್ಲಿರುವ ಸಂಗತಿಯನ್ನು (ಪ್ರಕರಣ:೧೩, ಪು.ಸಂ. ೨೩೧) ಕಾಣಿಸಿಕೊಳ್ಳುತ್ತದೆ. ರಾಜಕೀಯ ಬೆಂಬಲವಿರುವ ಅಳಿಯನಿಗೆ ಅಧಿಕಾರ ಸಿಗದಿದ್ದಾಗ ಮಹಿಳಾ ಮೀಸಲಾತಿಯಡಿಯಲ್ಲಿ ಆಯ್ಕೆಯಾದ ಮಲ್ಲಮ್ಮ ಅಧಿಕಾರವೆಲ್ಲವೂ ಅಳಿಯನೆ ನಿಭಾಯಿಸುವುದು ಸೂಕ್ತ. ಅದರ ಗಂಧ-ಗಾಳಿಯು ತಮಗೆ ತಿಳಿಯದು, ಕಾರಣ ಶಿಕ್ಷಣದ ಕೊರತೆ ಎಂದು ಹೇಳುತ್ತಾರೆ. ಸುಶಿಕ್ಷಿತ ಮಗಳನ್ನು ಅಧಿಕಾರಕ್ಕೆ (ರಾಜಕೀಯ) ಕಳುಹಿಸಲು ಯೌವ್ವನವನ್ನು-ಸೌಂದರ್ಯವನ್ನು ಜೊತೆಗೆ ಹೆಣ್ಣಾಗಿರುವುದನ್ನು ಕಾರಣ ನೀಡುವ ಪುರುಷ ಮನಸ್ಥಿತಿಯನ್ನು (ಪ್ರಕರಣ:೧೩, ಪು.ಸಂ.೨೪೦)ರಲ್ಲಿ ದೊರೆಯುತ್ತದೆ.

ಈ ನಾಲ್ಕು ಗುಂಪಿನಲ್ಲಿ ವಿಭಾಗಿಸಿಕೊಂಡ ಒಟ್ಟು ಪ್ರಕರಣಗಳ ಅಧ್ಯಯನದಿಂದ ದೊರೆಯುವ ಉತ್ತರಗಳೆಂದರೆ ಮಹಿಳೆಯರ ಸಾರ್ವಜನಿಕ ವಲಯದ ಪ್ರವೇಶ ಅನಿವಾರ್ಯ ಸಂದರ್ಭ, ಬಡತನದ ನಿವಾರಣೆ, ವಿವಾಹ ನೆರವೇರಲು, ಕೂರುಪದ ಸಂದರ್ಭಗಳು, ಮೀಸಲಾತಿಯ ಸಂದರ್ಭ, ಪುರುಷನಿಗೆ ಅಧಿಕಾರ ಸಿಗದಂತಹ ಸಂದರ್ಭಗಳಲ್ಲಿ ಸಾರ್ವಜನಿಕ ವಲಯವನ್ನು ಪ್ರವೇಶಿಸಿರುವುದನ್ನು ಪ್ರತಿನಿಧಿಸುತ್ತವೆ. ಹಾಗೆಯೇ ಇಲ್ಲಿ ದೊರೆತ ಅಧಿಕಾರಗಳಲ್ಲಿ ಹೆಣ್ಣು ನೆಪಮಾತ್ರವಾಗಿದ್ದು, ಅಧಿಕಾರ, ಉದ್ಯೋಗವನ್ನು ತಿರಸ್ಕರಿಸುವ ಸಂದರ್ಭಗಳು, ಇಲ್ಲಿನ ಪ್ರವೇಶದಿಂದಲೇ ಆಗಿರುವ ಅಪಾಯಗಳಿಂದ ಬಹುಪಾಲು ಮಹಿಳೆಯರು ಇದನ್ನು ನಿರಾಕರಿಸುವಂತಹ ಸಂದರ್ಭಗಳು ಕಾಣಿಸಿಕೊಳ್ಳುತ್ತವೆ. ದಲಿತ ಹಾಗೂ ಬಡತನದಲ್ಲಿ ಬದುಕುತ್ತಿರುವ ಮಹಿಳೆಯರು ಯಾರದೋ ಒತ್ತಾಯಕ್ಕೆ ಮಣಿದು ರಾಜಕೀಯಕ್ಕೆ ಬರುವುದಲ್ಲದೇ ಅಲ್ಲಿನ ಅತಿ ಸೂಕ್ಷ್ಮ ಸಂಗತಿಗಳಿಗೆ ಕ್ರೂರವಾದ ಆಕ್ರಮಣಗಳಿಗೆ ಒಳಗಾಗುವ ಸಂದರ್ಭಗಳನ್ನು ವಿವರಿಸುತ್ತವೆ ಹಾಗೂ ಮಹಿಳಾ ಮೀಸಲಾತಿಯಿಂದಾಗಿ ಆಗುವ ಅನಾಹುತಗಳೆಂದು ಉದ್ದೇಶ ಪೂರ್ವಕವಾಗಿ ಪ್ರತಿಬಿಂಬಿಸುವ ಮೂಲಕ ಅದನ್ನು ನಿರಾಕರಿಸುವ ಪುರುಷ ಚಿಂತನೆಯ ಹುನ್ನಾರ ಮತ್ತು ಜಮೀನ್ದಾರಿ, ಊಳಿಗಮಾನ್ಯಶಾಹಿಯ ಯಜಮಾನ್ಯತೆ, ಮಹಿಳಾ ಅಧೀನತೆಯನ್ನು ಸ್ಥಿರೀಕರಿಸುವಂತಹ ಎಲ್ಲ ಪ್ರಯತ್ನಗಳ ಸಾಫಲ್ಯವನ್ನು ಕಾಣಬಹುದಾಗಿದೆ.

ಹಿಂಸೆ - ದೌರ್ಜನ್ಯವನ್ನು ಪ್ರತಿನಿಧಿಸುವ ಈ ಪ್ರಕರಣಗಳನ್ನು ವಿಶ್ಲೇಷಣೆಗೊಳಪಡಿಸಿದಾಗ ಅಲ್ಲಿ ದೊರೆಯುವ ಕಾರಣಗಳು ಬದುಕಿನ ಅತಂತ್ರತೆ, ಸಮಾಜ ನಿರೀಕ್ಷಿತ ಸೌಂದರ್ಯದ ಕೊರತೆ, ಶಿಕ್ಷಣದ ಕೊರತೆ, ಜಾತಿ ಮತ್ತು ಪ್ರತಿರೋಧದ ಸಂದರ್ಭಗಳನ್ನು ಹೆಚ್ಚು ಖಚಿತಪಡಿಸುವುದರಿಂದ ಮಹಿಳೆಯರ ಮೇಲಿನ ಆಕ್ರಮಣಗಳು ಸಂಸ್ಕೃತಿಯ ಚಿಂತನೆಗಳನ್ನು ಒಪ್ಪಿ ನಡೆದಾಗಲೂ, ಅವುಗಳನ್ನು ಪ್ರತಿರೋಧಿಸಿದಾಗಲು ಎದುರಾಗುವ ಸಂದರ್ಭಗಳನ್ನು ಕಾಣಬಹುದು. ಪುರುಷ ಚಿಂತನೆಯ ಯಾವುದೇ ಸಂದರ್ಭ, ಸನ್ನಿವೇಶಗಳಿಗೆ ಪ್ರತಿಕ್ರಿಯಿಸಿದಾಗಲೂ, ಸಮ್ಮತಿಸಿದಾಗಲೂ ದೌರ್ಜನ್ಯ-ಹಿಂಸೆಯು

ನಡೆಯುತ್ತಿರುವುದನ್ನು ಎಲ್ಲ ಪ್ರಕಣಗಳಲ್ಲಿಯೂ ಕಾಣಬಹುದಾಗಿದೆ. ಅಧಿಕಾರ ನಿರಾಕರಿಸುವ ಸಂದರ್ಭಗಳಿಂದ ಪ್ರಾರಂಭವಾಗುವ ದೌರ್ಜನ್ಯ-ಹಿಂಸೆಗಳು, ಲಭ್ಯವಾದಂತಹ ಅಧಿಕಾರವನ್ನು ನಿಭಾಯಿಸಿದಂತಹ ಸಂದಿಗ್ಧತೆಯನ್ನು ಮಹಿಳಾ ಸಮುದಾಯಕ್ಕೆ ಒಡ್ಡಿರುವುದರ ಉದ್ದೇಶ ಸಾರ್ವಜನಿಕ ವಲಯ ಮತ್ತು ಅಲ್ಲಿನ ಉತ್ಪನ್ನಗಳನ್ನು ಅವರೊಂದಿಗೆ ಹಂಚಿಕೊಳ್ಳುವುದರ ನಿರಾಕರಣೆಯನ್ನು ಪ್ರತಿನಿಧಿಸುತ್ತದೆ.

ಹಾಗಾಗಿ ಮಹಿಳೆಗೆ ದತ್ತವಾಗುತ್ತಿರುವ ಸಾಂದರ್ಭಿಕ ಅಧಿಕಾರವು, ಅವಳು ನಿಭಾಯಿಸಲು ಸಾಧ್ಯವಾಗದಂತಹ ಸನ್ನಿವೇಶಗಳನ್ನು ಸೃಷ್ಟಿಸಿ, ಅವಳು ಅಧಿಕಾರವನ್ನು ನಿರ್ವಹಿಸಲು ಅನರ್ಹಳೆಂಬುದನ್ನು ಸ್ಥಾಪಿಸುವ ಮೂಲಕ, ಯಾಜಮಾನ್ಯ ಮತ್ತು ಅಧೀನ ನೆಲೆಯನ್ನು ಸ್ಥಿರೀಕರಿಸುವ ಮತ್ತು ಮುಂದುವರೆಸುವ ತಂತ್ರಗಾರಿಕೆಯೇ ಆಗಿದೆ. ಅಂತೆಯೇ ಕೌಟುಂಬಿಕ ವಲಯದ ಹಿಂಸೆ-ದೌರ್ಜನ್ಯಗಳು, ಸಾರ್ವಜನಿಕ ವಲಯದಲ್ಲಾಗುವ ಹಿಂಸೆ-ದೌರ್ಜನ್ಯಗಳು ಪರಸ್ಪರ ಪೂರಕವಾಗಿ ನಿಲ್ಲುವ, ಕೌಟುಂಬಿಕ ವಲಯದ ವಿಸ್ತೃತರೂಪವೇ-ಸಾರ್ವಜನಿಕ ವಲಯದಲ್ಲಾಗುವ ಹಿಂಸೆ, ದೌರ್ಜನ್ಯಗಳನ್ನು ಅರ್ಥೈಸಿಕೊಳ್ಳಲು ಈ ಪ್ರಕರಣಗಳು ಹೆಚ್ಚು ಉಪಯುಕ್ತವಾಗಿವೆ.

ಹೀಗೆ ವಿವಿಧ ಗುಂಪುಗಳಲ್ಲಿ ವಿಭಾಗಿಸಿಕೊಂಡು ವಿಶ್ಲೇಷಣೆಗೊಳಪಡಿಸಲಾದ ಪ್ರಕರಣಗಳಲ್ಲಿ ಒಂದು ಗುಂಪು. ಇನ್ನೊಂದು ಗುಂಪಿಗೆ ಪರಸ್ಪರ ಪೂರಕವಾಗಿವೆ. ಆದರೆ ಕೆಲವು ಪ್ರಕರಣಗಳಲ್ಲಿ ಹಿಂಸೆ-ದೌರ್ಜನ್ಯಕ್ಕೊಳಗಾದ ನಿರ್ದಿಷ್ಟ ಉದ್ದೇಶ ಮತ್ತು ಕಾರಣ, ಸಂದರ್ಭಗಳಿಂದ ಗುರುತಿಸಬಹುದಾದ್ದರಿಂದ ಪ್ರಕರಣಗಳ ವಿಭಾಗೀಕರಣ ಅಗತ್ಯವೆನಿಸುತ್ತದೆ. ಈ ಎಲ್ಲ ಪ್ರಕರಣಗಳ ಸಾರ ಮತ್ತು ತಾತ್ತ್ವಿಕ ಚಿಂತೆಗಳನ್ನು ಮುಖಾಮುಖಿಯಾಗಿಸಿದಾಗ, ದೊರೆಯುವ ಫಲಿತಗಳು ಮಹಿಳೆಯು ಹೆಣ್ಣಾಗಿರುವ ಕಾರಣದಿಂದಲೇ ಸಮಗ್ರ ಸಮಾಜ ವ್ಯವಸ್ಥೆಯಲ್ಲಿ ಒಂದಲ್ಲಾ ಒಂದು ಬಗೆಯಲ್ಲಿ ಹಿಂಸೆ - ದೌರ್ಜನ್ಯಕ್ಕೆ ಒಳಗಾಗುತ್ತಿರುವುದು ಸ್ಪಷ್ಟವಾಗುತ್ತದೆ. ಕೌಟುಂಬಿಕ ವಲಯ ಇರುವುದರಲ್ಲಿಯೇ ಸುರಕ್ಷಿತವೆಂದು ಹೇಳಬಹುದು.

ದಿನಾಂಕ ೨೦.೦೮.೨೦೦೯ರಲ್ಲಿ ರಾತ್ರಿ ೯.೩೦ ನಿಮಿಷಕ್ಕೆ ಟಿ.ವಿ.೯.ನಲ್ಲಿ ಪ್ರಸಾರವಾದ ತಾಲಿಬಾನ್‌ನಲ್ಲಿ ಮಹಿಳೆಯರ ಮೇಲಾಗುವ ದೌರ್ಜನ್ಯದ ಭೀಕರ ಸ್ವರೂಪವು ಮಹಿಳೆಯ ಚಲನಶೀಲತೆಯನ್ನು ನಿರ್ಬಂಧಿಸುವ, ಅವಳ ಸ್ವಾತಂತ್ರ್ಯವನ್ನು ನಿರಾಕರಿಸುವ, ಮಾನವ ಸಹಜ ಹಕ್ಕನ್ನು ಕಸಿದುಕೊಳ್ಳುವಂತಹ ಪ್ರಸಂಗಗಳಲ್ಲಿನ ಕ್ರೌರ್ಯದ ಸ್ವರೂಪ ಸಾಮಾಜಿಕ ಅವ್ಯವಸ್ಥೆಯ ಪ್ರತೀಕವಾಗಿ ನಿಲ್ಲುತ್ತಿದೆ. ಅಂತಿಮವಾಗಿ ಕೌಟುಂಬಿಕ-ಸಾರ್ವಜನಿಕ ವಲಯಗಳೆರಡರಲ್ಲಿಯೂ ಮಹಿಳೆ ದೌರ್ಜನ್ಯ-ಹಿಂಸೆಗೊಳಗಾಗುತ್ತಿರುವುದು ಸರ್ವವಿದಿತ ಸಂಗತಿ. ಮಹಿಳೆಯ ಒಟ್ಟು ಬದುಕೇ ಅವಳ ಇಚ್ಛೆ-ಆಕಾಂಕ್ಷೆಗಳನ್ನು ನಿರಾಕರಿಸಿ ಬದುಕುವಂತಿರುದರಿಂದ ಹಿಂಸೆ-ದೌರ್ಜನ್ಯದ ಪ್ರಾರಂಭವಾಗುತ್ತದೆ. ಅದರ ವಿಕೃತತೆಯು ಮಾರಣಾಂತಿಕ ಹಲ್ಲೆಗಳಲ್ಲಿಯೂ ಕಾಣಿಸಿಕೊಳ್ಳುತ್ತಿದೆ. ಇರುವ ಪರಿಸ್ಥಿತಿಯಲ್ಲಿಯೇ ಕುಟುಂಬ

ಮತ್ತು ಕೆಲಸದ ಸ್ಥಳಗಳು (ಸಂಘಟಿತ ವಲಯಗಳು) ಸೂಕ್ತವೆಂದು ಹೇಳಬಹುದಾದರೂ, ಆ ಸ್ಥಳಗಳಲ್ಲಿ ದಿನಂಪ್ರತಿ ಒಡನಾಡುವ ಮತ್ತು ಹೋಗಲೇಬೇಕಾದ ಅನಿವಾರ್ಯತೆ ಇದೆ. ಅದರಾಚೆಗೆ ಬೇರೆ ಮಾರ್ಗಗಳು ಅದಕ್ಕೂ ಭೀಕರವಾಗಿರುವುದರಿಂದ, ಇವುಗಳನ್ನು ಸೂಕ್ತವೆಂದು ಹೇಳಬಹುದು. ಒಟ್ಟಿನಲ್ಲಿ ಮಹಿಳೆಯ ಸಂದರ್ಭದಲ್ಲಿ ಬೆಂಕಿ ಮತ್ತು ಬಾಣಲೆಯ ಆಯ್ಕೆಯಿದೆಯೆಂದು ಹೇಳಬಹುದಾಗಿದೆ.

### ೪.೩. ಕ್ಷೇತ್ರಕಾರ್ಯದ ವರದಿ

ಸಾರ್ವಜನಿಕ ವಲಯದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ-ಹಿಂಸೆಯು ಒಂದು. ಜ್ವಲಂತ ಸಮಸ್ಯೆಯಾಗಿದೆಯೆಂಬುದು ಗುರುತಿಸುವುದೇ ದೊಡ್ಡ ಸವಾಲಾಗಿದೆ. ಸಂಶೋಧನೆಯ ಪ್ರಾರಂಭದ ದಿನಗಳಲ್ಲಿ ಈ ವಿಷಯದ ಕುರಿತು ವಿದ್ವಾಂಸರೊಂದಿಗೆ ಚರ್ಚೆಗೆ ತೊಡಗಿದಾಗ, ದೊರೆತ ಮಾಹಿತಿಗಳು ಬಹುತೇಕ ನಕಾರಾತ್ಮಕವೇ ಆಗಿವೆ. ಆಶ್ಚರ್ಯ ಮೂಡಿಸಿದ, ತಬ್ಬಿಬ್ಬಾಗಿಸಿದ ಸಂಗತಿಯೆಂದರೆ ಸ್ತ್ರೀವಾದದಲ್ಲಿ ವಿಷಯ ತಜ್ಞರೆಂದು ಗುರುತಿಸಿಕೊಂಡವರು ಸಾರ್ವಜನಿಕ ವಲಯದಲ್ಲಿ ಮಹಿಳೆಯರ ವಿರುದ್ಧ ದೌರ್ಜನ್ಯ-ಹಿಂಸೆಗಳಿರುವುದಿಲ್ಲ. ಲೈಂಗಿಕ ಕಿರುಕುಳವಿರುತ್ತವೆ ಎಂಬ ಫಲಿತಗಳೇ ಹೆಚ್ಚು. ಹೇಗೆ ಕೌಟುಂಬಿಕ ವಲಯದಲ್ಲಿ 'ವರದಕ್ಷಿಣೆ' ಎಂಬ ಸಮಸ್ಯೆಯು ಹೆಮ್ಮರದಂತೆ ಬೆಳೆದು, ಇನ್ನಿತರ ಯಾವ ಸಮಸ್ಯೆಗಳು ಇಂದಿಗೂ ಅಷ್ಟಾಗಿ ಹೊರಬರಲು ಸಾಧ್ಯವಾಗುತ್ತಿರಲಿಲ್ಲವೊ? ಹಾಗೆಯೆ ಸಾರ್ವಜನಿಕ ವಲಯದಲ್ಲಿಯೂ 'ಲೈಂಗಿಕ ಕಿರುಕುಳ'ದಂತಹ ದೌರ್ಜನ್ಯ-ಹಿಂಸೆಯಡಿಯಲ್ಲಿ ಇತರ ಹಿಂಸೆ-ದೌರ್ಜನ್ಯಗಳು ತೆರೆಮರೆಯಲ್ಲಿಯೇ ಉಳಿಯುತ್ತವೆ.

ಸಾರ್ವಜನಿಕ ವಲಯದಲ್ಲಿನ ಎಲ್ಲ ಮಹಿಳೆಯರೂ ಲೈಂಗಿಕ ಕಿರುಕುಳಕ್ಕೆ ಒಳಗಾಗುವುದಿಲ್ಲ. ಅಂದ ಮಾತ್ರಕ್ಕೆ ದೌರ್ಜನ್ಯ-ಹಿಂಸೆ ಇಲ್ಲವೆಂದು ಹೇಳುವುದು ಸಲ್ಲ. ಹಾಗಾಗಿ ಸಮಸ್ಯೆಯನ್ನು ಗುರುತಿಸುವುದರಿಂದ ಮೊದಲುಗೊಂಡು ಆ ಸಮಸ್ಯೆಯನ್ನು ಎದುರಿಸುವುದು, ಅದನ್ನು ನಿಭಾಯಿಸುವುದು, ನಿವಾರಿಸುವುದು ನಿಜಕ್ಕೂ ಸವಾಲಿನ ಸಂಗತಿಯೇ ಆಗಿದೆ. ಮಹಿಳಾ ಬದುಕಿನ ಪ್ರತಿಯೊಂದು ಸಂಗತಿಗಳೂ ಒಂದು ನೆಲೆಯ ಸಮಸ್ಯೆಗಳನ್ನು ಬಿಡಿಸಿಕೊಳ್ಳಲು ಹೋದಂತೆ, ಇನ್ನೊಂದು ಬಗೆಯ ಸಮಸ್ಯೆಗಳಲ್ಲಿ ಸಿಲುಕಿ ಹಾಕಿಕೊಳ್ಳುತ್ತವೆ. ಇದು ಲಿಂಗಸಂಬಂಧಿ ವಿಷಯಗಳ ಸಂಕೀರ್ಣತೆಯೆನ್ನಬಹುದು.

ಜಾಗತಿಕ ಮಟ್ಟದಲ್ಲಿ ಚರ್ಚೆಯಾಗುತ್ತಿರುವ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಗಳ ಕುರಿತು ಸಾಕಷ್ಟು ಅಧ್ಯಯನಗಳು ನಡೆಯುತ್ತಿವೆಯೆಂಬುದಕ್ಕೆ ಸಾಕಷ್ಟು ಆಕರ ಗ್ರಂಥಗಳು, ಸಂಶೋಧನಾ ವರದಿಗಳು ಲಭ್ಯವಾಗುತ್ತವೆ. ಅಲ್ಲಿಯೂ ಸಹ ಸಾರ್ವಜನಿಕ ವಲಯದ ಒಟ್ಟು ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಸಮಗ್ರ ಅಧ್ಯಯನಗಳು ಕಂಡು ಬರುತ್ತಿಲ್ಲವಾದರೂ ಬಿಡಿ ಅಧ್ಯಯನಗಳು ಕಾಣಿಸಿಕೊಳ್ಳುತ್ತಿವೆ. ಹಾಗೆಯೇ ಕೌಟುಂಬಿಕ ದೌರ್ಜನ್ಯಕ್ಕೆ ಸಂಬಂಧಿಸಿದಂತೆ ಸಮಗ್ರ ಅಧ್ಯಯನಗಳು ಕಾಣಿಸಿಕೊಂಡಿವೆ. ಇದು ಸಮಸ್ಯೆಯ ಆಯ್ಕೆಗೆ ಪ್ರೇರಣೆ ಮತ್ತು ಮಿತಿಯನ್ನು ರೂಪಿಸಿಕೊಳ್ಳಲು ಸಹಕರವಾಯಿತು.

ದೌರ್ಜನ್ಯ-ಹಿಂಸೆಯ ಕುರಿತು ಸಾಕಷ್ಟು ವಿದ್ವಾಂಸರು, ಸಾಹಿತಿಗಳು, ಚಿಂತಕರು, ದಾರ್ಶನಿಕರು, ಸಂಶೋಧಕರು ಚರ್ಚಿಸುತ್ತಲೇ ಬಂದಿದ್ದಾರೆ. ದೌರ್ಜನ್ಯ-ಹಿಂಸೆಯು ಒಂದಲ್ಲಾ ಒಂದು ಬಗೆಯಲ್ಲಿ ಮನುಷ್ಯ ಬದುಕಿನಲ್ಲಿ ಹಾಸುಹೊಕ್ಕಾಗಿದೆ. ಅದು ಜಾತಿ, ಧರ್ಮ, ವರ್ಗ, ಲಿಂಗ ಇತ್ಯಾದಿ ಕಾರಣಗಳಿಂದಲೂ ಆಗಿದೆ. ಆದರೆ ಹೀಗೆ ಸಾಮಾನ್ಯೀಕರಿಸಿದ ಚಿಂತನೆಗಳಲ್ಲಿ ಮಹಿಳೆಯು ಒಳಗೊಳ್ಳುವುದಿಲ್ಲವೆಂಬುದಕ್ಕೆ ಎಪಿಸ್ಟೊಮೊಲಜಿ ಮತ್ತು ಜೆಂಡರ್ ಆ್ಯಜ್ ಎ ವೆರಿಯಬಲ್‌ನಂತಹ ಪ್ರಮುಖ ಸ್ತ್ರೀವಾದಿ ಸಂಶೋಧನಾ ವಿಧಾನಗಳನ್ನಾಧರಿಸಿ ಕಂಡುಕೊಳ್ಳಲಾಗಿದೆ. ಉದಾ: ವಿವಿಧ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಅಧ್ಯಯವನ್ನು ವಿವರಿಸುವುದಾದರೆ, ಪ್ರತಿಯೊಂದು ಜ್ಞಾನ ವಲಯವು ಮಹಿಳೆಯನ್ನು 'ಅನ್ಯ'ವಾಗಿ ಪರಿಗಣಿಸಿರುವುದನ್ನು, ಯಾವುದೇ ಜ್ಞಾನವಲಯದ ಸ್ವರೂಪ ಗ್ರಹಿಸವಾಗ ಈ ಅಂಶವು ಗುರುತಿಸಬಹುದಾಗಿದೆ. ಹಾಗೆಯೇ ಎಲ್ಲರಿಗೂ ಅನ್ಯವಾಗುತ್ತದೆಯೆಂಬ ಮಾನವತಾವಾದದ ಚಿಂತನೆಯನ್ನು, ಲಿಂಗತ್ವದ ಆಯಾಮದಿಂದ ನೋಡಿದಾಗ ಅದು ಮಹಿಳೆಯನ್ನು ನೋಡಿರುವುದಿಲ್ಲವೆಂದು ಗೋಚರಿಸುತ್ತದೆ. ಹಾಗೆಯೆ ದೌರ್ಜನ್ಯ-ಹಿಂಸೆಯ ಕುರಿತು ಚರ್ಚೆಗಳು ಬೆಳೆದು ಬಂದರೂ ಅದನ್ನು ಜೆಂಡರ್ ಆ್ಯಜ್ ಎ ವೆರಿಯೆಬಲ್ ವಿಧಾನವನ್ನು ಬಳಸಿ ನೋಡಿದಾಗ ಅಲ್ಲೆಲ್ಲೂ ಮಹಿಳೆಯ ವಿಚಾರಗಳು ಬಂದಿಲ್ಲವೆಂಬುದು ಸ್ತ್ರೀವಾದಿ ಸಂಶೋಧನಾ ವಿಧಾನದಿಂದ ಅರಿಯಲು ಸಾಧ್ಯವಾಯಿತು.

ಯಾವುದೇ ಸಂಗತಿಯು ಕೇವಲ ತಾತ್ವಿಕವಾಗಿ ಚರ್ಚಿಸುವುದರಿಂದ ಆ ಸಮಸ್ಯೆಗೆ ಪರಿಹಾರವೊಂದು ಸಿಗುವುದು ಕಷ್ಟಕರ ಸಂಗತಿಯಾಗಿದೆ. ಅದರಲ್ಲೂ ಮಹಿಳಾ ಬದುಕು ಕೇವಲ ತರ್ಕವನ್ನು ಆಧರಿಸಿ ನಿಂತಿಲ್ಲ. ಈ ಚಿಂತನೆಗಳೊಂದಿಗೆ ವಾಸ್ತವವನ್ನು ಪರೀಕ್ಷಿಸಿ ನೋಡುವ ಅಗತ್ಯತೆಯು ಹೆಚ್ಚಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ವಿಷಯಕ್ಕೆ ಕ್ಷೇತ್ರಕಾರ್ಯದ ಅಗತ್ಯತೆಯಿರುವುದನ್ನು ಹಿಂದೆಯೆ ವಿವರಿಸಲಾಗಿದೆ. ಈ ನಿಟ್ಟಿನಲ್ಲಿ ಕೆಲವು ಪ್ರಕರಣಗಳನ್ನು ಅಧ್ಯಯನ ಮಾಡುವ ಮೂಲಕ ವಿಶ್ಲೇಷಣೆಗೊಳಪಡಿಸಲಾಯಿತು. ಜಾತಿ, ವಯಸ್ಸು, ವಿದ್ಯಾರ್ಹತೆಯಂತಹ ಅಂಶಗಳು ಲಿಂಗ ಸಂಬಂಧಗಳಲ್ಲಿ ವಹಿಸುವ ಪಾತ್ರ ಮತ್ತು ಬೀರುವ ಪರಿಣಾಮಗಳನ್ನು ಅರಿಯಲು ದೌರ್ಜನ್ಯ-ಹಿಂಸೆಯ ಪ್ರಕರಣಗಳು ಈ ಸಮಾಜ ವ್ಯವಸ್ಥೆಯ ಸೂಚಕಗಳನ್ನಾಧರಿಸಿ ಸಂಗ್ರಹಿಸಲಾಯಿತು.

ಈ ಮಹಿಳಾ ಬದುಕಿನ ಸಂಗತಿಗಳು ವ್ಯವಸ್ಥೆಯಲ್ಲಿ ಸಂಸ್ಕೃತಿ, ಮಾರ್ಯದೆ, ಧರ್ಮ, ಸಂಪ್ರದಾಯದ ಚೌಕಟ್ಟಿನಲ್ಲಿ ದಿಗ್ಬಂದನಕ್ಕೊಳಗಾಗಿವೆ. ಮಹಿಳೆಯರ ವೇಷಭೂಷಣದಿಂದ ಪ್ರತಿಯೊಂದು ಸಮಾಜ ವ್ಯವಸ್ಥೆಯಿಂದಲೆ ನಿರ್ಧರಿತವಾಗುವ ಸಂದರ್ಭಗಳಿಗೆ ಅವಳ ನಡೆ-ನುಡಿಗಳು ಹೊರತಾಗಿಲ್ಲ. ಕೆಲವು ಸಂಗತಿಗಳ ಕುರಿತಂತು ಉಸಿರೆತ್ತದಂತಹ ಸನ್ನಿವೇಶಗಳು ಸಾಕಷ್ಟು ಪ್ರಮಾಣದಲ್ಲಿವೆ. ಅದರಲ್ಲೂ ಸಾರ್ವಜನಿಕ ವಲಯದಲ್ಲಾಗುವ ದೌರ್ಜನ್ಯ-ಹಿಂಸೆಗಳಂತಹ ಸಂಗತಿಗಳಲ್ಲಿ ಮೊದಲ ಅವುಗಳು ಅವಳ ಮೇಲೆ ನಡೆಯುತ್ತಿವೆಯೆಂಬತಹುದನ್ನು ಅರಿವಿಗೆ ಬಾರದಂತಹ ಭ್ರಮಾತ್ಮಕ ಸ್ಥಿತಿಯನ್ನು ಸೃಷ್ಟಿಸಿದೆಯೆಂಬುದಕ್ಕೆ ಅನುಬಂಧದಲ್ಲಿ ದಾಖಲಿಸಲಾಗಿರುವ ಹಲವು ಪ್ರಕರಣಗಳು ಸಾಕ್ಷಿಯಾಗಿವೆ.

ಹೆಂಗಸಿನ ಒಟ್ಟು ಅಸ್ತಿತ್ವವೇ ಇಲ್ಲವಾಗಿಸಿದ ಸಾಮಾಜಿಕ ವ್ಯವಸ್ಥೆಯಲ್ಲಿ, ಅವಳ ಚಹರೆಯು ಪುರುಷ ನೆಲೆಯಿಂದಲೆ ಅರಿವಿಗೆ ಬರಬೇಕು. ಮಹಿಳಾ ಅಸ್ತಿತ್ವದ ಪ್ರಶ್ನೆಯನ್ನು ಮೊದಲು ಗ್ರಹಿಸಿದ ಸ್ತ್ರೀವಾದಿ ಚಿಂತಕಿ ಸಿಮೋನ್ ದ ಬೊವಾಳ ಒಟ್ಟು ಹುಡುಕಾಟವೇ ಇದಾಗಿದೆ. ನಾನೊಂದು ಹೆಣ್ಣು ಎಂದು ನನ್ನ ಪರಿಚಯವನ್ನು ಪ್ರಾರಂಭಿಸುವುದೇ ಇಂಥವರ ಮಗಳು, ತಾಯಿ, ತಂಗಿ, ಹೆಂಡತಿ ಎಂಬ ಪುರುಷ ನೆಲೆಯಿಂದಲೇ ಸಾಗಬೇಕಾದ ಅನಿವಾರ್ಯತೆ ಮೊದಲು ಪ್ರಜ್ಞೆ ಬಂದಿದ್ದು ಸಿಮೋನ್ ದ ಬೊವಾಗೆ. ಹೆಣ್ಣು ಎಲ್ಲೆಡೆಯಲ್ಲಿಯೂ ಎರಡನೆಯ ದರ್ಜೆಯ ಪ್ರಜೆಯೆಂಬ ವಾದವನ್ನು ಪ್ರಮುಖವಾಗಿ ಬೊವಾ ಪ್ರತಿಪಾದಿಸುತ್ತಾರೆ. ಮಹಿಳಾ ಬದುಕಿನ ಯಾವುದೇ ಸಂಗತಿಯ ಚರ್ಚೆಗೂ ಈ ತರ್ಕವೇ ತಳಹದಿಯಾಗಿದೆ. ಈ ಬಗೆಯ ಸಮಾಜದಲ್ಲಿ ಸಿಲುಕಿರುವ ಮಹಿಳೆ ಯಾವುದೇ ಕ್ಷೇತ್ರಕ್ಕೂ ಕಾಲಿರಿಸಿದರೂ ಅಲ್ಲಿ ತನ್ನ ಸಾಧನೆಯ ಬಗ್ಗೆ, ತನ್ನ ಅಸ್ತಿತ್ವದ ಕುರಿತು ಹೋರಾಡಲು ಹೊರಟರೆ ಅವಳು ಅತಿ ನಯಗಾರಿಕೆಯ ನೆಲೆಯಿಂದ, ಕ್ರೂರವಾದ ಮಟ್ಟದ ಹಲವು ಬಗೆಯ ಆಕ್ರಮಣಗಳಿಗೆ ಒಳಗಾಗುತ್ತಾಳೆ ಎನ್ನುವುದಕ್ಕೆ ಈ ಒಂದೊಂದು ಪ್ರಕರಣಗಳು ಒಂದೊಂದು ಸಂದೇಶವನ್ನು, ದೌರ್ಜನ್ಯ-ಹಿಂಸೆಯ ಆಯಾಮವನ್ನು ಪ್ರತಿನಿಧಿಸುತ್ತವೆ. ಈ ಬಗೆಯ ಪ್ರಕರಣಗಳನ್ನು ದಾಖಲಿಸುವ ಮೂಲಕ ಸಾರ್ವಜನಿಕ ವಲಯಗಳ ವಲಯಗಳಲ್ಲಿ ನಡೆಯುವ ದೌರ್ಜನ್ಯ-ಹಿಂಸೆಯ ಹೊರಹಾಕುವಲ್ಲಿ ಹಲವು ಬಗೆಯ ತೊಡಕುಗಳುಂಟಾದವು.

ಮೊದಲನೆಯದಾಗಿ ಸಂದರ್ಶನಕ್ಕೆ ಹೋಗುವಾಗ ಬೇಕಾದ ಪೂರ್ವ ತಯಾರಿಯಿಂದ ಮೊದಲುಗೊಂಡು ಸಮಸ್ಯೆಗಳು ಸೃಷ್ಟಿಯಾದವು. ಸಂದರ್ಶನಕ್ಕೆ ಆರಂಭಿಸಿದಾಗ ಅಗತ್ಯವಾದ ಮಾಹಿತಿಯನ್ನು ಪಡೆಯಲು ಸಾಧ್ಯವಾಗುತ್ತಿರಲಿಲ್ಲ. ಆ ಸಂದರ್ಭದಲ್ಲಿ ಇರುವ ಸಾಂಪ್ರದಾಯಿಕ ವಿಧಾನಗಳ ವಿಸ್ತರಣೆಯಾಗಿ ಸ್ತ್ರೀವಾದಿ ಸಂಶೋಧನಾ ವಿಧಾನಗಳನ್ನು ಬಳಸಬೇಕಾಯಿತು. ಸಂಶೋಧಕ ಮತ್ತು ಸಂದರ್ಶಿತ ವ್ಯಕ್ತಿಗಳ ಮಧ್ಯ ಒಂದು ಕಂದರವಿರದಂತೆ, ಭಾವನಾತ್ಮಕ ಸಂಗತಿಯ ಅಗತ್ಯತೆ. ಅದು ತನ್ನದೇ ಸಮಸ್ಯೆಯೆಂದು ಪಾಲ್ಗೊಳ್ಳಬೇಕಾದ ರೀತಿ, ಅರಚಿತ ಪ್ರಶ್ನೆಗಳು, ಲಿಂಗ ಪಾತ್ರಗಳ ಪರಿವರ್ತನಾ ವಿಧಾನ, ಲೈಂಗಿಕತಾವಾದಿಯಲ್ಲದ ವಿಧಾನ, ಪ್ರಯೋಗಾತ್ಮಕ ಮತ್ತು ಅನುಭವಾಧಾರಿತ, ವ್ಯಕ್ತಿನಿಷ್ಠ ವಿಧಾನಗಳನ್ನು ವಿಶಿಷ್ಟವಾಗಿ ಬಳಸಿಕೊಳ್ಳುವ ಮೂಲಕ ಸೂಕ್ತ ಪ್ರಮಾಣದ, ಅಪೇಕ್ಷಿತ ಮಾಹಿತಿಯನ್ನು ಪ್ರಕರಣ ಅಧ್ಯಯನದಿಂದ ಪಡೆಯಲಾಯಿತು.

ಕೆಲವು ಪ್ರಕರಣಗಳಲ್ಲಿ ಮಹಿಳೆಯರ ಮೇಲಾಗುವ ದೌರ್ಜನ್ಯ-ಹಿಂಸೆಗಳು ಶಿಕ್ಷಣದ ಕೊರತೆಯಿಂದಲೊ, ಜಾತಿ ಕಾರಣದಿಂದಲೊ, ವಯಸ್ಸಿನ ಕಾರಣದಿಂದಲೊ, ಸೌಂದರ್ಯ ಕಾರಣದಿಂದಲೊ, ಸಾಧನೆಯ ಕನಸುಗಳು ಹೊತ್ತಿರುವುದರಿಂದಲೋ ಆದರೆ, ಇವ್ಯಾವೂ ಇಲ್ಲದೆ ಪುರುಷ ಚಿಂತನೆಗೆ ಒಗ್ಗಿಕೊಳ್ಳುವಲ್ಲಿಯೂ ನಡೆದ ಅತೀ ಸೂಕ್ಷ್ಮ, ಅಗೋಚರ, ಅಪ್ರಕಟಿತ, ದೌರ್ಜನ್ಯ-ಹಿಂಸೆಗಳು ಈ ಎರಡು ವಲಯಗಳಲ್ಲಿ ಕರಾಳ ಸ್ವರೂಪದಲ್ಲಿರುವುದು ಕಂಡು ಬರುತ್ತದೆ. ಇನ್ನಿತರ ವಲಯಗಳಲ್ಲಿನ ಪ್ರಮಾಣ ಇನ್ನೂ ಭಿನ್ನವಾಗಿದೆಯೆಂಬುದು ಕೆಲವು ಅಧ್ಯಯನಗಳಿಂದ ಕಂಡು ಬಂದಿದೆ. ಒಟ್ಟು ಸಮಾಜ

ವ್ಯವಸ್ಥೆಯ ಆಕಾಂಕ್ಷೆಯೆ ಹೆಣ್ಣು ಅಧೀನ ನೆಲೆಯಲ್ಲಿಯೇ ಮುಂದುವರಿಯಬೇಕೆಂಬಂತಹ ಧೋರಣೆಗಳು ಕಂಡು ಬಂದಿವೆ. ಅಧಿಕಾರ ದೌರ್ಜನ್ಯದ ಸಹಚರಿ. ದೌರ್ಜನ್ಯ-ಹಿಂಸೆಗಳು ಕೌಟುಂಬಿಕ ವಲಯದ ವಿಸ್ತೃತರೂಪವೆಂಬುದು, ಯಾಜಮಾನ್ಯ ಮತ್ತು ಅಧೀನ ನೆಲೆಯ ವಿಸ್ತರಣೆಗಳು ಸಾರ್ವಜನಿಕ ವಲಯದಲ್ಲಿನ ಸ್ತ್ರೀ-ಪುರುಷ ಸಂಬಂಧಗಳಲ್ಲಿರುವುದು ಹೊರಹಾಕಲು ಕ್ಷೇತ್ರಕಾರ್ಯವು ಪ್ರಮುಖವಾದ ಆಧಾರವಾಯಿತು. ಚಿಂತನೆಗೂ-ವಾಸ್ತವತೆಗೂ ಭಿನ್ನವಾಗಿ ನಿಲ್ಲುವ ದೌರ್ಜನ್ಯ-ಹಿಂಸೆಯ ಮೂಲ ಧೋರಣೆಯು ಈ ಎಲ್ಲ ಪ್ರಕರಣಗಳಲ್ಲಿಯೂ ಕಂಡು ಬರುತ್ತದೆ.

ಯಾರಿಗೆ ಬದುಕಿನ ಬಗ್ಗೆ ಕನಸುಗಳು, ಭಯ, ಆತಂಕ, ತಲ್ಲಣ, ಅಭದ್ರತೆಯಿಲ್ಲವೋ ಅವರು ಮಾತ್ರ ಬದುಕಿನ ನೈಜ ಘಟನೆಗಳನ್ನು ಹೊರಹಾಕಲು ಸಾಧ್ಯ. ಬಹುತೇಕ ಇದು ಮನುಷ್ಯ ಜೀವನದಲ್ಲಿ ಸಾಧ್ಯವಿಲ್ಲವೆಂಬುದಕ್ಕಿಂತ, ಮಹಿಳಾ ಬದುಕಿನಲ್ಲಿ ಅಸಾಧ್ಯವಾದುದೆಂದೆ ಹೇಳಬಹುದು. ಮಹಿಳೆಯ ಬದುಕು ನಿರಂತರ ಪರಾವಲಂಬಿ, ಅಧೀನತೆಯಿಂದ ಕೂಡಿರುವುದರಿಂದ ತನ್ನ ಮೇಲೆ ನಡೆಯುವ ಆಕ್ರಮಣಗಳಾಗಲಿ, ಹಿಂಸೆ-ದೌರ್ಜನ್ಯಗಳಾಗಲಿ ಹೊರಹಾಕುವ ಸಂದರ್ಭಗಳು ವಿರಳ. ಮಹಿಳಾ ಸಮುದಾಯ ಹಾಗೊಮ್ಮೆ ಹೊರಹಾಕಿದ್ದೆ ಆದರೆ ಅವಳು ಅತಂತ್ರತೆಯನ್ನು ಅನುಭವಿಸುವುದರಿಂದ, ಅವಳ ಮೇಲಿನ ಕ್ರೌರ್ಯಗಳು ಹೆಚ್ಚುತ್ತವೆಯೆಂಬುದಕ್ಕೆ ಇಲ್ಲಿನ ಕೆಲವು ಪ್ರಕರಣಗಳು ಸಾಕ್ಷಿಯಾಗುತ್ತವೆ.

ಹಾಗೆಯೇ ವ್ಯಕ್ತಿಯ ಬದುಕಿನಲ್ಲಿನ ಕೆಲವು ಘಟನೆಗಳನ್ನು, ಅಂತರಗದಲ್ಲಿನ ನೋವುಗಳನ್ನು ಹೇಳಿಕೊಳ್ಳಲು ಒಂದು ಜೀವವು ಸಿಗದಂತಹ ಯಾಂತ್ರಿಕ ಬದುಕಿನಲ್ಲಿ ದುಃಖಗಳನ್ನು ಕೇಳಿ ಅವುಗಳನ್ನು ಗುಪ್ತವಾಗಿಟ್ಟುಕೊಳ್ಳುವ ನಂಬಿಕೆಗೆ ಅರ್ಹರೆನಿಸಿದ ವ್ಯಕ್ತಿಯೆಂದು ಕೆಲವು ನೋವುಗಳನ್ನು ಹಂಚಿಕೊಳ್ಳುವ ಸಂಗತಿಯು ನಿಜವೇ ಆಗಿದೆ. ಈ ರೀತಿಯ ಆಯಾಮಗಳಿಂದಲೇ ಹೆಚ್ಚು ದೌರ್ಜನ್ಯ-ಹಿಂಸೆಯನ್ನು ನಡೆಯುವ ಸಂಗತಿಗಳು, ಸ್ವರೂಪವನ್ನು ಗ್ರಹಿಸಲು ಸಾಧ್ಯವಾಯಿತು.

ಕೆಲವು ಪ್ರಕರಣಗಳಲ್ಲಿನ ಗುಪ್ತವಾದ ಸಂಗತಿಗಳನ್ನು ಹೊರತೆಗೆಯುವಲ್ಲಿ ಸಂಶೋಧಕರು ಸ್ವತಃ ತಾವೇ ಆ ಬಗೆಯ ಕ್ರೌರ್ಯಗಳು ಜರುಗುವಂತಹ ಸಂದರ್ಭಗಳಿಗೆ ಎದುರಾಗಿ, ಅವರು ಅನುಭವಿಸಿರುವ ನೋವುಗಳನ್ನು ಹೇಳುವ, ವಿವರಿಸುವ ಮೂಲಕ ಹೆಣ್ಣಿನ ಬದುಕೆ ಇಷ್ಟೇ ಎಂಬ ತೀರ್ಮಾನಕ್ಕೆ, ಹೆಣ್ಣಾಗಿರುವುದಕ್ಕೆ ಅನುಭವಿಸಬೇಕೆಂಬ ಕೆಲವು ಸಾಂಪ್ರದಾಯಿಕ ಹೇಳಿಕೆಗಳನ್ನು ಕೊಡುವ ಮೂಲಕ, ಬೇರೆಯವರ ಅನುಭವ ಕಥನಗಳನ್ನು ಹೇಳುವ ಮೂಲಕ, ಇಲ್ಲಿ ಸಂದರ್ಶಿಸಿದ ವ್ಯಕ್ತಿಯ ಅನುಭವಗಳನ್ನು ಗ್ರಹಿಸಲು ಸಾಧ್ಯವಾಯಿತು. ಸಂಶೋಧಕರು ಮತ್ತು ಸಂದರ್ಶಿನಿಗಳ ಮಧ್ಯೆ ಭಾವನಾತ್ಮಕ ಸಂಬಂಧವನ್ನು ಸಾಧಿಸುವ ಮೂಲಕ ಕೆಲವು ಪ್ರಕರಣಗಳನ್ನು, ಇನ್ನೂ ಕೆಲವೆಡೆ ಸಂದರ್ಶಿತರು ಮತ್ತು ಅವರ ಆತ್ಮೀಯ ವ್ಯಕ್ತಿಯೊಂದಿಗೆ ಸಂಭಾಷಣೆ ನಡೆಸುವಂತೆ, ಸಹಜ ವ್ಯಕ್ತಿಯೆಂಬಂತೆ, ಮಧ್ಯವರ್ತಿಗೂ, ಸಂಶೋಧಕರಿಗೂ ಇರುವ ಆತ್ಮೀಯ ಬಂಧವೆಂಬಂತಹ ವಾತಾವರಣವನ್ನು ಸೃಷ್ಟಿಸುವ ಮೂಲಕ ಪ್ರಕರಣಗಳನ್ನು ದಾಖಲಿಸಲು ಸಾಧ್ಯವಾಯಿತು. ಇಂಥ ಸಂರ್ಭಗಳಲ್ಲಿ ಸಾಂಪ್ರದಾಯಿಕ ಸಂಶೋಧನೆಯು ನಿರಾಕರಿಸುವ ಕೆಲವು

ವಿಧಾನಗಳನ್ನು ಉದ್ದೇಶಪೂರ್ವಕವಾಗಿ ಬಳಸಿಕೊಂಡು ಮಾಹಿತಿಯು ಸಂಗ್ರಹಿಸುವ ಅನಿವಾರ್ಯತೆಯುಂಟಾಯಿತು.

ಮಹಿಳೆಯರ ವಿರುದ್ಧ ಸಾರ್ವಜನಿಕ ವಲಯಗಳಲ್ಲಿ ನಡೆಯುವ ಹಿಂಸೆ-ದೌರ್ಜನ್ಯವು ಸಾಮಾಜಿಕತೆಯ ಹಿನ್ನೆಲೆಯನ್ನು ಬಹುಪಾಲು ಆಧರಿಸಿದೆ ಹಾಗೂ ಸಮಾಜದ ಬಹು ಪ್ರಮುಖ ಭಾಗವಾದ ಸಾರ್ವಜನಿಕ ವಲಯವು ಈ ಸಂಶೋಧನೆಗೆ ಆಕರವಾಗಿದೆ. ಹಾಗೆಯೇ ಮಹಿಳೆಯರ ಮೇಲಾಗುವ ಆಕ್ರಮಣಗಳನ್ನು ಗ್ರಹಿಸಲು ಹೆಣ್ಣಿನ ಆಂತರಿಕ ಲೋಕವನ್ನು ಪ್ರವೇಶಿಸುವ ಅಗತ್ಯತೆ ಮತ್ತು ಅನಿವಾರ್ಯತೆಗಳು ಒಟ್ಟು ಸ್ತ್ರೀವಾದಿ ಸಂಶೋಧಕರಿಗೆ ಇರುವಂತೆಯೇ ಪ್ರಸ್ತುತ ವಿಷಯವು ಹೊರತಾಗಿಲ್ಲವಾದ್ದರಿಂದ, ಈ ಅಧ್ಯಯನಕ್ಕೆ ಸ್ತ್ರೀವಾದಿ ಸಂಶೋಧನಾ ವಿಧಾನವು ಮಾಹಿತಿ ಸಂಗ್ರಹಣೆಗೆ, ವಿಷಯ ವಿಶ್ಲೇಷಣೆಗೆ ಹೆಚ್ಚು ಉಪಯುಕ್ತವಾಗಿ ನೆರವಿಗೆ ಬಂತು.

ಸಂಶೋಧನಾ ಅವಧಿಯ ಪ್ರಾರಂಭದಲ್ಲಿ ಪ್ರತಿಯೊಂದು ಸಂಶೋಧನೆಯು ಸಹ ಕೆಲವು ಅಧ್ಯಯನಗಳಿಂದ ಪ್ರಾಕಲ್ಪನೆಯನ್ನು ರೂಪಿಸಿಕೊಂಡು, ಅಧ್ಯಯನುದ್ದಕ್ಕೂ ಅದನ್ನು ಪರಿಶೀಲನೆಗೊಳಪಡಿಸಲಾಗುತ್ತದೆ. ಪ್ರಸ್ತುತ ಅಧ್ಯಯನವು ಹಲವು ಉಪ ಪ್ರಾಕಲ್ಪನೆಗಳು ಹೊಂದಿದ್ದು, ಯಾಜಮಾನ್ಯ ಮತ್ತು ಅಧೀನ ನೆಲೆಯ ಸಂಬಂಧಗಳು ಕೌಟುಂಬಿಕ ವಲಯದಿಂದ ಸಾರ್ವಜನಿಕ ವಲಯಕ್ಕೆ ವಿಸ್ತೃತವಾಗುತ್ತದೆಯೆಂಬ ಹಿನ್ನೆಲೆಯಲ್ಲಿ, ಕೌಟುಂಬಿಕ ವಲಯದ ದೌರ್ಜನ್ಯ-ಹಿಂಸೆಯ ವಿಸ್ತೃತರೂಪವೇ ಸಾರ್ವಜನಿಕ ವಲಯಗಳ ದೌರ್ಜನ್ಯ-ಹಿಂಸೆಗಳಲ್ಲೂ ಕಾಣಿಸಿಕೊಳ್ಳುತ್ತದೆ ಎಂಬ ಪ್ರಾಕಲ್ಪನೆಯು ರೂಪಿಸಿಕೊಂಡು ಅಧ್ಯಯನವನ್ನು ಮುಂದುವರೆಸಲಾಯಿತು. ಪ್ರತಿಯೊಂದು ಅಂಶದ ಚರ್ಚೆಯಲ್ಲಿಯೂ ಸಹ ಪ್ರಾಕಲ್ಪನೆಯು ಪರೀಕ್ಷೆಗೊಳಪಡಿಸಲಾಯಿತು.

ಒಟ್ಟಿನಲ್ಲಿ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ಹಿಂಸೆ-ದೌರ್ಜನ್ಯವು, ಜಾಗತಿಕ ಮಟ್ಟದ ಜ್ವಲಂತ ಸಮಸ್ಯೆಯಾಗಿದ್ದು, ಮಹಿಳೆಯರ ವಿರುದ್ಧ ನಡೆಯುವ ಯಾವುದೇ ಬಗೆಯ ಹಿಂಸೆ-ದೌರ್ಜನ್ಯಗಳ ಉದ್ದೇಶವು ಮಹಿಳಾ ಸಮುದಾಯ ನಿರಂತರವಾಗಿ ಅಧೀನ ನೆಲೆಯಲ್ಲಿಯೇ ಉಳಿಯಬೇಕೆಂಬುದು ಪುರುಷ ಪ್ರಧಾನ ವ್ಯವಸ್ಥೆಯ ರಾಜಕಾರಣವಾಗಿದ್ದು, ಸ್ವರೂಪಗಳಲ್ಲಿ ಭಿನ್ನವಾಗಿದ್ದರೂ ಮೂಲ ಉದ್ದೇಶ ಒಂದೇ ಆಗಿದೆ. ಮಹಿಳಾ ಬದುಕನ್ನು ನಿಯಂತ್ರಿಸಲು ದೌರ್ಜನ್ಯ-ಹಿಂಸೆಯು ಅಸ್ತ್ರವಾಗಿ ಬಳಕೆಯಾಗುತ್ತಿದೆ.

# ಅಧ್ಯಾಯ ಐದು

# ಸಮಾರೋಪ

---

೫.೧ ಅಧ್ಯಯನದ ಫಲಿತಗಳು

೫.೨. ಅಧ್ಯಯನದ ಮಿತಿಗಳು

೫.೩. ಅಧ್ಯಯನದ ಸಾಧ್ಯತೆಗಳು

೫.೪. ಅಧ್ಯಯನದ ಸಲಹೆಗಳು

# ಅಧ್ಯಾಯ ಐದು

# ಸಮಾರೋಪ

ಸ್ತ್ರೀವಾದಿ ಚಿಂತನಾ ಕ್ರಮವನ್ನು ಅಳವಡಿಸಿಕೊಂಡು ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ : ದೌರ್ಜನ್ಯ-ಹಿಂಸೆಗಳನ್ನು ಗ್ರಹಿಸುವ ಅಗತ್ಯತೆಯ ಹಿನ್ನೆಲೆಯಲ್ಲಿ ಈ ಅಧ್ಯಯನವನ್ನು ಕೈಗೊಳ್ಳಲಾಗಿತ್ತು. ಲಿಂಗ ಅಸಮಾನತೆ ಮತ್ತು ಲಿಂಗತಾರತ್ಯಮವನ್ನು ರೂಢಿಸಿಕೊಂಡಿರುವ ಸಮಾಜ ವ್ಯವಸ್ಥೆಯಲ್ಲಿ ಪುರುಷ ಪ್ರಧಾನತೆಯೆ ಮಹಿಳೆಯ ಒಟ್ಟು ಸಮಸ್ಯೆಗಳಿಗೆ ಕಾರಣವಾದ್ದರಿಂದ ಸಾರ್ವಜನಿಕ ವಲಯವನ್ನು ಆಕರವಾಗಿಸಿಕೊಂಡು ಮಹಿಳೆಯರ ಮೇಲಿನ ಹಿಂಸೆ-ದೌರ್ಜನ್ಯಗಳನ್ನು ಶೋಧಿಸಿ ಅರ್ಥೈಸಿಕೊಳ್ಳುವ ಯತ್ನವನ್ನು ಮಾಡಲಾಗಿದೆ. ಸಾಮಾಜಿಕ ವ್ಯವಸ್ಥೆಯ ಭಾಗವಾಗಿರುವ ಸಾರ್ವಜನಿಕ ವಲಯವೂ ಲಿಂಗ ಪಕ್ಷಪಾತದ ನಿಲುವನ್ನು ರೂಢಿಸಿಕೊಂಡಿರುವುದಕ್ಕೆ ಹೊರತಾಗಿಲ್ಲವೆಂಬುದಕ್ಕೆ, ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯನ್ನು ನಿರಂತರವಾಗಿ ಅಧೀನ ನೆಲೆಯಲ್ಲಿಯೇ ಇರಿಸಲಾಗಿದೆ. ಸಮಗ್ರ ಅಧ್ಯಯನದ ಬಹುಮುಖ್ಯ ಉದ್ದೇಶವಾದ ಯಾಜಮಾನ್ಯತೆ ಮತ್ತು ಅಧೀನತೆಯು ಸ್ತ್ರೀ-ಪುರುಷ ಸಂಬಂಧಗಳ ಒಟ್ಟು ವಿವರಗಳಲ್ಲಿ ಕಾಣಿಸುವುದನ್ನು ಗ್ರಹಿಸಲಾಗಿದೆ. ಸಂಶೋಧನೆಯ ಪ್ರಾಕಲ್ಪನೆಯಿಂದ ಕೌಟುಂಬಿಕ ವಲಯದ ಹಿಂಸೆ - ದೌರ್ಜನ್ಯದ ವಿಸ್ತೃತ ರೂಪವೇ ಸಾರ್ವಜನಿಕ ವಲಯದಲ್ಲೂ ಮುಂದುವರಿದಿದೆಯೆಂಬುದಕ್ಕೆ ಅಧ್ಯಯನದ ಉದ್ದಕ್ಕೂ ಸಾಕ್ಷಿ ಪುರಾವೆಗಳೊಂದಿಗೆ ಚರ್ಚೆಗೊಳಪಡಿಸಲಾಗಿದೆ. ಹೀಗೆ ಮಹಿಳೆಯರ ವಿರುದ್ಧ ನಡೆಯುವ ಹಿಂಸೆ - ದೌರ್ಜನ್ಯದ ಸ್ವರೂಪವನ್ನು ಗ್ರಹಿಸುವಾಗ ಬಹುಬಗೆಯ ಸಂಗತಿಗಳು ಅನಾವರಣಗೊಂಡಿವೆ. ಈ ಬಗೆಯ ಫಲಿತಗಳನ್ನು ಪಡೆಯಲು, ಸಂಶೋಧನೆಯ ನಿಯಮಗಳಿಗೆ ಪೂರಕವಾಗಿ ಅಧ್ಯಯನದ ಅನುಕೂಲಕ್ಕಾಗಿ ಕೆಲವು ಉದ್ದೇಶಗಳನ್ನು, ವ್ಯಾಪ್ತಿಯನ್ನು ರೂಪಿಸಿಕೊಳ್ಳಲು ಈವರೆಗೂ ನಡೆದಂತಹ ಪೂರಕ ಅಧ್ಯಯನಗಳನ್ನು ಸಮೀಕ್ಷೆಗೊಳಪಡಿಸಲಾಯಿತು. ಉದಾ:- ಗ್ರೇಡಾಲರ್ನರ್ ಅವರ ಕ್ರಿಯೇಶನ್ ಆಫ್ ಪೆಟ್ರಿಯರ್ಕಿ; ಎ ರಿಸೋರ್ಸ್ ಹ್ಯಾಂಡ್ ಬುಕ್ ಆಫ್ ವಯಲೆನ್ಸ್ ಅಗೆನ್‌ಸ್ಟ್ ವುಮೆನ್ ಸಂ. ಕ್ಲೈರ್. ಎಂ. ಅನೆಚೆಟ್ಟಿ, ಜೇಫರಿ. ಎಲ್. ಎಲ್ಸನ್ ರೆಸಿಡಿ ಬರ್ಗನ್; ಸಿಮೊನ್ ದ ಬೋವಾ ದ ಸೆಕೆಂಡ್ ಸೆಕ್ಸ್ ಒಂದು ಕನ್ನಡ ಓದು - ಡಾ. ಎಚ್.ಎಸ್. ಶ್ರೀಮತಿ; ಇತ್ಯಾದಿ ಗ್ರಂಥಗಳು ಮತ್ತು ಹಲವು ಲೇಖನಗಳು, ಸಂಶೋಧನಾ ವರದಿಗಳನ್ನು ಸಮೀಕ್ಷಿಸಿದಾಗ ಪ್ರಸ್ತುತ ಅಧ್ಯಯನದ ಒಂದು ಚೌಕಟ್ಟನ್ನು ರೂಪಿಸಿಕೊಳ್ಳಲು ಸಾಧ್ಯವಾಯಿತು. ಹೀಗೆ ರೂಪಿಸಿಕೊಂಡ

ಅಧ್ಯಯನದ ಉದ್ದೇಶ, ವ್ಯಾಪ್ತಿ, ಅದರ ಬಳಿಕ ಉಪಯುಕ್ತತೆಯನ್ನು, ಕೆಲವು ಆಧಾರಗಳ ಸಹಿತ ಒಟ್ಟು 'ಅಧ್ಯಯನದ ಸ್ವಯಂ ವಿಶ್ಲೇಷಣೆ'ಯನ್ನು ಈ ಅಧ್ಯಾಯವು ಒಳಗೊಂಡಿದೆ. ಅಲ್ಲದೆ ಈ ಬಗೆಯ ಅಧ್ಯಯನ ಕ್ರಮದಿಂದ ಲಭ್ಯವಾದ ಫಲಿತಗಳಿಂದ, ಸಮಸ್ಯೆಯ ನಿವಾರಣೆಗಾಗಿ ಮಹಿಳಾ ಹೋರಾಟಗಳು ಸಾಗುತ್ತಿರುವ ಮಾರ್ಗಗಳಿಗೆ ಪೂರಕವಾಗುವ ಹೊಸ ಬಗೆಯ ಆಯಾಮಗಳನ್ನು ಮತ್ತು ಮಾರ್ಗಗಳನ್ನು ಶೋಧಿಸುವಲ್ಲಿ ಉಪಯುಕ್ತವಾಗುವುದೆ? ಎಂಬುದನ್ನು ಪರೀಕ್ಷೆಗೊಳಪಡಿಸುವುದು ಈ ಅಧ್ಯಾಯದ ಆಶಯವಾಗಿದೆ.

**ಪ್ರಾಕಲ್ಪನೆಯ ರೂಪಿಕೆ - ಪ್ರಬಂಧವಾಗಿಸಿಕೊಂಡ ಸ್ವರೂಪ**

ಪ್ರಸ್ತುತ ವಿಷಯವನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಳ್ಳುವುದಕ್ಕೆ ಪೂರ್ವಭಾವಿಯಾಗಿ, ಅಧ್ಯಯನ ಮಾಡಿದ ಕೆಲವು ಆಕರ, ಸಾಮಗ್ರಿಗಳು ಸಂಶೋಧನೆಯ ಪ್ರಾಕಲ್ಪನೆ ರೂಪಿಕೆಗೆ ಪ್ರೇರಣೆಯಾದವು. ಜಾಗತಿಕ ಮಟ್ಟದಲ್ಲಿ ಚರ್ಚೆಯಾಗುತ್ತಿರುವ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ - ಹಿಂಸೆಗಳ ಕುರಿತು ಕನ್ನಡದಲ್ಲಿ ಸಮಗ್ರ ಅಧ್ಯಯನಗಳು ನಡೆದಿಲ್ಲವೆಂಬುದನ್ನು ಕಂಡುಕೊಳ್ಳಲಾಯಿತು. ಅದರಲ್ಲೂ ಸಾರ್ವಜನಿಕ ವಲಯದ ಕುರಿತ ಬಿಡಿ ಅಧ್ಯಯನಗಳು ಸಾಕಷ್ಟು ಕಂಡು ಬರುತ್ತವೆ. ಇಂತಹವುಗಳಲ್ಲಿ ಸಾಹಿತ್ಯ, ಸಂಸ್ಕೃತಿ ಮತ್ತು ಮಹಿಳೆ - ಸಾರಾ ಅಬೂಬಕರವರ ಪುಸ್ತಕದಲ್ಲಿ ಮಹಿಳೆಯ ಮೇಲಿನ ದೌರ್ಜನ್ಯದ ಬಿಡಿ ಲೇಖನಗಳನ್ನು ಕಾಣಬಹುದು, ಮಹಿಳೆ, ಕಾನೂನು ಮತ್ತು ನ್ಯಾಯ - ಗೀತಾ.ಕೆ.ಎಸ್. ಅವರ ಪಿಎಚ್.ಡಿ. ಮಹಾಪ್ರಬಂಧದಲ್ಲಿ ವಿವಾಹ, ವರದಕ್ಷಿಣೆ, ವಿಚ್ಛೇದನ, ಆಸ್ತಿ ಹಕ್ಕು ಇತ್ಯಾದಿಗಳ ಕುರಿತು ಅಧ್ಯಯನವನ್ನು ಮಾಡಲಾಗಿದೆ. ಹಾಗೆ ದಿನಪತ್ರಿಕೆ, ವಾರಪತ್ರಿಕೆಗಳಲ್ಲಿ ಆ್ಯಸಿಡ್ ದಾಳಿ, ಉದ್ಯೋಗ ವಲಯಗಳಲ್ಲಿ ಬಲಿಪಶುವಾದ ಕಾಲ್‌ಸೆಂಟರ್ ಪ್ರತಿಭಾ, ತಾನಿಯ ಪ್ರಕರಣಗಳು, ಸಾಧನಾ ವಲಯಕ್ಕೆ ಮುಖಾಮುಖಿಯಾದ ಸಂದರ್ಭಗಳಲ್ಲಿ ಹೆಚ್ಚು ವಿವಾದಕ್ಕೊಳಗಾದ ಸಾನಿಯಾಮಿರ್ಜಾ, ತಸ್ಲೀಮಾ ನಸರಿನ್‌ರ ಕುರಿತ ಬಿಡಿ ಲೇಖನಗಳು ಇತ್ಯಾದಿ ಮಾಹಿತಿಗಳನ್ನು ಗಮನಿಸಿದಾಗ ಇಂತಹವನ್ನು ಸಮಗ್ರ ಅಧ್ಯನಕ್ಕೊಳಪಡಿಸಬಹುದೆ? ಎಂಬ ಪ್ರಶ್ನೆಗಳನ್ನು, ಕೌಟುಂಬಿಕ ವಲಯದ ಸಂಗತಿಗಳ ಜೊತೆಗಿರಿಸಿ ತುಲನಾತ್ಮಕವಾಗಿ ಚರ್ಚಿಸಿದಾಗ ಯಾಜಮಾನ್ಯತೆ ಮತ್ತು ಅಧೀನ ನೆಲೆಯ ಸ್ವರೂಪಗಳು ಸ್ತ್ರೀ-ಪುರುಷರ ಸಂಬಂಧಗಳಲ್ಲಿ ಕಾಣಿಸಿಕೊಳ್ಳುವ ಬಗೆ ಹಾಗೂ ಇವುಗಳು ನಿರಂತರವಾಗಿ ಸ್ಥಿರೀಕರಿಸುವಲ್ಲಿ ಮಹಿಳೆಯರ ಮೇಲಿನ ಆಕ್ರಮಣಗಳನ್ನು ಆಧರಿಸಿದ ಕೆಲವು ಸಂಗತಿಗಳನ್ನು ಪರಿಶೀಲಿಸುವುವರೊಂದಿಗೆ, ಈ ಸ್ಥೂಲ ಅಧ್ಯಯನದ ಮೂಲಕ ಕೌಟುಂಬಿಕ ವಲಯದ ಹಿಂಸೆ - ದೌರ್ಜನ್ಯದ ವಿಸ್ತೃತ ರೂಪವೇ ಸಾರ್ವಜನಿಕ ವಲಯಗಳಲ್ಲಿ ಕಾಣಿಸಿಕೊಳ್ಳಬಹುದೆಂಬುದನ್ನು ಅಧ್ಯಯನದ ಪ್ರಾಕಲ್ಪನೆಯನ್ನಾಗಿ ರೂಪಿಸಿಕೊಳ್ಳಲು ಸಾಧ್ಯವಾಯಿತು.

ಹೀಗೆ ರೂಪಿತಗೊಂಡ ಸಂಶೋಧನೆಯ ಪ್ರಾಕಲ್ಪನೆಯನ್ನು ಪರೀಕ್ಷೆಗೊಳಪಡಿಸಲು ಸಾರ್ವಜನಿಕ ವಲಯವನ್ನು ಆಕರವಾಗಿಸಿಕೊಳ್ಳುವ ಮೂಲಕ ಅಧ್ಯಯನಕ್ಕೆ ತೊಡಗಬಹುದೆ? ಎಂಬ ಪ್ರಶ್ನೆಯೊಂದಿಗೆ

ಕೆಲವು ತಜ್ಞರನ್ನು ಭೇಟಿ ಮಾಡಿದಾಗ ಬಹುಪಾಲು ಉತ್ತರಗಳಲ್ಲಿ ಇಂಥದೊಂದು ಪರಿಕಲ್ಪನೆಯನ್ನು ಅಧ್ಯಯನಕ್ಕೊಳಪಡಿಸುವುದು ಸಾಧ್ಯವಾ? ಎಂಬ ಸಂದೇಹಗಳನ್ನು ವ್ಯಕ್ತಪಡಿಸಿರುವವರ ಪ್ರಮಾಣವು ಹೆಚ್ಚು ಅಲ್ಲದೆ ಸಾರ್ವಜನಿಕ ವಲಯಗಳಲ್ಲಿ ಹಿಂಸೆ-ದೌರ್ಜನ್ಯಗಳಿರಲು ಸಾಧ್ಯವಿಲ್ಲ. ಇಲ್ಲಿ ಲೈಂಗಿಕ ಕಿರುಕುಳವಷ್ಟೇ ಎಂಬ ಅಭಿಪ್ರಾಯಗಳು ದೊರೆತವು.

ಹಾಗಾದರೆ ಸಾರ್ವಜನಿಕ ವಲಯಗಳಲ್ಲಿ ಹಿಂಸೆ - ದೌರ್ಜನ್ಯಕ್ಕೊಳಗಾದ ಮಹಿಳೆ ಲೈಂಗಿಕ ಕಿರುಕುಳಕಷ್ಟೇ ಬಲಿಯಾಗುತ್ತಾಳೆಯೆ? ಹಾಗೂ ಈ ಕಿರುಕುಳಕ್ಕೊಳಗಾಗದ ಮಹಿಳೆಯ ಮೇಲೆ ದೌರ್ಜನ್ಯ ಹಿಂಸೆಗಳಾಗುವುದಿಲ್ಲವೆ? ಎಂಬ ಪ್ರಶ್ನೆಗಳಿಗೆ ಉತ್ತರಿಸಿಕೊಳ್ಳಲು ದೌರ್ಜನ್ಯ - ಹಿಂಸೆ, ಸಾರ್ವಜನಿಕ ವಲಯಗಳನ್ನು ವ್ಯಾಖ್ಯಾನಕ್ಕೊಳಪಡಿಸಿದಾಗ, ಪ್ರಸ್ತುತ ಅಧ್ಯಯನವು ಸೂಕ್ತವೆಂದು ಇಂಥದೊಂದು ಬಗೆಯ ಅಧ್ಯಯನವು ಮಹತ್ವವಾದುದೆಂಬುದನ್ನಾಧರಿಸಿ ಅಧ್ಯಯನದ ಪ್ರಾಕಲ್ಪನೆಯನ್ನು ಪ್ರಬಂಧವಾಗಿಸಿಕೊಳ್ಳುವಲ್ಲಿ ಸಾಧ್ಯವಾಯಿತು. ಅಂತೆಯೇ ಅಧ್ಯಯನದುದ್ದಕ್ಕೂ ಈ ಪ್ರಾಕಲ್ಪನೆಯನ್ನು ಪರೀಕ್ಷೆಗೊಳಪಡಿಸಲಾಗಿದೆ.

### ಅಧ್ಯಯನ ಕ್ರಮದ ವಿಶ್ಲೇಷಣೆ

ಪ್ರಸಕ್ತ ಸಂಶೋಧನೆಯ ವಿಷಯವನ್ನು ಗ್ರಹಿಸಲು ವಿಸ್ತೃತವಾದ ಚರ್ಚೆಗೊಳಪಡಿಸಲು ಕೆಲವು ಕ್ರಮಗಳನ್ನು ರೂಪಿಸಿಕೊಳ್ಳಲಾಗಿತ್ತು. ಅಧ್ಯಯನದ ಪ್ರಾಕಲ್ಪನೆಯನ್ನು ಆಧರಿಸಿ ಒಟ್ಟು ಸಂಶೋಧನೆಗೆ ಕೆಲವು ಉದ್ದೇಶಗಳನ್ನು ಗುರುತಿಸಿಕೊಳ್ಳಲಾಗಿದೆ. ಹಾಗೆಯೇ ಈ ಬಗೆಯ ಉದ್ದೇಶಗಳ ಈಡೇರಿಸಿಕೊಳ್ಳುವಿಕೆಗೆ ಸಮಗ್ರ ಸಂಶೋಧನೆಯನ್ನು ಎರಡು ಪ್ರಮುಖ ಭಾಗಗಳಲ್ಲಿ ವಿಭಾಗೀಕರಿಸಲಾಯಿತು. ಮೊದಲನೆಯ ಭಾಗವು ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ-ಹಿಂಸೆಗಳ ತಾತ್ವಿಕ ಚರ್ಚೆಯನ್ನು ಒಳಗೊಂಡರೆ, ತಾತ್ವಿಕ ಚಿಂತನೆಗಳನ್ನು ವಾಸ್ತವಕ್ಕೆ ಮುಖಾಮುಖಿಯಾಗಿಸಲು, ಕ್ಷೇತ್ರಕಾರ್ಯವನ್ನು ಎರಡನೆಯ ಭಾಗದಲ್ಲಿ ಅಧ್ಯಯನಕ್ಕೊಳಪಡಿಸಲಾಯಿತು.

ಮೊದಲನೆಯ ಭಾಗದಲ್ಲಿ ಅಧ್ಯಯನದ ಪ್ರಮುಖ ಪರಿಕಲ್ಪನೆಗಳನ್ನು ವ್ಯಾಖ್ಯಾನಿಸಿಕೊಳ್ಳಲಾರಂಭಿಸಿದಾಗ, ದೌರ್ಜನ್ಯ-ಹಿಂಸೆ; ಸಾರ್ವಜನಿಕ ವಲಯದ ಕುರಿತು ನಡೆದಿರುವ ಸಾಮಾನ್ಯೀಕರಿಸಿದ ಚಿಂತನೆಗಳಲ್ಲಿ ಮಹಿಳೆಯು ಅದೃಶ್ಯವಾಗುತ್ತಿರುವ ಸಂಗತಿಗಳು ಅಧ್ಯಯನದ ಮೂಲಭೂತ ಪ್ರಶ್ನೆಯಾಗಿದ್ದು, ಈ ಪ್ರಶ್ನೆಯು ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ - ಹಿಂಸೆಯನ್ನು ವಿಶಿಷ್ಟವಾಗಿ ಅಧ್ಯಯನಕ್ಕೊಳಪಡಿಸುವುದಕ್ಕೆ ಸಾಧ್ಯವಾಯಿತು. ಹಾಗೆಯೇ ವರ್ಗ, ಜಾತಿ, ಪ್ರದೇಶಗಳಿಗಿಂತ ಭಿನ್ನವಾಗಿ ನಿಲ್ಲುವ ಲಿಂಗಶ್ರೇಣೀಕರಣದ ಪ್ರಶ್ನೆಗಳು ಬಹುಮುಖ್ಯವಾದ ಚರ್ಚೆಯ ನೆಲೆಯಲ್ಲಿ ಕಾಣಿಸಿಕೊಂಡವು.

ಸಮಾಜ ವ್ಯವಸ್ಥೆಯಲ್ಲಿ ಹಿಂಸೆ-ದೌರ್ಜನ್ಯಗಳು ಸ್ತ್ರೀ-ಪುರುಷರೀರ್ವರ ಮೇಲೂ ನಡೆಯುತ್ತಿರುವುದು ಸತ್ಯಾಂಶವಾದರೂ ಮಹಿಳೆಯರ ಮೇಲೆ ನಡೆಯುತ್ತಿರುವ ಆಕ್ರಮಣಗಳು ಹೆಚ್ಚಾಗಿರುವ ಕಾರಣದಿಂದಲೇ

ಎಂಬ ಸಂಗತಿಗಳನ್ನು ಸ್ಪಷ್ಟಪಡಿಸಲು ಸಾಧ್ಯವಾಯಿತು. ಅಧಿಕಾರವು ದೌರ್ಜನ್ಯದ ಸಹಚರಿ ಮತ್ತು ಅಸಮಾನ ಅಧಿಕಾರ ಸಂಬಂಧಗಳನ್ನು ನಿಭಾಯಿಸಲು ದೌರ್ಜನ್ಯ - ಹಿಂಸೆಯು ಪ್ರಬಲ ಅಸ್ತ್ರವಾಗಿ ಬಳಕೆಯಾಗುತ್ತದೆಯೆಂಬ ಪರ್ಯಾಲೋಚನೆಯೊಂದಿಗೆ ಸಾರ್ವಜನಿಕ ವಲಯದಲ್ಲಿ ಮಹಿಳೆಗೆ ಲಭ್ಯವಾಗುತ್ತಿರುವ ಸ್ವರೂಪವನ್ನು ಮಹಿಳಾ ಪೋಲಿಸ್ ಪೇದೆಗಳು ಮತ್ತು ಗ್ರಾಮ ಪಂಚಾಯ್ತಿಯ ಅಧ್ಯಕ್ಷ - ಉಪಾಧ್ಯಕ್ಷರನ್ನು ಸಂದರ್ಶಿಸಿದಾಗ, ಮಹಿಳೆಗೆ ಲಭ್ಯವಾಗುತ್ತಿರುವ ಅಧಿಕಾರವು ನೆಪಮಾತ್ರ ಅಧಿಕಾರವೆಂಬುದು ಖಚಿತವಾಗುತ್ತದೆ. ಹಾಗೆಯೇ ಮೂಲತಃ ಅಧಿಕಾರಕ್ಕೆ ಲಿಂಗಭೇದವಿಲ್ಲ. ಆದರೆ ಸಾಮಾಜಿಕ ವಾಸ್ತವದಲ್ಲಿ, ಅದರ ಬಳಕೆಯಲ್ಲಿ, ಹಂಚಿಕೆಯಲ್ಲಿ ಲಿಂಗಭೇದವು ಕಾಣಬಹುದು. ಅಧಿಕಾರವನ್ನು ಆದ್ದರಿಂದ ಮಹಿಳೆಗೆ ನಿಭಾಯಿಸುವ ಪ್ರಶ್ನೆಗಳಿಗೆ ಅವಕಾಶಗಳನ್ನು ಒದಗಿಸದೇ, ಅವಳಿಗೆ ದತ್ತವಾಗಿರುವ ಅಧಿಕಾರದಲ್ಲಿ ಹಸ್ತಕ್ಷೇಪ ಮಾಡುವ ಮೂಲಕ, ಅದನ್ನು ನಿಭಾಯಿಸುವಲ್ಲಿ ಅವಳು ಅಸಮರ್ಥಳೆಂದು ನಿರೂಪಿಸುವಲ್ಲಿ ವ್ಯವಸ್ಥೆಯ ಯತ್ನವನ್ನು ಗುರುತಿಸಲು ಸಾಧ್ಯವಾಗಿರುವುದು ಸ್ತ್ರೀವಾದಿ ಸಂಶೋಧನಾ ವಿಧಾನಗಳ ಅನ್ವಯಿಕತೆಯಿಂದಾಗಿದೆ.

ಮಹಿಳೆಯರ ಒಟ್ಟು ಸಮಸ್ಯೆಗಳಿಗೆ ಕಾರಣಗಳು ಸಮಾಜ ವ್ಯವಸ್ಥೆಯಲ್ಲಿ ಅಡಕವಾಗಿವೆ. ಆದರೆ ಅವುಗಳಿಗೆ ಪರಿಹಾರಗಳನ್ನು ಸಮಾಜ ವ್ಯವಸ್ಥೆಯಲ್ಲಿ ಶೋಧಿಸುವ ಬದಲು, ವ್ಯಕ್ತಿಗತ (ಮಹಿಳೆ) ನೆಲೆಯಲ್ಲಿ ಶೋಧಿಸತೊಡಗಿದಾಗ ಸಮಸ್ಯೆಗೆ ಕಾರಣವು ಮಹಿಳೆಯೆ ಎಂಬಂತೆ ಪ್ರತಿನಿಧಿಸಲಾಗಿದೆ. ಈ ಅಂಶವು ಕ್ಷೇತ್ರಕಾರ್ಯದಲ್ಲಿ ಪ್ರಕರಣಗಳನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿ ಹೆಚ್ಚು ಸ್ಪಷ್ಟವಾಗಿಸಿಕೊಳ್ಳಲು ಸಾಧ್ಯವಾಯಿತು. ಉದಾ:- ಗ್ರಾಮಪಂಚಾಯ್ತಿ ಮಹಿಳೆಯರನ್ನು ಸಂದರ್ಶಿಸಿದಾಗ ಬಹುಪಾಲು ಮಹಿಳೆಯರು ತಮಗೆ ಲಭ್ಯವಾದ ಅಧಿಕಾರವನ್ನು ನಿಭಾಯಿಸಲು ಸಾಧ್ಯವಿಲ್ಲವಾದ್ದರಿಂದ ಊರ ಗೌಡರೊ, ಶ್ರೀಮಂತರೊ, ಮೇಲ್ವರ್ಗದವರೊ, ಗಂಡನೊ, ಮಗನೊ ಇತ್ಯಾದಿಯವರು ನಿಭಾಯಿಸುವುದು ಹೆಚ್ಚು ಸೂಕ್ತವೆಂದು ತಮ್ಮ ಅಧಿಕಾರವನ್ನು ಅವರುಗಳು ನಿಭಾಯಿಸುತ್ತಿರುವುದು ಎಂಬ ಸಂಗತಿಗಳನ್ನು ಹೊರಹಾಕಿದರೂ, ಮೇಲ್ನೆಲೆಯ ಈ ತೀರ್ಮಾನಗಳ ಆಳಕ್ಕೆ ಇಳಿದಾಗ ಆ ಬಗೆಯ ಅಧಿಕಾರ ನಿಭಾಯಿಸಲಾಗದಿರುವಂತಹ ಕುಂದು - ಕೊರತೆಗಳೇನು ಎಂಬಂತಹ ಅಂಶಗಳು ಹೊರಬರಲು ಸಾಧ್ಯವಾಗಿದೆ. ಸಮುದಾಯ ಅಧ್ಯಯನಗಳಲ್ಲಿ ತೊಡಗಿಸಿಕೊಂಡವರು ಇಂತಹ ಸಮಸ್ಯೆಗಳ ನೈಜತೆಯ ಶೋಧವು, 'ವ್ಯಕ್ತಿನಿಷ್ಠ' ವಿಧಾನವನ್ನು ವಿಶಿಷ್ಟವಾಗಿ ಆಯಾಮಗಳಲ್ಲಿ ಅನುಸರಿಸುವುದರಿಂದಲೆ, ಹಾಗೆಯೇ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ಹಿಂಸೆ-ದೌರ್ಜನ್ಯಗಳಿಗೆ ಸಂಬಂಧಿಸಿದ ಅಪೇಕ್ಷಿತ ಮಾಹಿತಿಯನ್ನು ಪಡೆಯುವಲ್ಲಿ ಈ ವಿಧಾನವು ಪೂರಕವಾಯಿತು.

ಹೆಣ್ಣಿಗೆ ವಿಧಿಸಲಾಗಿರುವ ಮರ್ಯಾದೆಯ ಚೌಕಟ್ಟು ಮತ್ತು ನಿರ್ಬಂಧಗಳಲ್ಲಿ ಜೀವಿಸಬೇಕಾದಂತಹ ಸಂದರ್ಭಗಳು ಸಾರ್ವಜನಿಕ ವಲಯಗಳಲ್ಲಿ ಇನ್ನಷ್ಟು ಗಾಢವಾಗಿ ಕಂಡು ಬರುವುದರಿಂದ, ಅವಳ ಮೇಲಾಗುವ ದೌರ್ಜನ್ಯ-ಹಿಂಸೆಯನ್ನು ಸಮಸ್ಯೆಯೆಂದು ಗುರುತಿಸುವುದೇ, ಅಧ್ಯಯನ ಕ್ರಮದಲ್ಲಿ

ಬಹುಮುಖ್ಯ ಸವಾಲಾಗಿ ತಲೆದೋರಿತು, ಸಮಸ್ಯೆಯ ಶೋಧವೇ ಸವಾಲಾದಾಗ, ಇದನ್ನು ನಿರ್ವಹಿಸುವುದು, ನಿವಾರಿಸುವುದು ಇನ್ನಷ್ಟು ಸಂಕೀರ್ಣತೆಯಿಂದ ಕೂಡಿದ ಸಂಗತಿ. ಆದ್ದರಿಂದ ಅಧ್ಯಯನ ಕ್ರಮವೊಂದು ರೂಪಿಸಿಕೊಳ್ಳುವ ಹಂತದಿಂದ ಅದನ್ನು ಬಳಸಿಕೊಳ್ಳುವಲ್ಲಿ, ಫಲಿತಗಳನ್ನು ಕಂಡುಕೊಳ್ಳುವಲ್ಲಿ ಹಲವು ತೊಡಕುಗಳುಂಟಾಗಿರುವುದು ಸಹಜವಾಗಿದೆ. ಮಹಿಳೆಯರಿಗಷ್ಟೇ ಸಂಪ್ರದಾಯ, ಸಂಸ್ಕೃತಿಯ ಹೊಣೆಯನ್ನು ಹೊರಿಸಲಾಗಿರುವ ಸಮಾಜ ವ್ಯವಸ್ಥೆಯಲ್ಲಿ ಅವಳಿಗಾಗುವ ಸಂಕಷ್ಟಗಳನ್ನು ಹೊರಹಾಕಲಾಗದಂತಹ ಪರಿಸ್ಥಿತಿಯಲ್ಲಿ ಬದುಕುತ್ತಿರುವ ಮಹಿಳೆಯರು ಅವರ ಮೇಲಾಗುವ ದೌರ್ಜನ್ಯ - ಹಿಂಸೆಗಳನ್ನು ಹಂಚಿಕೊಳ್ಳಲಾಗದಂತಹ ಸನ್ನಿವೇಶಗಳಲ್ಲಿ ಮಹಿಳಾ ಪೋಲಿಸ್ ಪೇದೆಗಳು ಮತ್ತು ರಾಜಕೀಯ ವಲಯದ ಗ್ರಾಮಪಂಚಾಯ್ತಿ ಮಹಿಳೆಯರ ಮೇಲಾಗುವ ದೌರ್ಜನ್ಯ-ಹಿಂಸೆಗಳನ್ನು ದಾಖಲಿಸುವುದು ಸಂಕೀರ್ಣವಾದ ಪ್ರಶ್ನೆಯಾಗಿ ಎದುರಿಸಬೇಕಾಯಿತು. ಸಾಕಷ್ಟು ಆಪ್ತತೆಯನ್ನು ಸಾಧಿಸಿ ಪ್ರಕರಣಗಳನ್ನು ದಾಖಲಿಸುವ ಪ್ರಯತ್ನಗಳಲ್ಲಿ ಮಹಿಳೆಯರು ತಮ್ಮ ಮೇಲೆ ಆಗುವ ದೌರ್ಜನ್ಯ-ಹಿಂಸೆಗಳನ್ನು ಅರಿಯದಂತಹ ಸ್ಥಿತಿ ಕೆಲವರದಾದರೆ, ಅವುಗಳು ಪ್ರಜ್ಞೆಗೆ ಬಂದರೂ ಅವುಗಳನ್ನು ಹೊರಹಾಕುವಲ್ಲಿ ತೋರಿದ ಭಯ, ಹಿಂಜರಿಕೆ, ಆತಂಕಗಳು ಮತ್ತು ಅವುಗಳನ್ನು ಪ್ರತಿಭಟಿಸಿದಾಗ ಇನ್ನಷ್ಟು ಭೀಕರವಾದ ದೌರ್ಜನ್ಯ - ಹಿಂಸೆಗಳಿಗೆ ಒಳಗಾದ ಸಂದರ್ಭಗಳು ಹಲವು ಮಹಿಳೆಯರಲ್ಲಿ ಕಾಣಿಸಿಕೊಂಡಿರುವುದು, ಮಹಿಳೆಯರಿಗೆ ಇರುವ ಅಭದ್ರತೆ ಮತ್ತು ಅರಕ್ಷಿತತೆಯ ಪ್ರಶ್ನೆಗಳಿಂದ ಸಮಸ್ಯೆಯ ಆಳವನ್ನು ಗ್ರಹಿಸುವ ಪ್ರಯತ್ನ ಮಾಡಲಾಯಿತು.

ತಾತ್ತ್ವಿಕ ಚರ್ಚೆಯನ್ನು ಒಳಗೊಂಡ ವಿವಿಧ ಸಾರ್ವಜನಿಕ ವಲಯಗಳಲ್ಲಿ ನಡೆಯುವ ಹಿಂಸೆ - ದೌರ್ಜನ್ಯಗಳನ್ನು ಅಧ್ಯಯನಕ್ಕೊಳಪಡಿಸಿದಾಗ ಒಂದೊಂದು ವಲಯದಲ್ಲಿಯೂ ಅಡಕವಾಗಿರುವ ಉಪವಲಯಗಳು ಅಲ್ಲಿನ ಹಿಂಸೆಯ - ದೌರ್ಜನ್ಯ ಸ್ವರೂಪವು ಸಂಶೋಧನೆಯ ಆರಂಭಿಕ ಹಂತಕ್ಕಿಂತಲೂ ಸಮಸ್ಯೆಯ ಆಳ, ವಿಸ್ತಾರ ಹಾಗೂ ದೌರ್ಜನ್ಯ - ಹಿಂಸೆಯ ವಿವಿಧ ಆಯಾಮಗಳನ್ನು ಶೋಧಿಸಲು ಸಾಧ್ಯವಾಯಿತು.

ಆದ್ದರಿಂದ ಒಟ್ಟು ಆರು ವಲಯಗಳಲ್ಲಿ ವಿಭಾಗಿಸಿಕೊಂಡ ವಿವಿಧ ಸಾರ್ವಜನಿಕ ವಲಯಗಳಲ್ಲಿ ಕ್ಷೇತ್ರಕಾರ್ಯಕ್ಕಾಗಿ ಉದ್ಯೋಗ ಮತ್ತು ರಾಜಕೀಯ ಎರಡು ವಲಯಗಳನ್ನು ಮಾತ್ರ ಆರಿಸಿಕೊಳ್ಳಲಾಯಿತು. ಇದರಲ್ಲಿಯೂ ಸಹ ರಕ್ಷಣಾಂಗ ವ್ಯವಸ್ಥೆಯ ಮುಖ್ಯ ಭಾಗವಾದ ಈ ಕ್ಷೇತ್ರಗಳಲ್ಲಿ ಹಲವು ಮಹಿಳೆಯರಿದ್ದಾರೆ. ಉದಾ:- ಮಹಿಳಾ ಸೈನಿಕರು, ಮಹಿಳಾ ಪೋಲಿಸರು ಇತ್ಯಾದಿ. ಇಲ್ಲಿ ಮಹಿಳಾ ಪೋಲಿಸರನ್ನು ಸಂದರ್ಶನಕ್ಕೆ ಅಳವಡಿಸಲಾಗಿದೆ. ಅದರಲ್ಲಿಯೂ ಸಹ ಕೆಳಸ್ತರದಲ್ಲಿ ಬರುವ ಪೋಲಿಸ್ ಪೇದೆಗಳ ಪ್ರಕರಣಗಳನ್ನು ವಿಶ್ಲೇಷಣೆಗೊಳಪಡಿಸಲಾಗಿದೆ. ಅದೇ ರೀತಿಯಾಗಿ ಗ್ರಾಮ ಪಂಚಾಯ್ತಿಯ ಅಧ್ಯಕ್ಷ - ಉಪಾಧ್ಯಕ್ಷರನ್ನು ಆಯ್ಕೆ ಮಾಡಿಕೊಂಡು ಸಂದರ್ಶನಕ್ಕೊಳಪಡಿಸಲಾಗಿದೆ.

ಸಂಶೋಧನೆಯ ಪ್ರಾರಂಭಿಕ ಹಂತದಲ್ಲಿ ರೂಪಿಸಿಕೊಳ್ಳಲಾದ ಅಧ್ಯಯನ ಕ್ರಮದಲ್ಲಿ ಸಾರ್ವಜನಿಕ ವಲಯದ ವಿಸ್ತೃತ ವ್ಯಾಪ್ತಿಯನ್ನು ಗ್ರಹಿಸಿ ಕ್ಷೇತ್ರಕಾರ್ಯದ ಮಿತಿಯಲ್ಲಿ ಮಾರ್ಪಾಟುಗಳನ್ನು

ಮಾಡಿಕೊಳ್ಳಲಾಯಿತು. ಗುಲಬರ್ಗಾ ಮತ್ತು ಜೇವರ್ಗಿ ತಾಲ್ಲೂಕುಗಳಿಗೆ ಮಾತ್ರ ಸೀಮಿತಗೊಳಿಸಿಕೊಳ್ಳಲಾಗಿದೆ.

ಅಧ್ಯಯನದ ತಾತ್ವಿಕತೆಯಷ್ಟೇ ಪ್ರಮುಖವಾದ ಘಟ್ಟವಾಗಿ ಕ್ಷೇತ್ರಕಾರ್ಯದ ಭಾಗವನ್ನು ವಿಭಜಿಸಿಕೊಳ್ಳಲಾಗಿದ್ದು, ಪುರುಷ ಚಿಂತನೆಯನ್ನು ಒಪ್ಪಿ ನಡೆದ ಮಹಿಳಾ ಸಮುದಾಯ, ಪ್ರತಿಭಟಿಸಿದ ಮಹಿಳಾ ಸಮುದಾಯಗಳೆರಡು ಹಿಂಸೆ - ದೌರ್ಜನ್ಯಕ್ಕೊಳಗಾಗುವ ಸಂಗತಿಗಳು ಕ್ಷೇತ್ರದಲ್ಲಿ ಲಭ್ಯವಾದ ಮಾಹಿತಿಗಳಿಂದ ಹೆಚ್ಚು ತಾರ್ಕಿಕವಾಗಿ ಗ್ರಹಿಸಲು ಸಹಕಾರಿಯಾಯಿತು. ಜೊತೆಗೆ ಮಹಿಳಾ ಸಂದರ್ಭಗಳಲ್ಲಿ ವ್ಯವಸ್ಥೆ ಸೃಷ್ಟಿಸುತ್ತಿರುವ ಸಂಕೀರ್ಣತೆಗಳು, ಪಿತೃಸಂಸ್ಕೃತಿಯ ಬದಲಾದ ಸ್ವರೂಪವನ್ನು ಗ್ರಹಿಸಿಕೊಳ್ಳಲು ಅಧ್ಯಯನವು ಸಹಕಾರಿಯಾಯಿತು.

ಮಹಿಳಾ ಬದುಕು ಪುರುಷ ಬದುಕಿಗೆ ಪೂರಕವಾಗಿ ನಿಲ್ಲಬೇಕೆನ್ನುವ ಆಶಯವನ್ನು ಹೊಂದಿರುವ ವ್ಯವಸ್ಥೆಯಲ್ಲಿ ಸ್ತ್ರೀ ಸಮುದಾಯದ 'ಅಸ್ತಿತ್ವ' ರೂಪಿಕೆಯನ್ನು ನಿರಂತರವಾಗಿ ತಳ್ಳಿ ಹಾಕುತ್ತಿರುವ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯು, ಆ ಬಗೆಯ ಎಲ್ಲೆಗಳನ್ನು ಮೀರಿ ಸಾಧನೆಗೆ ಮುಖಾಮುಖಿಯಾದ ಮಹಿಳೆಯ ಮೇಲಿನ ಹಿಂಸೆ - ದೌರ್ಜನ್ಯಗಳ ಪ್ರಮಾಣ ಭೀಕರವಾದುದೆಂಬುದಕ್ಕೆ ಬಂಗಾಳದ ವಿವಾದಾತ್ಮಕ ಲೇಖಕಿಯೆಂದು ಗುರುತಿಸಲಾದ ತಸ್ಲೀಮಾ ನಸರೀನ್ ಮತ್ತು ಕ್ರೀಡಾಪಟು ಸಾನಿಯಾ ಮಿರ್ಜಾರ ಮೇಲೆ ಧರ್ಮದ ಹೆಸರಿನಲ್ಲಿ ಆಕ್ರಮಣವೆಸಗಿದ ಸಂಗತಿಗಳೇ ಉದಾಹರಣೆಯಾಗಿ ನಿಲ್ಲುತ್ತವೆ. ಅಲ್ಲದೆ ಸಾಮಾನ್ಯ ಮಹಿಳೆಯರ ಮೇಲಾಗುವ ದೌರ್ಜನ್ಯ - ಹಿಂಸೆಗಳ ಸೂಕ್ಷ್ಮ ಗ್ರಹಿಕೆಯನ್ನು ಈ ಉದಾಹರಣೆಗಳು ಒದಗಿಸುತ್ತವೆ.

ವ್ಯವಹಾರ ಲೋಕವೆಂದೆ ಒಪ್ಪಿತವಾದ ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ಪ್ರವೇಶ ಆಶಾದಾಯಕ ಅಂಶವಾದರೂ, ಅಲ್ಲಿನ ಅತಂತ್ರತೆ - ಅಭದ್ರತೆ, ಅರಕ್ಷತೆಯಿಂದ ಜೀವಿಸುತ್ತಿರುವ ಮಹಿಳಾ ಸಮುದಾಯ ಅದಾರಾಚೆಗೆ ಬರುವಲ್ಲಿ, ಪುರುಷ ಸಮುದಾಯದಷ್ಟೆ ನಿರಾತಂಕವಾಗಿ ವ್ಯವಹರಿಸಲು ಸಾಧ್ಯವಾಗುವಂತಹ ಪೂರಕ ವಾತಾವರಣದ ಸೃಷ್ಟಿಯ ಅಗತ್ಯತೆ, ಒತ್ತಾಯದ ಭಾಗವಾಗಿ ಕೈಗೆತ್ತಿಕೊಂಡ ಈ ಅಧ್ಯಯನವು ದೌರ್ಜನ್ಯ - ಹಿಂಸೆಯ ವಿವಿಧ ಸ್ತರಗಳನ್ನು ಶೋಧಿಸಿ ಸಮಸ್ಯೆಯ ಸ್ವರೂಪವನ್ನು ಗ್ರಹಿಸಿಕೊಳ್ಳುವ ಸಣ್ಣ ಯತ್ನವಾಗಿದೆ.

### ಮಹಿಳಾ ಹೋರಾಟಗಳ ಸ್ವರೂಪ

ಸ್ತ್ರೀ ಕೇಂದ್ರಿತ ಚಿಂತನೆಯ ತಾತ್ವಿಕ ತಳಹದಿ ರೂಪಿಕೆಯ ಕ್ರಿಯೆಯು ಆರಂಭವಾಗಿರುವುದೇ ಮಹಿಳಾಪರ ಹೋರಾಟಗಳಿಂದ ಎಂದು ಹೇಳಬಹುದು. ೬೦ ಮತ್ತು ೭೦ರ ದಶಕದಲ್ಲಿ ದಟ್ಟವಾಗಿ ಬೆಳೆದು ಬಂದ ಸ್ತ್ರೀವಾದಿ ಚಿಂತನೆಗಳು, ಮಹಿಳಾಪರ ಹೋರಾಟಗಳಿಗೆ ಪೂರಕವಾಗಿ ನಿಲ್ಲಲು ಸಹಕಾರಿಯಾದವು. ಗಾಢವಾಗಿ ಬೇರೂರಿದ ಪುರುಷಪರ ಚಿಂತನೆಗಳ ಪರಿಣಾಮವು, ಮಹಿಳಾ ಬದುಕನ್ನು ರೂಪಿಸಿರುವ ಸಾಮಾಜೀಕರಣದ ಪಾತ್ರದಿಂದಾಗಿ, ಮಹಿಳಾ ಸಮಸ್ಯೆಗಳ ಶೋಧವೇ ಕಷ್ಟಕರವಾದ ಸವಾಲಾಗಿ

ನಿಲ್ಲುವುದು ಕಾಣಬಹುದಾಗಿದೆ. ಬಹುಪಾಲು ಹೋರಾಟಗಳ ವೈಫಲ್ಯಗಳಿಗೆ ಕಾರಣವೇ ಸಮಸ್ಯೆಯ ಮೂಲ ಬೇರುಗಳು ಶೋಧಿಸುವಲ್ಲಿ, ಮೂಲಕ್ಕೆ ತಲುಪುವಲ್ಲಿನ ವಿಫಲತೆಯನ್ನು ಆಧರಿಸಿವೆ. ಇದಕ್ಕೆ ಸೂಕ್ತ ಉದಾಹರಣೆಯಾಗಿ ಪದೇ - ಪದೇ ನಿವಾರಣೆಯಾಗದೆ ಕಾಣಿಸಿಕೊಳ್ಳುತ್ತಿರುವ ವರದಕ್ಷಿಣೆ ಸಮಸ್ಯೆ. ಈ ಸಮಸ್ಯೆಯ ನಿವಾರಣೆಗಾಗಿ ಪ್ರಾರಂಭವಾಗಿರುವ ಹೋರಾಟಕ್ಕೆ ದಶಕಗಳ ಇತಿಹಾಸವಿದೆ.

ಮಹಿಳಾ ಹೋರಾಟಗಳ ಫಲಿತವಾಗಿ ೧೯೬೧ರಲ್ಲಿ ಜಾರಿಯಾಗಿರುವ 'ವರದಕ್ಷಿಣೆ ನಿಷೇಧ ಕಾಯ್ದೆ'ಯು, ಹಲವು ತಿದ್ದುಪಡಿಗಳ ನಂತರವು ಸಹ ಸಮಸ್ಯೆಯನ್ನು ನಿವಾರಿಸುವಲ್ಲಿ ಯಶಸ್ವಿಯಾಗಿದ್ದಕ್ಕಿಂತ ಇದು ವಿಫಲವಾಗಿರುವುದೇ ಹೆಚ್ಚು ಎನ್ನುವುದಕ್ಕೆ ದಿನನಿತ್ಯ ಮಾಧ್ಯಮಗಳಲ್ಲಿ ಇಂದಿಗೂ ಬಿಂಬಿತವಾಗುತ್ತಿರುವ ಪ್ರಕರಣಗಳೇ ಸಾಕ್ಷಿಯಾಗಿ ನಿಲ್ಲುತ್ತಿವೆ.

ವರದಕ್ಷಿಣೆಯ ನಿವಾರಣೆಗಾಗಿ ಆಸ್ತಿಹಕ್ಕಿನ ಅಗತ್ಯತೆಯ ಪ್ರಶ್ನೆಯು ಮೊದಲಾಗಬೇಕು. ಈ ಹಕ್ಕನ್ನು ಪಡೆಯುವಲ್ಲಿ ಯಶಸ್ವಿಯಾದಾಗಲೇ ವರದಕ್ಷಿಣೆ ಸಮಸ್ಯೆಯು ತಕ್ಷಣಕ್ಕೆ ನಿವಾರಣೆಯಾಗುವುದಿಲ್ಲವಾದರೂ, ಮುಂದಿನ ಹಂತಗಳಲ್ಲಿ ಕೈಗೂಡಬಹುದು. ಹಾಗೆಯೇ ಆಸ್ತಿ ಹಕ್ಕನ್ನು ಪಡೆಯುವುದರಿಂದ ಸಮಾಜ ವ್ಯವಸ್ಥೆಯಲ್ಲಿ ಗಂಡು ಸಂತಾನಕ್ಕಿರುವಂತಹ ಪ್ರಾಮುಖ್ಯತೆ - ಹೆಣ್ಣು ಸಂತಾನಕ್ಕೂ ದೊರೆಯಲು ಸಾಧ್ಯವಾಗುತ್ತದೆ, ಕುಟುಂಬದ ಒಡೆತನದಲ್ಲಿ ಪಾಲು, ಪಿತ್ರಾರ್ಜಿತ ಆಸ್ತಿಯ ಹಂಚಿಕೆಯಲ್ಲಿ ಹೆಣ್ಣಿಗೂ ಸಿಗಬೇಕಾದ ನ್ಯಾಯ, ವಾರಸುದಾರಿಕೆಯು ಲಭ್ಯವಾಗುತ್ತದೆ. ಹಾಗೆಯೇ ವರದಕ್ಷಿಣೆ ಮತ್ತು ವರದಕ್ಷಿಣೆಯ ಹೆಸರಿನಲ್ಲಿ ಮರೆಯಾಗುತ್ತಿರುವ ಇತರ ಮಹಿಳಾ ಸಮಸ್ಯೆಗಳು ಅನಾವರಣಗೊಳ್ಳುತ್ತವೆ. ಆದರೆ ಇದು ಕೇವಲ ಆಸ್ತಿಯನ್ನು ಹೊಂದಿರುವ ಕುಟುಂಬದ ಮಹಿಳೆಯ ಸಮಸ್ಯೆಗಳ ನಿವಾರಣೆಗೆ ಸೂಕ್ತವಾದುದು. ಆದರೆ ವರದಕ್ಷಿಣೆ ಎಲ್ಲ ಜಾತಿ, ವರ್ಗ ಕಾಣಿಸಿಕೊಳ್ಳುವ, ಗಂಡಿನ ಹಾಗೂ ಅವರ ಕುಟುಂಬದ ಪ್ರತಿಷ್ಠೆಯಾಗಿ ಸ್ವೀಕರಿಸಲಾಗುತ್ತಿದೆ. ಮೇಲೆ ಸೂಚಿಸಿದ ಸಂಗತಿ ಆಸ್ತಿಯೇ ಹೊಂದಿರದ ಕುಟುಂಬಗಳಲ್ಲಿನ ಮಹಿಳೆಯ ವರದಕ್ಷಿಣೆ ಮತ್ತಿತ್ಯಾದಿ ಸಮಸ್ಯೆಗಳ ನಿವಾರಣೆಗೆ ಅನ್ವಯಿಸುವುದು ಸಾಧ್ಯವಿಲ್ಲ. ಆದ್ದರಿಂದ ಜಾತಿ, ವರ್ಗ, ಪ್ರದೇಶಾನುಗುಣವಾಗಿ ಭಿನ್ನವಾಗಿ ತಲೆದೋರುವ ಸಮಸ್ಯೆಗಳ ನಿವಾರಣೆಗೆ ಭಿನ್ನ ಬಗೆಯ ಹೋರಾಟದ ಅಗತ್ಯತೆಯಿದೆ. ಹಾಗಾಗಿ ಮಹಿಳಾ ಸಮಸ್ಯೆಯು ಏಕರೂಪಿಯಾಗಿ ಗ್ರಹಿಸುವುದು ಸಮಂಜಸವಲ್ಲವೋ ಅದರ ನಿವಾರಣೆಗಾಗಿ ಕೈಗೊಳ್ಳುವ ಕ್ರಮವು ಭಿನ್ನವಾಗಿಸುವುದರೊಂದಿಗೆ ಸಮಸ್ಯೆಯ ಆಳಕ್ಕಿಳಿದು ವಿವಿಧ ಆಯಾಮಗಳನ್ನು ಕಂಡುಕೊಳ್ಳುವತ್ತ ಮಹಿಳಾ ಹೋರಾಟಗಳು ಸಾಗಬೇಕಾಗಿದೆ.

ದೌರ್ಜನ್ಯ-ಹಿಂಸೆಯ ಭಾಗವಾಗಿ ನಿಲ್ಲುವಂತಹ ಅತ್ಯಾಚಾರದಂತಹ ಪ್ರಕರಣಗಳಲ್ಲಿ ಮಹಿಳೆಗಷ್ಟೇ ಆಗುವ ಅವಹೇಳನಗಳು, ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳಾ ವಿರೋಧಿಯಾಗಿ ಕಟ್ಟಲ್ಪಟ್ಟ ಚಿಂತನೆಗಳದಾಗಿದೆ. ಈ ಬಗೆಯ ಚಿಂತನಾ ಕ್ರಮಗಳನ್ನೇ ಪ್ರಶ್ನಿಸಬೇಕಾದಂತಹ ಅನಿವಾರ್ಯತೆ ಮತ್ತು ಅಗತ್ಯತೆಯು ಮಹಿಳಾ ಪರ ಹೋರಾಟಗಳಿಗಿದೆ. ಹಾಗೆಯೇ ಅತ್ಯಾಚಾರದ ಪ್ರಕರಣಗಳು ದಾಖಲಾಗುವುದೇ

ಅಧೀನ ನೆಲೆಯನ್ನು ಸ್ಥಿರೀಕರಿಸುವಲ್ಲಿ ದೌರ್ಜನ್ಯ-ಹಿಂಸೆಗಳು ಪ್ರಮುಖ ಪಾತ್ರವಹಿಸುತ್ತಿವೆ. ಸಾರ್ವಜನಿಕ ವಲಯಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ - ಹಿಂಸೆಯು ಇದಕ್ಕೆ ಹೊರತಾಗಿಲ್ಲ. ವಿಶೇಷವಾಗಿ ಮಹಿಳಾ ಪೋಲಿಸ್ ಉದ್ಯೋಗಿಗಳು ಮತ್ತು ಗ್ರಾಮ ಪಂಚಾಯ್ತಿಯ ಅಧ್ಯಕ್ಷ - ಉಪಾಧ್ಯಕ್ಷರಿಗೆ ಲಭ್ಯವಾಗುತ್ತಿರುವ ಅಧಿಕಾರವು ನೆಪಮಾತ್ರವಾಗುಳಿಯುತ್ತಿರುವುದು, ಸೇವಾವಲಯಗಳಿಗೆ ಮಾತ್ರ ಸೀಮಿತಗೊಳಿಸುತ್ತಿರುವುದು ಕಂಡು ಬರುತ್ತಿದೆ. ಹಾಗೆಯೇ ಈ ಬಗೆಯ ನಾಮಮಾತ್ರ ಅಧಿಕಾರದಿಂದ ಇನ್ನಷ್ಟು ಅಧೀನತೆಗೊಳಗಾಗುತ್ತಿರುವ ಮಹಿಳೆಯರು ಅಧಿಕಾರವನ್ನು ನಿರಾಕರಿಸುವ ಹಂತವನ್ನು ತಲುಪುತ್ತಿದ್ದಾರೆ.

ಈ ಬಗೆಯ ಅಂಶಗಳ ನಿವಾರಣೆಗಾಗಿ ಮಹಿಳಾ ಸಮುದಾಯಕ್ಕೆ ಒದಗಬೇಕಾದ ಶಿಕ್ಷಣದ ಸ್ವರೂಪ ಅವಳಲ್ಲಿ ಆತ್ಮವಿಶ್ವಾಸವನ್ನು ಮೂಡಿಸುವಂತಾಗಬೇಕು. ಆರ್ಥಿಕ ಸ್ವಾತಂತ್ರ್ಯವು ಲಭ್ಯವಾಗಬೇಕು. ಅವಳ ದುಡಿಮೆಯ ಫಲಿತವು ಅವಳಿಗೆ ದಕ್ಕಬೇಕು. ಈ ಬಗೆಯ ಅಧಿಕಾರ ಕೇಂದ್ರಗಳಿಗೆ ಮುಖಾಮುಖಿಯಾಗುತ್ತಿರುವ ಮಹಿಳೆಗೆ ಆ ಕುರಿತಂತೆ ಸಮಗ್ರ ಸ್ವರೂಪದ ತರಬೇತಿಯ ಮೂಲಕ ಆ ಅಧಿಕಾರವನ್ನು ಪಡೆಯಲು, ಪಡೆದ ಅಧಿಕಾರವನ್ನು ಸಮರ್ಥವಾಗಿ ನಿಭಾಯಿಸಲು ಸಾಧ್ಯವಾಗಬೇಕು. ಸಮಾನವೇತನ ಕಾಯ್ದೆಯಂತಹ ಕಾನೂನುಗಳು ನೆಪಮಾತ್ರವಾಗದೆ, ನೈಜವಾಗಿ ಮಹಿಳಾ ಬದುಕನ್ನು ಪರಿವರ್ತಿಸುವಲ್ಲಿ ಆಧಾರವಾಗಿ ನಿಲ್ಲಬೇಕಲ್ಲದೆ ವಿವಿಧ ವಲಯಗಳಲ್ಲಿ ಪ್ರವೇಶಿಸುವ ಮಹಿಳೆಗೆ ನಿರಾತಂಕವಾಗಿ ಬದುಕಲು, ವ್ಯವಹರಿಸಲು ಸಾಧ್ಯವಾಗಬೇಕು.

ಹೀಗೆ ಅಧ್ಯಯನಕ್ಕೊಳಪಡಿಸಲಾದ ಪ್ರಸ್ತುತ ಸಂಶೋಧನೆಯು ಕಂಡುಕೊಂಡ ಒಟ್ಟು ಫಲಿತಗಳು, ಅಧ್ಯಯನದ ಮಿತಿಗಳು, ಮುಂದಿನ ಸಾಧ್ಯತೆಗಳು ಮತ್ತು ಸಲಹೆಗಳನ್ನು ಹೀಗೆ ಗುರುತಿಸಲಾಗಿದೆ.

**೫.೧. ಅಧ್ಯಯನದ ಫಲಿತಗಳು**

- ಸಾರ್ವಜನಿಕ ವಲಯ ಸ್ತ್ರೀಯರಿಗೆ, ಪುರುಷರಿಗೆ ಬೇರೆಯಾಗಿದೆ.
- ಅಧಿಕಾರವು ದೌರ್ಜನ್ಯದ ಸಹಚರಿ ಮತ್ತು ಈ ಅಸಮಾನ ಅಧಿಕಾರ ಸಂಬಂಧಗಳನ್ನು ನಿಭಾಯಿಸಲು ದೌರ್ಜನ್ಯ - ಹಿಂಸೆಯು ಪ್ರಬಲ ಅಸ್ತ್ರವಾಗಿ ಬಳಕೆಯಾಗುತ್ತಿವೆ.
- ಸಾರ್ವಜನಿಕ ವಲಯದಲ್ಲಿನ ಮಹಿಳೆಯರ ವಿರುದ್ಧ ನಡೆಯುವ ಹಿಂಸೆ - ದೌರ್ಜನ್ಯಗಳು, ಅದರಲ್ಲೂ ಮಹಿಳಾ ಪೋಲಿಸ್ ಮತ್ತು ಗ್ರಾಮ ಪಂಚಾಯ್ತಿ ಮಹಿಳೆಯರ ಮೇಲಿನ ದೌರ್ಜನ್ಯ - ಹಿಂಸೆಗಳು ಸಹ ನಿರ್ಲಕ್ಷ್ಯಕ್ಕೊಳಗಾಗಿವೆ.
- ಕೌಟುಂಬಿಕ ವಲಯದಲ್ಲಿನ ಸ್ತ್ರೀ-ಪುರುಷರ ಮಧ್ಯದ ಯಾಜಮಾನ್ಯ ಮತ್ತು ಅಧೀನ ನೆಲೆಯ ಸಂಬಂಧಗಳು ಸಾರ್ವಜನಿಕ ವಲಯದಲ್ಲಿಯೂ ಮುಂದುವರೆದಿದೆ.
- ಕೌಟುಂಬಿಕ ವಲಯದ ದೌರ್ಜನ್ಯ - ಹಿಂಸೆಯ ವಿಸ್ತೃತ ರೂಪವೇ ಸಾರ್ವಜನಿಕ ವಲಯದಲ್ಲಿಯೂ ಮುಂದುವರೆದಿದೆ.
- ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯನ್ನು ಅಧೀನ ನೆಲೆಯಲ್ಲಿಯೇ ಶಾಶ್ವತವಾಗುಳಿಸುವುದಕ್ಕಾಗಿ ಅವಳ ಮೇಲೆ ದೌರ್ಜನ್ಯ - ಹಿಂಸೆಗಳನ್ನು ಎಸಗಲಾಗುತ್ತಿದೆ.

- ಕಾನೂನುಗಳು ಮಹಿಳೆಯರ ಬದುಕನ್ನು ಸುಧಾರಿಸಲು ಬಳಕೆಯಾಗುವ ಬದಲು ಪುರುಷ ಸಂಸ್ಕೃತಿಯಲ್ಲಿ ಅಸ್ತ್ರಗಳಾಗಿ ಬಳಕೆಯಾಗುತ್ತಿವೆ.
- ಹಲವು ಬಗೆಯ ವಿಕೃತ ರೂಪದ ಹಿಂಸೆ - ದೌರ್ಜನ್ಯದ ಕಾರಣದಿಂದಾಗಿ ಮಹಿಳೆಯರು ಸಾಧನಾ ವಲಯಗಳಿಗೆ ಮುಖಾಮುಖಿಯಾಗಲು ಹಿಂಜರಿಯುತ್ತಿದ್ದಾರೆ.
- ಸಾರ್ವಜನಿಕ ವಲಯದ ಮಹಿಳೆಯರ ವಿರುದ್ಧ ನಡೆಯುವ ಹಿಂಸೆ - ದೌರ್ಜನ್ಯದ ಉದ್ದೇಶವೇ ಮಹಿಳೆಯರ ಸಾರ್ವಜನಿಕ ವಲಯದ ಪ್ರವೇಶದ ನಿರಾಕರಣೆಯೇ ಆಗಿದೆ.
- ಪ್ರವೇಶ ಪ್ರಕ್ರಿಯೆಯಲ್ಲಿನ ನಿರಾಕರಣೆಯನ್ನು ಮೀರಿಯು ಮಹಿಳೆಯ ಇತ್ತೀಚೆಗೆ ಸಾರ್ವಜನಿಕ ವಲಯಕ್ಕೆ ಮುಖಾಮುಖಿಯಾಗುತ್ತಿರುವವಳಾದರೂ, ಅವಳನ್ನು ಸೇವಾ ವಲಯಕ್ಕೆ ಸೀಮಿತಗೊಳಿಸಲಾಗಿದೆ.
- ಸಾರ್ವಜನಿಕ ವಲಯದಲ್ಲಿಯೂ ಅವಳನ್ನು ಪುರುಷ ಬದುಕಿಗೆ ಪೂರಕವಾಗಿರುವಂತಾಗಿಸಿದೆ. ಹೀಗಿರುವಾಗಲು ಮಹಿಳೆಯ ಮೇಲೆ ದೌರ್ಜನ್ಯ - ಹಿಂಸೆಗಳು ನಡೆಯದೆ ಇರದು.
- ಸಾರ್ವಜನಿಕ ವಲಯವಾಗಲಿ, ಕೌಟುಂಬಿಕ ವಲಯದಲ್ಲಾಗಲಿ ಮಹಿಳೆ ಒಂದಲ್ಲಾ ಒಂದು ಬಗೆಯ ಹಿಂಸೆ - ದೌರ್ಜನ್ಯಗಳಿಗೆ ಒಳಗಾಗುತ್ತಿರುತ್ತಾಳೆ.
- ಉದ್ಯೋಗವೇ ಅವಳ ಬದುಕಿನ ಅಂತಿಮ ಸಾಧನೆ ಎಂಬಂತೆ ಬಿಂಬಿಸಲಾಗಿದೆ.
- ಉದ್ಯೋಗದೊಂದಿಗೆ ಅವಳು ವಿಭಿನ್ನ ಸಾಧನೆಯತ್ತ ಮುಖ ಮಾಡಿದಾಗ ಅವಳ ಮೇಲಿನ ದೌರ್ಜನ್ಯ - ಹಿಂಸೆಗಳು ಹೆಚ್ಚಾಗುತ್ತವೆ.
- ರಾಜಕೀಯ ಹಿನ್ನೆಲೆಯಿರುವವರು ರಾಜಕೀಯ ವಲಯವನ್ನು ಪ್ರವೇಶಿಸಿದಾಗ ಹಾಗೂ ಉನ್ನತ ಸ್ಥಾನದಲ್ಲಿರುವ ಮಹಿಳೆಯರು ಲೈಂಗಿಕ ದೌರ್ಜನ್ಯಗಳು, ಅತ್ಯಾಚಾರದಂತಹ ಭೀಕರ ದೌರ್ಜನ್ಯದಿಂದ ಬಹುತೇಕ ಮುಕ್ತವಾಗಿರುತ್ತಾಳೆ.
- ಸಾರ್ವಜನಿಕ ವಲಯದಲ್ಲಿ ಹಿಂಸೆ - ದೌರ್ಜನ್ಯಗಳಿಗೆ ಮಹಿಳಾ ಪೋಲಿಸ್ ಪೇದೆಗಳು ಮತ್ತು ಗ್ರಾಮ ಪಂಚಾಯ್ತಿ ಅಧ್ಯಕ್ಷರು - ಉಪಾಧ್ಯಕ್ಷರು ಒಳಗಾಗುತ್ತಿರುವ ಪ್ರಮಾಣವು ಹೆಚ್ಚಿದೆ.
- ಈವರೆಗೂ ಜಾರಿಯಾದ ಕಾನೂನುಗಳು, ಸಾರ್ವಜನಿಕ ವಲಯದಲ್ಲಿನ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯಗಳನ್ನು ತಡೆಯಲು ಸಹಾಯಕವಾಗುತ್ತಿಲ್ಲ.
- ರಾಜಕೀಯ ವಲಯ ಮೊದಲ ಹಂತದ ಸರ್ಕಾರವಾದರೆ, ಪೋಲಿಸ್ ಇಲಾಖೆ ಎರಡನೆಯ ಹಂತದ ಸರ್ಕಾರವೆಂದು ಪರಿಗಣಿತವಾದ್ದರಿಂದ ಸಾಮಾನ್ಯವಾಗಿ ಮಹಿಳಾ ಪೋಲಿಸರ ಮೇಲಿನ ಮತ್ತು ಗ್ರಾಮ ಪಂಚಾಯಿತಿ ಮಹಿಳೆಯರ ಮೇಲಿನ ಹಿಂಸೆ - ದೌರ್ಜನ್ಯಗಳು ತೆರೆ ಮರೆಯಲ್ಲಿಯೇ ಉಳಿಯುತ್ತಿವೆ.

- ಪತ್ರಿಕಾ ಮಾಧ್ಯಮವಾಗಲಿ, ದೃಶ್ಯ ಮಾಧ್ಯಮಗಳಾಗಲಿ ಈ ವಲಯದಲ್ಲಿನ ದೌರ್ಜನ್ಯ - ಹಿಂಸೆಯ ಪ್ರಕರಣಗಳು ದಾಖಲಿಸುತ್ತಿಲ್ಲ ಎಂಬುದಕ್ಕೆ ಪುರುಷ ಪ್ರಧಾನ ವ್ಯವಸ್ಥೆಯೇ ಕಾರಣವಾಗಿದೆ.

**೫.೨. ಅಧ್ಯಯನದ ಮಿತಿಗಳು**

ಯಾವುದೇ ಬಗೆಯ ಸಂಶೋಧನೆಗಳು ಸಹ ಪರಿಪೂರ್ಣತೆಯನ್ನು ಹೊಂದಿರಲು ಸಾಧ್ಯವಿಲ್ಲ. ಅದರಲ್ಲೂ ಒಟ್ಟು ಸಾಮಾಜಿಕ ವ್ಯವಸ್ಥೆಯನ್ನು ಪ್ರಶ್ನಿಸುವ ಈ ಬಗೆಯ ಅಧ್ಯಯನಕ್ಕೆ ತೊಡಗಿಕೊಂಡಾಗ, ಸಮಗ್ರವಾದ ಮಾಹಿತಿಯನ್ನು ಹೊರಹಾಕುತ್ತೇನೆ ಎಂದು ಹೊರಡುವ ಸಂಶೋಧಕರ ಜಾಣತನ ಸರಿಯಾದುದಲ್ಲ ಎಂದೆನಿಸುತ್ತದೆ.

ಮಹಿಳಾ ಬದುಕಿನ ಸಂಗತಿಗಳು, ಅದರಲ್ಲೂ ತೀರಾ ವೈಯಕ್ತಿಕ ಸಂಗತಿಗಳನ್ನು ಗ್ರಹಿಸಲು ಮನೋಲೋಕಕ್ಕೆ ಇಣುಕುವುದು ಸಂಕೀರ್ಣತೆಯೇ ಸರಿ. ಮಹಿಳೆಯು ಮಾತಿನಿಂದ ಮೌನದತ್ತ ಸಾಗಬೇಕೆಂಬ ಧೋರಣೆಯನ್ನು ಹೊಂದಿರುವ ವ್ಯವಸ್ಥೆಯಲ್ಲಿ, ಮಹಿಳೆಯರ ಬದುಕಿನ ಪ್ರತಿಯೊಂದು ಸಂಗತಿಯು ಸಹ ಸಾಮಾಜಿಕತೆಯ ಹಿನ್ನೆಲೆಯಲ್ಲಿಯೇ ನಿರ್ಧಾರಿತವಾಗುವುದರಿಂದ, ಮಹಿಳೆಗೆ ತನ್ನ ಬದುಕಿನ ಕುರಿತು ಯೋಚಿಸಲಾಗದಂತಹ ಸಂದರ್ಭ, ಸನ್ನಿವೇಶಗಳು ಇಂದಿಗೂ ಜ್ವಲಂತವಾಗಿ ಕಾಣಿಸಿಕೊಳ್ಳುತ್ತಿವೆ. ಅಂತಹ ಪರಿಸ್ಥಿತಿಯಲ್ಲಿರುವ ಮಹಿಳೆಯರು ಸಮಾಜ ವ್ಯವಸ್ಥೆಯಲ್ಲಿನ ಏರು-ಪೇರುಗಳಿಂದ ಸಾರ್ವಜನಿಕ ರಂಗಕ್ಕೆ ಮುಖಾಮುಖಿಯಾಗುತ್ತಿರುವುದು ಹೆಮ್ಮೆಯ ಸಂಗತಿಯೆ.

ನಿರ್ಬಂಧಿತ ಪರಿಸರದಲ್ಲಿ ಬದುಕುವುದು ರೂಢಿಗತವಾದ ಸ್ತ್ರೀ ಸಮುದಾಯ ತನ್ನ ಬದುಕಿನ ಹಲವು ಸಂಗತಿಗಳನ್ನು ನೇರವಾಗಿ ಹೊರಹಾಕುವಂತಹ ಸನ್ನಿವೇಶಗಳು ತೀರಾ ವಿರಳವೆ. ಅಂತಹ ಬಗೆಯ ಮನೋಭೂಮಿಕೆಯನ್ನು ರೂಪಿಸಿರುವ ಸಾಮಾಜೀಕರಣದಲ್ಲಿ ಅದರಲ್ಲೂ ಸಾರ್ವಜನಿಕ ವಲಯದಲ್ಲಿ ಮಹಿಳೆಯರ ಮೇಲಾಗುವ ದೌರ್ಜನ್ಯ - ಹಿಂಸೆಯನ್ನು ಅಧ್ಯಯನಕ್ಕೊಳಪಡಿಸುವುದು ಸವಾಲಿನ ಸಂಗತಿಯೇ ಸರಿ. ಆದ್ದರಿಂದ ಸಮಗ್ರವಾಗಿ ಅಲ್ಲಿನ ದೌರ್ಜನ್ಯ - ಹಿಂಸೆಗಳನ್ನು ಗ್ರಹಿಸುವಲ್ಲಿ - ವಿಶ್ಲೇಷಣೆಗೊಳಪಡಿಸುವಲ್ಲಿ ಕೆಲವು ಕೊರತೆಗಳು ಕಾಣಿಸಬಹುದು. ಇದು ಅಧ್ಯಯನದ ಮಿತಿಯೂ ಹೌದು.

ಸಾಕಷ್ಟು ವಿಸ್ತೃತವಾದ ವ್ಯಾಪ್ತಿಯನ್ನು ಹೊಂದಿರುವ ಪ್ರಸ್ತುತ ವಿಷಯವೂ ಸಂಪೂರ್ಣವಾಗಿ ಅಧ್ಯಯನಕ್ಕೊಳಪಡಿಸುವುದು. ಅಧ್ಯಯನಕ್ಕಿರುವ ಕಾಲಮಿತಿಯಲ್ಲಿ ಅಸಾಧ್ಯವಾದುದು ಈ ನಿಟ್ಟಿನಲ್ಲಿ ವಿವಿಧ ಸಾರ್ವಜನಿಕ ವಲಯಗಳ ಚರ್ಚೆಗಳನ್ನು ಮಾಡುವ ಮೂಲಕ ದೌರ್ಜನ್ಯ - ಹಿಂಸೆಯ ಪ್ರಮುಖವಾದ ಕುರುಹುಗಳು ಕಾಣಿಸಿರುವ ರಾಜಕೀಯ ವಲಯ - ಉದ್ಯೋಗ ವಲಯ ಅದರಲ್ಲಿಯೂ ಗ್ರಾಮ ಪಂಚಾಯ್ತಿ ಅಧ್ಯಕ್ಷ - ಉಪಾಧ್ಯಕ್ಷರು ಮತ್ತು ಮಹಿಳಾ ಪೋಲಿಸ್ ಪೇದೆಗಳನ್ನು ಈ ಕ್ಷೇತ್ರಕಾರ್ಯದ ಪ್ರಕರಣಾಧ್ಯಯನಕ್ಕೆ ಆರಿಸಿಕೊಂಡಿರುವುದು ಅಧ್ಯಯನದ ಮಿತಿಯಾಗಿದೆ.

ಮಹಿಳೆಯರ ಮೇಲಿನ ದೌರ್ಜನ್ಯ - ಹಿಂಸೆಯ ಸ್ವರೂಪವು ಕಾಲ, ಸ್ಥಳ, ಸಂದರ್ಭ, ಸನ್ನಿವೇಶಕ್ಕನುಗುಣವಾಗಿ ಬದಲಾಗುವುದು ಕಂಡು ಬರುತ್ತದೆ. ಈ ಹಿನ್ನೆಲೆಯಲ್ಲಿ ಗುಲಬರ್ಗಾ ಜಿಲ್ಲೆಯಲ್ಲಿ

ವ್ಯಾಪ್ತಿಗೊಳಪಡುವ ತಾಲ್ಲೂಕುಗಳು ಮತ್ತು ಅಲ್ಲಿನ ಗ್ರಾಮಗಳಲ್ಲಿನ ಜನಸಂಖ್ಯೆಗನುಗುಣವಾಗಿ ನಿಗದಿತವಾದ ಮಹಿಳಾ ಪೋಲಿಸ್ ಪೇದೆಗಳು ಮತ್ತು ಗ್ರಾಮ ಪಂಚಾಯ್ತಿಯ ಅಧ್ಯಕ್ಷರು - ಉಪಾಧ್ಯಕ್ಷರ ಸಂಖ್ಯೆಯು ಸಹ ಗಣನೀಯ ಪ್ರಮಾಣದಲ್ಲಿರುವುದರಿಂದ ಗುಲಬರ್ಗಾ ಮತ್ತು ಜೇವರ್ಗಿ ತಾಲೂಕಿನ ಸೀಮಿತ ಗ್ರಾಮ ಪಂಚಾಯ್ತಿ ಮತ್ತು ಪೋಲಿಸ್ ಠಾಣೆಗಳಲ್ಲಿನ, ನಿಗದಿತ ಪ್ರಕರಣಗಳನ್ನು ಅಧ್ಯಯನ ಮಾಡಿ ದಾಖಲಿಸಿಕೊಂಡಿದ್ದು, ಅದರಲ್ಲಿನ ಕೆಲವು ವಿಶಿಷ್ಟ ಪ್ರಕರಣಗಳನ್ನು ಮಾತ್ರ ವಿಶ್ಲೇಷಣೆಗೊಳಪಡಿಸಿರುವದು ಅಧ್ಯಯನದ ಮಿತಿಯಾಗಿದೆ.

**೫.೩. ಅಧ್ಯಯನದ ಮುಂದಿನ ಸಾಧ್ಯತೆಗಳು**

ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯದ ಭಾಗವಾಗಿ ಸಾರ್ವಜನಿಕ ವಲಯವನ್ನು ಅಧ್ಯಯನಕ್ಕೆತ್ತಿಕೊಳ್ಳಲಾಗಿದೆ. ಸಾರ್ವಜನಿಕ ವಲಯದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ-ಹಿಂಸೆಗಳನ್ನು ಹಲವಾರು ಆಯಾಮಗಳಲ್ಲಿ ಅಧ್ಯಯನ ಮಾಡಬಹುದಾದ್ದರಿಂದ, ಅಧ್ಯಯನದ ಮುಂದಿನ ಸಾಧ್ಯತೆಗಳನ್ನು ಗುರುತಿಸುವ ಪ್ರಯತ್ನವನ್ನು ಸಹ ಮಾಡಲಾಗಿದೆ.

- ಪ್ರಸ್ತುತ ಅಧ್ಯಯನದ ಅಧ್ಯಾಯ ಮೂರರಲ್ಲಿ ಹೇಳಲಾಗಿರುವ ವಿವಿಧ ವಲಯಗಳಲ್ಲಿನ ಒಂದೊಂದು ವಲಯಗಳಲ್ಲಿ ಅಥವಾ ಅಲ್ಲಿನ ಉಪವಲಯಗಳ ಕುರಿತು ಅಧ್ಯಯನ ಮಾಡುವ ಸಾಧ್ಯತೆಯಿದೆ. ಉದಾ: ಆರೋಗ್ಯ ವಲಯವನ್ನೇ ತೆಗೆದುಕೊಂಡರೆ, ಅದರಲ್ಲಿ ಮಹಿಳೆಯ ಸಂತಾನಾರೋಗ್ಯದ ಮೇಲೆ, ವಿಜ್ಞಾನ - ತಂತ್ರಜ್ಞಾನಗಳಿಂದಾಗುವ ದೌರ್ಜನ್ಯ - ಹಿಂಸೆ; ಕುಟುಂಬ ಯೋಜನೆ - ಜನಸಂಖ್ಯಾ ನಿಯಂತ್ರಣದ ಹಿನ್ನೆಲೆಯಲ್ಲಿ ಪ್ರಭುತ್ವವೇ ಒಪ್ಪಿ ನಡೆಸುತ್ತಿರುವ ಹಿಂಸೆ - ದೌರ್ಜನ್ಯಗಳನ್ನು ಅಧ್ಯಯನ ಮಾಡುವ ಸಾಧ್ಯತೆಯಿದೆ.
- ಹಾಗೆಯೇ ಈ ಸಂಶೋಧನೆಯಲ್ಲಿ ಉದ್ಯೋಗ ವಲಯದ ಮತ್ತು ರಾಜಕೀಯ ವಲಯದ ಉಪ ವಲಯಗಳಲ್ಲಿನ ಮಹಿಳೆಯ ಮೇಲಿನ ದೌರ್ಜನ್ಯ - ಹಿಂಸೆಯನ್ನು ಗ್ರಹಿಸಲು ಪ್ರಯತ್ನಿಸಲಾಗಿದೆ. ಇಲ್ಲಿನ ವಿವಿಧ ಅಂದರೆ ಉನ್ನತ ಹುದ್ದೆಗಳಲ್ಲಿರುವ ಮಹಿಳೆಯರ ಮೇಲಿನ ಹಿಂಸೆ - ದೌರ್ಜನ್ಯ ಸ್ವರೂಪಗಳನ್ನು ಗ್ರಹಿಸಲು ಅವುಗಳನ್ನು ಅಧ್ಯಯನ ಮಾಡುವ ಸಾಧ್ಯತೆಯಿದೆ.
- ಸಾರ್ವಜನಿಕ ವಲಯಗಳಲ್ಲಿ, ಅದರಲ್ಲೂ ಕೆಲಸದ ಸ್ಥಳದಲ್ಲಿ ನಡೆಯುವ ಲೈಂಗಿಕ ಕಿರುಕುಳ ತಡೆಯಲು ಸೆಲ್‌ಗಳನ್ನು ಒದಗಿಸಲಾಗಿದೆ. ಆ ಸೆಲ್‌ಗಳು ಉದ್ದೇಶ, ಕಾರ್‍ಯನಿರ್ವಹಿಸುತ್ತಿರುವ ಬಗೆ, ಮಹಿಳಾ ಬದುಕಿಗೆ ಪೂರಕವಾಗಿ ನಿಲ್ಲಲು ಅದು ಸಹಕಾರಿಯಾಗಿದೆಯೆ? ಆ ಸೆಲ್‌ಗಳನ್ನು ನಿರ್ವಹಿಸುತ್ತಿರುವವರು ಯಾರು? ಅಲ್ಲಿನ ಅಧಿಕಾರಿ ವರ್ಗ ಈ ಸೆಲ್‌ಗಳ ಕಾರ್ಯನಿರ್ವಹಿಸುವಂತಾಗಲೂ ಪೂರಕವಾಗಿದೆಯೆ? ತಡೆಯನ್ನುಂಟು ಮಾಡುತ್ತಿದೆಯೇ ಎಂಬುದನ್ನು ಅಧ್ಯಯನ ಮಾಡುವ ಸಾಧ್ಯತೆಯಿದೆ.
- ಈ ಸಂಗತಿಗಳನ್ನಾಧರಿಸಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರೇತರ ಸಂಘ-ಸಂಸ್ಥೆಗಳು ಈ ಸಮಸ್ಯೆಯನ್ನು ಗ್ರಹಿಸುವ ಸ್ವರೂಪ, ಅದರ ನಿವಾರಣೆಗೆ ಯತ್ನಿಸುವ ಬಗೆಗಳನ್ನಾಧರಿಸಿ ಅಧ್ಯಯನ ಮಾಡುವ ಸಾಧ್ಯತೆಯಿದೆ.
- ಸಮಾಜ ವ್ಯವಸ್ಥೆಯ ಪ್ರತಿಬಿಂಬವೆನ್ನುವ ಸಾಹಿತ್ಯವನ್ನು ಆಕರವಾಗಿಸಿಕೊಳ್ಳುವ ಮೂಲಕ ಅಲ್ಲಿನ ಪಾತ್ರಗಳಲ್ಲಿ ಕಾಣಿಸಿಕೊಳ್ಳುವ, ಮಹಿಳೆಯರ ವಿರುದ್ಧ ನಡೆಯುವ ಹಿಂಸೆ - ದೌರ್ಜನ್ಯಗಳನ್ನು ಕುರಿತು ಅಧ್ಯಯನ ಕೈಗೊಳ್ಳುವ ಸಾಧ್ಯತೆಯಿದೆ.

- ಈಗಾಗಲೇ ಈ ಕುರಿತು ನಡೆದ ಅಧ್ಯಯನಗಳ ಅಂಕಿ - ಅಂಶಗಳ ವಿಶ್ಲೇಷಣೆ, ರೂಪಿತವಾದ ಯೋಜನೆಗಳು, ಕಾನೂನುಗಳು, ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ - ಹಿಂಸೆಯನ್ನು ತಡೆಯುವಲ್ಲಿ ಯಶಸ್ವಿಯಾಗಿವೆಯೆ? ವೈಫಲ್ಯವಾಗಿವೆಯೆ? ಎಂಬುದನ್ನು ಆಧರಿಸಿ ಅಧ್ಯಯನವನ್ನು ಮಾಡುವ ಸಾಧ್ಯತೆಯಿದೆ.
- ದೃಶ್ಯ ಮಾಧ್ಯಮಗಳಲ್ಲಿ ಬಿಂಬಿತವಾಗುವ, ಅದರಲ್ಲೂ ದೈನಂದಿನ ಧಾರಾವಾಹಿಗಳಲ್ಲಿ ಸಾರ್ವಜನಿಕ ವಲಯಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಮಹಿಳೆಯರನ್ನು ನಿಷ್ಕ್ರಿಯವಾಗಿಸುವಂತಹದ್ದು ಮತ್ತು ದೌರ್ಜನ್ಯ - ಹಿಂಸೆಗೆ ಒಳಗಾಗುತ್ತಿರುವುದನ್ನು ಅಧ್ಯಯನಕ್ಕೊಳಪಡಿಸುವ ಸಾಧ್ಯತೆಯಿದೆ.
- ಸಾರ್ವಜನಿಕ ವಲಯವನ್ನು ಪ್ರವೇಶಿಸುವ ಸ್ತ್ರೀ-ಪುರುಷರೀರ್ವರ ಮೇಲಾಗುವ ದೌರ್ಜನ್ಯ - ಹಿಂಸೆಗಳ ತೌಲನಿಕ ಅಧ್ಯಯನ ಮಾಡುವ ಸಾಧ್ಯತೆಯಿದೆ.
- ವಿವಿಧ ಕೋಮು ಗಲಭೆಗಳು, ಜನಾಂಗೀಯ ಗಲಭೆಗಳಲ್ಲಿ ಮಹಿಳೆಯರ ವಿರುದ್ಧ ನಡೆಯುವ ಹಿಂಸೆ - ದೌರ್ಜನ್ಯಗಳನ್ನು ಕುರಿತು ಅಧ್ಯಯನ ಮಾಡುವ ಸಾಧ್ಯತೆಯಿದೆ.

**೫.೪. ಅಧ್ಯಯನದ ಸಲಹೆಗಳು**

ಪ್ರಸ್ತುತ ವಿಷಯದ ಅಧ್ಯಯನವು ಒಂದು ಬಗೆಯಲ್ಲಿ ಪೂರ್ಣಗೊಂಡ ನಂತರ, ಅಧ್ಯಯನದ ಕೆಲವು ಫಲಿತಗಳನ್ನು ಕಂಡುಕೊಳ್ಳಲಾಗಿದೆ. ಈ ಬಗೆಯ ಸಮಗ್ರ ಚಿಂತನೆಯನ್ನಾಧರಿಸಿ ಕೆಲವು ಸಲಹೆಗಳನ್ನು ನೀಡಲಾಗುತ್ತಿದೆ.

ಮೊಟ್ಟಮೊದಲನೆಯದಾಗಿ ಕೌಟುಂಬಿಕ ವಲಯದ ಹಿಂಸೆ - ದೌರ್ಜನ್ಯಗಳನ್ನು ತಡೆಯಲು ಹಲವು ಬಗೆಯ ಪ್ರಯತ್ನಗಳ ನಂತರ ಕಾನೂನೊಂದನ್ನು ಜಾರಿಗೊಳಿಸಲಾಗಿದೆ. ಈ ಕಾನೂನು ಜಾರಿಯಾದ ನಂತರ, ಇದು ಮಹಿಳಾ ಬದುಕಿನಲ್ಲಿ ನಡೆಯುವ ಎಲ್ಲಾ ಬಗೆಯ ಹಿಂಸೆ - ದೌರ್ಜನ್ಯಗಳನ್ನು ನಿವಾರಿಸಿದೆಯೆ? ಮುಂದಿನ ಪ್ರಶ್ನೆ. ಆದರೆ ಈ ವಲಯದಲ್ಲಿ ನಡೆಯುವ ಆಕ್ರಮಣಗಳಿಂದ ಹೊರಬರಲು ಒಂದು ಅಸ್ತ್ರದಂತೆಯೆ ಕಾನೂನೊಂದು ಜಾರಿಗೆಯಾಗಿದೆ. ಹೀಗೆಯೇ ಸಾರ್ವಜನಿಕ ವಲಯದಲ್ಲಿ ಹಲವು ಬಗೆಯ ಕಾನೂನುಗಳು ಜಾರಿಯಾದರೂ ಸಹ ಅವುಗಳು ಸಾಕಷ್ಟು ಸೀಮಿತ ನೆಲೆಗಳು ಮತ್ತು ಲೋಪ-ದೋಷಗಳನ್ನು ಒಳಗೊಂಡಿವೆಯಾದರೂ ಒಟ್ಟು ಸಮಾಜ ವ್ಯವಸ್ಥೆಯಲ್ಲಿನ ಪ್ರಮುಖ ಭಾಗವಾದ ಸಾರ್ವಜನಿಕ ವಲಯದಲ್ಲಿ ಮಹಿಳೆಯರ ವಿರುದ್ಧ ನಡೆಯುವ ದೌರ್ಜನ್ಯ - ಹಿಂಸೆಗಳು ತಡೆಯಲು ಸಮಗ್ರ ರೂಪದ ಕಾನೂನೊಂದನ್ನು ಜಾರಿಗೆ ತರಲು ಅಕಾಡೆಮಿಶಿಯನ್‌ಗಳು, ಚಳುವಳಿಗಾರರು ಸರ್ಕಾರಕ್ಕೆ ಒತ್ತಾಯಿಸುವ ಮೂಲಕ ಕಾನೂನೊಂದನ್ನು ಜಾರಿಗೊಳಿಸಬೇಕಾಗಿದೆ.

ಹಾಗೆಯೇ ಮಹಿಳೆಯರ ಮೇಲೆ ನಡೆಯುತ್ತಿರುವ ದೌರ್ಜನ್ಯ - ಹಿಂಸೆಗಳನ್ನು ತಡೆಯಲು ಹಲವು ಕಾಯಿದೆ - ಕಾನೂನುಗಳು ಜಾರಿಯಾಗಿವೆ. ಆದರೆ ಅವುಗಳು ಮಹಿಳಾ ಬದುಕನ್ನು ತಲುಪುವಲ್ಲಿ ವಿಫಲವಾಗುತ್ತಿವೆ. ಮೊಟ್ಟ ಮೊದಲನೆಯದಾಗಿ ಇಂಥದೊಂದು ಕೃತ್ಯಕ್ಕೆ ಕೈಹಾಕಿದರೆ ಬದುಕಲು ಸಾಧ್ಯವಿಲ್ಲವೆಂಬಂತಹ ರೀತಿಯಲ್ಲಿ ಕಾನೂನುಗಳು ಜಾರಿಯಾಗಬೇಕು. ಉದಾ:- ಭ್ರೂಣಹತ್ಯೆ ತಡೆಯಲು

ಪಿ.ಸಿ ಆ್ಯಂಡ್ ಪಿಎನ್.ಡಿ ಆ್ಯಕ್ಟ್‌ನ್ನು ಜಾರಿಗೊಳಿಸಲಾಗಿದೆ. ಇದು ಎಲ್ಲೆಡೆಯು ಕಡ್ಡಾಯವಾಗಿ ಜಾರಿಯಾಗುವಂತೆ ಕ್ರಮಕೈಗೊಳ್ಳುವುದು, ಜೊತೆಗೆ ಜನಸಾಮಾನ್ಯರಿಂದ ಮೊದಲುಗೊಂಡು ಇಲ್ಲಿ ಅಗತ್ಯವಿರುವ ವಕೀಲರಿಗೆ, ಪೋಲಿಸ್ ಇಲಾಖೆಗೆ, ವೈದ್ಯರುಗಳಿಗೆ ಜಾಗೃತಿಯನ್ನು ಮೂಡಿಸಬೇಕು. ಈ ಬಗೆಯ ಅರಿವಿದ್ದಾಗಲೂ ಈ ಕಾಯಿದೆಯನ್ನು ಉಲ್ಲಂಘಿಸುತ್ತಿರುವುದು ಪತ್ತೆ ಹೆಚ್ಚುವ ಮೂಲಕ ಅವರ ಮೇಲೆ ಕ್ರಮಕೈಗೊಳ್ಳಬೇಕು.

ಕೇವಲ ಲೈಂಗಿಕ ಕಿರುಕುಳ ನಿಷೇಧಕ್ಕಾಗಿ ಸೆಲ್‌ಗಳು ರೂಪಿಸುವುದಷ್ಟೇ ಅಲ್ಲ ಆ ಸೆಲ್‌ಗಳು ಸೇವೆ ಸಲ್ಲಿಸಬೇಕಾದ ಬಗೆ, ಅದರ ಮೂಲಭೂತವಾದ ಉದ್ದೇಶವನ್ನು ಈಡೇರಿಸುವಂತೆಯೇ ಅವುಗಳು ಕಾರ್ಯನಿರ್ವಹಿಸುವಂತೆ, ಕ್ರಮಕೈಗೊಳ್ಳುವುದು, ಅದನ್ನು ಪರಿಶೀಲನೆಗೊಳಪಡಿಸಲು ಸಮಿತಿಯೊಂದನ್ನು ರಚಿಸಿ, ಅದು ಸೂಕ್ತ ನೆಲೆಯಲ್ಲಿ ವರದಿಯೊಪ್ಪಿಸುವಂತಾಗಬೇಕು. ಈ ಬಗೆಯ ಸೆಲ್ ಮತ್ತು ಸಮಿತಿಗಳಲ್ಲಿ ಮಹಿಳಾ ಅಧ್ಯಯನ ಓದಿದವರನ್ನು ವಿಶೇಷವಾಗಿ ನೇಮಿಸಿಕೊಳ್ಳಬೇಕು.

ರಾಜಕೀಯ ಮತ್ತು ಉದ್ಯೋಗ ವಲಯ ಹಾಗೂ ಇತರೆ ಸಾರ್ವಜನಿಕ ವಲಯಗಳಲ್ಲಿ ಭಾಗವಹಿಸುವ, ಮುಂದುವರಿಯುವ ಮಹಿಳೆಯರಿಗೆ ಕಾಯಿದೆ, ಕಾನೂನುಗಳ ಕುರಿತು ಮಾಹಿತಿಯನ್ನೊದಗಿಸಲು ಜಾಗೃತಿ ಶಿಬಿರಗಳು, ತರಬೇತಿಗಳನ್ನು ಏರ್ಪಡಿಸುವ ಮೂಲಕ, ಹೀಗೆ ತರಬೇತಿ ಹೊಂದಿದವರನ್ನು ಸೇರಿಸಿ ಸಮಿತಿಯೊಂದನ್ನು ರಚಿಸಿ, ಈ ಬಗೆಯ ಜಾಗೃತಿ ಶಿಬಿರಗಳ ನಂತರ ಅವರುಗಳ ಕ್ರಿಯಾಶೀಲತೆ, ಬದಲಾವಣೆಗಳನ್ನು ಗುರುತಿಸಿ, ಪರ್ಯಾಯ ಕ್ರಮಗಳನ್ನು ಕೈಗೊಳ್ಳಬೇಕು. ಈಗಾಗಲೆ ಮಹಿಳಾ ಸಮಾಖ್ಯವು ಜಿಲ್ಲೆಯ ಕೆಲವು ಪೋಲಿಸ್ ಠಾಣೆಗಳಲ್ಲಿ ಈ ಬಗೆಯ ಕಾರ್ಯಕ್ರಮ ರೂಪಿಸುವುದರಿಂದ, ಅಲ್ಲಿನ ಮಹಿಳೆಯರು ಸಮಸ್ಯೆಗಳನ್ನು ಅಭಿವ್ಯಕ್ತಿಸುವುದು ಕಷ್ಟವೆಂಬುದಕ್ಕಿಂತ, ಅಭಿವ್ಯಕ್ತಿಸಿದ ನಂತರ ಅವರು ಒಳಗಾಗುವ ಹಿಂಸೆಯ ಪ್ರಮಾಣವು ಇನ್ನಷ್ಟು ಕ್ರೂರವಾಗುತ್ತದೆ. ಈ ನಿಟ್ಟಿನಲ್ಲಿ ಕಾರ್ಯಕ್ರಮಗಳ ರೂಪಿಕೆಗಳೇ ಬದಲಾಗಬೇಕು. ಮಾಹಿತಿಗಳನ್ನು ಗುಪ್ತವಾಗಿ ಸಂಗ್ರಹಿಸುವ ಮೂಲಕ ಸರ್ಕಾರಕ್ಕೆ ವರದಿಯನ್ನು ಒಪ್ಪಿಸಿ ಸೂಕ್ತ ರೀತಿಯಲ್ಲಿ ಕ್ರಮಕೈಗೊಳ್ಳುವಂತಾಗಬೇಕು.

ಮೀಸಲಾತಿಯಡಿಯಲ್ಲಿ ನೇಮಕವಾಗುತ್ತಿರುವ ಗ್ರಾಮ ಪಂಚಾಯ್ತಿಯ ಮಹಿಳೆಯರಿಗೆ ರಾಜಕೀಯ ರಂಗದ ಕುರಿತು, ಸಮಗ್ರವಾದ ತರಬೇತಿಯನ್ನು ನೀಡುವ ಮೂಲಕ ಅವರು ಅಧಿಕಾರವನ್ನು ನಿರ್ವಹಿಸುವಂತಾಗಬೇಕು. ಈ ಹುದ್ದೆಗಳು ಅವರಲ್ಲಿ ಆತ್ಮವಿಶ್ವಾಸವನ್ನು ಹುಟ್ಟಿಸುವಲ್ಲಿ ಸಹಾಯಕವಾಗುವಂತೆ ತರಬೇತಿಗಳಿರಬೇಕು.

ಮಹಿಳಾ ಪೋಲಿಸ್ ಪೇದೆಗಳು, ಬಂದೊಬಸ್ತ ಮತ್ತಿತ್ಯಾದಿ ಸಂದರ್ಭಗಳಲ್ಲಿ ಬೇರೆ ಹಳ್ಳಿಗೋ, ಇನ್ಯಾವುದೋ ಸ್ಥಳಕ್ಕೆ ಹೋಗಿ ತಂಗಬೇಕಾದಲ್ಲಿ ಅವರಿಗೆ ಉಳಿದುಕೊಳ್ಳಲು ವಿಶಿಷ್ಟ ಬಗೆಯ ಸೌಲಭ್ಯಗಳನ್ನು ಒದಗಿಸಿಕೊಡಬೇಕು ಎಂದು ಕೆಲವು ಸಲಹೆಗಳನ್ನು ಸೂಚಿಸಲಾಗಿದೆ.

# ೧. ವಕ್ತೃ ವಿವರ

| ಕ್ರಸಂ | ಹೆಸರು | ವಯಸ್ಸು | ಶಿಕ್ಷಣ | ಜಾತಿ | ವಿವಾಹಿತ/ಅವಿವಾಹಿತೆ ವಿಧವೆ/ವಿಚ್ಛೇದಿತೆ/ಇತರೆ | ಹುದ್ದೆ |
|---|---|---|---|---|---|---|
| **ದಾಖಲಿಸಲಾದ ಮಹಿಳಾ ಪೊಲೀಸರ ಪಟ್ಟಿ** | | | | | | |
| ೦೧ | ನಾಗಮಣಿ | ೨೩ | ಬಿ.ಎ. (ಪ್ರಥಮ) | ಲಿಂಗಾಯತ | ಅವಿವಾಹಿತೆ | ಪೊಲೀಸ್ ಪೇದೆ |
| ೦೨ | ಕಮಲಮ್ಮ | ೨೫ | ಪಿ.ಯು.ಸಿ. | ಕಬ್ಬಲಿಗ | ವಿವಾಹಿತೆ | ಪೊಲೀಸ್ ಪೇದೆ |
| ೦೩ | ಪರಿಣಿತ | ೨೬ | ಎಸ್.ಎಸ್.ಎಲ್.ಸಿ | ಹಡಪದ | ವಿವಾಹಿತೆ | ಪೊಲೀಸ್ ಪೇದೆ |
| ೦೪ | ಸಂಧ್ಯಾರಾಣಿ | ೨೮ | ಎಸ್.ಎಸ್.ಎಲ್.ಸಿ | ಎಸ್.ಸಿ. | ವಿವಾಹಿತೆ | ಪೊಲೀಸ್ ಪೇದೆ |
| ೦೫ | ರಜಿಯಾಬಾನು | ೩೦ | ಎಸ್.ಎಸ್.ಎಲ್.ಸಿ | ಮುಸ್ಲಿಂ | ವಿಧವೆ | ಪೊಲೀಸ್ ಪೇದೆ |
| ೦೬ | ಶರಣಮ್ಮ | ೩೧ | ಪಿ.ಯು.ಸಿ. | ಇಳಿಗೆರು | ವಿಚ್ಛೇದಿತೆ | ಪೊಲೀಸ್ ಪೇದೆ |
| ೦೭ | ರತ್ನಮ್ಮ | ೩೫ | ಎಸ್.ಎಸ್.ಎಲ್.ಸಿ | ಎಸ್.ಟಿ. | ವಿವಾಹಿತೆ | ಪೊಲೀಸ್ ಪೇದೆ |
| ೦೮ | ರಾಚಮ್ಮ | ೫೨ | ೭ನೇ ತರಗತಿ | ಕುರುಬರು | ಅವಿವಾಹಿತೆ | ಪೊಲೀಸ್ ಪೇದೆ |
| ೦೯ | ಊರ್ಮಿಳಾ | ೫೦ | ಬಿ.ಎ. | ಮರಾಠ | ಅವಿವಾಹಿತೆ | ಪೊಲೀಸ್ ಪೇದೆ |
| ೧೦ | ವಿಮಲಾಕ್ಷಿ | ೪೯ | ಬಿ.ಎ. | ಕ್ರಿಶ್ಚಿಯನ್ | ವಿಚ್ಛೇದಿತೆ | ಪಿ.ಎಸ್.ಐ |
| **ದಾಖಲಿಸಲಾದ ಗ್ರಾಮಪಂಚಾಯತಿ ಮಹಿಳಾ ಅಧ್ಯಕ್ಷ / ಉಪಾಧ್ಯಕ್ಷರ ಪಟ್ಟಿ** | | | | | | |
| ೧೧ | ಪ್ರಮಿಳಾಬಾಯಿ | ೪೯ | ಅನಕ್ಷರಸ್ಥೆ | ಲಂಬಾಣಿ | ವಿಧವೆ | ಅಧ್ಯಕ್ಷ |
| ೧೨ | ಮಲ್ಲಮ್ಮ | ೨೯ | ೩ನೇ ತರಗತಿ | ಎಸ್.ಟಿ. | ವಿವಾಹಿತೆ | ಉಪಾಧ್ಯಕ್ಷ |
| ೧೩ | ತಾರಾಬಾಯಿ | ೩೬ | ಎಸ್.ಎಸ್.ಎಲ್.ಸಿ | ಲಿಂಗಾಯತ | ವಿವಾಹಿತೆ | ಅಧ್ಯಕ್ಷ |
| ೧೪ | ಲಕ್ಷ್ಮೀದೇವಿ | ೪೪ | ಬಿ.ಎ. | ಕಬ್ಬಲಿಗ | ವಿಧವೆ | ಅಧ್ಯಕ್ಷ |
| ೧೫ | ಸಿದ್ದಮ್ಮ | ೩೦ | ಅನಕ್ಷರಸ್ಥೆ | ಎಸ್.ಸಿ. | ವಿವಾಹಿತೆ | ಉಪಾಧ್ಯಕ್ಷ |
| ೧೬ | ಗುಂಡಮ್ಮ | ೪೧ | ಅನಕ್ಷರಸ್ಥೆ | ಎಸ್.ಸಿ. | ಜೋಗತಿ | ಅಧ್ಯಕ್ಷ |
| ೧೭ | ವೆಂಕಟಲಕ್ಷ್ಮಿ | ೨೮ | ಪಿ.ಯು.ಸಿ. | ಮರಾಠ | ವಿವಾಹಿತೆ | ಅಧ್ಯಕ್ಷ |
| ೧೮ | ಸುಶೀಲಮ್ಮ | ೩೩ | ಅನಕ್ಷರಸ್ಥೆ | ಎಸ್.ಟಿ. | ವಿವಾಹಿತೆ | ಅಧ್ಯಕ್ಷ |
| ೧೯ | ಫಾತಿಮಾ | ೪೫ | ೬ನೇ ತರಗತಿ | ಮುಸ್ಲಿಂ | ವಿವಾಹಿತೆ | ಉಪಾಧ್ಯಕ್ಷ |
| ೨೦ | ರಾಧಮ್ಮ | ೫೨ | ಅನಕ್ಷರಸ್ಥೆ | ಜಂಗಮರು | ವಿಚ್ಛೇದಿತ | ಅಧ್ಯಕ್ಷ |

ಸೂಚನೆ: ಹೆಸರುಗಳನ್ನು ಬದಲಾಯಿಸಲಾಗಿದೆ.

# ೨. ಪ್ರಕರಣಗಳು

**ಪ್ರಕರಣ : ೦೧**

ಹೆಸರು : ನಾಗಮಣಿ

ವಯಸ್ಸು : ೨೩

ಜಾತಿ : ಲಿಂಗಾಯತ

ವಿದ್ಯಾರ್ಹತೆ : ಬಿ.ಎ. (ಮೊದಲ ವರ್ಷ)

ಹುದ್ದೆ : ಪಿ.ಸಿ.

ನನ್ನ ಹೆಸರು ನಾಗಮಣಿ ಅಂತ, ನಾವು ಮೂರು ಜನ ಹೆಣ್ಮಕ್ಕಳೇ ಅದರಲ್ಲಿ ನಾನೇ ಕೊನೆಯ ಮಗಳು, ಮೊದಲಿಬ್ಬರೂ ಅಕ್ಕಂದಿರಗೆ ಮದುವೆ ಮಕ್ಳ ಎಲ್ಲಾ ಆಗಿ ನೆಮ್ಮದಿಯಾಗಿದ್ದಾರೆ, ನಮ್ಮಮ್ಮ ನಾ ಚಿಕ್ಕವಳಿದ್ದಾಗೆ ತಿರಿ ಹೋದ್ರಂತೆ, ನನಗೆ ಅವರ ಮುಖನೂ ಸರಿಗೆ ಜ್ಞಾಪಕ ಇಲ್ಲ. ಅಪ್ಪಾನೆ ನಮಗೆಲ್ಲಾ ಓದ್ಸಿದ್ದು, ಅವೆರಲ್ಲ ಅಕ್ಕಂದಿರು ಎಸ್.ಎಸ್.ಎಲ್.ಸಿ. ಫೇಲ್ ಮುಂದೆ ಓದಲ್ಲಂದಿದ್ದಕ್ಕೆ ಮದ್ವೆ ಮಾಡಿದರೂ ನಮದು ಮಧ್ಯಮವರ್ಗದ ಕುಟುಂಬ, ಇಬ್ಬರೂ ಅಕ್ಕಂದಿರಗೆ ಹಳ್ಳಿ ಊರಗೆ ಮದ್ವೆ ಮಾಡಿಕೊಟ್ಟಿದ್ರು, ಒಬ್ಬ ಅಕ್ಕ ಗಂಡ ಮಕ್ಳು ಎಲ್ಲಾ ಪುನಾದಲ್ಲಿರ್ತಾರೆ. ನಮ್ಮ ಮಾವ ಅಲ್ಲಿ ಬಿಲ್ಡಿಂಗ್‌ಗೊಳ ಕಟ್ಟಿಸುವಲ್ಲಿ ಮೇಸ್ತ್ರಿಯಾಗಿ ಕೆಲಸ ಮಾಡ್ತಾರೆ. ವರ್ಷಕ್ಕೊಮ್ಮೆ ಊರಿಗೆ ಬರೋದು, ಅಪರೂಪ. ಇನ್ನೊಬ್ಬ ಅಕ್ಕಂದೂ ಹಳ್ಳಿಲಿ ಹೊಲ ಇದೆ. ಸುಮಾರು ಆರು ಎಕರೆ ಅಷ್ಟೇ ಇದೆ. ಅವಳು ಅಲ್ಲೆ ಇರೋದು.

ಈಗ ಮನೇಲಿ ಇರೋದು ಅಪ್ಪಾ ನಾನು, ನಂದು ಪಿ.ಯು.ಸಿ. ಮುಗಿತಿದ್ದದಂಗೆ ಮದುವೆ ಮಾಡಬೇಕು ಅಂತ ಯೋಚಿಸಿದ್ರೂ. ನನಗಿಷ್ಟ ಇಲ್ಲಂದ್ರೂ ಕೇಳಲಿಲ್ಲ. ಒಂದು ಸಂಬಂಧ ಬಂದು ಎಂಗೇಜ್‌ಮೆಂಟ್ ಆಯ್ತು. ಹಣ ಇರಲಿಲ್ಲಂತೆ ಮದವೆ ಆರು ತಿಂಗಳ ಮುಂದೆ ಹಾಕಿದ್ರು. ಆ ಹುಡುಗ ಮನೆಗೂ ಬರ್‍ತಿದ್ದ ಹೊರಗಡೆನೂ ಸುತ್ತಾಡೊಕೆ ಹೋಗ್ತಿದ್ವಿ. ಇಬ್ಬರಲ್ಲಿ ಅಂಥ ಏನು ಅಂಡಸ್ಟ್ಯಾಂಡಿಂಗ್ ಇರ್‍ಲಿಲ್ಲ. ಮೊದಲ ಮೊದಲು ಹಾಗೆಯೇನೊ? ಅಂತ ಸುಮ್ಮನಿದ್ದೆ ಒಂಥರಾ ಮನಷ್ಯಾ ಆಯಪ್ಪ ನಾನೊಂದು ಹೇಳಿದ್ರೆ ತಾನೊಂದು ಹೇಳೊವನು, ನನಗೆ ಸೂಕ್ಷ್ಮವಾಗಿ ಅವನಿಗೆ ಎಲ್ಲಾಚಟಗಳಿದ್ದವು. ಅಂತು ಗೊತ್ತಿತ್ತು. ಒಂದ್ಸಲಾ ಹೊರಗಡೆ ಹೋದಾಗ, ನನಗೆ ಪಾರ್ಕ್‌ನಲ್ಲಿ ಬಿಟ್ಟು ನೂರು ರೂಪಾಯಿ ಕೊಡು, ಚೈಂಜ್ ಇಲ್ಲ ನಿನಗೆ ಆಮೇಲೆ ಕೊಡ್ತಿನಿ. ಅಂತ ತಗೊಂಡ ಫುಲ್ ಕುಡದ ಬಂದ. ನನಗೆ

ತುಂಬಾ ಹೆದರಿಕೆ ಆಯ್ತು. ನಮ್ಮನೆಲಿ ಯಾರಿಗೂ ಈ ಅಭ್ಯಾಸ ಇರ್ಲಿಲ್ಲ. ಬಂದವನೆ ಪಾರ್ಕ್‌ನಲ್ಲೆ ಅಸಹ್ಯವಾಗಿ Behave ಮಾಡೋಕೆ ಪ್ರಾರಂಭಿಸಿದ, ಅರಚಾಡೊದಕ್ಕೆ ಸುತ್ತ ಜನರೆಲ್ಲ ನನ್ನನ್ನೆ ನೋಡ್ತಿದ್ರೂ, ಅವನಲ್ಲೆ ಬಿದ್ದ ನನ ಹತ್ರ ೧೦ ರೂಪಾಯಿ ಮಿಕ್ಕಿತಷ್ಟೆ. ನನ್ ಫ್ರೆಂಡ್‌ಗೆ ಪಾರ್ಕ್‌ನ ಕೊಯಿನ್ ಬೂತನಿಂದ ಫೋನ್ ಮಾಡದೆ, ಅವರಲ್ಲೆ ಹತ್ರದವರೂ ಅರ್ಧಗಂಟೆಲಿ ಗಂಡನ ಜೊತೆಬಂದ್ರು ಅಷ್ಟೊತ್ತವರೆಗೂ ಅವನಲ್ಲೆ ಎಚ್ಚರವಿಲ್ದೆ ಬಿದ್ದಿದ್ದನೇನೋ ನನಗೆ ಹೆದರಿಕೆ ಆಗಿ ನೋಡ್ಲಿಲ್ಲ. ಇವರಿಗೂ ತೋರಿಸದೆ ಮನೆಗ ಬಂದ್ವಿ. ನನ್ನ ಫ್ರೆಂಡ್ ಗಂಡ, ಅಪ್ಪನ ಹತ್ರ ಎಲ್ಲಾ ವಿಷಯವನ್ನು ಹೇಳಿದ್ರು, ಅಪ್ಪಾ ಸ್ವಲ್ಪ ಹೊತ್ತು ತಬ್ಬಿಬ್ಬಾದ್ರೂ, ಇಷ್ಟಾಗೊ ಹೊತ್ತಿಗೆ ಅದೇ ವಿಚಿತ್ರ ಅವಸ್ಥೆಯಲ್ಲಿ ಅವನು ಮನೆಗೆ ಬಂದು ನನ್ ಮೇಲೆ ಕೈ ಮಾಡಿದ, ಅಪ್ಪ ಅಡ್ಡ ಬಂದ್ರು, ಏಟಬಿದ್ದು ನೆಲಕ್ಕುರಳಿದರು. ನನ್ನ ಫ್ರೆಂಡ್ ಗಂಡ ಕೋಪದಿಂದ ಅವನಿಗೆ ಹೊರಗೆ ನೂಕಕೆ ಹೋದ್ರು, ನಿನಗೂ ಇದಕ್ಕು ಏನ್ ಸಂಬಂಧ, ಇಬ್ಬರೂ ಗೆಳತಿರನು equal ಆಗಿ ನೋಡಕೊಳ್ಳೊ ಪ್ಲ್ಯಾನಾ? ಅಂದ ಹೊರಗ್ಹಾಕಿ ಕದ ಹಾಕೊಂಡ್ವಿ ಕೂಗಾಡಿ, ಕದ ಜೋರಾಗಿ ತಟ್ಟಿ ತಟ್ಟಿ ಹೋದ, ಮಿಕ್ಕವರಿಗೆಲ್ಲಾ ಗೊತ್ತಾಗಿ ಮದ್ವಿ ಮುರದ ಹೊಯ್ತು.

ಅದಾದ ಮೇಲೆ ಒಂದೆರಡು ಸಂಬಂಧ ಬಂದ್ರೂ, ಈ ವಿಷಯ ಗೊತ್ತಾಗಿ ಆಗೋ ಹಂತಕ್ಕೂ ಬಂದು ಕ್ಯಾನ್ಸಲ್ ಆದವು. ಆಗ ನಾನೆ ಒಂದಿನಾ ನಿರ್ಧಾರ ಮಾಡ್ದೆ. ನಾ ಮದ್ವೆ ಸಧ್ಯಕ್ಕೆ ಆಗಲ್ಲಂತ. ಕೆಲಸಕ ಸೇರ್‍ತಿನಿ ಅಂತ ಹೇಳಿದೆ ಅಪ್ಪ ಸಮ್ಮತಿ ಅಂತ ಹೇಳದೆ ಇದ್ರೂ ಮೌನವಾಗಿದ್ರು. ನನಗೆ ಪೋಲಿಸಾಗಬೇಕು ಅಂತ ಆಸೆ ಇತ್ತು. ಈ ಘಟನೆಗಳಾದ ಮೇಲೆ ಇನ್ನಷ್ಟು ರೋಷ ಹೆಚ್ಚಾಯ್ತು. ಅವಾಗ್ಲೆ ಈ ಪಿ.ಸಿ. ಪೊಸ್ಟ್ ಕಾಲ್ ಮಾಡಿದ್ರೂ ಅಪ್ಲೈ ಮಾಡಿದೆ, ಸೆಲೆಕ್ಟ ಆಯ್ತು ಈ ಕೆಲಸಕ್ಕೆ ಮನೆಲಿ ಯಾರೂ ಒಪ್ಪಲಿಲ್ಲ ಜಿದ್ದಮಾಡಿ ಸೆರಕೊಂಡೆ.

ನನಗಾಗಿರೋ ಪ್ರಕಾರ ಹೆಣ್ಮಕ್ಕಳಿಗೆ ಎಲ್ಲಾದ್ರೂ ಒಂದಲ್ಲಾ ಒಂದ್ ಸಮಸ್ಯೆನೆ. ಹಂಗೆನೆ ಇಲ್ಲಿನು ಇದೆ. ಇಷ್ಟ ಪಟ್ಟು ಬಂದಾಗ ಕಷ್ಟ ಅನಬಾರದಂತೆ ಎರಡುವರೆ ವರ್ಷದಲ್ಲಿ ಸಾಕಷ್ಟು ಅನುಭವಗಳು ಈ ಫಿಲ್ಡ್ ಕಲಿಸಿದೆ. ನನಗೆ ಯಾವ ತರಹದ ಡ್ಯೂಟಿ ಕೊಟ್ರು ಮಾಡ್ತೀನಿ. ಹೆಚ್ಚು ಇಲ್ಲಿ ಸೆಂಟ್ರಿಗೆ ಹಾಕ್ತರೆ. ಇಷ್ಟ ಇರೋದನ್ನೆ ಮಾಡ್ತಿವಿ ಅಂದರೆ ಮಾಡೋಕಾಗಲ್ಲ ಅಲ್ವ ಅದಕ್ಕೆ Totaly ಈ Job ಒಂಥರಾ ಟೆನ್ಷನ್ ಜಾಬೇ, ನೆಮ್ಮದಿಯಾಗಿ ನಾಲ್ಕ ಫೈಲ್ ಬರೆಯೋ ಕೆಲಸ ಅಲ್ಲ ಇದು. ಆಫಿಸನಲ್ಲಿ ಆಫಿಸರ್, ಕಲಿಗ್ಸ್ ಎಲ್ಲಾ ಚೆನ್ನಾಗಿದ್ದಾರೆ ಅನ್ನಬಹುದು. ನನ ಗಮನಕ್ಕೆ ಬಂದಿರೋ ಹಾಗೆ ಬೇರೆಯ ಪಿ.ಸಿ.ಗಳು ಅನುಭವಿಸೋ ಸಮಸ್ಯೆ ನೋಡಿದ್ರೆ I feel better ಅನ್ಸುತ್ತೆ. ಏನಾದರು. ಹೆಣ್ಮಕ್ಕಳು ಮನೇಲಿರೊದಕ್ಕಿಂತ ಅವರು ಹೊರಗೆ ಬರೋದು ಚಂದ. ಬರಬೇಕು ಪ್ರಪಂಚ ತಿಳಿಕೊಬೇಕು. ನಿಜ. ಆದರೆ ಈ ಫಿಲ್ಡಿಗೆ ಬರಬೇಕು ಅಂದ್ರೆ ತಂಬಾ ಯೋಚಿಸಬೇಕು. ಇದು ತುಂಬಾ ಡೆಂಜರ್ ಫಿಲ್ಡ್ ಅಂತ ನನಗನ್ನಸಿದೆ. ಇಲ್ಲಿ ಯಾವುದೇ ಪ್ರಕರಣಗಳಲ್ಲೂ ಯಾವುದೇ ಪಿ.ಸಿ. ಗೂ ಸಹ ನಿರ್ಧಾರ ತಗೊಳ್ಳೊ ಹಕ್ಕಿರಲ್ಲ. ಹೇಳಿದಷ್ಟು ಕೆಲಸ ಮಾಡೋದಷ್ಟೇ ನಮ್ಮ ಕೆಲಸ. ಇಲ್ಲಿ ರಾಜಕೀಯ ಜನರ ಒತ್ತಡ. ಮೇಲಧಿಕಾರಿಗಳ ಒತ್ತಡಗಳು ತುಂಬಾ ಇರ್‍ತವೆ. ಎಷ್ಟೋ ಅಪರಾಧಗಳು ನಮ್ ಕಣ್ಣೆದುರೆ

ನಡೆದ್ರೂ ನಾವೇನು ಮಾಡೋದಕ್ಕೆ ಆಗಲ್ಲ. ಉದಾ. ಮೊನ್ನೆ ಟಿ.ವಿ. ನ್ಯೂಜ್‌ನಲ್ಲಿ ಬಿಹಾರದ ಪಾಟ್ನ ಮೂಲದ ಒಂದು ಕೆಸ್ ಹುಡುಗಿನ ಐದಾರು ಜನ ಹಿಡಿದು ಎಳದಾಡ್ತಿದ್ದರೂ ಸುಮಾರು ಗಂಟೆಗಳ ಕಾಲ. ಅಲ್ಲಿ ಪಿ.ಸಿ. ಇದ್ರು ಏನು ಮಾಡ್ಲಿಲ್ಲ ಸುಮ್ನೆ ನೋಡ್ತಾಯಿದ್ರು ಅನ್ನೋದು Hilight ಆಯ್ತು. ಆದರೆ ಯಾಕೆ? ಆ ಪಿ.ಸಿ. ಏನು ಮಾಡೊಕಾಗ್ಲಿಲ್ಲ. ಅನ್ನೊ ಒಳಗಿನ ಕಾರಣಗಳು ನಮಗೆ ಗೊತ್ತಾಗಿರತ್ತೆ. ಎಷ್ಟೋ ಅಪರಾಧಿಗಳು ನಮ್ಮ ಕಣ್ಣೆದುರಿಗೆ ಬಿಡುಗಡೆಯಾಗ್ತಾರೆ. ನಾವೇನು ಮಾಡೋಕಾಗಲ್ಲ ವಿಶೇಷವಾಗಿ ಲೇಡಿ ಪಿ.ಸಿಗಳಂತೂ ತುಂಬಾನೆ ರಿಜರ್ವ ಆಗಿರಬೇಕು. ಹಾಗಿದ್ರುನು ಇಲ್ಲಿ ಬದುಕೊದು ಕೆಲವೊಮ್ಮೆ ತುಂಬಾನೆ ಕಷ್ಟವಾಗುತ್ತೆ.

ನನಗೆ ಒಂದು ಅನುಭವ ಬಹಳ ಮನಸ್ಸಿಗೆ ನೋವುಂಟು ಮಾಡಿದೆ. ನಾನು ಬಂದ ಒಂದೇ ವರ್ಷದಲ್ಲಿ ನನಗಿನ್ನು ಫಿಲ್ಡ್ ತುಂಬಾನೆ ಹೊಸದು, ನೆನಸಿಗೊಳ್ಳೊಕು ಭಯ, ನಾ ವ್ಯಕ್ತಿ ಹೆಸರು ಹೇಳಲ್ಲ. ತುಂಬಾ ಪವರ್ ಫುಲ್ ಪರ್ಸನ್ ಅವರು ಇಲ್ಲಿ ಒಂದು ಕ್ರೈಂ ನಡೆದಿತ್ತು ಕೇಸ್ ಎಫ್.ಐ.ಆರ್. ಮಾಡಬೇಕಿತ್ತು. ನಮ್ಮ ಪಿ.ಎಸ್.ಐ. ತುಂಬಾ ಸ್ಟ್ರಿಕ್ಟ್ ಅವರು ಬಹಳೆ ಕಷ್ಟ ಪಟ್ಟು ಹಿಡಿದಿದ್ರು ಅರಪಾಧಿನ. ಇನ್ನೇನು Case ಫೈಲ್ ಮಾಡ್ತಿದ್ದೆ. ಪಿ.ಎಸ್.ಐ ಅವರಿಗೂ, ನನಗೂ ಫೋನ್‌ನಲ್ಲೆ ಪ್ರಾಣ ಬೆದರಿಕೆ ಹಾಕಿದ್ರೂ, ಅಷ್ಟು ಫಾಸ್ಟಾಗಿ ಅವರು ನಮ್ಮ ಫ್ಯಾಮಿಲಿ, ಪರ್ಸನಲ್ ಲೆವೆಲ್ಸ್ ಎಲ್ಲಾ ತಗೊಂಡಿದ್ರು. ನೀನು ಯಾವ ಧೈರ್ಯದ ಮೇಲೆ ಕೇಸ್ ಬರದಿದ್ದಿಯೋ ನಿನ್ನ ನೊಡ್ಕೊತಿನಿ. ಫಿಲ್ಡಿಗೆ ಹೊಸಬಳು. ತುಂಬಾ ಯೌವ್ವನ ಬೇರೆ ಬಾಲಬಿಚ್ಚಿದರೆ ಈಗ ಬರಿ ಮದ್ವೆ ನಿಂತಿದೆ. ಮುಂದಾಗೋದು ಆಗೊಲ್ಲ. ಬೆತ್ತಲೆ ಮೆರವಣಿಗೆ ಮಾಡಿದರೆ ಹುಚ್ಚಾಸ್ಪತ್ರೆ ಸೇರಬೇಕಾಗುತ್ತೆ. ನಾನು ಮನಸ ಮಾಡಿದ್ರೆ ನಿಮ್ಮಪ್ಪ ನನ್ ಕಾಲಡಿಗೆ ಬಂದ್ ಬಿಳ್ತಾರೆ. ನೋಡೊಕೆ ದೇಹನೂ ಸಿಗೊಲ್ಲ ಹುಶಾರ್, ನಿನ್ನ ಅಕ್ಕಂದಿರ ಮನೆಗಳು ಸುಟ್ಟ ಬುದಿಯಾಗ್ತವೆ. ಯೋಚನೆ ಮಾಡು ಅಂತ ಫೋನ್‌ನಿಟ್ಟುರು. ಸರ್‌ಗೆ ಏನ್ ಹೆದರಿಸಿದ್ರೊ ಗೊತ್ತಿಲ್ಲ. ಅವರ ಹೆಂಡ್ತಿ ಫೋನ್ ಮಾಡಿ ನನಗೆ ಹೇಳಿದರು ಹಾಗೆಲ್ಲ ಏನು ಸಾಹಸಗಳು ಮಾಡಬೇಡಮ್ಮ, ಬದುಕು ಕಷ್ಟ ಇವರಿಗೆ ಎಷ್ಟ ಹೇಳಿದ್ರು ಕೇಳಲ್ಲ. ಆದರೂ ಅವರು ಗಂಡಸು, ಹೇಗೊ ನಿಭಾಯಿಸಬಹುದು ನಿನಗೆ ಕಷ್ಟ ಆಗುತ್ತೆ ಅಂತ ಅಳತಾ ಫೊನ್ ಇಟ್ಟರೂ ಮೇಡಂ ಅವರು. ಒಂದೇ ವಾರದಲ್ಲೆ ನಮ್ಮ ಪಿ.ಎಸ್.ಐ. ಅವರಿಗೆ ಟ್ರಾನ್ಸ್‌ಫರ್ ಆಯ್ತು. ಏನು ಮಾಡಕ್ಕಾಗಲ್ಲ ಇಂಥ ಇಕ್ಕಟ್ಟನಲ್ಲೆ ಬದುಕಬೇಕು. ನಾನಿನ್ನು ಅಧಿಕಾರದ ಪೊಸ್ಟ್‌ನಲ್ಲಿದ್ರೆ ಜೀವ ಹೊದ್ರೂ ಬಿಡ್ತಿರಲಿಲ್ಲ. ಆದರೆ ಏನ್ ಮಾಡೊಕಾಗಿಲ್ಲ ಈ ಪೊಸ್ಟ್‌ನಲ್ಲಿದ್ದು. ಮನೆಲೂ ವಿಷಯ ಗೊತ್ತಾಗಿ ಇಲ್ಲದ ಸಾಹಸ ಮಾಡೊ ಹಾಗಿದ್ದರೆ ಕೆಲಸ ಬಿಡು, ಅಂತ ಬಯ್ತಾ ಇರ್ತಾರೆ. ಪಾಪ ಅವರಿಗೆಲ್ಲಾ ಹೆದರಿಕೆ. ಅವತ್ತು ಫೈಲ್ ಬರೆದಿದ್ದಕ ನಾ ಇನಾನು ಹಿಂಸೆ ಅನುಭವಿಸ್ತಿದ್ದಿನಿ.

ಮುಂದೆ ಏನಾದ್ರೂ ಒಳ್ಳೆ ಪೊಸ್ಟ್ (Higher officer) ಸಿಕ್ಕರೆ ಹೋಗ್ತಿನಿ. ಮದ್ವೆ ಆಗಬೇಕು ಅನ್ಸುತ್ತೆ. ಮನುಷ್ಯರಲ್ಲವಾ ನಾವುನು. ಆದರೂ ಆಗಲ್ಲಾ ಅಂತಾ ನಿರ್ಧಾರ ಮಾಡಿದ್ದಿನಿ. ಫ್ಯಾಮಿಲಿ ಗಂಡ, ಮಕ್ಕಳು ಅಂತ ಇದ್ದರೆ ಈ ತರಹದ ಕೆಲಸಗಳಲ್ಲಿ ಅವರ ಪ್ರಾಣವನ್ನು ಎದುರಿಟ್ಟು ಬೆದರಿಕೆ

ಹಾಕ್ತಾರೆ. ನಮ್ ಸಾಧನೆಗೆ ಅವರನ್ನ ಬಲಿಕೊಡೊಕ್ಕೆ ಇಷ್ಟ ಆಗೊಲ್ಲ. ಇನ್ನೊಂದು ಸಿಗೊ ಗಂಡ ಕೆಲಸ ಬಿಡು ಅಂತನೋ (ಮದ್ವಿ ಆದ ಮೇಲೆ) ಸಂಬಳಕ್ಕೆ ಕಿತ್ತಾಡನೋ, ಈ ಫಿಲ್ಡ್‌ನಲ್ಲಿರೊದರಿಂದ್ರನೆ ಅನುಮಾನ ಪಡೋವನಾಗಿದ್ದರೆ ಕಷ್ಟ ಆಗುತ್ತೆ. ಅರ್ಥಮಾಡಕೊಳ್ಳೂರು ಇರ್‍ತಾರೆ. ಇಲ್ಲಿ ಅಂತಿಲ್ಲ but ತುಂಬಾನೆ rare caseಗಳು ಒಂದು ವೇಳೆ ಹಾಗಾಗದೆ ಇದ್ರೆ ಅದನ್ನು ಬಿಟ್ಟ ಬರೋಕು ಆಗ್ದೆ, ಇರೋದಕ್ಕು ಆಗ್ದೆ, ಡ್ಯುಟಿನೂ ಬಿಡೊಕಾಗ್ದೆ ಒದ್ದಾಡ ಬೆಕಾಗುತ್ತೆ. ಏನೂ ಸಾಧನೆಗಳು ಆಗಲ್ಲಾ, ಬದುಕು ಸರಿಗೆ ಆಗೊಲ್ಲ, ಒಂದನ್ನು ಪಡೆಯೊಕೆ ಇನ್ನೊಂದನ್ನಾ ಕಳಕೊಳ್ಳಲೇ ಬೇಕು. Specially ಹೆಣ್ಮಕ್ಕಳು ಸಾಧಿಸ್ತಿನಿ ಅನ್ನೊವರು ಮದ್ವೆನೆ ಆಗಬಾರದು, ಅದು ಈ ತರಹದ ಫಿಲ್ಡ್‌ಗಳಲ್ಲಿ ಮದ್ವೆ ಆದ್ರೆ ಒಂದ್ ಕಷ್ಟ. ಮದ್ವೆ ಆಗದಿದ್ದರೆ ನೋಡ ದೃಷ್ಟಿನೇ ಬೇರೆ ಅದು ಇನ್ನೊಂದು ತರಹ ಕಷ್ಟ.

ನೀವು ಹೇಳೊ ಪ್ರಕಾರ ಎಲ್ಲಾ ಇವೆ. ಕಾಯ್ದೆ. ಕಾನೂನು, ಸಂಘಟನೆ ಎಲ್ಲಾನೂ ಇವೆ. ಆದರೆ ಅದು ಯಾವುದುನು ಯಾರಿಗೆ ಉಪಯೋಗ ಆಗಬೇಕು ಅವರಿಗೆ ಆಗ್ತಿಲ್ಲ. ಜನಸಾಮಾನ್ಯರಿಗೆ, ಹೆಣ್ಮಕ್ಕಳಿಗೆ ಕೆಲಸಕ್ಕೆ ಬರ್‍ತಿಲ್ಲ. ನಾನೇ ನೋಡಿರೋ ಒಂದು ಕೆಲಸ. ಹೆಳಲಾ. ಒಬ್ಬಯಮ್ಮ ನೋಡೊಕೆ ಅಷ್ಟೇನ್ ಚೆನ್ನಾಗಿಲ್ಲ. ಎರಡನೆ ಹೆಂಡ್ತಿ ಆಯಪ್ಪನಿಗೆ, ಅವನು ಸಿಕ್ಕಾಪಟ್ಟೆ ಚಂದ ಇದ್ದಾನೆ. ಗೊತ್ತಿಲ್ಲ ಮೊದಲನೆ ಹೆಂಡ್ತಿಯಾಕ ಸತ್ತಳು? ಕೊಂದರೊ? ಅಂತ. ತಿಂಗಳಲ್ಲಿ ಎರಡೆರಡು ಸಲ ಆಯಮ್ಮನದು ಇದೇ ಗೋಳು, ಹೊಡಿತಾನೆ, ದುಡ್ಡ ಕೊಡಲ್ಲಾ, ಎಲ್ಲಾ ಕುಡಿತಾನೆ, ನನ್‌ಪಾಡಿಗೆ ನನಗೂ ಇರೊಕೆ ಬಿಡ್ತಿಲ್ಲಾ ಸರ್ ಏನಾರ್ ಮಾಡ್ರಿ. ಬಂದಾಗ ಹೋಗಿ ಹಿಡಕೊಂಡ ಬರಬೇಕು. ಬಂದ್ ರಾತ್ರಿನೊ, ಹಗಲೊ ಇಟ್ಕಂಡ ಬಿಡಬೇಕು. ಸರಿ ಅನ್ನಬೇಕು ಮತ್ತೆ ಅದೇ ರಿಪಿಟ್ ಒಂದು ಮುಖ, ಇನ್ನೊಂದಂದ್ರೆ ಪಿ.ಸಿ.ಗಳೇ ಇನ್ನೂರೋ, ಮುನ್ನುರೋ, ತಗೊಂಡು ಒಂದ ಗಂಟೆಲಿ ಕಳಸಿಬಿಡೋದು, ಅವನು ಮನೆಗೆ ಹೋಗಿ ಇರೊದಕ್ಕಿಂತ ಇನ್ನಾ ಹೆಚ್ಚು ಟಾರ್ಚರ್ ಮಾಡ್ತಾನೆ. ನಾನು ಗಂಡಸು ಹೇಗ ಬಂದೆ ನೋಡು ಅಲ್ಲಿಂದ. ದಿಲ್ಲಿವರೆಗೂ ಹೋಗ್ತಿಯ ಹೋಗು. ಇಷ್ಟೆಲ್ಲಾ ಆಗಿ ಸಂಘ-ಸಂಸ್ಥೆಗಳಿಗೆ ಹೋಗೊಕೆ ಆ ಹೆಣ್ಮಗಳಿಗೆ ಧೈರ್ಯ ಇಲ್ಲ, ದಾರಿ ಗೊತ್ತಿಲ್ಲ, ಎಲ್ಲಾ ಇದ್ರೂ ದುಡ್ಡಿಲ್ಲ. ಇದು ಮೀರಿ ಹೋದರೆ ಕೆಸ್ ಆಗಿ ಪರಿಹಾರ ಸಿಗೋ ಹೊತ್ತಿಗೆ ಅವಳು ಬದುಕಿನ ಕೊನೆ ಅವಧಿ ತಲುಪಿರ್‍ತಾಳೆ. ಅಷ್ಟರಲ್ಲಿ ಸ್ಟೇಶನ್, ಸಂಘ, ಕೋರ್ಟಿನ ಅಡ್ಡಾಟ ಅಷ್ಟೆ. ಅದರಾಚೆಗೆ ಏನು ಇಲ್ಲ. ಹೀಗಿದೆ ಸಾಮಾನ್ಯರ ಸ್ಥಿತಿ.

ಬೇರೆಯವರದು ಹೀಗಾದರೆ ಇನ್ನ ನಮ್ಮಂಥವರದೆ ಉದಾ: ಹೇಳೊದಾದರೆ ನಂದೆ ಹೇಳ್ತಿನಿ ನೋಡಿ. ಮಹಿಳಾ ಸಮಖ್ಯೆಯವರು ಮಹಿಳಾ ಪೋಲಿಸರಿಗೆ ಅಂತ ಒಂದು ಕಾರ್ಯಕ್ರಮ ಮಾಡಿದ್ದರು. ಅಲ್ಲಿ ನಮಗಾಗೋ ಸಮಸ್ಯೆಗಳನ್ನು ಹೇಳಿ ಅಂತ ಹೇಳಿದ್ರೂ ನಾನ್ ಬಂದು ಇನ್ನೂ ೫ರಿಂದ ೬ ತಿಂಗಳಷ್ಟೇ ಅನ್ಸುತ್ತೆ. ನನಗೆ ಸಮಸ್ಯೆ ಏನಿರಲಿಲ್ಲ. ಒಟ್ಟು ಮಹಿಳಾ ಪಿ.ಸಿ.ಗಳ ಸಮಸ್ಯೆ ಹೇಳಿದೆ. ಸೆಂಟ್ರಿ ಡ್ಯೂಟಿ, ಬಂದೊಬಸ್ತುಗಳಲ್ಲಿ ಅನುಕೂಲ ಇಲ್ಲ. ಹೊದರೆ ರಾತ್ರಿ ಉಳಿಯಾಕೆಲ್ಲಾ ವ್ಯವಸ್ಥೆ ಇರಲ್ಲ. ಪಿ.ಎಸ್.ಐ. ಆಜ್ಞೆನೆ ಅಂತಿಮ. ಅಂತ ಹೇಳಿ ಅದರ ಒಟ್ಟು ಬದಲಾವಣೆ ಮಾಡಿದರೆ ಅನುಕೂಲ ಆಗುತ್ತೆ ಅಂತ ಹೇಳಿದ್ರೆ Very next day ನಮ್ಮ ಪಿ.ಎಸ್.ಐಗೆ wrong ಮಾಹಿತಿ ಕೊಟ್ಟಿದ್ದಾರೆ.

ನಮ್ಮಲ್ಲೆ ಒಬ್ಬರು. ಅದಕವರು ನಮ್ಮ ಸ್ಟೆಶನ್‌ನಲ್ಲಿ ನಾನು ಯಾರಿಗಿನು ಕಷ್ಟಕೊಟ್ಟಿಲ್ಲ. ಅದರಲ್ಲೂ ಹೆಣ್ಮಕ್ಕಳನ್ನು ನಾನು ತುಂಬಾ ಆದರದಿಂದ ನೋಡ್ತಿನಿ. ನನ ಬಗ್ಗೆನೆ ಹೀಗೆ, ಹೇಳಿದಿರಾ? ಈಗ ಅನುಭವಿಸಂತ, ಹೆಣ್ಮಕ್ಕಳಿಗೆ ನೈಟ್ ಡ್ಯೂಟಿ ಇಲ್ಲಂದ್ರೂ ಕೂಡ ಸುಮಾರು ಒಂದು ತಿಂಗಳು ನೈಟ್ ಸಂಟ್ರಿ ಡ್ಯೂಟಿಗೆ ಹಾಕಿದರೂ, ನನ್ನ ಮೊಬೈಲ್‌ಗೆ ಆಫಿಸ ಫೋನ್‌ಗೆ ಅರ್ಧಗಂಟೆಗೊಂದ್ಸಲ ಫೋನ್ ತಾವು ಮಾಡೋದು, ಬೇರೆಯವರಿಂದ ಮಾಡ್ಸೊದು. ನಾನು ಒಟ್ಟು ಸಮಸ್ಯೆಯನ್ನು ಹೇಳಿದೆ, ಆದರೆ ಅವರ ಬಗ್ಗೆನೆ ಹೇಳಿದ್ನಿ ಅಂತ ಈ ಬಗೆಯ ಶಿಕ್ಷೆ ಕೊಟ್ರು. ಹೀಗೆ ಈ ಅಂಶಗಳು ಬಾಯಿ ಬಿಡೋದೆ ಮೊದಲನೆ ತಪ್ಪು ಇನ್ನೂ ಸಂಘ-ಸಂಸ್ಥೆ, ಕಾನೂನು ಖರ್ಚ್ Never ಮಾಡೋಕೆ. ತುಂಬಾ ಅಧಿಕಾರ ದುಡ್ಡು ಎಲ್ಲಾ ಬೇಕು. ಪರಿಹಾರ ಅಂದರೆ ಒಂದು ಸುಮ್ನೆ ಹೇಳಿದಷ್ಟು ಕೆಲಸ ಮಾಡಬೇಕು. ಯಾವುದಕ್ಕೂ ತಲೆಹಾಕಬಾರದು ಒಂಥಾರಾ ಆಳಿನಂತೆ ಇರಬೇಕು. ಸಮಸ್ಯೆಗಳು ಕಡಿಮೆ ಇರ್ತವೆ. ಇಲ್ಲಾಂದ್ರೆ ಬಿಟ್ಟ ಹೋಗೊದು ಒಳ್ಳೆ ಪರಿಹಾರ. ಆದರೆ ಯಾರಿಗೂ ಸಹ ಸಿಕ್ಕ ಕೆಲಸ ಬಿಡೋದು ಕಷ್ಟ. ಆ ತರಹದ ಕೆಲಸಾ ಬಿಟ್ಟ ಹೋಗಿರೋ ಒಂದು ಉದಾಹರಣೆನೂ ನಾನು ನೋಡಿಲ್ಲ. ಇಲ್ಲಿ ಬರವರ್‍ಯಾರು ಲಕ್ಷಾದೀಶ್ವರರಲ್ಲ. ಎಲ್ಲಾ Midle ಕ್ಲಾಸ್, ಅದಕೂ ಕಮ್ಮಿ ಜನಾ ಇರ್‍ತಾರಷ್ಟೆ.

**ಪ್ರಕರಣ : ೦೨**

| | | |
|---|---|---|
| ಹೆಸರು | : | ಕಮಲಮ್ಮ |
| ವಯಸ್ಸು | : | ೨೫ |
| ಜಾತಿ | : | ಕಬ್ಬಲಿಗ |
| ಶಿಕ್ಷಣ | : | ಪಿ.ಯು.ಸಿ. |
| ಹುದ್ದೆ | : | ಪಿ.ಸಿ. |

ಹೌದಾ! ಎಲ್ಲಿರೋದು? ಪುಣ್ಯ ತುಂಬಾ ಓದಿರಿ. ಎಲ್ಲೆ ಇರಿ ಧೈರ್ಯದಿಂದ ಇರಬೇಕು. ಅದೇ ಅದೇ ನೋಡ್ ಮೇನ್, ಜೀವನದಗಾ ಅದಿಷ್ಟ ಇತ್ತಪಾಂದ್ರ ಆಯ್ತು ಗೆದಿತಿವಿ. ಅಯ್ಯೊ ನಾನ್ ಈ ಫಿಲ್ಡ್‌ಗೆ ಬಂದು ಹನ್ನೆರಡು ವರ್ಷ ಆಗ್ಲಿಕಿ ಬಂತು. ಏನ್ ಛಲೋನೋ ಏನ್, ಹಂಗೆ ಇರಬೇಕು. ಇದ್ರ ಬಾಳ್ವೆ ಛಂದ ಆಗ್ತದ ಅನುಸರಸಕೊಂಡ್ರ ಎಲ್ಲಿ ಯಾರು ಸಮಸ್ಯಾನ ಮಾಡಲ್ಲ ಅಟ್ ತಿಳಿಕೊಬೇಕಷ್ಟೆ.

ಏನ್ ಚಲವಿಕಿ, ಎದಕುಬರಲ್ಲ. ಕಣ್ಣಾಕವರು ಹೆಂಗಿದ್ದರೂ ಹಾಕ್ತಾರ ಚಲು ಇದ್ದರೆ, ಕೆಟ್ಟ ಇದ್ರ ಏನಿಲ್ಲ. ಅವುದರ ಕಣ್ ನಮ್ಮ್ಯಾಲ ಬಿತ್ತಂದ್ರ ಮುಗಿತೇ ಕತಿಯೆಲ್ಲಾ. ಹ್ಞೂಂ ನನಗೆ ಮಸ್ತ್ ಆಗೆವಾ ನನ್ ಸ್ಟೋರಿ ಕೇಳಿದ್ರ ಕುಂತ ಅಳ್ತಿ ನೀನೆ. ಹೊಸತಾಗೆನಿಲ್ಲ ಮೂರು ವರ್ಷ ಆಗಿತ್ತು ಕೆಲಸ ಸೇರಿ, ಮೂರನೆ ವರ್ಷಕ್ಕೆಲ್ಲ ಚೆಂಜ್ ಮಾಡದ್ರು duty ಬ್ಯಾರೆ ಟೇಷನ್‌ಗ ಹಾಕಿದ್ರು. ಎಲ್ಲರೂ ಛಲೋ ಇದ್ದು ಒಂದಿಬ್ಬರು ಪಿ.ಸಿ.ಗಳಿದ್ದರು. ಬಾಳೆ ಚಲುವು ಇದ್ದರು. ಭಾಳ ಧಿಮಾಕ್ ಇತ್ತು. ವಿಚಿತ್ರ ಸೊಕ್ಕ ಅವರದು. ನಾ ಅದೇ ಸ್ಟೇಶನ್‌ಗೆ ಹೊಸದಾಗಿದ್ದೆ ಒಂದು ವಾರ ಎಲ್ಲಾ ಛಲೊ ಇತ್ತು. ಎಲ್ಲರೂ ಸೇರಿ ಊಟ ಮಾಡ್ತಿದ್ದಿವಿ. ಎಲ್ಲಾ ನಡೆದಿತ್ತು ಹದಿನೈದು ದಿನಾ ಮುಗಿತು, ಆವಾಗ ಅವರಿಬ್ಬರದಾಗ ಒಬ್ಬಾತ

ಭಾರಿ ಒಂಥರಾ ಮನುಷ್ಯ ಯಾರಾದ್ರೂ Smart ಇಲ್ಲಂದ್ರ ಈ ಫಿಗರ್ ಚಂದಿಲ್ಲ, ಮಾಲ್ ಸೆಟ್ಟಾಗಲ್ಲ ಅಂತಿದ್ದ.

ನಾನು ನೋಡಕೆ ಚಂದಿರಲಿಲ್ಲಂತ ಸ್ವಲ್ಪ ದಪ್ಪ, ಕಪ್ಪಗೆ ಇದ್ದಿದಕ್ಕೆ ತುಂಬಾ ಗೇಲಿ ಮಾಡ್ತಿದ್ದ. ಇಡೀ ಪೋಲಿಸ್ ಡಿಪಾರ್ಟ್‌ಮೆಂಟ್‌ನಲ್ಲೆ Throughout State ನಲ್ಲಿ ನೀನೆ ಮಹಿಳಾ ಪೋಲಿಸ್ ಸುಂದರಿ ಅಂತಿದ್ದ. ಏನು ಅವರಸದಲ್ಲಿ ಹುಟ್ಟಿಸದನೊ ಆ ಬ್ರಹ್ಮ. ನಿಮ್ಮಪ್ಪನೇ ತಡದಿರಲಿಕ್ಕಿಲ್ಲ. ತನ್ನ ತಿಟಿಗೆ ನಿಮ್ಮವ್ವನ ಬೆನ್ನ ಹತ್ತಿದ ಅನ್ನುತ್ತೆ ಅದಕ್ಕೆ ಇಂಥಾ ಫಿಗರ್ ಭೂಮಿಗೆ ಬಂದಿದೆ ಅಂದಾ ಒಂದಿನಾ. ತುಂಬಾ ಬೇಜಾರಾಯ್ತು ಮನೇಲಿ ಒಬ್ಬಳೇ ಸಾಯೋಹಂಗಾಗಿ ಕನ್ನಿ ನೋಡ್ಕೊಂಡು ಅತ್ತೆ, ಆ ಮೇಲೆ ಅವನನ ನೋಡಿ ಮಿಕ್ಕವರೆಲ್ಲ ಶುರುಮಾಡಿದರು, ಸ್ಟೇಶನ್ ಅಂದ್ರೆ ಇರಿಟೇಟ್ ಆಗಾಕತ್ತು.

ನಮ್ಮ ಮೇಲಿನ ಸಾಹೆಬ್ರಂತೂ ನಾ ಕುರುಪಿ ಇದ್ದಿನಂತ ನನ್ನ ಚೆಂಬರ್‌ಕೂ ಸೇರಸ್ತಿರಲಿಲ್ಲ. ಯಾವುದೇ ಕೆಲಸಕ್ಕೂ ನನಗೆ ಕರಿತಿರಲಿಲ್ಲ. ಬೇರೆಯವರಿಂದ ನನಗೆ ಕೆಲಸ ಹೇಳ್ತಿದ್ದರು. ಅಪ್ಪಿ ತಪ್ಪಿ ನಾನವರ  ಚೆಂಬರಗೆ ಹೋದರೆ ಹಿಗ್ಗಾ ಮುಗ್ಗಾ ಬೈದಯ್ದಾಡ್ತಿದ್ದರು. ತಮ್ಮ ಸುಂದರವಾದ ಮಾರಿ ನೋಡಿದರ, ನಂದ ಪ್ರಮೋಶನ್ ಆಗಿ IG, DIG ಎಂಥದೋ ಆಗಿ ನಾಲ್ಕದಿನಕೆ ಮೇಲೆ ಬರ್ತೀನಿ. ನಿನ್ನ ಹೆಸರ ಹೇಳ್ಕಂಡ ಬದುಕ್ತಿನಿ ಅಂದ್ರು ಆವತ್ತೆ ಕೊನೆ, ಆ ಯಪ್ಪ ಇರೋವಾಗ ಅವರ ಚೆಂಬರ್‌ಗೆ ಹೋಗ್ತಿರಲಿಲ್ಲ.

ಹೆಚ್ಚು outside dutyನೇ ನನಗೆ ಕೊಡೊದು. ಸೆಂಟ್ರಿ ಯಾವಾಗ್ಲಾದ್ರೂ ಮಾಡ್ತಿನಿ ಅಂದ್ರು ಕೇಳ್ತಿರಲಿಲ್ಲ. ನಾವ್ಯಾವತ್ತು ಸ್ಟೇಶನ್‌ಗೆ ಬರಲ್ವಲ್ಲ ಆವತ್ತ್ ನೋಡಿ ನೀನೆ ಸಂಟ್ರಿ duty ಹಾಕೊ ನಾ ಸೈನ್ ಮಾಡ್ತಿನಿ. ಅಂತಿದ್ರು ಬಹಳ ಮನಸ್ಸಿಗೆ ಕಿರಿಕಿರಿ ಅನಸ್ತಿತ್ತು. ಹೇಳಿದ್ರೆ ಅಮ್ಮನಿಗೆ ಹೇಳಬೇಕು. ಅವರಿಗೂ ನಾನು ಹುಟ್ಟಿದೊಬ್ಬಳೆ ಚಂದ ಹುಟ್ಟಲಿಲ್ಲ. ಅಪ್ಪ ಇದೇ ಯೋಚ್ನೆಗೆ ನನ್ನ ಯಾರ್ ಮದ್ವೆ ಆಗ್ತಾರೆ ಅಂತನೇ ಕೋರಗಿ ಸತ್ರು ಅಂತಾಳಮ್ಮ. ಹೋದಲ್ಲೂ ಹೀಗೆ ಅಂದರೆ ಅವಳು ಎದೆ ಒಡಕೊಂಡ್ ಸಾಯ್ತಾಳಂತೆ ಹೇಳ್ತಿರಲಿಲ್ಲ. ಅಷ್ಟಕ್ಕೂ out duty ಕಷ್ಟವಾಗುತ್ತಿತ್ತು. ದಿನಾ ಪೂರ್ತಿ ಧೂಳು, ಟ್ರಾಫಿಕಲ್ಲಿ ನಿಂತು ನಿಂತು ಒಂಥರಾ ಸಾಕಾಗಿತ್ತು. ದುಡಮಿ ಅನಿವಾರ್ಯ ಅದಕೆ ಈ ಕೆಲಸಕ ಸಾಯೋದು, ಒಂದಸಲ ಸೆಂಟ್ರಿ ಡ್ಯೂಟಿ ಹಾಕಿದ್ರು. ನನ್ನ ಫ್ರೆಂಡ್ ಇನ್ನೊಬಳು lady PC ಬಹಳ ನಾಜುಕು ಗೊಂಬೆ ತರಹ ಇದ್ದು, ಪಾಪ ಒಂದುಚೂರು ಅಹಂಕಾರರಿಲಿಲ್ಲ. ಅಕಿಗೆಲ್ಲಾ ಗೊತ್ತಿತ್ತು. ಅವತ್ತು ಅಳ್ತಿದ್ದೆ. ಅದಕೆ ಅವಳು ಬಿಡೆ ಚೆಂದಾ ಇದ್ರೂ ಅಂತಾರೆ, ಇಲ್ಲಂದ್ರೂ ಅಂತರೆ ನೋಡಿದ್ರೆ ಈ fieldಗೆ ಸುಂದರಿರೊದಕಿಂತ ನಿನ್ನಂತವರಿದ್ದರೆನೆ ಸರಿ ಯಾವ ತಲೆ ಹಿಡುಕರು ಕಣ್ಣು ಬಿಳಲ್ಲ. ನಮಗ ನೋಡು ಸುಮ್ನೆ ಚೆಂಬರ್‌ಗೆ ಕರಸ್ತಾರೆ ನಿಲ್ಲಿಸ್ತಾರೆ. ಒಂಥರಾ ವಿಚಿತ್ರ ನಡಕೊತಾರೆ. ಅಂದ್ಳು ಅದು ಕೇಳಿ ತಲೆ ಸಿಡದಂಗಾಯ್ತು ಅವತ್ತೆ ನಿರ್ಧಾರ ಮಾಡ್ದೆ ನಾನು ಮದ್ವೆ ಅಂತ ಆದ್ರೆ ನನ್ನ ಕುರೂಪಿಯಂತ ಮುದ್ರೆ ಹಾಕಿದನಲ್ಲ ಅವನಿಗೆ ಮಾಡೋಕೊದಂತ ಎಲ್ಲಾ frinds ಹತ್ತಿರನು ಚಾಲೆಂಜ್ ಮಾಡ್ದೆ.  ಅವನ ಕಾಟ ದಿನ ಕಳದಂಗೆ ಜಾಸ್ತಿ ಆಯ್ತು. ಸುಮ್ನೆ ಇರ್ತಿದ್ದೆ. ಒಂದಿನಾ ಹೀಗೆ ಮಾತಾಡ್ತಿದ್ದಾ, ಒಂದು ನೈಟ್

ನಂಜೊತೆ ಬರ್ತಿಯಾ ನಿನಗಿಂಥಾ ಆಫರ್ ಜೀವನದಲ್ಲೆ ಯಾರೂ ಕೊಡಲ್ಲ. ಸ್ವರ್ಗದಲ್ಲಿ ತೆಲಾಡಸ್ತಿನಿ ಅಂದ. ನಾ ಸುಮ್ನೆ ಇದ್ದೆ ಮಿಸ್ ಮಾಡ್ಕೊಬೇಡ ಅಂತ, ಹೀಗೆ ಒಂದುವಾರ Continue ಕೇಳದೆ ಕೇಳದು. ಹ್ಞೂಂ ಅನ್ನೊವರೆಗೂ ಭಯಂಕರ ಟಾರ್ಚರ್ ಮಾಡದ, ಅಂದ್ರೆ ಬೇಕು ಅಂತಲೇ ನನ ವರ್ಕಗೆ ಕೊಟ್ಟಿರೊ ಲೆಟರ್ಸ್‌ಗಳು, ಕೆಲಸಕ ಸಂಬಂಧಿಸಿದ ಕಾಗದ-ಪತ್ರ ಎತ್ತಿಡೋದು ಮಾಡುತ್ತಿದ್ದ ಒಂದ್‌ವಾರದ ನಂತರ ಒಪ್ಪಿಕೊಂಡೆ. ಇಲ್ಲ ಹೊರಗೆ ಹೋಗಿಲ್ಲ. ಹೇಳ್ತಿನಿ ಕೇಳು ನನ್ನುದ್ದೇಶನಾ ಆಪಿಸನಾಗ ಸಾಹೆಬ್ರ ಇಲ್ಲದಾಗ ಅಲ್ಲೆ ಹೋಗಿ ಕೂತು ನನ್ನ ಕರಸೊದು, ಅವರು ಅವನಿಗೆ ಹೇಳಿರೊ ಕೆಲಸ ನನಗೆ ಹೇಳೊದು, ಟೈಪ್‌ಮಾಡಿ ಅಂತ ಅಲ್ಲೆ ಆಫಿಸರ್ ಕೋಣ್ಯಾಗ ಕೂಡ್ಸಿ ತಾನು ಪಕ್ಕಕ್ಕೆ ಕೊಡೊದು. ಕೈ ಸವರೋದು, ಮೈ ಸವರೋದು, ಕೆಟ್ಟ ಕೆಟ್ಟ ಮಾತಾಡೊದು. ಇಲ್ಲ ಸ್ವಲ್ಪ ಸಿನಿಯರ್ ಆತ ಸ್ಪೇಶ್‌ನ್‌ಗೆ ಅದಕೆ ಅಂಜತಿದ್ರೂ. ಸಿನಿಯರ್‌ಸ್ಗೆ ಗೌರವ ಕೊಡಬೇಕು. ಸೆಲ್ಯೂಟ್‌ಹೊಡಿಬೇಕು ಹೊಡಿಲಿಲ್ಲಂದ್ರ ಆ ಕತೆನೆ ಬೇರೆಯಾಗುತ್ತೆ. ಅದಕೆ ಎಲ್ಲಾರು ಅಂಜತಿದ್ದರು. ಯಾರು ಒಳಗೆ ಬರ್ತಿರಲ್ಲಿಲ್ಲ. ಅದಕೆ ಪಿ.ಎಸ್.ಐ. ಇರಲಿಲ್ಲಂದ್ರ Next ಅಂವಂದೆ ಕಾರೊಬಾರ್ ಕೆಲಸಾ ತುಂಬಾ ಇರ್ತಿತ್ತು. ಮಾಡ್ತಾನೆ ಇಷ್ಟೆಲ್ಲಾ ಮಾಡೊದು ಅವನ ಕೆಲಸಾ ಎಲ್ಲಾ ಜೂನಿಯರ್ಸ್ ಮಾಡೋದು, ಅವನ ಹೀಗೆ ಹಲಕಾ ಕೆಲಸ ಮಾಡ್ತಾ ಕೂಡ್ತಿದ್ದ. ಒಂದಿನಾ ಒಂದಷ್ಟು T.A. ಬಿಲ್ ಮಾಡದಿತ್ತು. ನಾನು ನನ್ನ friend ಮಾಡ್ತಿದ್ದಿವಿ. ಆವಳಿಗೆ ಇದ್ದಕ್ಕಿದ್ದಂಗೆ ಸಂತ್ರಿ ಡ್ಯೂಟಿ ಬಿಡಿಸಿ, ಹೊರಗಡೆ ಟ್ರಾಫಿಕಗೆ ಕಳಸದ, ನಾವಿಬ್ಬರೂ ಮಾಡ್ತೀವಿ ಅಂದ. ಅವಳು ಹೊದಳು. ಅದನ್ನು ನೀಟಾಗಿ ಮಾಡು ಅಂತ ಹೋಗಿ ಹತ್ತು ನಿಮಿಷದಲ್ಲೆ ಬಂದು, ಒಂದು ಆಫಿಸ್ ಫೋನ್ ಕಾಲ್ ಅಟೆಂಡ ಮಾಡ್ದ, dont worry ಸರ್ ನಾನಿದಿನಿ ಮ್ಯಾನೆಜ್ ಮಾಡ್ತಿ ನಂತ ಹೇಳದ, ನಂಗನಸಿದ್ದು ಸಾಹೆಬ್ರ ಇರಬಹುದು ಅಂತ. ಫೋನಿಟ್ಟು ಬಂದು ಹೆಲ್ಪ್ ಮಾಡಲಾ ಅಂದು ಭುಜದ ಮೇಲೆ ಕೈ ಇಟ್ಟ. ನಾನು ಬೇಡ ಸರ್ ನಾ ಮಾಡ್ತಿನಿ ಅಂತ ಕೈ ತೆಗೆಯಾಕೆ try ಮಾಡಿದೆ, ಮತ್ತಷ್ಟು ಬಿಗಿಯಾದವು. ನಾನೇನು ಮಾಡಲ್ಲ ನೀನು ಮಾಡ್ತಿರು ಕೆಲಸ ಅಂತ ಅಂದು. ಆ ಕೈಗಳನ ಹಾಗೆ ಮುಂದಕ ತಂದು ನನ್ನ ಕೈಯೆಲ್ಲ ಸವರಿ ಬೆರಳಿನ ಮೇಲೆ ಬೆರಳಿಟ್ಟು ಟೈಪ್ ಮಾಡಿಸ್ತಿನಿ ಮಾಡು ಅಂದ ನಾಲ್ಕೈದ ಬಿಲ್ಲ್ ಆಗೊವರೆಗೂ ಹಂಗೆ ಮಾಡ್ದ, ಸಾಯಂಗ ಆಗಿತ್ತು. ಏನಾದ್ರೂ ಅಂದ್ರೆ, ನಂದೆ ಹೊಗೋದು ಮರ್ಯಾದೆ. ಅದಕೆ ತೆಪ್ಪಗಿದ್ದೆ. ಮತ್ತೆ ಫೊನ್ ಕಾಲ್ ಬಂತು Attend ಮಾಡಿ ಬಂದ. ನನಗೆ ಫೋನ್ ಬಂತು ಮೊಬೈಲ್‌ಗೆ, ರಿಸಿವ್ ಮಾಡೊಕ ಬಿಡೊದೆ ಸ್ವಿಚ್ ಆಫ್ ಮಾಡಿದ ಅಮೃತಘಳಿಗೆ ಹಾಳು ಮಾಡಕೊಬೇಡ ನಿನ್ ಜೀವನದಲ್ಲಿ ಬರೊದು ಕಷ್ಟ, ಮುಖ ನೋಡಿದ್ರೆ ಓಡಿ ಹೋಗ್ತಾರೆ ಬಾ ಊಟ ಮಾಡೋಣ. ತಗೊಂಬಾ ಡಬ್ಬಿ, ನಂದು ಇಲ್ಲೆ ಇದೆ. ಅಳು ಬರ್ತಿತ್ತು ಹಾಗೆ ನುಂಗಿಕೊಂಡು, ಡಬ್ಬಿ ತಂದು ಕೈ ತೊಳಕೊಂಡು ಹೋಗಿ ಕೂತೆ ಬಾಕ್ಸ್ ಬಿಚ್ಚೆಂದ ಬಿಚ್ಚದೆ ನಾ ತಿನ್ನಕ ಆರಂಭಿಸೊಣ ಅನ್ಕೊಂಡೆ ಅದ್ಹೇಗೆ ನನಗೆ ತಿನಿಸ್ದೆ ತಿಂತಿಯಾ ಅಂತ ಗೊಳಾಡಸದ, ಒತ್ತಾಯಪೂರ್ವಕವಾಗಿ ತಿನಸ್ದೆ. ಅದನ್ನು ಆತನ ಫ್ರೆಂಡ್ ನೋಡಿ, ok, ok, enjoy ಅಂತ ಹೊರಗಡೆ ಹೋದ.

ಅದು ಮುಗಿತು ನನಗೆ work ಟೆನ್ಶನ್ ನಾಳೆ ಸಾಹೆಬ್ರು ಬಂದರೆ ಬೈತಾರೆ. ಅಂತೇಳಿ ಕೆಲಸಕ ಕುಂತೆ ತಾನು ಬಂದ ಸುಮ್ನೆ ಮೈ ಟಚ್ಚ ಮಾಡ್ತಾ ಕೆಟ್ಟ ಪ್ರಶ್ನೆ ಕೇಳ್ತಾಕೂತ. ಉತ್ತರ ಕೊಡದಿದ್ದರೆ ಫುಲ್ ೬ To ೧೦ ಸಂಟ್ರಿಯಾಗಿ ಕೊಳಿತಿ ಅಂತಿದ್ದ. ಇರ್ತಾವಲ್ಲ ಗಂಡಸರ ಚಟಗಳು, ಒಳಗಿನ ಬ್ರಾಂಡ್ ಹೀಗೆ ಕಪ್ಪುಗೆನಾ ಸ್ವಲ್ಪ ಏನಾರ ಚೈಂಜಾ, ವಿಡ್ತು, ಕರ್ಲಿ ಹೆರ್ಸ್ರಾ ಅಥವಾ ಕ್ಲಿನ್ಸ್, ಸೈಡ್ ಹೇಗೆ ಹೈಟ್, ವಿಡ್ತ ಎಷ್ಟು ಎಲ್ಲಾ ಡಬಲ್ ಮಿನಿಂಗ್ ಪದಗಳು, ಟಾಪ್ ಕಲರ್ ಎಂತದಾಕಿದಿಯೊ, ಹಂಗೆ ಬಾಟಮ್ ಅಂತಿದ್ದ, ಹೇಗೊ ಡ್ಯೂಟಿ ಮುಗಿಯೋ ಟೈಮ್ ಗಂಟೆ ಏಳಾಯ್ತು. ಆವಾಗೆದ್ದವನೆ ಮತ್ತೆ ಚಕ್ ಅಂತ ಹಿಂದೆ ನಿಂತು, ತನ್ನ ಹತ್ರದ ಸೈಂಟ್ ತೆಗೆದು ನನ್ನ ಯುನಿ ಫಾರ್ಮ್‌ಗೆ ಹಾಕಿದ. ಅಷ್ಟಕ್ಕೆ ಬಿಡದೆ ಒಳಗಡೆ ಸ್ಪ್ರೆ ಮಾಡಿದ, ನಂತರ ಖುಷಿನಾ ಅಂದ ಡ್ಯೂಟಿ ಮುಗಿತು. ತಾನೆ ಮನೆಗೆ ಬಿಟ್ಟ. ದಾರಿಲಿ ತಿನಸದಾ ಏನೆನೊ ನನಗೆ ಕೈಕಾಲೆಲ್ಲ, ನಡಕ. ಕತ್ತಲೆ ಬಂದಾಗೆಲ್ಲ ಬದುಕನ enjoy ಮಾಡು ಮದ್ವೆ First of all ಆಗಲ್ಲ, ಆದರೂ ಎಂಜಾಯ್ ಮಾಡೊಕಾಗಲ್ಲ ಒಂದಿನಾ ಯಾವದಾದ್ರು lodge ಗೆ ಕರಕೊಂಡ್ಹೊಗ್ತಿನಿ ಒಂದಿನಾಷ್ಟೆ ಸಾಕ್ ನನಗೆ ಟೇಸ್ಟ್ ಮಾಡೊಕೆ ಅಂದ ಅದೇ ಟೈಮ್‌ನ ಒಂದು ವಾರ ಮೊದಲೆ ಹೇಳದ. ನಾ ಎಲ್ಲಾ ಕಡೆನೂ ಮೆಸೆಜ್ ಬಿಟ್ಟೆ ಕರೆಕೊಂಡ ಹೋದ. ಹೋದೆ ನಾನು ಕೂಡ. ಅವನು ಫ್ರೆಶಾಗೋಕೆ ಒಳಗೆ ಹೊದ ನಾನು SPಗೆ ಪೋನ್ ಮಾಡಿದೆ, ಐಜಿಗೆ ಮಾಡಿದೆ, ನನ್ನ ಫ್ರೆಂಡ್ಸಗೆಲ್ಲಾ ಹೇಳಿದೆ ಆತ ಬಂದೆನ್ ಗಟ್ಟಿಯಾಗಿ ನನ ಕೈ ಹಿಡಿದು ಬೆಡ್‌ಗೆ ಹಾಕ್ತಿದ್ದ ಎಲ್ಲರೂ ಬಂದ್ರು, ನನಗೆ ಬಲವಂತ ಮಾಡಿ, ನಮ್‌ತಾಯಿನ ಕೊಲ್ತಿನಂತ ಹೇಳಿ ಎಳಕೊಂಡ ಬಂದಾರ. ನಾ ಸೇರಿದಾಗಿಂದ ಇವನದೆ ಟಾರ್ಚರ್ ನನಗೆ, ಇವನೆ ಮದ್ವೆಯಾಗಬೇಕು ನನಗೆ ಅದೇ ಪರಿಹಾರ ಕೊಡ್ಸಿ ಅಂದೆ. ಅವನ ಮೇಲೆ Attemptive rape case ಮಾಡಿ ಮೂರುದಿನ ನ್ಯಾಯಾಂಗ ಬಂಧನ ಆಯ್ತು ಬೇಲ್ ಮೇಲೆ ಹೊರಗೆ ಬಂದ. ಮದ್ವಿ ಏನ್ ಆಗ್ಲಿಲ್ಲ. ಒಂದು ತಿಂಗಳಾದ ಮೇಲೆ ಡ್ಯೂಟಿನ ಬ್ಯಾರೆ ಕಡೆ ಟ್ರಾನ್‌ಫರ್ ಮಾಡ್‌ಕೊಂಡ ಹೋದ ಕೆಸ್ ಮುಚ್ಚಿ ಹೊಯ್ತು. ಆವಾಗಿನಿಂದ ನನ್ನ ಸ್ವಲ್ಪ ತಡುವುದು ಕಮ್ಮಿ ಆಯ್ತು ಒಂಥರಾ ಎಲ್ಲರಿಗೊ ಭಯ ಇತ್ತು. ಅದಾದ್ ವರ್ಷಕ್ಕೆ ಮದ್ವೆ ಆಯ್ತು. ಚೆನ್ನಾಗಿದಿವಿ ನನಗಂಡಗೆ ಎಲ್ಲಾ ವಿಷಯ ಗೊತ್ತು ಏನು ಅನ್ನಲ್ಲಾ. ನಿನ್ ಧೈರ್ಯ ಇಷ್ಟವಾಯ್ತು ಆದರೆ ನೀ ಅಷ್ಟರ level ಗಿಳಿದಿದ್ದು ಬೇಜಾರು ಅಂತಾರಷ್ಟೆ. ಮುದ್ದಾದ ಮಗಳಿದ್ದಾಳೆ. ಹೌದು ಅವಳನ್ನ ಐಪಿಎಸ್ ಮಾಡ್ಸಬೇಕನ ಆಸೆ ಇದೆ. ಇಲ್ಲಾ ಇದೆ ಅವನು ಅಲ್ಲಲ್ಲಿ ಮಾಹಿತಿ ತಗೊಂಡ ಪಿನ್ ಮಾಡ್ತಿರ್ತಾನೆ. ಈಗ ಅಂಥದೆನ್ ಪ್ರಾಬಲಮ್ ಇಲ್ಲ. ಸ್ವಲ್ಪ ಸೇಡಿಗೆ ಕೆಲಸ ಹೆಚ್ಚಾ ಹಾಕ್ತಾರೆ, ಲಿವ್‌ಕೊಡಲ್ಲ ಸ್ವಲ್ಪ ವ್ಯತ್ಯಾಸಾದ್ರು ಮೆಮೊ ಕೊಡ್ತಾರೆ. ಇಂಥವ್ ಫೆಸ್ ಮಾಡಬಹುದು ಮಾಡ್ತಿದಿನಿ ಕೂಡ. ಹೈಯರ್ ಕೆಡರಿಗೆ ಹೋಗ್ತಿನಿ ಒಂದಿನಾ ನಾ achive ಮಾಡಲೆಬೇಕು ಮಾಡ್ತಿನಿ, ಆ ಆತ್ಮವಿಶ್ವಾಸ ನನಗಿದೆ. ಎಂಥದೆ ಬಂದ್ರು ನಾವು ಧೈರ್ಯದಿಂದ ಇರಬೇಕು. ಆಗೆಲ್ಲಾ ಸಾಧ್ಯವಾಗುತ್ತೆ...

ಪ್ರಕರಣ : ೦೩

ಹೆಸರು : ಪರಿಣಿತ

ವಯಸ್ಸು : ೨೬

ಜಾತಿ : ಹಡಪದ

ಶಿಕ್ಷಣ : ಎಸ್.ಎಸ್.ಎಲ್.ಸಿ

ಹುದ್ದೆ : ಪಿ.ಸಿ.

ನನ್ ಹೆಸರ ಪರಿಣಿತ ಅಂತ ಅಕ್ಕ ನಾಕುವರ್ಷ ಆಯ್ತು ನಾ ಈ ಕೆಲಸಕ್ಕೆ ಸೇರಿ. ನಮ್ಮ ಮನ್ಯಾಗ ಎಲ್ಲಾ ಹಜಾಮ ಕೆಲಸ ಮಾಡ್ತಾರ (ನಮ್ಮಣ್ಣ ತಮ್ಮ) ನಾವ್ ಐದ್ ಜನ ಹೆಣ್ಮಕ್ಕಳು ನಾನೆ ದೊಡ್ಡ ಮಗಳು. ಮನಿಕೆಲಸಾ ಎಲ್ಲಾ ಮಾಡ್ಕೊಂಡ ಓದ್ತಿದೆ. ಸರಿಗೇನು ತೆಲೆಗೆ ಹೋಗ್ತಿರಲಿಲ್ಲ. ಹೆಂಗೊ ಮಾಡಿ ಹತ್ತನೆತೆ ಪಾಸಾದೆ. ದೊಡ್ಡವರ ಕೈ ಕಾಲು ಬಿದ್ದು ಈ ಕೆಲಸಕ ಸೇರಿಸಿದ್ರು ಮನ್ಯಾಗ. ಇದು ಮಾಡಬೇಕಂತ ನನಗೆ ಇಷ್ಟಾ ಇಲ್ಲ ಇವತ್ತಿಗೂ. ಆದರ ಬಡತನ ಗಂಡಸಮಕ್ಕಳಗಿಂತ, ಹೆಣ್ಮಕ್ಕಳಿಗಿ ಕೆಲಸ ಸಿಗಾದು ಸುಲಭ ಅಂತ ಈ ಕೆಲಸಕ ನೂಕಿದ್ರು, ಯಾವಾಗರ ಇದು ಡ್ಯೂಟಿ ಮುಗಿತದ ಅಂತ ಕಾಯ್ತಿರ್ತಿನಿ. ಮರದಿನ ಮತ್ತ ಒಟ್ಟರೆ ಸಾಕನಸ್ತದೆ. ಈಗಿಗ ಎರಡೆರಡ ವರ್ಷ ಆಯ್ತು ಮದ್ವಿ ಆಗಿ ನನ ತಂಗಿ, ತಮ್ಮ, ಅಣ್ಣನ ಮದ್ವಿ ಆಗತಾನ ಆಗಬಾರದು ಅಂತ ಎರಡು ವರ್ಷ ಮಾಡಿರಲಿಲ್ಲ. ಅಣ್ಣನ ಮದ್ವಿನು ಆಯ್ತು. ತೆಂಗಿಗಿ ಬಿ.ಎಡ್. ಓದ್ತಿದ್ದೆ ಮುಗಿತು. ಟೀಚರ್ ಆದಳು. ಆಕಿದು ನೌಕರಿ ಆದ ಒಂದು ವರ್ಷದ ಮೇಲೆ, ಅದು ನಮ್ಮ ಫೀಲ್ಡ್ ಸರಿ ಇಲ್ಲಂತ ಮದ್ವಿ ಯೋಚನೆ ಮಾಡಿ ಮಾಡಿದರು. ಅವಾಗೆ ಎಲ್ಲಾ ಸಂಬಳ ಖರ್ಚಿಗೆನೂ ಇಟಗೊಳಾರದಂಗ ಅಪ್ಪಗ ಕೊಡ್ತಿದ್ದೆ. ಈಗ ಗಂಡಗ ಕೊಡ್ತಿನಿ. ನೀ ಹೆಣ್ಣಮಗಳು ನಿಂದೆಷ್ಟ ಖರ್ಚಂತ ವಾರಕ್ಕೆರಡು ಸಲ ೩೦-೪೦ ರೂಪಾಯಿ ಕೊಟ್ಟಿರ್ತಾರ, ಲೋಕಲ್ ಬಸ್ಸಿಗಿ ನಮಗ ಟಿಕಿಟ್ ತೆಗೊಳ್ಳಲ್ಲ. ಆಟೋಕ ಬಂದ್ರ, ಟೀ ಕುಡದ್ರು, ಗಂಡಸರ ಜೊತೆ ತಿರಗ್ತಿ, ಎರಡು ಮನ್ಯಾಗ ಒಂದೇ ರಾಗ ಮನಿದು ಒಂದ ತರ ಆದ್ರ ಡ್ಯೂಟಿದು ಒಂದು.

ಎರಡ್ ತರಹದ್ ಡ್ಯೂಟಿ ಹಾಕತಾರ ಒಂದಪಾಂದ್ರ ಸೆಂಟ್ರಿಡ್ಯೂಟಿ ಅದು ಟೇಶನ್‌ದಾಗ ಬಂದಿರೋ ಕೇಸ್ ಬರಕೊಳೊದು, ರಿಜಿಸ್ಟರ್, FIR ಮಾಡೊದು, ಕಂಪ್ಲೇಟ್ ಬರಸಕೊಳ್ಳೊದು, ಫೋನ್ ಅಟೆಂಡ್ ಮಾಡೊದು. ಲೇಡಿ ಕೈದಿ ಇದ್ರ ರಾತ್ರಿನು ಇರದು. ಇನ್ನೊಂದಂದ್ರ ಎಲ್ಲಿಯಾದ್ರು ಗಲಾಟೆ ಆದ್ರೆ, ಸಿ.ಎಂ. ಬಂದೊಬಸ್ತಿ ಇದ್ರ ಯಾವುದರ ಹಬ್ಬ! ಪ್ರೊಗ್ರಾಂ ಇದ್ದರ ಅದು ಇದು ಸುಡಸುಡಗಾಡ ಇದ್ರರ ಹಾಕ್ತಾರ. ಕೆಲವೊಮ್ಮೆ ಡಿಪಾರ್ಟ್‌ಮೆಂಟ್‌ಗೆ ಮೆಸೆಜ್ ಬರ್‍ತಾವ ಲೇಡಿಜ್ ಸ್ಟಾಫ್ ಬೇಕಂತ. ಆಮೆಗೆಲ್ಲ ಹೋಗಬೇಕು. ಇಷ್ಟೆ ಗಂಟಾ ಅಂತೆನಿಲ್ಲ, ಕೆಲವೊಮ್ಮೆ ಹಳಿಗಳಿಗೆಲ್ಲ ನೈಟ್ ಹೊದ್ರ ಮುಂಜಾನಿ ಬರಬೇಕು. ಅಲ್ಲಿ ಲೇಡಿಸ್ ಬಂದಾರಂತ ಏನು ಸಾಲಭ್ಯ ಇರೋದಿಲ್ಲ. ಯಾರದರ ಪರಿಚಯದವರ ಮನೆಯಿದ್ರ, ಇಲ್ಲಂದ್ರ ಪೋಲಿಸರ ಮನ್ಯಾಗ ಇರಬೇಕು. ಬೇರೆ ದಾರಿಗಳೇ

ಇಲ್ಲ. ನಾವೆನೆರ ಯಾವದಾದರೂ ಲಾಜ ಅದು-ಇದು ಅಂತ ಹೊದರ ನಮ್ಮ ಮಾನ ಮೂರಕಾಸಿಗಿನೂ ಇಲ್ಲದಂಗ ಮಾಡ್ತಾರಕ್ಕ. ಒಂದು ನಾವೇ ವೆಶ್ಯಾವಾಟಿಕೆ ಮಾಡ್ತೀವಿ ಅಂತಾರೆ, ಇಲ್ಲಂದ್ರ ಯಾವನ ಜೊತೆಗರ ಸಂಬಂಧ ಅದ ಅಂತಾರ, ನನಗೆ ಎರಡು ಸಲದ ಘಟನೆ ಬಹಳೇ ನೋವು ಕೊಟ್ಟಾದ, ಒಂದ್ಸಲ ಬಂದೊಬಸ್ತ್‌ಗೆಂತ ಗಲಾಟೆ ಆದಾಗ ಹಾಕಿದ್ರು, ರಾತ್ರಿಡ್ಯೂಟಿ ಊರ ಹೆಸರೆಲ್ಲ ಹೇಳಲ್ಲಕ್ಕ ಪ್ಲೀಜ್. ಬೇರೆ ಹೊರಗಿನ ಮನುಷ್ಯರಂದ್ರ ನಮ್ಮ ಪೋಲಿಸರಿಂದ ಹೆದರಿಸಬಹುದು. ನಮ್ಮ ಸಿನಿಯರ್ ಪಿ.ಸಿ ಒಬ್ಬರು ಇದ್ರು. ಆಯಪ್ಪಗೆ ಎಲ್ಲಾ ತನ್ನ ಹಟನೇ ನಡಿಬೇಕನವರು. ಹೆಣ್ಮಕ್ಕಳಂದ್ರ ಕಾಲ ಕಸಕಿಂತ ಕಡಿ ಅಂತ ನೇರಾ ನೇರಾನೆ ಹೇಳ್ತಿದ್ದ ಅವನ ಜತೆಗಿ ನಾನು, ನನ್ನ ಜತಿಗಿ ಇನ್ನೊಂದು ಹೊಸಾ ಹುಡಗಿ, ಮತ್ತಿಬ್ಬರು ಹೊಸ ಪಿ.ಸಿ.ಗಳು. ಮೊದಲೆ ನನಗೆ ಆ ಸಿನಿಯರ್ ಪಿ.ಸಿ.ಗಿ ನೋಡಿದ್ರ ಅಂಜಕಿ ಸುಮ್ಮನೆ ಬಯ್ಯಿತ್ತಿದ್ದ.

ನನಗಂದ್ರ ಸಾಕು. ನಿನ್ನ ಮಾರಿಗಿ ಯಾ ಗಂಡಸು ಮದ್ವಿ ಆಗಲ್ಲ. ಎಮ್ಮಿ ಇದ್ದಂಗ ಇದಿ. ನಿಮ್ಮಪ್ಪ ದುಡ್ಡಿಗಿ ಸಾಯ್ತಾನ ನಿನ ಮದ್ವಿ ಆದಂಗೆ. ಯಾಕ ವಯಸ್ಸ ಹಾಳು ಮಾಡ್ಕೊತಿ, ನನ್ನಂಥವನಿಗಿ ಸೆಟ್ಲ ಮಾಡಕೊಂಡ್ರ ಆಯ್ತು, ಜೂಮ್‌ನಾಗ ಇರಬಹುದು. ಕಾಲ ಮುಂದುವರಿವಂಗ ಮುಂದಿವರಿಬೇಕು ಹೆಣ್ಣೆ, ಅದಕೆ ಅಲಾ ನಿನಗೆ ಡ್ಯೂಟಿಗಿ ಕಳಿಸಿದ್ದು, ನಖರ ಮಾಡ್ಕೊತ ಬರ್ತಿರಿ ಹೆಂಗ್ಸರು ಧಿಮಾಕದಂತಹವರು. ಬದುಕು ಎನಂಜಾಯ್ ಮಾಡೊಕೆ ಬರಲ್ಲ ನಿಮಗ, ಕಾಂಡೋಮ್ ಅವ, ಗುಳಿಗಿ ಅವ ಹೊಂದಕೊಂಡ್ಹೊದ್ರ ಆರಾಮಾಗಿ ಕೆಲಸ ಮಾಡಬಹುದು. ಯಾ ನನ ಮಗ ಆಫಿಸರನು ನಿನ್ನ ಮ್ಯಾಲ ಕಣ್ಣ ಹಾಕಬಾರದು. ಹಂಗ ನಿನಗೆ ಸೆಕ್ಯುರಿಟಿ ನಾ ಕೊಡ್ತನಿ. ನಿಮ್ಮಪ್ಪ ಗಂಡು ನೋಡಿ ಮದ್ವಿ ಮಾಡಿದರೂ ಮಾಡ್ಲಿ. ಅಲ್ಲಿ ನಿನ್ನಗಂಡ ಇಲ್ಲಿ ನಾ ಇರ್ತನಿ. ಯೋಚನೆ ಮಾಡಬೇಡಂತ, ನಾ ಕೆಲಸಕ ಸೇರಿ ನಾಕ ತಿಂಗಳಿಂದ ಶುರು ಮಾಡಿಕಂಡಿದ್ದ. ಡ್ಯೂಟಿ ಮ್ಯಾಲ ಇರಲಿಲ್ಲಂದ್ರನೂ ಫೋನ್ ಮಾಡ್ತಿದ್ದ, ಮೆಸೆಜ್ ಮಾಡ್ತಿದ್ದ, ಫೋನ್ ತೆಂಗೊಂಡಿಲ್ಲಂದ್ರ ಮ್ಯಾಲಿನವರಿಗಿ ಇಲ್ಲದ ವಿಷಯಗಳು ಹೇಳಿ ಹುಚ್ಚುಚ್ಚ ಕತಿಗಳು ಕಟ್ತಿದ್ದ.

ಮನೇಲಿ ವಿಷಯ ಹೇಳಿದ್ರ ನಿನ್ನ ಮುಖಕ್ಕೆ ಕೊಟಿ ಕೊಟ್ರಾ ಮದ್ವಿ ಮಾಡ್ಕೊಳ್ಳಕೆ ಮುಂದ ಬರಲ್ಲ. ಆ ಪಿ.ಸಿ. ಎಲ್ಲಿ ನಿ ಎಲ್ಲಿ, ನೀ ಕೂತ ಜಾಗಕ್ಕ ಆಯಪ್ಪ ತನ್ನ ಬೂಟನು ಬಿಡಲ್ಲಂತ ನಗ್ತಿದ್ದರೂ ಅಪ್ಪ, ಅಣ್ಣಾ, ನಿನಗ ಕೆಲಸ ಬಿಡ್ಲಿಕಿ ನೆಪ ಬೇಕಷ್ಟೇ. ನೀ ಹಾಳಾದರ ಅಷ್ಟ ಹೋತು ಕೆಲಸ ಬಿಡಬಾರದು. ಮದ್ವಿ ಆದ ಮ್ಯಾಲ ನಾವೇನು ನಿನಗೆ ದುಡಸಲ್ಲ. ನಾಟಕ ಮಾಡಬೇಡ ಅಂತಾರ ಇಂಥ ಟೈಮ್ ನಾಗ, ನನಗ ಆಯಪ್ಪನ ಜತಿಗಿ ಡ್ಯೂಟಿ ಹಾಕಿದ್ರು ಸತ್ತ ಹೊದಂಗಾಯ್ತು. ಇಲ್ಲಿ ಕೆಲಸ ಹೇಳದ್ರ ಒಲ್ಲೆ ಅನ್ನೊ ಮಾತೇ ಈ ಡಿಪಾರ್ಟ್‌ಮೆಂಟ್‌ನಾಗ ನಡಿಯಲ್ಲ.

ಆ ಹೊಸ ಹುಡಗಿಗಿ ಹೇಳಬೇಕಂದ್ರ ಅಕಿ ಇನ್ನು ಈಗೀಗ ಬಂದಾಳ. ಅಕಿನು ಒಂದ ಟೈಪ್ ಹೆದರಪುಕ್ಕಳಿ, ನಮ್ಮ ಡಿಪಾರ್ಟ್‌ಮೆಂಟ್‌ನಾಗ ಎಷ್ಟು ಧೈರ್ಯ ಇದ್ದರೂ ಹೆಣ್ಮಕ್ಕಳು ಅದನ್ನು ತೊರಸ್ಕೊಬಾರದು. ಅಂಗೇನರ ತೋರಿಸ್ತಿದರ ಮುಗಿತು ಕತೆ. ಅಂಗೂ ಅವತ್ ಡ್ಯೂಟಿಗಿ ಹೋದವಿ.

ಭಾರಿ ಗಲಾಟೆ ಏನ್ ಇಲ್ಲಿಲ್ಲ. ಅಂದ್ರು ಬೆಳಗಾಗತನ ಇದ್ದು ಬರಬೇಕಿತ್ತು. ಹಳ್ಳಿ ಅದು ಯಾರು ಗುರುತು, ಪರಿಚಯನು ಇಲ್ಲ. ನಾವಿರಬೇಕಾದ ಸ್ಥಳ ಸ್ವಲ್ಪ ಊರಬಿಟ್ಟ ದೂರ, ಬೀದಿ ಲೈಟಗಿ ಕಾಣಸತಿತ್ತು. ಎಲ್ಲಾ ಮುಗಿತು ಊಟ-ತಿಂಡಿ ಮಾಡಿದ್ವಿ. ನನಗೆ ಹೆದರಿಕಿ ಊಟಾ ಮಾಡಕ ಆಗಲಿಲ್ಲ. ಸುಮ್ಮನೆ ಸ್ವಲ್ಪ ತಿಂದು ಮೇಲೆದ್ದೆ ಊರಾಗಿನ ಒಂದೆರಡ ಮನಿಯವರು ಹೆಣ್ಮಕ್ಕಳು ಮನಿಗೆ ಬರ್ರಿ ಅಂತ ಕರೆದ್ರು ಆದರೆ ಈ ಪಿ.ಸಿ. ಹಂಗೆಲ್ಲಾ ಆಗದಿಲ್ಲ ಕಣರಿ.ಬೆಳತನ ಇಲ್ಲಿರಲೆ ಬೇಕು. ಇಲ್ಲಂದ್ರ ಸಾಹೆಬ್ರು ಸುಮ್ನಿರಲ್ಲ, ನಾವಿಬ್ರು ರಿಕ್ವೆಸ್ಟ್ ಮಾಡಕಂಡ್ವಿ. ಗಲಾಟೆ ಆದ್ರ ಎದ್ದು ಬರ್ತಿವಿ ಅಂತ, ಗಲಾಟೆ ಶುರು ವಾದ್ರ ಅಲ್ಲಿಗೆ ಕೇಳಸುತ್ತಾ? ನಾವಿಲ್ಲಿ ಹ್ಯಾಂಡಲ್ ಮಾಡದ್ ಬಿಟ್ಟು ಅಲ್ಲಿಗೆ ಬಂದ್ರ ಸಸ್ಪಂಡ್ ಮಾಡ್ತಾರ. ಫೋನ್ ಮಾಡ್ಲಿಕಿ ಟಾವರ್ ಇಲ್ಲ. ನಿಮ್ಮಿಷ್ಟ ಅಂದ. ಆ ಹೊಸ ಹುಡುಗಿ ಸ್ವಲ್ಪ ಆ ಕಡೆ ಹೊದ ಮೇಲೆ ನೀ ಏನರ ಅಲ್ಲಿ ಇಲ್ಲಿ ಮಲಗಕ ಹೋದ್ರೆ ನಿನ್ ಕೆಲಸ ಇವತ್ತೆ ಕೊನೆ ಅಂತ. ಸಾಹೆಬರಿಗ್ಹೇಳಿ ಸಸ್ಪೆಂಡ್ಸ್ ಮಾಡ್ಸಿತಿನಿ. ಅಂದ ಬೇರೆ ದಾರಿಯಿಲ್ಲ ಬೆಸಿಗೆ ಬಿಸಲು ಕಾಲ ಬೇರೆ ಅದು, ವಿಪರಿತ ಧಗಿ ಅಲ್ಲೆ ಮರದಕೆಳಗೆ ಕಟ್ಟೆ ಮೇಲೆ ನಾವಿಬ್ರು ಮಲಗದಿವಿ ಅಂದ್ರ ಆಯ್ತು ಅಂದು ಹೊಸಾ ಪಿ.ಸಿ.ಗಳ ಜೊತೆ ಮಾತಾಡ್ತಾ ಹನ್ನೆರಡು ಗಂಟೆ ಆಯ್ತು. ಆ ಹೊಸಾ ಹುಡುಗರು ನೀವು ಮಾತೇ ಆಡಲ್ಲಕ್ಕ ಬೋರ್ ಅಂತಿದ್ರು. ಆ ಅಣ್ಣಾರ ನೋಡು ಎಷ್ಟು ಜೋಕ್ ಮಾಡ್ತಾರೆ. ಅರ್ಧ ಡ್ಯೂಟಿ ಮಾಗಿತು. ನಿದ್ರೆ ಬಹಳ ಬರ್ತಿದೆ ಮಲಗೋಣಕ್ಕ ಅಂತ, ನಾನು ಆ ಹುಡಿಗಿ ಹೋಗಿ ಮಲಗದ್ವಿ. ಆ ಇನ್ನೆರಡು ಹುಡುಗರು ಊರು ರೌಂಡ್ ಹಾಕ್ತಿವಿ ಅಂತ ಹೊದ್ರು. ಅದು ಸಣ್ಣ ಹುಡಗಿ ಇನ್ನು ಅಷ್ಟೇನು ತಿಳಿತಿರಲಿಲ್ಲ. ಗಡದ್ದಾಗಿ ಮಲಗಿಬಿಟ್ಟಳು. ನನಗೆ ಭಯ ನಿದ್ರೆನೆ ಬರ್ಲಿಲ್ಲ. ಸುಮ್ಮನೆ ಮಲಗದಂಗೆ ಮಾಡೋಣಂದ್ರೆ, ಅಪ್ಪಿ, ತಪ್ಪಿ, ನಿದ್ರೆಗೆ ಜಾರಿದರೆ ಅಂತ, ಸ್ವಲ್ಪ ಹೊತ್ತು ಎದ್ದು ಕೂತೆ. ಅವನು ತಕ್ಷಣನೆ ಎದ್ದು ಕೂತ, ನಿದ್ರೆ ಬರ್ತಿಲ್ಲ. ಬಾ ಇ ಕಡೆ ಮಾತಾಡೋಣ, ಇಲ್ಲಂದ್ರೆ ನಾ ಮಲಗಿಸ್ತಿನಿ ಬಾರೆ ಅಂತ ಕರೆದಾಗ ಜೀವ ಹೋದಂಗಾಯ್ತು. ಮನೆಮಂದಿಯೆಲ್ಲ ನೆನಪಾಗಿ ಯಾರಿಗೂ ನಾ ಬೇಕಿಲ್ಲ. ನನ್ನ ದುಡ್ಡು ಬೇಕು ಅಂತ ಅಳು ಬಂತು. ಏನೋ ನೆಪ ಮಾಡಿ ಆ ಹುಡಗಿಗೆ ಆ ಕಡೆ ಹೋಗಬರೋಣ ಎಳಮ್ಮ ಅಂದ್ರೆ ಹೋಗೊಣ ಇರಕ್ಕ, ಎದ್ದಳಕೆ ಬೇಜಾರು ಅಂತ ಮತ್ತೆ ನಿದ್ರೆ ಹೊದಳು. ನಾನು ಸುಮ್ಮನೆ ಮಲಗದೆ ಸ್ವಲ್ಪ ಮಂಪರು ನಿದ್ದೆಗೆ ಜಾರಿದನೆನೂ ತಕ್ಷಣನೇ ನನ್ನ ಸೀರೆ ಸೈಡಿನ ಪಿನ್ ಚುಚ್ಚದಂಗಾಯ್ತು. ಭಯಬಿದ್ದು ಕಣ್‌ಬಿಟ್ಟೆ. ತಲೆ ಹತ್ರ ಕೂತವನೆ. ಗಟ್ಟಿಯಾಗಿ ಬಾಯಿಗಿ ಕೈ ಹಿಡದ ಕಿವಿ ಹತ್ರ ಬಂದು ನಾನೆ ಮಾಡಿದ್ದು ಅಂತ ಉಸುರಿದ, ಮೇಲೆಳು ಇಲ್ಲಾಂದ್ರೆ ನಾ ಜೈಲಿಗೊದ್ರು ಪರ್ವಾಗಿಲ್ಲ ನಿನ್ನ ಬಿಡಲ್ಲ ಅಂದ. ಮೆತ್ತಗೆ ಸದ್ದಾಗದ ಹಾಗೆ ಎದ್ರು, ಬಾಯಿ ಕೈ ಬಿಡಲಿಲ್ಲ ಉಸಿರು ಕಟ್ಟದ್ದಾಗೆ ಆಗ್ತಿದೆ. ಹಿಂದೆ ಪಿಸ್ತೂಲ್ ಹಿಡದ ಕೈದಿ ತರಹ ಅವರ ಮಲಗಿದ್ ಕಡೆ ಕರಕೊಂಡ್ ಹೋದ. ತಾನ ಹತ್ರನೆ ಆತಂಗೊಂಡು ಕೂತು. ಕೆಟ್ಟ ಕೆಟ್ಟದಾಗಿ ನಡಕೊಳ್ಳೊಕಚ್ಚಿದ. ಮೈಯೆಲ್ಲಾ ಸವರ್ತಾ ಯಾವುದೂ ಇರಬೇಕಾದ ಶೇಪ್‌ಗಳಿಲ್ಲ ಎಲ್ಲಾ ಕಡಮೆ ಇರೋದ್ ಹೆಚ್ಚು, ಹೆಚ್ಚಿರೋದು ಕಡಿಮೆ, ಅದ್ಯಾವ್ ಪುಣ್ಯಾತ್ಮ ಟೇಸ್ಟ್ ಇಲ್ಲದ ದರಿದ್ರವನ್ ತಂದು ಡಿಪಾರ್ಟ್‌ಮೆಂಟ್‌ಗೆ

ಹಾಕೊಂಡನ್ನೊ, ಇನ್ನೊಂದು ಅಂದವಾದ ಹುಡಗಿ ಬರ್ತಿದ್ಳು. ಅಲ್ಲಾ ಅವನ ಜೊತಿಗೊಂದೆರಡ ದಿನಾ ಮಜಾ ಮಾಡಿದ್ದೇನು ಅದಕೆ ಮುಚಗೊಂಡ ತಗೊಂಡಿದಾನಸ್ಸುತ್ತೆ ಕಣ್ಣಿಂದ ನೀರು ಫಳ್‌ನೆ ಹಾರಿದವು, ತಡಿಯೋಕಾಗ್ದೆ ಹೆದರಿ ಉಚ್ಚೆ ಹುಯ್ಕೊಂಡೆ ಅಕ್ಕಾ ಅಷ್ಟೊತ್ತಿಗೆ ಆ ಹುಡುಗಿ ಎದ್ದು ಈ ಕಡೆ ಬಂದಳು. ನಾ ಬಾಯಿ ತೆಗೆಯೋಣಾ ಅನ್ನೊಷ್ಟರಲ್ಲಿ ಈತ ಹೊಸ ಮುಖ ತೆಗೆದ. ನೀನೇನು ಯೋಚನೆ ಮಾಡಬೇಡ ನಾನಿದಿನಿ ಅಂತ ಹೊಸ ಕತೆ ಕಟ್ಟಿ ಹೇಳಕೊರಟ. ಆ ಹುಡುಗಿಗೆ ನಮ್ಮಿಬ್ಬರದು Something, something ಅಂದ ನಂಗೇನು ಗೊತ್ತಾಗ್ಲಿಲ್ಲ. ಆ ಹುಡುಗಿ ಹೌದಾ! ಹಾಗಾದ್ರೆ ಯಾವಾಗಣ್ಣಾ ಮದ್ವೆ, ವೈನಿ ಹುಡಕೊ ಕಾಟ ಇಲ್ಲ ಅಂತ ನಕ್ಕು. ಆ ವಿಚಾರಕ್ಕೆ ಬಂದಿಲ್ಲ. ಸಾಮಾನ್ಯವಾದ ಸಮಸ್ಯೆ ಅಂದ್ರೆ ಇವರದು ಕೀಳು ಜಾತಿ ಅಲ್ಲಾ, ಅದಕ್ಕೆ ನಮ್ಮನೆಲಿ ಒಪ್ಪಲ್ಲ. ಎಲ್ಲಾದ್ರು ಓಡಿ ಹೋಗೋಣ ಅಂದರೆ ಇವಳು ಮನಸ್ಸ ಮಾಡ್ತಿಲ್ಲ. ಧೈರ್ಯನೇ ಇಲ್ಲಾ ಮಾತಿನ ಮಧ್ಯ ಒಮ್ಮೆ ಏನಾಗ್ತಿದೆ ನೀರು ಕುಡಸಲಾ ಸ್ವಲ್ಪ ಅಂತ ಬಾಟಲಿಲ್ಲಿನ ನೀರು ಕುಡಸ್ತಾ. ಹೆಗಲ ಮೇಲಿನ ಕೈ ತೆಗಿದೆ ನಿಧಾನಕ್ಕೆ ನಾ ಒಂದಿಂಚ್ ಅಳಗಾಡಿದ್ರೂ ಗಟ್ಟಿಯಾಗಿ ಅದಮುತ್ತಿದ್ದ ಭುಜಾನಾ ಇವರ ಮನೇಲಿ ಇವಳೆ ದುಡಿಯೋ ಹೆಂಗಸು. ಬಡತನ ಬೇರೆ ತಿಂಗಳಿಗೆ ಸಂಬಳ ಬರುತ್ತೆ. ಹಾಲ ಕೊಡೊ ಹಸಾನ ಯಾರಾದ್ರು ಮಾರ್ತಾರಾ ಹಂಗೆ. ಇವರ್ಯಾರಿಗೂ ಮದ್ವೆ ಮಾಡಿಕೊಡೂಕೆ ಇಷ್ಟ ಇಲ್ಲ. ಅದಕೆ ಹಿಂಗೆ ಆದರೆ ಇವಳ ವಯಸ್ಸು ಕಳದ ಹೋಗ್ತದೆ. ಅದಕ್ಕೆ ಇರೊವರೆಗೂ ಹಾಯಾಗಿರೋಣ ಆಮೇಲೆನಾಗುತ್ತೊ ನೋಡಿಬಿಡೋಣ ಅಂತ, ಒಪ್ಪಂದ ಮಾಡಿಕೊಂಡಿದ್ವಿ. ನಾನು ಇವಳ ಜೊತೆಗೆ ಇದ್ದರಾಯ್ತು ಬೇರೆ ಮದ್ವೆನೆ ಬ್ಯಾಡ ಅನ್ಕೊಂಡಿನಿ. ನೋಡೋಣ ಏನಾಗುತ್ತೊ. ನೀನು ನನ್ನ ತಂಗಿಗಿಂತಾ ಹೆಚ್ಚು ಅಂತ. ಯಾರಿಗೂ ಹೆಳದೆ ಇರೋ ವಿಷಯ ನಿನಗೆ ಹೇಳಿನಿ. ಯಾರಿಗೂ ಹೇಳಲ್ಲಂತ ಮಾತು ಕೊಡಮ್ಮಾ ಅಂತ ವಚನ ತಗೊಂಡ. ಆ ಹುಡುಗಿ ಅದೇ ಸತ್ಯ ಅಂತ ನಂಬಿ. ನಾನಿರ್ತಿನಿ ನಿಮ್ಮ ಜೊತೆ. ಆದಷ್ಟು ಬೇಗೆ ಏನ್ ಪ್ರಬ್ಲಮ್ ಬಂದರೂ ಮದ್ವೆ ಆಗ್ಬಿಡಿ ಆಮೇಲೆ ತಾನೆ ಸರಿ ಹೋಗುತ್ತೆ ಎಲ್ಲಾ. ok carry on ನಾ ಡಿಸ್ಟರ್ಬ್ ಮಾಡದೆ ಅನ್ನುತ್ತೆ ಇನ್ನು ಒಂದಗಂಟೆ ಮಲಗ್ತಿನಣ್ಣ. ಈ ನಿದ್ದೆಗೆಡೊದು ನೋಡಿದ್ರೆ ಈ ಡ್ಯೂಟಿನೆ ಬೇಡ ಅನ್ನುತ್ತೆ ಅಂತ ಹೋದ್ಲು. ನನಗೆ ಜೀವ ಹಿಂಡದಂಗಾಗ್ತಿದ್ರೂ ತೆಪ್ಪಾಗಿದ್ರೆ. ಅವನ ನಾಟಕ ನೋಡಿ ದಂಗಾಯ್ತು.

ಆ ಮೇಲೆ ನೋಡಿದಾ ಹೆಂಗಾಯ್ತು ಮ್ಯಾಟರ್ ಉಸರ ಬುಟ್ರ್ಯೊ ನಿನ ಮನ ಮೂರ ಕಾಸಿಗೆ ಹರಾಜ್ ಆಗುತ್ತೆ ಯೋಚನೆ ಮಾಡು. ಅಂತ ಹೆದರಿಸಿ, ಹೀಗೆ ಒದ್ದೆಯಾಗಬೇಕು, ನಾಚಿಕೆ ಆಗಲ್ವ, ಇದ್ ನಿಮ್ಮಪ್ಪಂದಾ ಬೆಡ್‌ಶಿಟ್ ನಾಳೆ ಮನೆಗೊಯ್ದು ತೊಳಕೊಂಡ ಬಂದ್ರೆ ಬದಕ್ತಿಯಾ ಮುಖಕ್ಕೆ ಕೆಕ್ಕರಿಸಿ ಉಗದ ಎದ್ದು ಹೋದ, ಆ ಪಿ.ಸಿ.ಗಳಿಬ್ಬರು ಬಂದ್ರು. ಮತ್ತೆ ಮೂಡ Change ಆಯ್ತು ಅದೇ ನಾಟಕ ಶುರುಮಾಡದ ಬೇಡ್‌ಶಿಟ್ ಹೋಲಸಾಗಿದೆ, ನೀನೆಲ್ಲಿ ರೂಮ್‌ನಲ್ಲಿ ತೊಳಿತಿಯಾ ನಾನೆ ತೊಳಕೊಡ್ತಿನಂತ ಒಂದೇ ಹಟಾನಮ್ಮ ಇರಲಿ ಬಿಡಣ್ಣ, ವೈನಿಗೆ ತಾನೆ ಮಾಡಬೇಕು ಯಾವತ್ತಿದ್ರು, you are really lucky ವೈನಿ.

ನನ್ ಕರ್ಮ ಆ ಹುಡುಗಿಗೆ ಹೇಳೊಕ್ಹೊದ್ರೆ ಒಂದೆರೆಡ್ ನಿಮಿಷ ಕೇಳಿ dont worry ಪ್ರೈನಿ. ನೀವು ಮದ್ವೆ ಆದ್ರು ಆಗಿದಿದ್ರು ನಾ ಯಾರಿಗೂ ಹೇಳಲ್ಲ. ನೀವು ಹೀಗೆಲ್ಲಾ ಕಥೆ ಹೇಳಬೇಡಿ. ಪಾಪ ಅಣ್ಣಾವರು ನಿಮ್ಮನ್ನೆ ನಂಬಕಂಡಿದ್ದಾರೆ ಅನ್ಸುತ್ತೆ. ಇನ್ನೊಮ್ಮೆ ಹೀಗೆ ನನ್ ಮೇಲೆ ಹೆಣ್ಣಿನ ಜೀವನದಲ್ಲೆನಾಗಬಾರದು ಅದು ಆಗ್ಹೊಯ್ತು. ಈಗ ಇದ್ದು ಹೆಣದ ತರಹಾ ಬದಕ್ತಿದಿನಿ. ನಂಗಂಡಂಗೆ ಇದ್ದಾವುದು ಗೊತ್ತಿಲ್ಲ. ತಪ್ಪು ಮಾಡ್ತಿದ್ದಿನಿ ಅನ್ಸುತ್ತೆ. ಹೇಳೊಣ ಅಂದ್ರೆ ಭಯ, ನನ್ನ ಮನೆಯಲ್ಲೆ ಇಟ್ಕಗೋಳಲ್ಲಂತ ಸಾಯೋಕು ಆಗದೆ, ಬದಕಕು ಆಗದೆ ಒದ್ದಾಡ್ತಿದ್ದಿನಿ. ನನಗೂ ಒಂದ್ ಹೆಣ್ಣು ಹುಟ್ಟಿದೆ. ಅದರ ಗತಿ ಏನೊ ಎತ್ತ, ಆ ದೇವರು ನನಗೆ ಹಿಂಗೆ ಇಡ್ಲಿ, ಅಕ್ಕಾ ಬ್ಯಾಡನ್ನಲ್ಲ ನನ್ನ ಮಗಳಿಗೆ ಗಂಡಗೆ ಚೆನ್ನಾಗಿಡಲಿ ಅಷ್ಟೆ.

ಪ್ರಕರಣ : ೦೪

ಹೆಸರು : ಸಂಧ್ಯಾರಾಣಿ

ವಯಸ್ಸು : ೨೮

ಜಾತಿ : ಹೊಲೆಯರು

ಶಿಕ್ಷಣ : ಎಸ್.ಎಸ್.ಎಲ್.ಸಿ.

ಹುದ್ದೆ : ಪಿ.ಸಿ.

ಇದೇ ಊರವರು ನಾವು. ಒಬ್ಬಕಿನೆ ಮಗಳು, ನಮ್ಮವ್ವಗ ಯಾರಿಲ್ಲ ಅಪ್ಪ ಸತ್ತ ಮೇಲೆ ಬಡತನದಾಗ ಅದೀವಿ ಅಂತೆ ಯಾರು ಇಟಗಂಡಿಲ್ಲ. ಸೇರಿಲ್ಲ. ಮನಿಗೆ ಹೊದ್ರು ಊಟಕ ಬಂದಿವಂತ ತಿಳಕೊಂಡು ಸರಿಗೆ ಮಾತು ಆಡಸತಿರಲಿಲ್ಲ. ಅದಕೆ ಊರು ಬಿಟ್ಟು ದೂರ ಬಂದ್ವಿ, ಅದಕೆ ಇದೇ ಊರು ನಮ್ದು ಅಂದೆ.  ಆ ಊರು ನನೆಪ ಮಾಡ್ಕೊಕು ಮನಸ್ಸಾಗಲ್ಲ. ಹುಶಾರರಿರಲಲ್ಲ ಹಾಸಿಗಿ ಹಿಡದಿದ್ರಂತ ತೊರಸಾಕು ದುಡ್ಡಿರಲಿಲ್ಲಂತೆ ನಾನು ಸಣ್ಣಕಿದ್ದೆ ಅಷ್ಟು ಎಲ್ಲಾ ನೆನಪಿಲ್ಲ. ಅಮ್ಮ ಹೇಳದಷ್ಟೇ ಗೊತ್ತು. ಹೇಗೊ ಟೆಂತ್‌ವರೆಗೆ ಅವರಿವರ ಮನೆ ಕೆಲಸ ಮಾಡಿ ಓದಿಸಿದ್ರು. ಮುಂದೆನು ಓದಂದ್ರು ನನಗೆ ಅವರ ಕಷ್ಟ ಪಡೋದು ನೋಡಿ ಸಾಕಾಯ್ತು. ನಾನೆ ಏನರ ಕೆಲಸ ಮಾಡಬೇಕಂತ ಓದಾಕ ಮನಸಿಲ್ಲಂತ ಸುಳ್ಳ ಹೇಳಿದೆ. ಕೆಲಸ ಸಿಕ್ತು. ಸೆರಿಕೊಂಡೆ. ನನಗೆ ಇಪ್ಪತ್ತೊಂದು ವರ್ಷ ಇದ್ವು. ನಮ್ಮ ಕೇರಿಲ್ಲೆ ನಮ್ಮ ಜನದವರೆ ನನಗೆ ಇಷ್ಟಪಟ್ಟು ಮದ್ವಿ ಮಾಡಕೊಂಡ್ರು. ಕಿರಾಣಿ ಅಂಗಡಿ ಇಟಕೊಂಡಾರ ಅವರಿಗೂ ತಂದಿಯಿಲ್ಲ. ತಾಯಿ-ಮಗ ಇಬ್ಬರೆ. ಈಗ ಎಲ್ಲಾರೂ ಒಂದೇ ಮನ್ಯಾಗ ಇದಿವಿ. ಅಷ್ಟೇನ ದುಡಮಿ ಇಲ್ಲಂದ್ರು ಪರ್‍ವಾಗಿಲ್ಲ. ನಂದ ದುಡಮಿ ಹೆಚ್ಚು, ಅತ್ತೆನು ಸರ್ಕಾರಿ ಕೆಲಸದ ಸೊಸಿಯಂತ ಭಾಳ ಪ್ರೀತಿ ಅದ ನನಮ್ಯಾಲ. ಅಂತ ಪೋಲಿಸ ಕೆಲಸದಾಗ ಇದ್ದು ಎಂಥದು ಕೆಟ್ಟ ಕೆಲಸಕ ಇಳಿಯಲ್ಲಂತೆ ಮನಿ ಮಂದಿಗೆಲ್ಲ ನಂಬಿಕೆ ಭಾಳ ಅದ. ನಮ್ಮತ್ತೆ ಎಲ್ಲರಿಗೂ ಹೇಳ್ತಿರ್‍ತಿದ ನನ ಸೊಸಿ ತಲಿಬಗ್ಗಸಗಂಡ ಹೋಗಿ ಹಂಗೆ ಮನಿಗಿ ಗೊರವದಲಿಂದ ಬರತಾಳೆ. ನಮ್ಮತ್ತೆ ಮನಸಿನಂಗ ನಾ ಡ್ಯೂಟಿಗಿ ಖಾಕಿ ಸೀರೆನೆ ಹಾಕೊಂದ ಹೊಗ್ತಿನಿ, ಪ್ಯಾಂಟ್ ಹಾಕೊಲ್ಲ ಜನದ ಕಣ್ಣು ಚಂದಿರಲ್ಲ, ಬಡವರು ಇರದ್ರಾಗ

ಚಂದಿರಬೇಕಂತೇಳ್ತಿರ ನಾನು ಹಂಗೆ ಇದಿನಿ. ಕೆಲಸಕ ಸೇರಿ ಏಳ ವರ್ಷ ಆಯ್ತು. ಅಜಮಸ ಮೊದಲ ಎರಡ-ಮೂರುವರ್ಷ ಏನಂತದ ಪ್ರಾಬ್ಲಂ ಇರಲಿಲ್ಲ. ಈಗ ಸ್ವಲ್ಪ ಅನಸತದ ಸಮಸ್ಯಾದವಂತ ಏನ ಹೇಳಬೇಕರಿ ಎಲ್ಲಾ ನಮ್ಮ ಮಾನ ನಾವೇ ಕಳಕಂಡಂಗ ನೀವಿನಾ ಮದ್ಲಿ, ಜೀವನ ಮಾಡೋ ಸಣ್ಣೋರ ಮುಂದ ಹೇಳದ್ರ ಜೀವನಾನ ಬ್ಯಾಡಂತಿರಿ. ಅನಸತದ. ಅದ್ರು ಕಲತವ್ರು ತಿಳಿದವರು ನಿಮ್ಮಂಗ ನಂಗ ತಿಳ್ಯಾಲ ಕೆಲಸಂತ ಬೇಕಿತ್ತು ಸಿಕ್ಕಿತು ಆದ್ರ ಮನಸಿಗಿ ಚೈನ ಇಲ್ಲದಂಗೆ ಯಾವಾಗ ಏನಾದ ಅಂತ ಭುಗಲ ನನಗೆ. ನಮ್ಮ ಸಾಹೇಬ್ರರಿ. ಮೊದಲನಿಂದ ಬಹಳ ನಿಗಾ ಇಡೋರ್ ನಮ್ಮ್ಯಾಲ ಬಡತನದ ಚಂದಿರು, ಹುಚ್ಚಾರ ಏನು ಮಾಡ್ಕಬೇಡ. ಇದು ವಾತವರಣ ಅಷ್ಟ ಬೇಶಿಲ್ಲಂತ ತಿಳಿ ಹೇಳ್ತಿದ್ರು. ತಿನ್ನಲಿಕಿ ಹಣ್ಣೆಲ್ಲಾ ಕೊಡ್ತಿದ್ರು. ಒಂದಿನಾ ತಲಿಬ್ಯಾನಿ, ಉರಿ-ಚಳಿ ಹೊಟ್ಟಿಬ್ಯಾನಿ ಅಂದ್ರ ಅರ್ಧದಿನಾ ರಜೆ ಮಾಡಿ ಹೋಗಂತ ಕಳಸ್ತಿದ್ರು. ಈಗನೂ ನನಗೆ ಸಾಹೇಬರು ಬಂದ್ರಂದ್ರ ಎಲ್ಲಾರೂ ಕಛೇರ್ಯಾಗ ನಿಮ್ಮಣ್ಣೋರು ಬಂದ್ರನೋಡು, ತಂದಿ ಸರಿ ತಿಳ್ದು ಮಗಳಕಿನ ಹೆಚ್ಚಾಗಿ ಮಾಡ್ತಾರಂತ ತಿಳಕೊಂಡಾರ ರೀ. ಮೊದಲೆಲ್ಲ ಬಹಳ ಮಾಡ್ಯಾರ ನಾ ಪರಮಾತ್ಮನ ಸಾಕ್ಷಿ ಸುಳ್ಳ ಹೇಳಲ್ಲ. ಈಗ ನೆನಪಾದ್ರ ಬೆಂಕಿ ಬಿಳತದ ಹೊಟ್ಯಾಗ. ಅಷ್ಟೆ ತರಸ ಅನಸ್ತದ. ಒಂದಿನಾ ಎಲ್ಲರಿಗೂ ಪಾರಟಿ ಅಂತ ಕೊಟ್ಟಿದ್ರು. ನನಗ ನನ ಗಂಡಗ ಛಲೋ ಬಟ್ಟಿ, ಸೀರಿ ಕೊಟ್ಟು ಹಾಕೊಂಬಾ ಅಂದ್ರು. ನನಗಂಡಗ ಮಾವಂತನ ಅಂತಿದ್ರ. ಭಾಳ ನಾಚಿಕಿ ಸ್ವಭಾವ, ನನಗಂಡಂದು ಯಾರಿಗಿ ಅಂದವಲ್ಲ, ಆಡದವಲ್ಲ. ಆವತ್ತು ಹೊದ್ವಿ ಪಾರಟಿಗಿ ಉಂಡು ತಿಂದು ಎಲ್ಲಾ ಆಯ್ತು ಜೀವನದಾಗ ಮೊದಲ ಸಲ ಅಂಥ ದೊಡ್ಡ ಹೋಟಲದಾಗ, ಅಷ್ಟು ರೂಪಾಯಿ ಖರ್ಚ ಮಾಡಿ ಅಂಥ ಊಟ ಮಾಡಿದ್ದು, ಎಲ್ಲಾ ಮುಗಿತು. ಸಂಧ್ಯಾ ನನ ತಂಗಿಯಿದ್ದಂಗ. ನನಗೆ ಅಕ್ಕಾ ತಂಗಿರಿಲ್ಲ. ನೀವೇನು ತಪ್ಪು ಭಾವಿಸಬಾರದು ನಾ ಅಕಿಗಿ ಪ್ರೀತಿಲಿಂದ ರಾಣಿ ಅಂತನ ಕರಿತಿನಿ. ಪುರಸೊತ್ತಿದಾಗ ಮನಿತನ ಬಿಟ್ಟ ಹೋಗ್ತಿನಿ ಅಂತ ಹೇಳಿದ್ರು, ನಮ್ಮನಿಯವರು ಭಾಳ ಸಭ್ಯ ಏನು ತಿಳಕಂಡಿಲ್ಲ. ಇಲ್ಲಿತನಾನು ಅಂಗೆ ಅದಾರ.

ನಮ್ಮನಿಗಿ ಬಂದು ಎಲ್ಲರ ಪರಿಚಯನು ಆಯ್ತು. ಅವರ ಮನಿಗನು ಕರೆಕೊಂಡು ಹೋದ್ರು ಅವರ ಹೆಂಡ್ತಿ ಎಡ್ಡ ಮುತ್ತಿನಂಥ ಗಂಡಮಕ್ಕಳ ಆ ದೊಡ್ಡ ಮನಿ. ವೈನಿಯವರು ಎಷ್ಟ ಪುಣ್ಯ ಮಾಡಿದ್ರ ಆಳು-ಕಾಳು ಎಲ್ಲಾ ಅದರ, ಆಯಕ್ಕಗ ಕೈ ತೊಳದ ಮುಟ್ಟಬೇಕು ಅಷ್ಟ ಚಂದಾದಳ. ಅವರ ನೆಂಟರದಾಗೆ ಆಗಬೇಕಂತ ಅವರ ಅಪ್ಪರ ಪೋಲಿಸಣ್ಣೋರಗಿ ಈ ಪದವಿ ಕೊಡಸಿದ್ದಂತ ಮನಿಗಿ ಹೋದ್ರ ಜೀವದಕಿನಾ ಹೆಚ್ಚು ಮಾಡ್ತಿದ್ರ. ನಾನು ನನಗಂಡ ಇಬ್ಬರು ಸಾಕಷ್ಟು ಸಲ ಹೋಗಿ ಬಂದ್ವಿ, ಕಮ್ ಜಾತಿಯವರ ಅಂತ ಏನಲ್ಲ. ದಿನಾ ಕಳೆದಂಗ ಬದಲಾಗಕಂತ ಬಂದಾರಂದ್ರ ನೀವ ನಂಬ್ತಿರೆನ್ರಿ. ನಂಬಾಕಗಲ್ಲ. ನಿನ್ನ ಮ್ಯಾಲ ಮನಿದೆಲ್ಲ ಜಾವಾಬದಾರಿ ಆದ ಒಬ್ಬಕಿ ದುಡಿಮಿ ಎದಕಾತದ ಎಲ್ಲಾ ಪಿರೆ ಅದ ಅಂತ ಅದಕ, ಇದಕ ದುಡ್ಡೊಕೊಡ್ತಿದ್ರು ಬ್ಯಾಡಂದ್ರು ಜುಲಮಿ ಮಾಡೋರು ತಂಗಿಗಿ, ಅಕಿನ ಮನಿಗಿ, ಅಷ್ಟನು ಮಾಡಿಲಂದ್ರ ಹ್ಯಾಂಗ ಅಂತ ಹೇಳ್ತಿದ್ರು ಎಲ್ಲರ ಮುಂದನ ಮಾತಾಡ್ತಿದ್ರು ಇದೆಲ್ಲ. ಎಲ್ಲರೂ ನಮ್ಮ ಸಾಹೇಬ್ರು ದೇವರಂಥಾ ವ್ಯಕ್ತಿಯಂತ ತಿಳಿಕೊಂಡಾರ ಅದರಾಗೆ ನನ ವಿಷಯಕ ಭಾಳ ಲಕ್ಷ್ಯ ಮಾಡ್ತಾರಂತಿದ್ರು.

ಎಲ್ಲಾ ಚಂದ ಇತ್ತು ಅದೇನಾತೋ ಏನೋ ಗೊತ್ತಿಲ್ಲ ನನಗೆ ನೀ ನಿನ ಗಂಡನ ಜೊತಿಗಿ ಕೂಡಬ್ಯಾಡ ಅಂತಂದ್ರು ಯಾಕಂತ ಕೇಳಿದ್ರ, ಉತ್ತರ ಹೇಳಿದ್ರ ಗಾಬರಿಯಾಗ್ತಿ ಆತಗ ವೆಶ್ಯಯರೆಲ್ಲ ಗೊತ್ತಾದರ ನನ್ನ ಕಣ್ಣಿಗೆ ಎಷ್ಟು ಸಾರಿ ಕಾಣಿಸಿಕೊಂಡಾನ. ನಿನಗಂಡ ಅಂತ ಹಿಡಿಲಾರದ ಬಿಟ್ಟಿಬಂದಿನಿ. ಆತಗ ಏಡ್ಸ್ ಆಗ್ಯಾದ. ನೀ ಕೂಡಿದ್ರ ನಿನಗನು ಬರ್ತದ ಅಂದ್ರು, ಎಷ್ಟ ದಿನಾ ಎಂಥಾದು ಬಂತು ನನಗಂಡಗ ಯಾಕಂಥ ಕೆಲಸ ಮಾಡಿದಂತ್ಹೇಳಿ ಜಗಳ ಮಾಡ್ಕಂಡು ಊಟ ತಿಂಡಿ ಬಿಟ್ಟು ಹೊರಗೆ ಹೋಗದು ಅಂದ್ರ ಡ್ಯೂಟಿಗೆ ಅಲ್ಲೆ ಪೋಲಿಸಣ್ಣರು ತರಸ್ತಿದ್ರು ಉಂಡು ಇರ್ತಿದ್ದ. ತಾನೆ ವಿಷಯ ಹೇಳತಾನ ಕೆಳಬಾರದಂತ ಸುಮ್ಮಿದ್ದೆ. ಪಾಪ ಅವನಿಗೇನು ಗೊತ್ತಿಲ್ಲ. ಎರಡು ತಿಂಗಳ ಕಳಿತು. ನನ ಗೆಳತಿಗಿ ಹೇಳಿದ್ದ ಹಿಂಗಂತ ಆಕಿ ಡಾಕ್ಟರಗೆ ತೋರಿಸಿದ್ರ ಗೊತ್ತಾಗ್ತದೆ ನೋಡಮಂದಳು ಹಂಗೆ ಮಾಡಿದವಿ. ನಮ್ಮ ಮನಿಯವರಿಗಿ ಕರಕೊಂಡು ಹೊದ್ರ ರಿಪೊರಟ ಎಲ್ಲಾ ಆರಾಮದನಂತ ಬಂತು. ಆಮ್ಯಾಲ ನಾ ಏನು ವಿಷಯ ಹೇಳಲಾರದ ಮುಚ್ಚಿಟ್ಟೆ ಛಂದಾಗಿದ್ದೆ. ಈ ಯಪ್ಪ ನಾ ಇನ್ನು ಜಗಳ ಮಾಡಕಂತ ಅದಿನಿ ಅನ್ಕಂಡ. ಒಂದಿನಾ ಡೈವರ್ಸ್ ಪೇಪರ್ ತಂದು ಸಯಿಮಾಡು ಅವನಿಗಿ ಬಿಟ್ಟ ಬ್ಯಾರೆ ಕಡೆ ಮಾಡ್ತಿನಿ ಮದವಿ, ರೋಗ ಇದೆ ಅಂತ, ಯಾಕಂಗ ಹೇಳದನಂತ ನನ ಗೆಳತಿ ನಾನು ಕಂಡಕೊಂಡ್ವಿ ಈ ಮನುಷ್ಯಾ ನಮ್ಮ ಮ್ಯಾಲ ಕಣ್ಣಹಾಕ್ಯನಂತ, ಆ ಪತ್ರಕೇನು ಹೇಳದೆ ಎರಡದಿನಾ ಬಿಟ್ಟು ನಾ ಹೊಟ್ಲೆ ಇದ್ದಿದಕ ಸ್ವೀಟ್ ಕೊಟ್ಟು ನಮ್ಮ ಮನಿಯವರು ಬಂದ ಪಾರಟಿ ಕೊಡ್ತಿನಂದ್ರು. ಅದಕ ನೀ ಯಾಕಪ್ಪಾ ನನಗನೂ ಖುಷಿ ನಾನು ಕೊಡ್ತಿನಂತ ಒಪ್ಪಿಸಿದ್ರು. ನಾ ಬ್ಯಾಡಂತೇಳದೆ. ಆ ಮೇಲೆ ನನಗೆ ಅವರ ಟೇಬಲಿಗಿ ಕರೆಸಿ ಬ್ಯಾಡಂದ್ರು ಕೂಡಿದಿ ಚಟಕ ಬೇಕಂದ್ರ ನಾನೇ ಇದ್ದನಲ್ಲ ನಿಂಗೇನಾದ್ರು ಆದರೆ ನನ್ ಗತಿ, ಅಂದ ನಾನು ಕೇಳದೆ ನಂಗೇನು ಆಗಲ್ಲ. ಆದ್ರೆ ನೀವು ಚಿಂತಿ ಮಾಡಬೇಕಿಲ್ಲಂತ ಹೇಳಿ ಹೊರಗೆ ಬಂದೆ. ಆವತಿನಿಂದ ನನಗೆ ಟ್ರಾಫಿಕ್ ಡ್ಯೂಟಿ, ಬಂದೊಬಸ್ತ ಡ್ಯೂಟಿ ಎಲ್ಲಾ ಡಬಲ್ ಹಾಕಾಕತ್ರು ಮಾಡಿದೆ. ನನಗೆ ನಿಂತು, ನಿಂತು ಹುಶಾರ ತಪ್ಪಿ ನನ್ನ ಪಾಪು ಸತ್ತೆ ಹೊಯಿತು, ಅಬಾರ್‌ಶನಂತಲ ಅದಾಯ್ತು.

ಅವನಿಗೊಪ್ಪಗೊಂಡ್ಲಿಂತ ನನ ಮ್ಯಾಲ ಒಂದೆರಡ ಸಲ ಕೆಟ್ಟ ಸುದ್ದಿ ಹಬ್ಬಿಸದ, ಎಸ್.ಪಿ. ಸಾಹೆಬ್ರು ಕರೆಸಿದ್ರು ಎಲ್ಲಾ ಮಾತಾಡಿ ನಾ ಏನು ಮಾಡಿಲ್ಲಂತ ಸೂಕ್ಷಮದಾಗ ಹೇಳಿ ಬಂದೆ ಮತ್ತೆ ಮತ್ತೆ ಹಿಂಗೆ ಆಯ್ತು ನನ್ನ ಮ್ಯಾಲ ಕೈ ಹಾಕಕ ಬಂದ. ಕಾಲನ ಚಪ್ಪಲಿ ತಗೊಂಡು ನಿಂತೆ ಸುಮ್ನೆ ಹೋದ, ಸಾಕಾಗಿ ಒಂದು ವಾರದಾಗೆ ಎಲ್ಲಾ ನನ್ನ ಗಂಡಗ ಹೇಳ್ದೆ. ಎಲ್ಲರೂ ಕುತು ಯೋಚನೆ ಮಾಡಿದರ ರಾಜಿನಾಮೆ ಕೊಡಬೇಕು ಕೆಲಸ ಬಿಡಬೇಕಂತಾಯ್ತು. ಕೆಲಸ ಬಿಟ್ಟ ಒಂದ ವಾರ ಆಯ್ತು. ಮೊದಲ ತೊಗಲಿಲ್ಲ ಆಮೇಲೆ ಮ್ಯಾಲಿನವರಗ್ಹೇಳಿ ಆರೋಗ್ಯ ಸರಿಯಿಲ್ಲಂತ್ಹೇಳಿ ಬಿಟ್ಟ ಬಂದು ರಾಜಿನಾಮೆ ಒಪ್ಪದ ಮ್ಯಾಲೆ ಎಸ್.ಪಿ. ಹತ್ರ ಹೋಗಿ ಎಲ್ಲಾ ಹೇಳಿ ಬಂದೆ. ಹೆಣ್ಮಕ್ಕಳ ಮಾನ ಹರಾಜಮಾಡಕ ಕೆಲಸಾ ಕೊಡ್ತಿರಂತ ಹೇಳದೆ, ಅದಕ ಎಸ್.ಪಿ. ಸಾಬರು ನೀವು ಮೊದಲೆ ಹೇಳಿದ್ರು ನಿಮಗ ಟ್ರಾನ್ಸ್‌ಫರ್ ಮಾಡುತ್ತಿದ್ದೆ, ಲೆಡಿಸ್ ಪಿ.ಎಸ್.ಐ. ಇರೋ ಸ್ಟೇಶನಿಗೆ ಅಂದ್ರು. ಸಹವಾಸನೇ ಬೇಡ ಅಂತ ಕೈಮುಗದು ಬಂದೆ. ಕೂಲಿಗಿ ಹೋಗ್ತಿನಿ ಗಂಜಿ ಕುಡದ್ರು ಆರಾಮ ಇದ್ದಿನಿ. ಆ ಪೋಲಿಸ ಇಲ್ಲಿ ಇಲ್ಲಂತ ಗೊತ್ತು.

ಬ್ಯಾರೆ ಎಲ್ಲಿ ಯಾರ ಮನಿ ಹಾಳ ಮಾಡ ಕೆಲಸ ಒಪ್ಪಕೊಂಡನೊ, ಸತ್ಯಾನಾಸ, ಆಲಿ ಅಂತ ಸುಮ್ಮಾಗಿನಿ. ಅವರ ಹೆಂಡ್ತಿ ೪ ಸಲ ಫೋನ್ ಮಾಡಿದ್ರು ನಾ ಮಾತಾಡಿಲ್ಲ. ಮನಿ ಕೂಡ ಬದಲಾಯಿಸಿ ಬ್ಯಾರೆ ಕೆರಿಗಿ ಬಂದಿವಿ. ಆವಾಗಲಿಂದ ಯಾರಿಗಿ ನಾ ನಂಬಂಗಿಲ್ಲ.

**ಪ್ರಕರಣ : ೦೫**

ಹೆಸರು : ರಜೀಯಾಬಾನು

ವಯಸ್ಸು : ೩೦

ಜಾತಿ : ಮುಸ್ಲಿಂ

ಶಿಕ್ಷಣ : ಎಸ್.ಎಸ್.ಎಲ್.ಸಿ

ಹುದ್ದೆ : ಪಿ.ಸಿ.

ನನ್ನ ಹೆಸರು ಬಂದು ರಜಿಯಾಬಾನು, ರಜೀಯ ಅಂತನ ಕರಿತಾರ. ಎಲ್ಲರು ಈ ಕೆಲಸಕ ಬಂದಿದ್ದು, ನನಗಂಡಾ ಸತ್ತ ಹ್ಯಾದಮ್ಯಾಲ ಅವರು ಇದೇ ಕೆಲಸದಾಗ ಇದ್ದರು ನಾ ಮನಿ ಒಳಗ ಇರ್‍ತಿದ್ದ. ನಮ್ಮದ್ ಘೋಶಾ ಪದ್ಧತಿ. ಬಾಹರ್ ಬಿಡ್ತಿರಲಿಲ್ಲ. ಆದರ ಅವರ ಹೋದ ಮ್ಯಾಲ ನಮ್ಮನ್ಯಾಗ ಕೆಲಸ ಯಾರಿಗಿ ಕೊಡಬೇಕಂದ್ರ, ಗಂಡ ಹೊದಮ್ಯಾಲ ಅದು ಬೀಬಿಗಿ ಬರಬೇಕು. ಇಲ್ಲಪಾಂದ್ರ ಅವರ ತಮ್ಮ, ಅಣ್ಣಾ ಯಾರಿಗನಾ ಬರತ್ತತಂತ ಅದಕೆ ನಮ್ಮ ದೊಡ್ಡ ಅಣ್ಣಾ ನನಗ ಮಾಡಸಿದ್ರು ಕೆಲಸ. ಸರಕಾರಿ ದುಡ್ಡಯಾರಿಗ್ಯಾಕ ಬಿಟ್‌ಕೊಡಬೇಕಂತಕೇಸಿ, ಓಡಾಡಿ ಮಾಡಿದಕ ನನ್ ಗಂಡ, ಮನಿದವರಿಗಿ ಇಷ್ಟಾ ಇಲ್ಲಾ, ಮಕ್ಕಳ ಮರಿ ಏನು ಇಲ್ಲ. ಕೆಲಸ ಯಕ ಮಾಡಬೇಕಿತ್ತು. ಅವರಿಗೆ ಬರದಕೊಟ್ಟು ಅಲ್ಲೆ ಇದ್ದರ ಆಗತಿತ್ತಂತ ಅಡಕೋತಾರ, ಪಗಾರ ಆಸಿ, ಮತ್ತ ಹೊರಾಗ ತಿರಗಾ ಸಲ್ಯಾಕ ಆಂಗ ಮಾಡಿನಂತರ, ಈಗ ಯಾರು ಕಂಡರನೂ ಮಾತಾಡಸಲ್ಲ ಅವರು. ನಾ ಎಷ್ಟ ಸಲಾ ಫೋನ್ ಎಲ್ಲಾ ಮಾಡಿನಿ. ಒಂದ್ಸಲಾ ಡ್ಯೂಟಿ ಮುಗಸಿ ಮನಿಗಿ ಹೋದರ ಇಂಥಾ ಅವತಾರದಾಗ ಮನಿಗಿ ಬರಬೇಡ, ನೀ ದುಡಿಯಾಕತಿದ್ದ ನಮಗೆಲ್ಲಾ ಗೊತ್ತಾಗ್ಯಾದಂತ ನಮ್ಮ ಸಾಸುಮಾ ಮತ್ತು ಮಾಮು ಹೇಳಿದ್ರು. ಅದಾದ ಮ್ಯಾಲ ನಾ ಹೋಗಿಲ್ಲ ಅಕಡಿ.

ಯಾದು ಪಗಾರ ನನಗ್ ಇಟಕೊಳ್ಳಕ ಕೊಡಂಗಿಲ್ಲ. ನಮ್ಮಣ್ಣ, ಮತ್ ಯಾರಾನ ನೈಸ್ ಮಾಡಿದ್ರ ಕೊಟ್ಟಬಿಡ್ತಿನಂತೆಳ್ತಾರ. ಕೆಲಸ ಕೊಡಸಾಕ ಓಡಾಡಿದ್ದ ಅವರೇ, ನಿನಗೇನ್ ಮಕ್ಕಳಿಲ್ಲ. ಯಾರಿಲ್ಲ ರೊಕ್ಕ ಎದಕ ಬೇಕಾಗ್ತದ, ಎಲ್ಲಾ ನಂದ ಅಕಾಂಟ ಮಾಡಸ್ಯಾರ ಅದಕ ಜಮಾ ಆಗ್ತದ ಪಗಾರ, ಆಮ್ಯಾಲ ಎಟಿಎಂ ಕಾರಡಲಿಂದ ಜಮಾ ಆದ ಕೂಡಲೆ ತಂಗಂಡ ಬಂದು ತನ್ನ ಅಕೌಂಟಿಗೆ ಹಾಕತನ ಇಲ್ಲಂದ್ರ ನಮ್ ಭಾಬಿ ಕಡಿ ಕೊಟ್ಟಿರ‍್ತಾನ. ನಂದಂತೇನು ಖರಚ ಮಾಡಲಿ, ಡ್ಯೂಟಿಗಿ ಟೈಮಿಗಿ ಸರಿಯಾಗಿ ಟೇಶನ್ ಕರಕಂಡ ಹೋಗ್ತಾರ, ಮತ್ತೆ ಮುಗದ ಮ್ಯಾಲ್ ತಂದ್ ಮನಿಗಿ ಬಿಡ್ತಾರ, ಅಣ್ಣಾ ಇಲ್ಲಂದ್ರೆ ಅವರ ಮಕ್ಕಳು ಎಲ್ಲಾ ದೊಡ್ಡ ದೊಡ್ಡವರ ಅದಾರ, ಅಷ್ಟೇ ಇಲ್ಲಿಂದ ಹೋದರ ಹೊರಗ್ ಎಲ್ಲಿನೂ ಹೋಗಂಗಿಲ್ಲ. ಒಂದೇ ಸಲ ನನ್ ಗೆಳತಿ ಭಾಳ್ ಕರದಾಳಂತ ಚಹಾ ಕುಡಲಿಕ್ಕಿ ಹೋಗಿದ.

ಭಯ್ಯ ನೋಡಿ ಎರಡ್ ದಿನಾ ಮನ್ಯಾಗ ಜಗಳಾ ಮಾಡಿದ್ರು ಯಾರನೂ ಮಾತಾಡಿಲ್ಲ. ಅಮ್ಮಿ ಅದಾರ ಏಜ್ ಆಗ್ಯದ, ಕೂತಲ್ಲೆ ಕುತಿರ್ತಾರ. ಅವರು ಅಂಗೆ ಅನಾದೆ, ಬ್ಯಾಡ ಬೇಟಿ ಸುಮ್ನ ಕೆಲಸಾನ ಬಿಡು ಅಂತಾರ, ಆದರ ಅಣ್ಣಾ ಕೆಲಸಾ ಬಿಡದಿತ್ತಂದ್ರ ಎಲ್ಲಾರ ಮನಿಮಾಡಕೊಂಡಿರು ನಮ್ಮನ್ಯಾಗ ಜಾಗ ಕೊಡಂಗಿಲ್ಲಂತಾನ, ಅದೆಲ್ಲಾ ಮಾಡಲಿಕ್ಕೆ ನನ್ ಹತ್ತರ ದುಡ್ಡಿಲ್ಲ. ಅದಕ ಸುಮ್ನ ದುಡಿಯದ ದುಡಿತಿರ್ತಿನಿ.

ನನ್ ಅನುಕೂಲಂತ್ಹೇಳಿ ತಮಗ ಅನಕೂಲ ಮಾಡಿಕೊಂಡಾರ ಒಂದ್ ಹಬ್ಬಕ ಒಂದ್ ಚಲೋ ಸಾಡಿ ತಂದ್ ಕೊಡಂಗಿಲ್ಲ. ತನ್ನ ಮಕ್ಕಳಿಗಿ, ಹೆಂಡ್ತಿಗಿ ಏನಂದ್ರ ಅದು, ಮುಂಜಾನಿ ಹೇಳದ್ರಂದ್ರ ಶಾಮ್‌ಗೆಲ್ಲ ಅವರ ಕೈಯೊಳಗೆ ಅದು ಇರ್‍ತದ. ನಾವು ಒಂದು ಹುಶಾರಿಲ್ಲಂತ ಔಷಧ ಹೇಳಿದ್ರ ಒಂದ ವಾರಬೇಕು ತಂದಕೊಡಲಿಕ್ಕೆ ಅದು ದಿನಾ ಕೇಳಬೇಕ ನಾ ಇಲ್ಲಿಯೂ ಸುಖಾಯಿಲ್ಲ, ಕೆಲಸದಾಗನು ಸುಖಯಿಲ್ಲ.

ಅಲ್ಲಿ ನಮ್ಮ ಆಪಿಸರ್ ಎಲ್ಲಾ ಚಂದದಾರ ಆದರೆ ನಂಬಲ್ಲಿ ಒಬ್ಬರು ಎಚ್. ಸಿದು ಭಾಳ ಅದ, ಅವರೆ ಬಹಳ ತಕಲಿಫ್ ಮಾಡದು ಹೆಣ್ಣಮಕ್ಕಳಿಗಿ. ನಾ ದಿನಾ ಪೋಲಿಸದು ಸಾಡಿ ಹಾಕೊಂಡ, ಬುರಖಾ ಹಾಕೊಂಡು, ಅಲ್ಲಿ ಹೋಗಿ ತೆಗಿತಿನಿ ಡ್ಯೂಟಿ ಮುಗದ ಮ್ಯಾಲ ಹಾಕೊಂಡ ಬರ್‍ತಿನಿ. ಇಲ್ಲಂದರ ನಮ್ಮಣ್ಣ ನಂದು ಕೊಲೆಗೆ ಮಾಡಿಬಿಡ್ತಾನ. ಅಂತಾ ಖರಾಬ್ ಮನುಷ್ಯ ಅದಾನ ಅವನು. ಈ ಎಚ್.ಸಿ. ಅದ್ಯಾಕ ಹಾಕೊಂಬರ್‍ತಿ. ಅಷ್ಟ ಚೆಲುವು ಇದ್ದಿ. ನಾಕ ಮಂದಿ ನೋಡಿದ್ರ ಎಷ್ಟ ಕಿಮ್ಮತ್ ಇರ್‍ತಾದ. ಮ್ಯಾಲದೊಂದ ಕರಿದ್ ಹಾಕದ್ ಕೂಡದ್ ಅಂತ ಬಯ್ತಾರ. ಅವರದೆನಿಲ್ಲಾ ತಮ್‌ದ ಡ್ಯೂಟಿ ಎಲ್ಲ ಇರ್‍ತಾದ. ಅಲ್ಲಿ ಹಾಕೋತಾರ ನಂದನು, ಒಟ್ಟ ನಂಜೋತಿಗೆ ಇರ್‍ತಾರ. ಸಂಟ್ರಿ ಇತ್ತಂದ್ರ ಒಟ್ಟ ಅವರ ಬಂದರೆ ಇರಬೇಕು ನಾ. ಸೆಂಟ್ರಿ ಇದ್ದಾಗ ಕೆಲಸ ಎಲ್ಲಾ ಮಾಡೋವಾಗ ನನಗ ಭಾಳ ಸಪೋರ್ಟ್‌ಮಾಡ್ತಾರ. ಮೊದಲಿನಿಂದನೂ ಒಂದ್ಸಲಾ ಬಂದೊಬಸ್ತ್ ಇತ್ತು. ಎಲ್ಲಾರಿಗೂ ಹಾಕಿದ್ರು ಟೇಶನ್‌ದಾಗ ನೋಡಲಿಕ ಮಾತ್ರ ನಂದು ಮತ್ತು ಹೆಚ್.ಸಿ. ಡ್ಯೂಟಿ ಇತ್ತು. ಅವತ್ತ ನನಗ್ ಅವರು ಹೇಳಿದ್ರು, ಹರ್‍ಯಾದ್ ವಯಸ್ಸ ಯಾಕ ಹಾಳ ಮಾಡ್ಕೊತಿದಿ, ಇನ್ನೊಂದ ಮದವಿ ಮಾಡಕೋ ಆಗಲ್ಲಂದ್ರೆ ಒಂದ್ ಸೆಟಪ್ ಮಾಡಕೋ, ನಾನೇ ಇರ್‍ತಿನಿ. ಅದರಲಿಂದ ನನಗ ಏನ ಅಂತಾದೆಲ್ಲ ಇಷ್ಟ ಆಗಂಗಿಲ್ಲಂತ ಹೇಳಿಬಿಟ್ಟೆ ಧೈರ್ಯ ಮಾಡಿ, ಯಾರಿಗೂ ಇಷ್ಟಾ ಇರಲ್ಲಂತನ ಹೇಳಾದು, ಒಂದ್ಸಲ ಮಜಾ ಬಿತ್ತಂದ್ರ ನೀನೆ ಬಿಡಲ್ಲಂತಿ ಅಂಥಾ ಕರಾಮತ್ ಇರ್‍ತದ. ನನ ಹೆಂಡ್ತಿನ ನೋಡು ಮೊದಲ ಹೆದರಿ ಸಾಯ್ತಿದ್ಲು, ಈಗ ನಾ ನೈಟ್ ಡ್ಯೂಟಿ ಮಾಡ್ತಿನಂದ್ರ ಸಾಕು ಜಗಳ ಮಾಡ್ತಾಳೆ.

ಹಂಗೆ ಇರ್‍ತಾವ ನೂರಾರು ನಿಮ್ಮ ಹೆಣ್ಮಕ್ಕಳಿಗಿ ವಿಧವಾ ಹಂಗ-ಹಿಂಗ ಅಂತ್ಹೇಳಿ ಸುಖಾ ಪಡಲಾರಂದಗ ಮಾಡ್ಯದ ಈ ಧರ್ಮ. ಅದಕ ನೀ ಬಲಿಯಾಗದು ನನಗ ನೋಡಕಾಗಲ್ಲ. ಅಂತ ಭಾಳ ಮಾತಿನಾಗೆ ಒಂಥರಾ ಮಾಡ್ತಿರ್‍ತಿರಾ. ನನಗ ಕಷ್ಟ ಅನಸ್ತದ, ಮನಿಯಾಗ ಹೇಳಿದ್ದ ದೊಡ್ಡ ಗಲಾಟಿ ಆಗ್ತದ. ಏನ್ ಮಾಡಬೇಕು ಗೊತ್ತಾಗ್ತಿಲ್ಲ. ಒಂದೆರಡು ಸಲ ಹೆಚ್.ಸಿ.ಗೆ ತಿಳಿಸಿ ಹೇಳಿನಿ. ಹಿಂಗೆಲ್ಲಾ ಮಾಡಿದ್ರ ನಾ ವಿಷ ಕುಡದು ಸಾಯ್ತಿನಿ ಅಂದ್ರ. ಸಾಯೋದರೊಳಗ ಒಂದ್ಸಲಾ ನನಗ ಸಿಕ್ಕೂ ಸಾಯಿ

ಅಂತಂದರು. ನಮ್ಮ ಸಾಹೇಬರಿಗಿ ಹೇಳಿ ಮಹಿಳಾ ಪೋಲಿಸ ಟೇಶನ್‌ಗೆ ವರ್ಗ ಮಾಡಸಿಕೊಡಿ ಅಂತ ಆಯ್ತು ಅಂತ ಹೇಳಿ ಒಪ್ಪಿಕೊಂಡಾರ ಅದಾದರ ಅರಾಮಾಗಿರಬಹುದು. ಏನೋ ಎಂಥದೋ ವಿಧವಾಂತ ಕೆಲಸಕ ಕಳಸಿ, ನನಗ ಆಸಾರಾ ಆಗ್ತದ ಬಂದರೂ, ಐದು ಪೈಸಾ ನನಗಿಲ್ಲ. ದುಡಿಯದಷ್ಟೇ ಒಂಟಿ ಹೆಂಗಸರು ಇಲ್ಲಿ ಬಂದರ ಇಲ್ಲಿ ಇಂಥಾ ಪ್ರಾಬ್ಲಂ. ಎಷ್ಟಾದರೂ ದುಡಿಬೇಕಲ್ಲ ದುಡಿತಿದನಿ ಅಷ್ಟೆ.

**ಪ್ರಕರಣ : ೦೬**

ಹೆಸರು : ಶರಣಮ್ಮ

ವಯಸ್ಸು : ೩೧

ಜಾತಿ : ಇಳಿಗೆರು

ಶಿಕ್ಷಣ : ಎಸ್.ಎಸ್.ಎಲ್.ಸಿ (ಪಿ.ಯು.ಸಿ)

ಹುದ್ದೆ : ಪಿ.ಸಿ.

ಇಪ್ಪತ್ತು ವರ್ಷಕ್ಕೆ ಕೆಲಸ ಸೇರದೆ, ನಮ್ಮ ತಾಯಿ ಮತ್ತು ನಾನು ಡ್ಯೂಟಿ ಇರೋ ಊರಲ್ಲೆ ಮನೆ ಮಾಡಿದವಿ. ಒಂದು ಹೊಸಾ ಬ್ಯಾಚ್ ಬಂತದ್ರ ಯಾರ್ ಬಹಳ ಸ್ಮಾರ್ಟ್ ಆಗಿದರಂತ ಆರಸತಾರಂತ ಅದರಾಗ ನಂದು ಮೂರನೆ ಹೆಸರು ಇತ್ತಂತ ನಮ್ಮ ಮನೆಯವರು ಹೇಳ್ತಿರ್‍ತಾರ ಈಗನು. ಅಂದರ ಬ್ಯೂಟಿ ಮಾತು, ಆಕರ್ಷಣೆ, ಸೂಕ್ಷ್ಮತೆ ಇಷ್ಟಪಡ್ತಾರಂತೆ ಅಂಥದರಾಗ ನಾನು ಬೇಕು ಅಂತ ಮೂರ ಸ್ಟೇಶನ್‌ನರು ಹೇಳಿದ್ರಂತ ಕೊನಿಗಿ ಇಲ್ಲಿ ಸ್ಟೆಶನ್ ಪಿ.ಎಸ್.ಐ. ಅಷ್ಟು ಸರಿಯಿಲ್ಲ ಮನಷ್ಯಾ ಅಂತ ಮೊದಲೆ ಕೇಳಲ್ಪಟ್ಟಿದ್ದೆ. ಆದರೆ ಆ ಸ್ಟೇಶನ್. ಬಿಟ್ಟು ಯಾವುದಾದ್ರೂ ಸಿಗಲಿ ಅಂತ ಅನ್ಕೊತಿದ್ದೆ ಅದು ನನ್ನ ಜೀವನವೇ ಬದಲಾಯಿಸಿತು.

ಹೊಸದಾಗಿ ಅಂದರೆ ಬೇಕು ಅಂತಾನೆ ನನ್ನ ಹಾಕಸಕೊಂಡಿದ್ರು. ನನಗೆ almost ಹೊರಗಡೆ ಡ್ಯೂಟಿ ಹಾಕ್ತಿರಲಿಲ್ಲ. ಎಷ್ಟೇ ಗಲಾಟೆಗಳಾದ್ರೂ ಬೇರೆ ಪಿ.ಸಿ.ಗಳಿಗೆನೆ ಹಾಕ್ತಿದ್ರೂ ಲೆಡಿಜ್ ಕೂಡ ಹೋಗ್ತಿದ್ರು. ನನಗೇನು ಅಂತ ಒಟ್ಟಾರೆ ಗೊತ್ತಾಗಿಲ್ಲ. ಮುಂದೆ ಸ್ವಲ್ಪ ದಿನಗಳು ಕಳೆದವು. ಆಮೇಲೆ ನನ್ನ ಸರ್ ಪದೇ ಪದೇ ಚೆಂಬರ್‌ಗೆ ಕರೆಸ್ತಿದ್ದರು ಕಾರಣ, ಕೆಲಸನೆ ಇರ್‍ತಿರಲಿಲ್ಲ. ಐದ್ ನಿಮಿಷದ ಕೆಲಸಕ ಗಂಟೆಗಟ್ಟಲೇ ಕೂಡಸಕೋತಿದ್ದರು. ಕೋಪ, ಬೇಜಾರು ಎರಡು ಆಗಿತ್ತು but ಏನ್ ಮಾಡಕಾಗ್ತಿರಲಿಲ್ಲ.

ಒಂದು ವಾರ ಹೀಗೆ ಕಳೆದ ಹೊಯ್ತು ಆಮೇಲೆ ನನಗೆ ಏಕವಚನದಲ್ಲಿ ಮಾತಾಡ್ಕೊಕೆ ಆರಂಭಿಸಿದ್ರು. ಅಂದ್ರೆ ಎಲ್ಲರೂ ಇದ್ದಾಗ ಚೆಂಬರ್‌ಗೆ ಕರಸಿದರೆ ಮಾತು ತುಂಬಾ ಗೌರವದಿಂದ ಆಡ್ತಿದ್ರು. ಒಬ್ಬೆ ಇದ್ದಾಗ ಯಾಕೆ? ಏನೆ? ನಿನಗೆ ಮನುಷ್ಯರ ಮನಸು ಅರ್ಥ ಆಗಲ್ವಾ ಅಂತು ಹೇಳ್ತಿದ್ರು. ನನಗೆ ಆವತ್ತಿನಿಂದ ಅವರುದ್ದೇಶ ಏನು ಅಂತ ಗೊತ್ತಾಯ್ತು. ನಿನ್ನೆ ಇಷ್ಟಪಡ್ತಿನಿ please co-oprate me ಅಂದ್ರು ಮದ್ವೆ, ಪ್ರೀತಿ ಎರಡು ಅವರ ಉದ್ದೇಶ ಅಲ್ಲ Just for enjoy ಅಷ್ಟೇ ಅಂತ ಒಪನ್ ಆಗಿ ಹೇಳಿದ್ರು. ನಿನಾಗೆ ಅರ್ಥಮಾಡ್ಕೊತಿಯ ಅನ್ಕೊಂಡೆ ಹೊಗ್ಲಿಬಿಡು ನೀನೇನು

ಸೈಕಾಲಜಿ ಸ್ಟುಡೆಂಟ್ ಅಲ್ಲ ಅಲ್ವಾ ಅಂದ್ರು. ನಾನು ಅದಕೆ ತುಂಬಾನೆ ಅಪೋಜ್ ಮಾಡ್ತೆ, ಅಂದರೆ ಅವರ ಕರದಾಗ ಎಲ್ಲಾ ಹೋಗದೆ ಇರೋದು, ಸರಿಯಾಗಿ ರೆಸ್ಪಾನ್ಸ್ ಯಾವುದಕ್ಕೂ ಮಾಡದೆ ಇರದು. ಮಾಡತಿದ್ದೆ. ನನಗೆ indirect ಆಗಿ ಅವರ ಆಸೆಗಳನ ಹೇಳೊಕೆ ಹೊರಡೋರು ಅಂದ್ರೆ ಟೈಪ್ ಮಾಡೋದಿದೆ, ಟಿ.ಎ. ಬಿಲ್ ಮಾಡೋದಿದೆ ಅಂತ ಒಳಗಡೆನೆ ಕೂಡ್ಸಿ, ಮಾಡು ನಾ ಹೇಳ್ತಿನಿ ನೀನು ಮಾಡ್ತಾ ಹೋಗು ಅನ್ನೊವರು. ಅದರ ಮಧ್ಯೆ ಮಧ್ಯೆ ತುಂಬಾ ಅವಾಚ್ಯವಾಗಿ ಕೆಳಸ್ಕೊಕೆ ಆಗದೆ ಇರೋ ತರಹ. ಇಲ್ಲಂದ್ರೆ ಕೊಡ್ ವರ್ಡಂತೆ ಅವು ಬಳಸಿ ಮಾತಾಡೋರು. ಹೊರಗಡೆ ಮಳೆ, ವೀಪರಿತ ಗಾಳಿ ಇದ್ದೂ ಫೂಲ್ ಫ್ಯಾನ್ ಹಾಕಿಸೋರು. ಚಳಿಯಾಗುತ್ತೆ ಅಂದ್ರೆ ನಾನ್ ಬಿಸಿ ಮಾಡ್ತಿನಿ ಬಾ ಹತ್ರ ಅನ್ನೊವರು. ಇಲ್ಲಂದ್ರೆ ಬಾಳೆಹಣ್ಣು ಬೇಕಾ ಒಳಗಿಟ್ಟುಕೊತಿಯಾ, ಸೇರದಾಗ ಹೇಳು, ಬೇಕನಸದಾಗ, ಮತ್ತೆ ಮತ್ತೆ ನೆನಪಾದಾಗ ಹೇಳು ಅದು ನಿಂದೆ, ಬೇಕಾದಷ್ಟು ಬಳಸು ಅನ್ನೊರು ನಾನದಕ್ಕೆ ಉತ್ತರ ಕೊಡೊಕಾಗದೆ ಎಷ್ಟೇ ಕೋಪ ಬಂದರೂ ಸುಮ್ಮನೆ ಕೂತು ಕೆಲಸ ಮಾಡ್ತಿದ್ದೆ.

ಮತ್ತೊಂದಿನಾ ಕರೆಸಿಬಿಟ್ಟು ನೀನು ಇನ್‌ಮೇಲೆ ಡ್ಯೂಟಿಗೆ.. ಬರಬೇಡಾ ಅಂದರು. ನನಗೆ ಬದಕಕಾಗಲ್ಲ ರುಚಿನೋಡೊವರೆಗೂ, ನಾನು ಹೇಳ್ತದಿನಂದ್ರೆ ಈ ರೀತಿ ಫ್ಯಾಂಟ್‌ಶರ್ಟ್ ಯುನಿಫಾರ್ಮ್ ಬೆಡಾ, ಟೈಟ್ ಬ್ಲೌಸ್, ಟ್ರಾನ್ಸ್‌ಫರಂಟ್ ಆಗಿರಲಿ ಸೀರೆ ಹಾಕೊ ಅಂದರೆ ಕಲರ್, ಕಲರ್, ಅಲ್ಲ ಡಿಪಾರ್ಟ್‌ಮೆಂಟ್ ಕಲರ್, ಬ್ಲೌಜ್ ನೆಕ್ front and back ತೀರಾ deep ಇರಬೇಕು, ಸ್ಲಿವ್ಸ್ ೩.೫ ನಿಂದ ೪ ಇಂಚ್ ಇರಸಬೆಕು. ಹಾಗೆ ಇರೊದಾದ್ರೆ ಬಾ ಇಲ್ಲಂದ್ರೆ, ಬೇರೆ ತರಹ ಆ್ಯಕ್ಷನ್ ತಗೋತಿನಿ ಅಂದ್ರು ೧೫ ದಿನಗಟ್ಟಲೆ ಹೇಳಿದ ಕೇಳಿಲ್ಲ ವಾರಕ್ಕೊಂದರಂಗ ಮೆಮೊ ಕೊಡೊದಕೆ ಶುರು ಮಾಡಿದ್ರು ಅದಕೆ sorry ಅಂತ, ಇನ್ನೊಂದ್ಸಲ ಹೀಗಾಗಲ್ಲ ಅಂತ ರಿಪ್ಲೈ ಮಾಡಿ, ಮಾಡಿ ಬೇಜಾನ್ ಬೆಸರವಾಯಿತು ಆಮೇಲೆ ನೈಟ್ ಡ್ಯೂಟಿ ಹಾಕೊರು, ಲೇಡಿ ಕೈದಿಗಳನ್ನ ಅರೆಸ್ಟ ಮಾಡಿ ತಂದ ಲಾಕಪ್‌ಗೆ ಹಾಕವರು, ರಾತ್ರಿ ಡ್ಯೂಟಿ ನಂದೇ ಹಾಕ್ಸವರು ವಿಧಿನೆ ಇಲ್ಲ ತೆಪ್ಪಗೆ ಇರಬೇಕು.

ಹೀಗೆ ಒಂದಿನಾ ರಾತ್ರಿ ಹಾಕ್ಸಿದರು ಸ್ಟೇಶನ್‌ನಲ್ಲಿ ಇನ್ನೊಬ್ಬರು ಲೇಡಿ ಪಿ.ಸಿ. ಜೈಂಟ್ಸ್ ಇಬ್ಬರು ಇದ್ದರು. ಅವತ್ ನನಗೆ ಒಂಬತ್ತು ಗಂಟೆಗೆ ಒಳಗ ಕರೆದು ಒಂದು ಮೂಲೆಲಿ ಅಲುಗಾಡದ ಹಾಗೆ ನಾಲ್ಕು ತಾಸ್ ನಿಲ್ಲಿಸಿದರು. ನನಗೆ ನಿಲ್ಸಿರೊ ಜಾಗಕೆ ಅಂದ್ರೆ ಸರಿಯಾಗಿ ನನ್ ಮೇಲೆ ಬೆಳಕು ಬಿಳೊ ತರಹ ಕಲರ್ಸ್ (ಬೇರೆ ಬೇರೆ ತರಹದ್ದು ಇರತ್ತಲ್ಲಾ) ಬಲ್ಬ್ ಹಾಕಿದ್ರು ಆ ಕಲರ್ಸ್ ಬಿದ್ದಹಾಗೆ ಮೇಲೆ ನನ್ನ ರೂಪ ನಿಟಾಗಿ ಕಾಣ್ಸಬೇಕಂತ. ಸಾಯಬೇಕು ಅನ್ನೊ ಹಾಗಾಗಿತ್ತು. ಕೆಲಸನೆ ಬಿಡಬೇಕು ಅನ್ನೊಂಡೆ ಮನೇಲಿ ಹೇಳೊದಾದ್ರು ಎಂಗೆ ಅಮ್ಮಗೊತ್ತಾದರೆ ಎದಿವಡಕೊಂಡು ಸತ್ತು ಹೋಗ್ತಾರೆ. ಏನಾಗುತ್ತೊ ಆಗಲಿ ಅಂತ ಸುಮ್ನೆ ನಿಂತೆ. ನನಗೆ ಅಲ್ಲೆ ನಿಲ್ಸಿ ಅರ್ಧ ಗಂಟೆ ರೌಂಡ್ಸ ಹೋಗಿ ಬಂದ್ರು. ಇಲ್ಲ ಯಾರು ಒಳಗಡೆ ಬರ್ಲಿಲ್ಲ. ಅವರಿಗೆನು ಹೇಳಿದ್ರೊ ಏನು ಗೊತ್ತಿರಲಿಲ್ಲ. ಆಮೇಲೆ ಅಲ್ಲೆಲ್ಲ ಒಬ್ಬರು ವಿಷಯಕ್ಕೆ ಇನ್ನೊಬ್ಬರು ತಲೆಹಾಕೊಲ್ಲ ಒಂದು ಮಾತು ಆಡಲ್ಲ ಬಹಳ ರಿಸ್ಕ್ ಆಗುತ್ತೆ. ಇಬ್ಬರ ಮದ್ಯೆ ಹೋದರೆ ನಮ್ಮನ್ನೆ ಆರೋಪಿ ಮಾಡಿಬಿಡ್ತಾರೆ. ನನ್ನೊಳಗೊಂಡೆ ಯಾರೂ ಹೋಗೊದಕೆ ಆಗಲ್ಲ.

ಆಮೇಲೆ ಬಂದು ಅವರ ಕೈಲಿರೊ, ಕೋಲು ನನ ಎದೆಗಿ ಚುಚ್ಚಿ ಯಾವುದಕ್ಕೂ ಜಗ್ಗಲ್ಲ ಅಂತಿಯಲ್ಲ ನೀನು. ನನ್ನನ್ನು ಕೆರಳಸಬೇಡ ಇರೋ ಅಂದನಾ ಬಳಸಕೊಬೇಕು. ನಾನಿನ್ನು unmarried ೪೫ ವರ್ಷ ಆಗಿದೆ ಅಂದ್ರೆ ಮದ್ವೆ ಆಗಿದೆ. ಅನ್ಕೊಂಡಾ ಮದ್ವೆ ಗಿದ್ವೆ, love ಅದೆಲ್ಲಾ ನಂಬಲ್ಲಾ ನಾನು, ವಿಶೇಷವಾಗಿ ಹೆಣ್ಣನ್ನ ನಂಬಲ್ಲ. ಆದರೆ ಆಸೆ ಕೇಳಲ್ವೆ ಅದಕೆ ಈ ತರಹ. ನಿನಗೊಸ್ಕರ, ಯಾರ್‍ಯಾರು ಕೈ ಕಾಲುಬಿದ್ದು ನನ್ನ ಸ್ಟೇಶನಿಗೆ ಹಾಕೊಂಡಿದಿನಿ. ಅಂತ ಹೇಳಿದ. ಅಳ್ತಿದ್ರ ಓಕೆ ಅಳು ಅತ್ತರೆ ನಿನ್ನ ಪ್ರಾಬ್ಲಂ ಮುಗಿಯಲ್ಲ. ನೀ ಮನಸು ಒಂದು ಗಂಟೆ ನನ್ನ ಹತ್ರ ತಿರಗಸದ್ರೆ ಐ.ಪಿ.ಎಸ್. ಆಗ್ತಿಯಾ ಆರಾಮಾಗಿ ಡ್ಯೂಟಿ ಮಾಡೋಕೆ ನಾನು ಸಪೋರ್ಟ್ ಮಾಡ್ತಿನಿ. ಸ್ಟೇಟನಲ್ಲೆ ಒಳ್ಳೆ ಹೆಸರು ಮೆಡಲ್ಸ್, ಪ್ರಶಸ್ತಿ ಕೊಡಸ್ತಿನಿ, ಯೋಚನೆ ಮಾಡು ಇನ್ನೆರಡು ಗಂಟೆ ಅಂದ್ರು please ಸರ್ ನಾನಂತ ಹುಡುಗಿಯಲ್ಲ ಸರ್. ನನಗ್ಯಾರು ಇಲ್ಲ ದಿಕ್ಕು ಕೆಲಸ ಬಿಟ್ಟು ಹೋಗಕಾಗಲ್ಲ. ಜೀವನ ಕಷ್ಟ ಆಗುತ್ತೆ ನನ್ನ ಬದಕೊಕೆ ಬಿಡಿ ಸರ್ ಅಂತ ಎಷ್ಟೆಲ್ಲಾ ಕೇಳಿ ಕಾಲು ಹಿಡಿಕೊಂಡೆ. ಕಾಲಿಗೆ ಬಿದ್ದು ಹತ್ತ ನಿಮಿಷ ಕೂಡೊ ನೆಪ ಬೇಡ, Stand up ಕಾಲು ನೋವಾ ಅದಕೆ ಹೇಳ್ತಿದಿನಲ್ಲ ಮೇಲೆ ಮಲಗಸಿಕೊತಿನಿ, ಕಾಲೊತ್ತತಿನಿ, ಹಾಯಾಗಿ ನಿದ್ದೆ ಮಾಡಸ್ತಿನಿ. ಇಷ್ಟಪಟ್ಟು ಬಂದರೆ, ಇಲ್ಲಂದ್ರೆ ಶಾಶ್ವತವಾಗಿ ಮಲಗಿಸ್ತಿನಿ ok ಅಂತ ಹೋಗಿ, ತಿರುಗಿ ನೋಡಿ ಎರಡು ಕೈ ಮೇಲೆ ಮಾಡು Straight ಆಗಿ ಸ್ವಲ್ಪನು ಬೆಂಡ ಆಗಬಾರದು, ಸೆರಗು Side ಮಾಡು ಅಂತ ಹೇಳಿದ್ರು ಅಲ್ಲಾ ಹಾಗೆ ನಿಂತೆ. ಹೋಗಿ ತನ್ನ ಸೀಟ್ ಮೇಲೆ ಕೂತು, ಕ್ರೂರವಾಗಿ ನೋಡ್ತಿದ್ದರು ಮೇಡಂ, ಗಂಟೆ ಐದು ಆಗ್ತಿದ್ದಂಗೆ ಎದ್ದು ಬಂದು ಕೈ ಕೇಳಗಿಳಿಸಿ, ಸೀರೆದು ಪಿನ್ನ ತಕೊಂಡು ಇಟಕೊಂಡು ನನ್ನ ಕುದ್ದೆಲ್ಲ ಮೇಲೆ ಮೇಲೆ ಮಕ್ಕಂಡೆದ್ದವರು ತರಹ ಕೆದರಿ, ತಾವು ಶರ್ಟ್ ಬಟನ್ ಬಿಚ್ಚಕೊಂಡು, ಅಂಜಿದ್ದೆ ಏನೊ ಆಗೊಗುತ್ತೆಂತ ಆದರೆ Don't worry ನಿನಗೆನು ಮಾಡಲ್ಲ ಅಂತ ಅದೇ ರೂಪದಲ್ಲಿ ಹೊರಗೆ ಹೋದ್ರು. ಇನ್ನೊಬ್ಬರು ಲೇಡಿ ಪಿ.ಸಿ.ಗೆ ಹೆಳಿ ಮೇಡಂಗೆ ಸ್ವಲ್ಪ ನೀರು ಕುಡ್ಸಿ ಹೋಗಿ ಕರಕೊಂಡು ಬನ್ನಿ ಅಂದರು ಅವಳು ಬಂದಿದ್ದೆ ತಾಳ್ಕೊಕಾಗದೆ ತಬ್‌ಕೊಂಡು ಅತ್ತೆ, ಆದರೆ ಅವಳು ಇರ್ಲಿಬಿಡು ಆಗಿದ್ದಾಗೊಯ್ತು ನಮ್ಮ ಬಡತನಕೆ, ಹೊಟ್ಟೆಪಾಡಿಗೆ ನಾವು ಏನೆಲ್ಲಾ ಮಾಡ್ಬೇಕಾಗುತ್ತೆ ಅಂದ್ಳು. ವಿಷಯ ಎಲ್ಲಾ ವಿವರವಾಗಿ ಹೇಳದೆ, ನಾನು ನಂಬ್ತಿನಿ ಆದರೆ ಇದು ಉಳದವರು ನಂಬಲ್ಲ ಅಲ್ವಾ. ಅಂತ ಮನೆಗೆ ಕರಕೊಂಡು ಬಂದು ಬಿಟ್ಟು ಹೋದಳು. ವಿಷಯ ಒಂದೇ ವಾರದಲ್ಲಿ ಡಿಸ್ಟ್ರಿಕ್‌ನ ಎಲ್ಲಾ ಪೋಲಿಸರಗೂ ಗೊತ್ತಾಯ್ತು. ಆದರೆ ನಡದಿದ್ದಲ್ಲ. ಇಬ್ಬರಿಗೂ ಸಂಬಂಧ ಇದೆಯಂತ.

ಅದೇನೊ ಆಗೊಯ್ತು. ನಮ್ಮಿಬ್ಬರ ಮಧ್ಯ ಸಂಬಂಧ ಬೆಳೆದು ನನ್ನ ಮದ್ವೆ ಮಾಡಕೊಂಡ. ಆಗ ನನ್ನ ಎಜ್. ೨೪, ಅವರಿಗೆ ೪೮ ಇತ್ತು. ಹಿಂದಿನ ದಿನ ಅಂದ್ರೆ ನಾಳೆ ಮದ್ವೆಅಂತ ಅಂದರೆ, ಯಾರಿಗೂ ಏನು ಹೇಳದೆ ರೂಂ ಖಾಲಿ ಮಾಡಿದ್ವಿ. ಮದ್ವಿ ಆಯ್ತು. ಸಿಕ್ಕಾಪಟ್ಟೆ ಆಸ್ತಿ ಇತ್ತು ಯಾವುದಕ್ಕೆ ಬರುತ್ತೆ. ಮನಸಿಗೆ ನೆಮ್ಮದಿ ಇಲ್ಲದ ಮೇಲೆ ಮತ್ತೆ ಹದಿನೈದು ದಿನದ ಮೇಲೆ ಡ್ಯೂಟಿಗೆ ಸೇರಸದ್ರೂ. ಅವರೆ ಎಲ್ಲಾ ರೆಕಮೆಂಡಿತ್ತು. ಅದಕೆ ಸರಿಹೊಯ್ತು. ಮದ್ವನೆ ಬೇಡಾ ಅಂದವರು ನನ್ನ

ಮದ್ವೆ ಮಾಡಿಕೊಂಡರು ಒಂದು ವರ್ಷ ಏನೋ ಜೊತಿಗಿದ್ವಿ, ಈಗ ಇಬ್ಬರೂ ಬೇರೆ ಆಗಿದ್ವೀವಿ ಸುಮಾರು ವರ್ಷವಾಯ್ತು ಬೇರೆಯಾಗಿ ಕಾರಣ ಒಂದಿಲ್ಲ. ಸಾವರ ಇದಾವೆ. ಇಲ್ಲ ಅಮ್ಮ ಒಂದ ವರ್ಷದಲ್ಲೆ (ಇದೆಲ್ಲ ಆಗಿ) ಸತ್ತುಹೋದರು.

ನನ್ ಜೀವನ ಹಾಳಾಯ್ತು ಅಂತ ಯಾರೂ ಅನ್ನಲ್ಲ. ನಾನು ಪ್ರೀತಿಸಿದವನ ಜೀವನ ಹಾಳಾಯ್ತು ಅಂತಾರೆ. ನನ್ನನೊಬ್ಬರು ಇಷ್ಟ ಪಟ್ಟಿದ್ರು ನಂಗೂ ಮನಸಿತ್ತು. ಕಾಲೇಜ್ ಡೇಸ್‌ನಲ್ಲೆ. ನಾವಿಬ್ಬರೂ ಇಷ್ಟಪಟ್ಟೆ ಪೋಲಿಸ್ ಕೆಲಸಕ್ಕೆ ಅಂದರೆ ಲೈಫ್ ಸೆಕ್ಯೂರಿಟಿಗೆ ಕೆಲಸಕ ಸೇರಿದ್ವಿ. ನನ್ನ ಮೇಲೆ ಪ್ರಾಣನೇ ಇತ್ತು. ಆದರೆ ಏನ್ ಮಾಡೋದು ವಿಧಿ ಹೀಗಿದೆ. ನಾವಿಬ್ಬರೂ ತುಂಬಾ ಚೆನ್ನಾಗಿ ಎಲ್ಲಾದ್ರಲ್ಲೂ ತುಂಬಾ ಫ್ರಿಯಾಗಿದ್ದಿವಿ ಎಲ್ಲೂ ಅಡೆ ತಡೆಯಿರಲಿಲ್ಲ. ನಮ್ಮ ವಿಷಯ ಇನ್ನೆನು ಮದವೆ ಹಂತ ತಲಪ್ತಿತ್ತು. ಆಗ ಇಷ್ಟೆಲ್ಲಾ ಆಯ್ತು ಜಿಲ್ಲೆಗೆ ಗೊತ್ತಾಗೋಷ್ಟು ಮಟ್ಟಿಗೆ ಮಾಡದಿರೋ ತಪ್ಪಿಗೆ ಮಾನ ಹೊಯ್ತು. ಅಂದ್ರು ಬೇರೆ ದಾರಿಯಿಲ್ಲ ಇವರನ್ನು ಮದ್ವೆ ಆದೆ ಆಸ್ತಿಗಾಗಿ ಅವನನ್ನು ಬಿಟ್ಟೆ ಅಂತಾರೆ, ಅವನೊಂದು ನಮನಿ ಹುಚ್ಚನ ತರಹ ಆಗಿದ್ದಾನೆ ಡ್ಯೂಟಿ ಮಾಡ್ತಾನೆ ಬೇರೆ ಎಲ್ಲೊ, ಮದ್ವೆ ಆಗಿಲ್ಲ ನೆನಪು ಮಾಡಕೊಂಡರೆ ಸಂಕಟ ಆಗುತ್ತೆ, ಒಂಟಿ ಬದುಕು ನನ್ನ ಅದೃಷ್ಟದಲ್ಲಿದೆ ಅಷ್ಟೆ.

**ಪ್ರಕರಣ : ೦೭**

ಹೆಸರು : ರತ್ನಮ್ಮ

ಜಾತಿ : ಎಸ್.ಟಿ.

ವಯಸ್ಸು : ೩೫

ವಿದ್ಯಾರ್ಹತೆ : ಎಸ್.ಎಸ್.ಎಲ್.ಸಿ.

ಹುದ್ದೆ : ಪಿ.ಸಿ.

ನಮಸ್ಕಾರಮ್ಮ ನನ್ನ ಹೆಸರು ರತ್ನಮ್ಮ ನಮಗ್ ನೋಡಿ ಏನ್ ಖುಷಿಯಾಗುತ್ತಮ್ಮ ಸುಮ್ನಾರ ಈ ಕಿರಿ ಕಿರಿ ಕೆಲಸಕ ಬಂದಿವಿ. ನಿಮ್ಮಂಗ ಆರಾಮ ಇರಕಾಗಲ್ಲಮ್ಮ. ೧೫ ವರ್ಷ ಆಯ್ತು ಈ ಕೆಲಸಕ ಬಂದು. ಇಲ್ಲ ಯಾವ ಪೊಸ್ಟ್ ಆಕಿಲ್ಲ, ಏನಿಲ್ಲ. ಕರದಕೊಟ್ಟರ ಅವಾಗೆಲ್ಲ ಈ ಕೆಲಸಕ್ಕೆ ಹೆಣ್ಮಕ್ಕಳ ಬರದೇ ಕಡಿಮೆ ಹಂಗಾಗಿ, ಎಂಪ್ಲಾಯ್‌ಮೆಂಟ್‌ನಿಂದ ಬಂದಿತ್ತು. ಈಗಿನ ಕಾಲಾ ಆದ್ರ ನಮಗೆಲ್ಲಿ ಕೆಲಸ ಸಿಗ್ತಿತ್ತವ್ವ ಎನಿಲ್ಲಂದ್ರ ಅಂದಾಜು ಮಾಡಕು ಆಗತಿರಲಿಲ್ಲ. ನನಗೆ ಮನಸ ಇರಲಿಲ್ಲ. ಈ ಕೆಲಸಕ ಬರದು ಭಾಳ ಹೆದರಿಕೆ ಆತಿತ್ತು ಶಾಲಿ ಬಿಟ್ರ ಮನಿಲಿಂದ ಹೊರಗ ಬಂದಕೆಲ್ಲ ನಾನು ಅಷ್ಟ ಪ್ರೀತಿಯಿಂದ ಬೆಳಸ್ಯಾರ ನನಗೆ ೧೦ ಮಿನಟ್ ತಡ ಆಯ್ತಂದ್ರ ಶಾಲಿಗೆ ಹುಡಕಂಡ್ ಬರಾದು ನಮ್ಮಪ್ಪ. ಹೆಣ್ಮಕ್ಕಳ ಹೊರಗೆ ಕಾಲಿಟ್ರ ಯಾವಾಗ ಏನಾತದೋ ಏನೊ? ಹೆಣ್ಮಕ್ಕಳಂದ್ರ ಸೀರಿ ಸೆರನಾಗ ಬೆಂಕಿ ಕೆಂಡ ಕಟಿಕೊಂಡಂಗ ಅಂತ ಬಹಳ ಜ್ಯಾಕಿ ಮಾಡ್ತಿದ್ದರು. ಆಗ ಹೆಣ್ಮಕ್ಕಳಿಗಿ ಆಟ್ ಮಾನ ಮರ್ಯಾದಿ ಕೊಡದಕ ಕಾಲಕ್ಕ ತಕ್ಕಂಗ ಮಳಿ, ಬೆಳಿ, ಎಲ್ಲಾ ಇರುತ್ತಿತ್ತು. ಈಗೆನಾದವಾ ಎಲ್ಲಾ ಕಾಲ ಕೆಟ್ಟ ಹೋಗ್ಯಾದ ಹೆಣ್ಣ- ಗಂಡ ಒಂದೆ ನಮನ್ ತಿರಗತಾವ ಅದು ಚಲೋ ಅಲ್ಲ. ಶಾಲಿಗಿ ಹೋಗಲಿ,

ನೌಕರಿ ಮಾಡಲಿ ಬ್ಯಾಡನಲ್ಲ ಆದರೂ ತಗ್ಗಿ ಬಗ್ಗಿ ಮೈತುಂಬಾ ಬಟ್ಟಿ, ಮಾನ-ಮರ್ಯಾದಿ, ಅಂತ ನಯ-ವಿನಯದಿಂದ ಹೆಣ್ಣಿದ್ರ ಬೆಸಿ.

ಅದರಾಗ ಹಿಂಗೆಲ್ಲಾ ಭಾಳ ಹುಶಾರ್ ಇರಬೇಕು. ಮೊದಲೆ ಇದು ಗಂಡಸ್ರಿಗಿ ಒಗ್ಗರಲಾರದ ಕೆಲಸ, ನಮ್ಮಂತ ಹೆಂಗಸರೆನ್ ದಕ್ಕತಿವಿ ಅನಕಂಡೆ ಕೆಸಲಕ ಬಂದೆ, ಆದ್ರೆ ಮಾಡಿದ್ರಾತು ಇಲ್ಲಂದ್ರ ಬಿಟ್ರ ಆಯ್ತು ಅಂತನೆ ಬಂದ್ ಸೇರಿದೆ. ಮನ್ಯಾಗ ನಮಣತಮ್ಮಂದಿರನು ಅದೇನು ಬೇಶಿ, ಪೋಲಿಸ್ ಕೆಲಸಾ ಅಂತದೇನ್ ಬ್ಯಾಡ, ಟೀಚರ್ ಆದರೆ ಹೋಗಲಿ ಇಲ್ಲಂದ್ರೆ ಖರ್ಚಿಗೆ ಕಮ್ ಅಂದ್ರೆ ನಾವಿಬ್ರೂ ಕೊಡ್ತಿವಿ ಮನ್ಯಾಗಿರದ ಬೇಶಿ, ನಮ್ಮತ್ತಿಗೂ ಇದೇ ಆಶ್ಯಾ ಇತ್ತು ನಮ್ಮ ಮಾಂವ ದೇವರು ಮನಶ್ಯಾರು ನೀ ಹೆಂಗ ತಿಳತದ ಹಂಗೆ ಮಾಡವಾ ಅಂದು ಸುಮ್ಮನಾದ್ರು. ಗಂಡಂದೆನಿಲ್ಲ ನಾ ಅದಿನಿ ಹಿಂದ ನೀ ಮಾಡಂದ್ರು. ಒಪಗೊಂಡೆ ಆದರೂ ಇಷ್ಟೆಲ್ಲಾ ಹ್ಞೂಂ ಅಂದವರು ಯಾರರ ಮಾತಾಡಿದ್ರ ನನಗೂಡ, ಹೊರಗ ಅಂದ್ರ ಜಗಳ ಮಾಡ್ತಿದ್ರು.

ಮೊದಲಿನಿಂದ ಇಲ್ಲಿವರೆಗೂ ಕೆಲಸಾಮಾಡಿದರಲ್ಲ ಸಾಕಷ್ಟು ವ್ಯತ್ಯಾಸ ಆದ, ಹ್ಞೂಂ ಯಾವಾಗಲೂ ಗಂಡಸ್ರಿಗೆ ಹೆಂಗಸ್ರಿಗೆ ಸರಿಸಮ ಕೆಲಸ ಮಾಡ್ಸತಾರಂದ್ರೂನು ಭಾಳ ಕಷ್ಟದ ಕೆಲಸಗಳಿಗೆ ಹೆಣ್ಮಕ್ಕಳಿಗೆ ಕಳಸಲ್ಲ. ಏನಾರ ಗಲಾಟೆ ಅದು ಇದು ಮಣ್ಣ ಸುಡಗಾಡ ಆದ್ರ, ಅಲ್ಲಿ ಹೆಣ್ಮಕ್ಕಳ ಇದ್ರಂದ್ರ ಕಂಪೆಲ್‌ಸರಿ ಹೊಗ್ಲೆಬೇಕು ಹಂಗೆ ಮ್ಯಾಲಿನ ಆಫಿಸಿರ್ ಹೇಳಿದ್ರ ಹೋಗಬೇಕೇಷ್ಟ.

ಯಾವಗಲಿಂದನೂ ನಮಗೆ ಗಂಡ್ಮಕ್ಕಳ ಸರಿಸರಿ ಕೆಲಸಕ ತಗೊಂಡ್ರೂನು, ಇಲ್ಲಿ ಮಾಡಲಿಕ್ಕೇಳೊ ಕೆಲಸಂದ್ರ ಹೆಣ್ಮಕ್ಕಳ ಕಂಪ್ಲೇಟಗಳು ಬಂದ್ರ, ಹೆಣ್ಮಕ್ಕಳಿಗಿ ಅರೆಸ್ಟ್ ಮಾಡದಿತ್ತಂದ್ರ ಅವರಿಗಿ ಲಾಕಪ್ ರಾತ್ರಿ ಇಟ್ಟಗಂದ್ರ ಇರಬೇಕು. ನಾವು ಟೈಪ್ ಮಾಡೋದು, ಬರಕೊಳೊದು, ಕೆಲವೊಂದು ಸಲ ಫೋನ್ ಅಟೆಂಡ ಮಾಡೊದ ಕೆಲಸ ಚಂದ ಮಾಡ್ತಿವಿ, ತಾಳ್ಮೆಯಿಂದಂತ, ಅವೇ ಕೆಲಸ ಹೇಳ್ತಾರ. ಹೌದು ನಮಗೆ ಹೆಣ್ಮಕ್ಕಳಿಗೆ ಇದೇ ಸರಿಯಾದ ಕೆಲಸ, ಹೊರಗೆಲ್ಲ ಹೋಗಾದ, ಮಂದ್ಯಾಗ ನಿಂದ್ರದು ಕಷ್ಟ ಈಗಿನವರು ಮಾಡ್ತಾರ ನಮಗೂ ಈಗಿಗೆ ಹಾಕ್ತಾರ ಜಾಸ್ತಿ ಇಲ್ಲ.

ಹೊರಗೆ ಹೊಗಲೆ ಬೇಕಂದ್ರೆ ಇಲ್ಲ ಅನ್ನಾಕ ಬರಲ್ಲ. ಅಂದ್ರ ಮನಿಗಿಕಳಸ್ತಾರ ಏನೇ ಆದರೂ ಹೆಣ್ಮಕ್ಕಳು ಆದಟ್ ಸ್ಟೇಶನ್‌ದಾಗೆ ಕೆಲಸ ಮಾಡೋದು ಭಾಳ ಬೇಶಿ ಆಮೇಲೆ ಮಕ್ಕಳ-ಮರಿ, ಗಂಡ, ಸಂಸಾರ ಬಿಟ್ಟ ರಾತ್ರಿಯಲ್ಲಾ ಹೋಗದು, ಬೆಳಿಗ್ಗೆ ಮನಿಗ ಬಂದ್ರನು ನಿದ್ದಿ ಆಗಲ್ಲ. ಅದು ಕೆಲಸ ಎಲ್ಲಾ ಬ್ಯಾಸರ ಆಗ್ತದ. ಸಂಟ್ರಿ ಡ್ಯೂಟಿ ಆದ್ರೆ ರಾತ್ರಿ ಎಂಟ ಹತ್ತಕ್ಕ. ಮನಿಗಿ ಬರ್ತಿವಿ ಆಯ್ತು. ಅಡಿಗೆ ಬೆಳಗ್ಗೆ ಬೇಗ ಎದ್ದು ಮಾಡಿ ಬರ್ತಿದ್ದೆ. ಈಗ ಮಕ್ಕಳು ದೊಡ್ಡೊರವರಾದ್ರು ಎಲ್ಲಾ ನಿಭಾಯಿಸ್ತಾರ ಮೊದಲಿಂದ ಟೈ, ಹಿಡದ ಚಪ್ಪಲಿತನ ಹೊಂದಸಿ ಹೇಳಿಟ್ಟ ಬರಬೇಕು. ಹೊದ ಮ್ಯಾಲೆ ಕಸತೊಟ್ಟಿ ಆಗಿರ್ತದ ಮನಿ. ಸುಧಾರಿಸಬಹುದು. ಅವರೆಷ್ಟೆ ಮಡಿದ್ರು ನಾ ಮಾಡ್ಡದಂಗಾಗಲ್ಲ. ಈಗಾದ್ರ ಹರೆಯದ ಹೆಣ್ಮಕ್ಕಳು ಮನೆಲಿರ್ತಾರೆ ನಾವು ರಾತ್ರಿ-ರಾತ್ರಿ ಬಿಟ್ಟು ಹೋದರ ಭಯ, ಕಾಲ ಸರಿಯಿಲ್ಲ. ಅತ್ತಿ ಮಾವ ಸರಿಹ್ಯಾದ್ರು ಮನಿ ಹತ್ತರ ಯಾರಿರಲ್ಲ. ಗಂಡ ಹುಡಗರದೇನು ಚಿಂತಿಯಿಲ್ಲ ಎಲ್ಲೆರ ಬೆಳಿತಾವ.

ಓದಿಸಿನಿ ಅಂಗನವಾಡಿ ಕೆಲಸ ಸಿಕ್ಕದ ಒಬ್ಬಕಿಗಿ, ಇನ್ನೊಬಿಕಿ ಓದಿಲ್ಲ ಮನ್ಯಾಗ ಇರ್ತಾಳೆ ಗಂಡಮಕ್ಕಳು ಓದ್ತಿದ್ದಾರೆ ಇನ್ನು. ಇಂಜಿನಿಯರ್ ಮಾಡಬೇಕು ಅಂತ, ಒಬ್ಬ ಡಾಕ್ಟರ್ ಓದಲಕತನ. ಈಗೆಲ್ಲಾ ಬಹಳ ಕಷ್ಟ ಆಗ್ತಾದ, ದಿನಕ್ಕ ಒಂದು ತರಹ ರೂಲ್ಸ್ ಹೇಳ್ತಾರ ಹೊಸದಾಗಿ ಬಂದ ಹುಡಗೆರು, ಅದು ಚಲುವು ಇದ್ದರ, ಜೋರಿದ್ರ ಮುಗಿತು. ಅವರಿಗಿ ಬಂದದ ಸಮಸ್ಯೆ ಅಂದಾಂಗ, ಸಾಹೇಬ್ರು ಚಲೋ ಇರಬೇಕು. ಮೊದಲಿನ ಸಾಹೇಬ್ರು ಬಂದರ ಗಡಗಡ ನಡುಕ ಬರ್ತಿತ್ತು. ಈಗಿವರು ಸಣ್ಣವರಿರ್ತಾರೆ, ನನಗ ಬಾರೆ, ಹೋಗೆ ಅಂತೆಲ್ಲಾ ಮಾತಾಡ್ತಾರ. ಏನು ಅನ್ನಿಕಾಗಲ್ಲ. ಪ್ರಮೋಷನ್ ಬಂದಿತ್ತು ನಾ ಯಾವುದು ಬ್ಯಾಡಂತ್ಹೇಳಿ ಇಷ್ಟರಾಗೆ ಇದ್ದಿನಿ. ಏನಿಲ್ಲ ವಯಸ್ಸಾದ್ರೇನು ಮುದುಕಿಯಿದ್ರೆನ್, ಅವರೆಲ್ಲ ಹೆಣ್ಣ ಅಂದ್ರೆ ಬಾಯಿಬಿಡ್ತಾರ ಅದಕೆ ಪೋಲಿಸರಂದ್ರ ಸ್ವಲ್ಪರ ವ್ಯಾಲ್ಯು ಉಳಿದಿಲ್ಲ. ಈಗ ನಮ್ಮಣ್ಣ ರಾಜಕಿದಾಗ ಅದಾರ ಝೆಡ್.ಪಿ ದಾಗ ಅಧ್ಯಕ್ಷ ಹಂಗಾಗಿ ಯಾರಾದರೂ ಏನರ ಅಂದ್ರೆ ನನಗೆ ತಡವಿದ್ರ ತಿಥಿನ ಮಾಡ್ತಾರ ಅದಕೆ ಸುಮ್ಮನಾಗಿ ನಮ್ಮಜೊತಿ ಛಂದಾಗೆ ಇರ್ತರ.

ಒಂದ್ಸಲ ಬಂದು ಸ್ಟೇಶನ್‌ನಾಗ ಎಲ್ಲಿರಿಗಿ ಭೇಟಿ ಮಾಡಿ ಮಾತಾಡ್ಸಿ ಹೋದರು. ಏನಾದ್ರು ಸಣ್ಣ ಪುಟ್ಟ ಸಮಸ್ಯೆಯಿದ್ರರೂ ಆಫಿಸಿಗೆ ಫೋನ್‌ಮಾಡಿ ಸರಿಮಾಡ್ತಾನ. ಎಲ್ಲರೂ ಅಂತಾರ ಅಣ್ಣನ ಧಿಮಾಕನಾಗ ಮೆರಿತಾಳ, ಮನಸಿನ ಬಂದಂಗ ರಜಾ ಮಾಡ್ತಾಳ, ಬೇಕಾದ ಡ್ಯೂಟಿ ಹಾಕೊತಾರಂತಾರ. ನಾ ಯಾವುದು ತೆಲಿಗಿ ತಗೊಲ್ಲ. ಆರಾಮಿದ್ದಿನಿ ಈ ಕೆಲಸದಾಗ.

ಮೊದಲಿಂದನೂ ದುಡಿದೆದ್ದಲ್ಲ ನನಗಂಡನ ಕೈದಾಗ ಕೊಡೋದು. ಎದಕರ ಖರ್ಚಿಗಿ ಬೇಕಂದ್ರ ಅವರೆ ಕೊಡ್ತಾರೆ ಹೆಣ್ಮಕ್ಕಳದು ಖರ್ಚರ ಏನಿರದಂತಾರ, ಹಂಗಂದ್ರ ನಮಗ ಕೆಲಸಕ ಕಳಿಸಿದ್ದೆ, ಮನಿಗಿ ಅನುಕೂಲ ಆಗಲಿ ಅಂತ, ತಿಂಗಳ ಕೊನಿಗಿ ಸಂಬಳ ಬಂದಿದ್ದು ಎಷ್ಟು ಉಳಿತಂತ್ ಕೇಳಿದ್ರು ಜಗಳಾ ಮಾಡ್ತಾರ. ನಾ ಏನು ಕೇಳಲ್ಲ ದುಡಿದಿದ್ದು ತಗಂಡ್ಹೋಗಿ ಕೊಡದು, ಅವರನು ಏನು ಹಾಳ ಮಾಡಲ್ಲ. ಕೇಳಿದ್ದು ತರ್ತಾರ. ಅದು ಅವರಿಗಿ ಅರ್ಜಂಟಾದ ಅನಸಬೇಕು, ಸುಮ್‌ಸುಮ್‌ನೆ ಫ್ಯಾಶನ್‌ಗಂತ ಕೇಳಿದ್ರ ಕೊಡಲ್ಲ. ಯಾರಿಗರ ಇಟಗೊಂಡಿದೇನ ಅಂತ ಕೇಳ್ತಾರ, ಇಲ್ಲದ ಅಪವಾದ ಯಾಕ ಬೇಕು. ದುಡಿಬೇಕು, ಕೂಡಬೇಕು ಅಷ್ಟೇ. ಮನ್ಯಾಗ ನನ್ನ ಹೆಣ್ಣ ಹುಡಗೆರಿಗೂ ಅಷ್ಟೇ ಹಂಗೆ ಬೆಳೆಸ್ಯಾರ ಮನಿದು ಲೆಕ್ಕ ಪತ್ರ ಎಲ್ಲಾ ನನ್ನಿಬ್ಬರ ಗಂಡ ಮಕ್ಕಳಿಗಿ, ಅವರಪ್ಪಗೆ ಗೊತ್ತಿರ್ತದ. ಒಮ್ಮಿ ಹಿಂಗೆ ಆಗಿತ್ತು ಸಮಸ್ಯೆ, ಆವಾಗ ನಮ್ಮಣ್ಣನು ರಾಜಕೀಗಿ ಇಳದಿರಲಿಲ್ಲ. ಡ್ಯೂಟಿಗಿ ಹೋಗಿದ್ದೆ, ಬರುವಾಗ ಹಿಂಗ ಒಂದು ಹುಡುಗರ ಗುಂಪು ಬೆನ್ನಹತ್ತಿತ್ತು. ರಾತ್ರಿ ಹತ್ತಾಗಿತ್ತು. ಇವರು ಊರಾಗಿರಲಿಲ್ಲ. ಹತ್ತು ರೂಪಾಯಿ ಅಷ್ಟೇ ಇತ್ತು. ಎಷ್ಟತ್ತಿದ್ದರೂ ಬಸ್ಸಿಗೆ ಮನಿಗಿ ಬರಬೇಕು. ಫೋನ್‌ನಾಗನು ಹೇಳಬೇಕಂದ್ರ ದುಡ್ಡ ಇರಲಿಲ್ಲ. ಹೆದರಿಸತ್ತಿದ್ದೆ. ಹಂಗೆ ದೇವರ ದೊಡ್ಡಾವದಾನ ಮನಿಗಿ ಬಂದು ಸೇರಿದೆ ಏನ್ ಮಾಡ್ತಿದಿ ಹಿಂಗೆ ಬಾಳ್ವಿ.

ಪ್ರಕರಣ : ೦೮

ಹೆಸರು : ರಾಚಮ್ಮ

ವಯಸ್ಸು : ೫೨

ಜಾತಿ : ಕುರುಬರು

ಶಿಕ್ಷಣ : ೭ನೇ ತರಗತಿ

ಹುದ್ದೆ : ಪಿ.ಸಿ.

ಮೂವತ್ತೊಂದ್ ವರಸದಲಿಂದ ಈ ಕೆಲಸಾ ಮಾಡ್ತಿದ್ದಿನಿ. ಮನಿಲಿಂದ ಕರಸಿ ಕೊಟ್ರು ಕೆಲಸ. ಆವಾಗಿನ ಎಸ್.ಐ. ಸಾಹೇಬ್ರು. ಮದವಿ ಆಗಿಲ್ಲ. ಏನೊ ಒಂದಾತು ಅದಕ ಮದವಿ ಮಾಡಿಕೊಬೇಕು ಅನ್ಸಿಲ್ಲ. ಹಂಗೆ ಇದಿವಿ. ಬಂಧು ಬಳಗ ಎಲ್ಲರ ಅದಾರ ತಲ್ಯಾಗ ಎಸ್ ಕೂದಲೆಳಿ ಅದಾವಲ್ಲ ಆಸು ನಂಟರದಾರ, ನನ್ನಾಸರಕೆ ಒಬ್ರಿಲ್ಲ ರೊಕ್ಕ-ರೂಪೈ ಬೇಕಂದ್ರ ಬರ್ತಾರ. ಮೊದಲೆಲ್ಲ ಕೊಡ್ತಿದ್ದೆ. ಈಗ ಯಾರಿಗೆ ಕೊಡಲ್ಲ ನನಗೆ ನನ್ನ ಮಗ್ಗಗ ಸಾಲಬರೋದಿಲ್ಲ. ಮಗ ಒಬ್ಬನ ಅದಾನ. ಎರಡ ವರ್ಷಯಿತು ಇದ ಪೋಲಿಸ್ ಕೆಲಸಕ ಸೆರ್ರ್ಯಾನ. ಭಾಳೆ ಓದ್ಯಾನ ಆದರ ಎಲ್ಲಿ ಕೆಲಸ ಸಿಗ್ತದ ಈ ದಿನಕ. ಇರಲಿ ಅಂತ ಸೇರಿಸಿವಿ ಅವರಿವರಗೆ ಹೇಳಿ, ನಾಕಕಡಿ ತಿರಿಗ್ಯಾಡಿದ ಮ್ಯಾಲ ಆಯ್ತು.

ಎಲ್ಲಾ ಕಷ್ಟನೇ ಆವಾಗ ಒಂತಾರ ಇದ್ದರ ಈಗೊಂಥರಾ ಅದ. ಸಮಸ್ಯೆ ಭಾಳ ಇರ್ತಾವ. ಈ ಕೆಲಸದಾಗ ಒಂದು ತರ ಸರ್ಕಾರ ನಮ್ದು ಅದಕ ಪುರಸೊತ್ತಿರಲ್ಲ. ನೆಮ್ಮದಿರಲ್ಲ ಕತ್ತಿಗೊಳು ದುಡಮಿ ಇದ್ದಂಗ ಇದು. ಕರದ್ರೆ ಓಡದೆ, ಕಟ್ಟಿದರ ಒಂದು ಕಡಿ ನಿಲ್ಲದೆ. ಹಂಗೆ ಯಾವಾಗಲಿಂದೆನೂ ಅವಾಗೆಲ್ಲ ಹೆಣ್ಮಕ್ಕಳಂತಲ್ಲ. ಎಲ್ಲಾ ಪೋಲಿಸರಂದ್ರೆ ಜನರ ಅಂಜಿಕಿತ್ತು ಅಂತದೆಲ್ಲಾ ಈಗ ಇಲ್ಲ. ಯಾ ಪೋಲಿಸ್ ಏನ್‌ಮಾಡ್ತಾನ. ಅವನಿಗೆ ನಾವು ಮಾಡಂಗಿದ್ದಿವಿ ನಾಕ ದುಡ್ಡು ಬಿಸಾಕಿದ್ರೆ ಆಯ್ತು. ಎಲ್ಲಿಂದಲ್ಲೆ ತಣ್ಣಗಾತರ ಅಂತರ. ಹಂಗ್ಯಾಗದನು ಎಲ್ಲಾ, ಯಾರಿಲ್ಲ ತಿನಲಾರದವರು ಅದಾರ ನೂರಕೊಬ್ಬರು, ಅವರಿಗಿರಷ್ಟು ಕಷ್ಟ ಯಾರಿಗಿಲ್ಲ. ಊರಿಂದ ಊರಿಗೆ ಎತ್ತಹಾಕ್ತಿರ್ತರ ಹೋಗುತಿರತರ. ನಡಿತದ ಅವೆಲ್ಲಾ ಇಲ್ಲಂದ್ರ ಪೋಲಿಸ ಇಲಾಖೆನೆ ಅನ್ನಲ್ಲೆನೊ ಇದಕ ಅಲಾ!

ಐದ್ ನಿಮಿಷ ಹೆಣ್ಣಿನ ಜೀವನ ಮುಗದ ಹೊಗಲಾಕ, ಎಲ್ಲಾ ಮುಗಿತನಬೇಕು. ಗುಂಡಗಿ ಗಟ್ಟಿಗಿದ್ದರೆ ಬದಕತಾಳೆ, ಇಲ್ಲಂದ್ರ ಸಾಯ್ತಳೆ. ನಾ ಸಾಯಲಿಲ್ಲ. ಅದಕೆ ಇವತ್ತೆ ಇಲ್ಲಿ ಕುಂತು ಮಾತೇಳಾಕೇತಿನಿ. ಆವಾಗೆಲ್ಲ ಮನಿಲಿಂದ ಹೆಣ್ಣ ಹೊರಗೆ ಹೊದ್ಲಂದ್ರ ಅದು ಇಂಥಾ ಕೆಲಸಕ ಹೊದ್ಲಂದ್ರ ಕೆಟ್ಟಾಳಂತೆ ಪಟ್ಟಬರ್ತದ. ಈಗನೂ ಹಂಗೆ ಅದ ಅಂಗೆ ನಡೆದಾವ ಕೂಡನು. ಯಾ ಪೋಲಿಸ ಹೆಣ್ಮಗಳನು ಮಾನವೆಂತ್ಯಾಗಿ ಉಳಿದಿಲ್ಲಂತಾರ ಅಂಗೆ ಇಲ್ಲಿ ಪರಿಸ್ಥಿತಿನು ಅದಾ. ಹೊಸದಾಗಿ ಬಂದಳಂದ್ರ ಮುಗಿತು ಹದ್ದ ಕಾಯ್ದಂಗ ಕಾಯ್ತಿರತಾರೆ. ಮುಲಾಜಿಲದ ಹೆಳ್ತಾರ. ಅವರು ಬೇಕಂದ್ರ ಬೇಕೆ ಸಿಗತನಾ ಬಿಡಲ್ಲ. ಒಂದು ಹಿಂದ ಮನಿತನ ಜೋರ ಇರಬೇಕು. ಯಾರರ

ಇದೆ ಡಿಪಾರ್ಟ್‌ಮೆಂಟನಾಗ ಇರಬೇಕು, ರಾಜಕಿದಾಗ ಇರಬೇಕ, ಇಲ್ಲಾ ರೊಕ್ಕ-ರೂಪೈ ಇದ್ದ ಶ್ರೀಮಂತರಿರಬೇಕು. ಆದರೆ ಹೆಚ್ಚಾನು ಹೆಚ್ಚು ಇಂಥಾ ಕೆಲಸಕ ಇಷ್ಟಪಟ್ಟು ಬರಲ್ಲಂತ ನನಗೆ ಅನಸಿದ್ದು.

ಇಲ್ಲ ಮದೇವಿ ಆಗಿದ್ದಿಲ್ಲ. ಬಡತಾನ ಇನ್ನೊಂದ್ ಸ್ವಲ್ಪ ದಿನಾಬಿಟ್ಟು ಮಾಡಬೇಕು ಅಂತ ಹೊಲ ಅಡ ಇಡಕೆ ಓಡಾಡಕತಿದ್ರು ನಮ್ಮ ತಂದಿ, ಅವಾಗೆ ಈ ಕೆಲಸ ಸಿಕ್ಕು. ಸುಮ್ಮನಾದರು ಸ್ವಲ್ಪ ದುಡಕೋಲೆಂತ, ಆಮೇಲ ಅವರ ಉಳಿಲಿಲ್ಲ. ತಪ್ಪಿ ಬಂದಿನಿ ಅನಸ್ತದ ಬಾಳ್ವೆಯಲ್ಲ ಹಾಳ ಮಾಡಿಕೊಳಾದ ಬರದಿತ್ತೆನು ಹಣೆಬರದಾಗ ಅಂಗೆ ಆಯ್ತು ಎಲ್ಲಾ. ಮದ್ವೆ ಆಗದೆ ಮಗಾ ಇದಾನೆ ಅಂದ್ರೆ.... ದತ್ತು ತೆಗೊಂಡಿರಬಹುದು ಅಲ್ವಾ! ಇಲ್ಲ ಅಂತದೆಂತದು ಮಾಡಿಲ್ಲ. ಧೈರ್ಯವಾಗಿ ಏಳ್ತಿನಿ.

ಕಣ್ತುಂಬಾ ನೀರಾಡ್ತಿದ್ದು ಹತ್ತು ನಿಮಿಷ ಮೌನವಾಗಿದ್ದು........

ಅವತ್ತಿನಂದಿನಾ ನನಗೆ ಮನಿವರಗೂ ಕೆಲಸಾ ಹುಡುಕೊಂಡ ಬಂದಿದ್ದು ಅದೃಷ್ಟಾಂತ, ಮನ್ಯಾಗ ಯಾರ ಮಾತು ಕೇಳಲಾರದಂಗ ಜಿದ್ದು ಮಾಡಿ ಕೆಲಸಕ ಸೇರಿದೆ ಅಸ್ಟಿಷ್ಟು ಸಂತಸಾಗಿರಲಿಲ್ಲ ನನಗೆ, ನಮ್ಮ ಇಡೀ ಮನಿತನದಾಗ ಸರ್ಕಾರಿ ಕೆಲಸ ಸಿಕ್ಕಿದ್ದು ನನಗೊಬ್ಬಕಿಗೆ ಉಳಿದವರ‍್ಯಾರು ಹೊಲದ ಕೆಲಸ ಬಿಟ್ಟು ಮತ್ತೊಂದು ಮಾಡ್ಲಿಲ್ಲ. ಎರಡು ವರ್ಷ ಭಾಳ ಚಲೊ ಕೆಲಸನು ಮಾಡದೆ ಆವಗಿನ ಸಾಹೇಬ್ರು ಹಿಂದ ಹುಲಿಯಿದ್ದಂಗ ಇದ್ದರು, ಅವರಿಗೆ ಆರಾಮ ಇತ್ತಿರಲಿಲ್ಲ. ಅಂದ್ರೆ ಅವರ ಇಲ್ಲಿಯವರಲ್ಲಿ ಬ್ಯಾರೆ ದೂರದ ಜಿಲ್ಲಾದವರು. ಟ್ರಾನ್ಸ್‌ಪರ್ ಮಾಡಸಕಂಡು ಹ್ವಾದರು. ಆಮೇಲೆ ಇಲ್ಲಿ ಬ್ಯಾರೆಯೊಬ್ಬರು ಕಿರಾತಕ ಮನಷ್ಯಾಗೆ ಹಾಕಿದ್ರು, ಹೆಣ್ಣಂದ್ರೆ ಜೊಲ್ಲು ಸುರಿಸೊ ನಾಯಿ ಅದು ಭಾಳ ತಾಪ ಆಗ್ತದ ನನಗೆ ನೆನಪಾದ್ರ, ಎದ್ಯಾಗ ಬೆಂಕಿ ಬಿದ್ದಂಗ ಆಗತದ. ಬಂದ ಮೂರ ತಿಂಗಳದಾಗ ನಮ್ಮಲಿಂದ ಮನಿ ಕೆಲಸ ಎಲ್ಲಾ ಮಾಡಕ್ಕಚ್ಚಿದ. ಅವನ ಬಟ್ಟೆ, ಕುಡದ ಸೆರಿ ಬಾಟಲಿ ಎಲ್ಲಾ ಎತ್ತಾಕತಿದ್ವಿ. ಅಂದ್ರುನ ನಮಗ ಇಲ್ಲಿ ಕಷ್ಟ ಕಮ್ಮಿ ಇರ‍್ತಿತು. ಒಲ್ಲಂದವರಿಗೆ ಮನಿಗೆ ಕಳಸ್ಯಾನ ಅಂಥ ಮನುಷ್ಯಾ. ಅದಕೆ ದಿನಾ ಆಫಿಸ್ ಟೇಮ್‌ನಾಗ ಅವರ ಮನಿ ಕಸ ಮುಸುರಿ ಎಲ್ಲಾ ಮಾಡ್ತಿದ್ದೆ. ಒಂದ್ಸಲ ಹಿಂಗೆ ನನ್ನ ಮದ್ವಿಗಂಡು ನೋಡಾಕ ಬರವರಿದ್ರು ಸ್ವಲ್ಪ ಬೇಗ ಹೊಗಬೇಕು ಅಂತೇಳಿದೆ ಎರಡು ದಿನಾ ಮೊದ್ಲೆ ಹೇಳಿದ್ರೆ ಆಯ್ತುಂತ ಹೇಳಿ. ಆವತ್ತೆ ಹೊಗದಿನಾ ಹೊಸ ಸೀರಿ, ಹೂವ, ಕುಂಕುಮ, ಬಳಿ ಎಲ್ಲಾ ತಂದಿದ್ದು ಮನಿಗಿ ಕರೆಸಿ ಕೊಟ್ಟು, ಅವರು ನೋಡಿ ಹೊದ ಮೇಲೆ ಇದೆ ಸೀರಿ ಮ್ಯಾಲ ಮನಿಗಿ ಬಂದ ತೋರ‍್ಸಿ ಹೊಗಂದ್ರು. ಬಡವರ ಮಕ್ಕಳಿಗಿ ಇಷ್ಟ ಪ್ರೀತಿಲಿಂದ ನೋಡವರು ಯಾರಂತ ಎಷ್ಟು ಆನಂದಾಯಿತು ಮನಸಿಗಿ. ಅವರು ಐದಕೆಲ್ಲ ನೋಡಿ ಹೋಗಿ ಒಪ್ಪಿಗಿ ಎರಡದಿನ ಬಿಟ್ಟು ಹೇಳ್ತಿನಂದ್ರು. ಸರಿ ಅಂತ ಆರಗಂಟೆ ಆಗಿತ್ತು. ಸಾಯೆಬರ ಬಂದು ಹೋಗದಂರ ಹೋಗಿ ಅದಿಷ್ಟ ಮನಿಕೆಲಸ ಮಾಡಿ ವಿಷಯ ಹೇಳಬಂದ್ರೆ ಆತಂತ ಹೋದೆ. ಮೊದಲೆನು ಗೊತ್ತಿರಲಿಲ್ಲ. ಆಮೇಲ ಗೊತ್ತಾಯ್ತು ಆ ಮನುಷ್ಯ

ಎಂಗಂತ, ಕದ ತೆಗೆದ್ರು ಮಾತಾಡಿ ವಿಷಯ ಕೇಳಿ ಖುಷಿ ಪಟ್ಟಂಗ ಮಾಡಿದ ಆಯುಪ್ಪ. ಆಯ್ತು, ಸೀರಿ ಇಷ್ಟಾತು ಅಂತ ಕೇಳಿದ್ರು. ಬಡವಿಗಿ ಭಾಗ್ಯ ಇದ್ದಾಂಗ ಅಪ್ಪಾ ಅಂತ ಹೇಳಿದೆ. ಸರಿ ಸ್ವಲ್ಪ ಪಾತ್ರೆ ಅದಾವ ತೊಳೆದು ಹೋಗು, ಬಟ್ಟೆ ನಾಳೆ ಮಾಡು ಸೀರೆ ಕೊಳೆಯಾಗುತ್ತಂದ್ರು ಆಯಿಂತೆತ್ಹೇಳಿ ಅಡಗಿ ಕೊಣಿಗೆ ಹೋಗಿ ಎಲ್ಲಾ ತೊಳೆದು ಕಸ ಬಳದು ಹೇಳಿ ಹೋಗಂದಾರಂತ ಹೋದೆ ಮ್ಯಾಲಿನ ಕೊಣ್ಯಾಗ ಇರ್ತಿದ್ದರು. ಎಷ್ಟು ಸಲ ಹೇಳಿ ಹೋಗ್ತಿದ್ದೆ ಅಂಗೆ ಹೋದ, ಕುಡಿತಿದ್ದರು. ಸಾಹೇಬರೆ ಅಂದಿದ ಕೇಳಿ ಕೈಯದಂದ ಕಾಜಿನ ಗಿಲಾಸ ಬಿತ್ತು ಒಡಿತು. ಅದೆಲ್ಲ ತೆಗದು ಹಾಕಿ ಹೋದ್ರಾತು ಕತ್ತಲಾಗ್ಯಾದಂದು ಬಡಬಡ ತಗದೆ. ಕೈ ಕೊಯ್ಕೊಂಡಿದ್ದ ಆಯಪ್ಪ ರಕ್ತ ಸೋರ್ತಿತ್ತು ಬಟ್ಟಿ ಕಟ್ಟಂದ್ರು. ಹ್ಞೂಂ ನ್ರಿ ಅಂತ ಬಟ್ಟಿ ಕಟ್ಟಕ ಹೋಗಿ, ಕಟ್ಟಿ ಅದೆಲ್ಲಾ ಒರಸ್ತಿದ್ದೆ. ಯಾರೋ ಹೊರಗಿನ ಕದ ಹಾಕಿದ್ರು ಮ್ಯಾಲಿನ ಕೊಣೆದು. ಮೈಯಲ್ಲಿ ತಣ್ಣಗಾಯ್ತು ನಂದು. ಎದಿ ಒಂದೇ ಸಮನೆ ಬಡಕೊತಿತ್ತು ಜೋರಾಗಿ. ಗೊತ್ತಾಗಲಾರದೆ ಹೋಗಿ ಕಾಲಿಗಾ ಬಿದ್ದೆ. ನಾ ನಿಮ್ಮ ತಂಗಿ ಸಮ ಸಾಯೆಬ್ರೆ ನನಗೆನು ಮಾಡಬೇಡ್ರಿ ಮದ್ವಿಮಾಡಿ ಕಳಸ್ರಿ ಕೆಲಸಾನು ಬಿಡ್ತಿನಿ. ನಿಮ್ಮನಿ ಕೆಲಸಷ್ಟೇ ಮಾಡಿಕೊಡತಿನಿ ಅಂದೆ ಕೆಳಲಿಲ್ಲ. ಒತ್ತಿ ಹಿಡದು ಬಿಡಲಿಲ್ಲ. ಎಷ್ಟು ತಪ್ಪಿಸಿಕೊಬೇಕೆಂದ್ರು ಕೇಳಲಿಲ್ಲ. ನನ್ನ ತಂಗಿಯಾಗಿ ನನಲಿಂದ ದೂರ ಹೋಗಬೇಡ. ನಾನೀನಗ ಇಟಗೊತಿನಿ. ಎರಡು ಕೆಲಸ ಆರಾಮಾಗಿ ಮಾಡು ಹೆಚ್ಚಿಗಿ ಡ್ಯೂಟಿ ಹಾಕಲ್ಲ. ಪ್ರಮೋಶನ್, ಟ್ರಾನ್ಸಪರ್ ಏನು ಬೇಡಾ. ನಾ ಇಲ್ಲಿ ಇರುತನಾ ಕೆಲಸಮಾಡು ಆಮೇಲೆ ನಾ ಹೊದಕಡಿ ಕರಕೊಂಡೊಗೊತಿನಿ ಅಂದ್ರು ಕೈ ಕಾಲು ಬಿದ್ದು ಒದ್ದಾಡಿದ್ರು ಕೇಳಿಲ್ಲ ಪೂರ್ತಿ ಕುಡದಿದ್ದ, ಕೈಗೆ ಚಾಕು ತೆಗೊಂಡು ಒಪ್ಪಿಲಿಲ್ಲಿಂದ್ರ ಮೈಯೆಲ್ಲಾ ಗಾಯ ಮಾಡ್ತಿನಂದ, ಪಾದಕ್ಕ ಸ್ವಲ್ಪ ಕೊರದ ಉರಿತಿತ್ತು ಹೆದರಿ ಒದ್ದಾಡಿದೆ ರಕ್ತಸೋರ್ತಿತು ಎರಡುತಾಸ ಎಳದಾಡಿದ, ನನ್ನೆ ಶಕ್ತಿ ಸಾಲದಾಯ್ತು ನನ ಮ್ಯಾಲ ಬಿದ್ದು ಹೊರಳಾಡಿ ಎದ್ದ ತಾನೆ ಮುಖ ತೊಳ್ಸಿ ರೆಡಿ ಮಾಡಿ ಮನೆಗೆ ಬಿಟ್ಟ ಬಂದ. ಯಾರಿಗೂ ಹೇಳಲಿಲ್ಲ. ಇದು ಹಿಂಗೆ ನಡಿದ್ಯ. ಮದ್ವಿಯಾಗ ಮನಿಗಿ ಹೋಗಿ ಹೇಳಿಬಂದ ಅವನೆ. ಬೇರೆ ಕಡಿಗೊತ್ತಾಯ್ತಂತ ಹಿಂಗೆ ಎಷ್ಟು ಸಂಬಂಧ ಮುರದ ಯಾರಿಗೆ ಹೇಳಲಿ ವಿಷಯ ತಾಯಿ ತಂದಿ ಇಲ್ಲ. ಅತ್ತಿಗೆರಿಗೆ ಹೇಳಿದ್ರ ನನಗ್ಯಾರ ನೋಡ್ತಾರ, ಯಾರು ಮರ್ಯಾದಿ ಕೊಡಲ್ಲಂತ ನುಂಗಕೊಂಡು ಇದ್ದ. ಆದರೂ ಎರಡು ಕೆಲಸ ಬಿಡಲಿಲ್ಲ. ಆವಾಗಾವಗ ಹಿಂಗೆ ನಡಿತಿತ್ತು. ಎರಡ ಸಲ ಹೊಟ್ಟೆ ಬಿಳಸಿದ, ಬ್ಯಾಡೆಂದ್ರು ಕೇಳಲಿಲ್ಲ. ಕೊನಿಗಿ ಆಯಪ್ಪಂದು ಪ್ರಮೋಶನ್ ಆಗಿ ಹೊರಟ. ನನಗೆ ಕರಕೊಂಡ ಹೋಗದಿರಲಿ ವಿಷಯನೇ ಹೇಳದೆ ಹ್ವಾದ. ನಾ ಮತ್ತೆ ಗರ್ಭಿಣಿಯಾಗಿದ್ದೆ. ಎರಡ ಸಲ ಅವರಿದ್ದ ಊರಿಗೆ ಹೋಗಿ ಕಂಡ ಬಂದೆ. ಅದು ಯಾವನದೇನು ನಂದ್ಯಾಗಾಗ್ತದ. ನಾಬಿಟ್ಟು ಎಸ್ ದಿನಾ ಆಯ್ತು. ದುಡ್ಡು ಕೊಡ್ತಿನಿ ತೆಗಸಗೊ ಅಂತ. ಏನು ಬೇಡಂತ ಸಾವಿರಮಂದಿ ಸಾವಿರು ಚುಚ್ಚಿದರೂ ನೋವಾದ್ರು ತೊರಸುಲಾರದಂಗೆ ಮಗನಿಗೆ ಪಡದೆ, ಹೆಣ್ಣಾದ್ರ ಕುತ್ತಿಗಿ ಹಿಚಕ್ತಿದ್ದೆ. ಗಂಡು ಎಂಗೊ ಬೆಳೆತದ ಬೆಳಿಲಿ ಹೆಣ್ಣಗಿ ಮದವಿ ಮಾಡದು ಕಷ್ಟ ಅಪ್ಪಯಾರಂದ್ರ

ಏನು ಹೇಳಬೇಕು ಅದಕೆ. ದೈವ ಎಲ್ಲೆ ಸ್ವಲ್ಪ ಸರಿಯಿತು ಗಂಡಾಯ್ತು. ದೊಡ್ಡವನಾದ ಇದೇ ಕೆಲಸಕ ಸೇರಿಸಿ ನಾಳೆ ಹೆಣಮಕ್ಕಳ ಕಷ್ಟಕ್ಕಾಗು ಅಂತನೆ ಹೇಳೋದು. ಮಾತ್ ತಪ್ಪಿ ನಡೆಯಲ್ಲ ಇಷ್ಟಾಗಿದಕ ಯಾರು ಬಂಧು ಬಳಗ ಬರಲ್ಲ ಮಾತು ಕತಿ ಒಟ್ಟ ಸಂಬಂಧ ಇಲ್ಲ. ಇಲ್ಲ ವರುಷಾಯ್ತುಂತ ಸತ್ತು ಎಂಗ ಸತ್ತನೋ, ಎಂಗ ಇಟ್ಟಬಂದರೋ ಏನು ಗೊತ್ತಿಲ್ಲ. ಈಗ ಹಿಂಗ ಬದಕತಿನಿ. ನಾನೆ ನನ ಕೈಲಿಂದ ತಾಳಿ ಕಟಗೊಂಡಿನಿ. ಆ ಊರೆಲ್ಲ ಬಿಟ್ಟ ಬಂದಿನಿ. ಅಲ್ಲಿ ತಿರಗಿನು ನೋಡಲ್ಲ. ಮಗಂದಿಷ್ಟ ಚಂದಾದರ ಆಯ್ತು ಅಷ್ಟೇ.... ನನ್ನಂತವರ ಎಷ್ಟೋ ಜನನ ನನ್ನ ಜೊತಿಗೆ ಇದಾರ... ಇದು ನಿಂದೊಂದಲ್ಲ ಕತಿ. ಮದ್ವಿ ಆಗಾಕು ಬಿಟ್ಟಿಲ್ಲ. ಆಸರಾನು ಕೊಟ್ಟಿಲ್ಲ.

**ಪ್ರಕರಣ : ೦೯**

ಹೆಸರು : ಊರ್ಮಿಳಾ

ಜಾತಿ : ಮರಾಠ

ವಯಸ್ಸು : ೫೦

ಶಿಕ್ಷಣ : ಬಿ.ಎ.

ಹುದ್ದೆ : ಪಿ.ಸಿ.

ನಿಜವಾಗಲ್ಲೂ ತುಂಬಾನೇ ಪಾಪ ಮಾಡದವರೆ ಈ fieldಗೆ ಬರೋದು, ನಂದು ಹಂಗೇನೊ ರಿಣಾನುಬಂಧವಿತ್ತೆನೊ ಈ fieldಗೆ ಬರೋಕೆ ತಪ್ಪಿ ಬಂದೆ, ದೇಶ ರಕ್ಷಣೆ ಮಾಡ್ತಿವಿ ಆದರೆ ನಮಗೆ ಯಾವ ರಕ್ಷಣೆನೂ ಇಲ್ಲ. ನಮ್ಮ duty ಹಳ್ಳಿ, ತಾಲ್ಲೂಕಿಗಿಂತ, ಸಿ.ಟಿ.ಗಳಲ್ಲಿ ತುಂಬಾ ಕಷ್ಟ. Heavy Population, heavy duty ನಮ್ಮ I[st] and II[nd] Manuval ಇರುತ್ತೆ ಅದರ ಪ್ರಕಾರ ಎಲ್ಲಾ ರೂಲ್ಸ್ ಗಂಡು ಹೆಣ್ಣು ಇಬ್ಬರಿಗೂ apply ಆಗುತ್ತೆ. ಇಲ್ಲಿ ಇರೋ ಎಲ್ಲಾ ತರಹದ duty ತುಂಬಾ ಒತ್ತಡದ್ದೆ, ನೆಮ್ಮದಿಯಾಗಿರಬೇಕು ಅಂದರೆ ಈ fieldಗೆ ಬರಬಾರದು. ಟೀಚರ್, ನರ್ಸ್, ಲೆಕ್ಚರ್ ಇನ್ನೊಂಥದೊ ಆಗಿರಬೇಕು. ಕಟ್ಟಾ ದರಿದ್ರ, ಹೊಲಸು field ಇದು ನಾನು ಇದೇ fieldನಲ್ಲಿದ್ದು ಹಿಂಗೆಲ್ಲಾ ಮಾತಾಡಬಾರದು ಆದರೆ ಈ field ನನ್ನ ಬದುಕನ್ನೇ ಸರ್ವನಾಶ ಮಾಡಿದೆ. ನಾನು ಸ್ನೇಹಾ ಹತ್ರ ಏನೂ ಮುಚ್ಚಿಟ್ಟಿಲ್ಲ. ನೀವು ಅವರ friend ಜೊತೆಗೆ ಅವಳು ಇದ್ದಾಳೆ ಅಂತ ಹೇಳ್ತಿದ್ದಿನಿ. ಎಲ್ಲಾ ಸಂಗತಿನೂ each and everything ಗೊತ್ತಿದೆ ಅವಳಿಗೆ. ಹೋಗಬೇಕು ಬೇರೆ ಕೆಲಸಕ್ಕಂತ ತುಂಬಾ try ಮಾಡಿದೆ, but ಕೆಲಸಗಳು ಸಿಗ್ತಿಲ್ಲ. ಅದಕೆ ಇರೋ ಕೆಲಸ ಕಳಕೊಂಡು ಕೂಡೋದು ಸರಿಯಲ್ಲ. ಎಷ್ಟೋ ಜನ ಎಂಥಾ ಕೆಲಸನಾದ್ರೂ ಸಿಕ್ಕರೆ ಮಾಡಿ ಬುದುಕ್ತಿವಿ ಅನ್ನೊ ಕಾಲ ಇದು. ನೋಡಿದರೆ ಈ ಪೋಲಿಸ್ ಕೆಲಸಂದ್ರೆ ಜನರು ಸ್ವಲ್ಪ ಹೆದರ್ತಾರೆ, ಗೌರವಕೊಡ್ತಾರೆ. ಒಳಗೆ ಸಾವಿರ ಇರಲಿ. ಹೊರಗಡೆ ಒಂದು ಗತ್ತು ಇರುತ್ತೆ ಅದಕ್ಕೆ ಈ ಕೆಲಸನಾ ನಾ ಉಳಸಿಕೊಂಡಿರೋದ, ಪ್ರಿತ್ಸೋದು ಇರಲೇಬೇಕು ಹಾಗಾಗಿ comfort ಅನ್ಕೊಂಡು ಇದ್ದೀನಿ. ಯಾವಾಗಲೂ ಹೆಣ್ಣು ಇದ್ದರಲ್ಲೆ ಸುಖಕಾಣ್ತಾ. ತಿಳಿಕೊಂಡು ಬದುಕಬೇಕು

ಆಗಲೆ ಒಳ್ಳೆದಾಗೊದು ಸಂಸಾರ ಗುಟ್ಟು ವ್ಯಾಧಿರಟ್ಟು ಅಂತಾರಲ್ಲ ಹಂಗ ಮಾಡಬಾರದು. ಸಮಸ್ಯೆ ಜಗತ್ತಿನ ಪ್ರಯೊಂದು ಮನುಷ್ಯನಿಗೂ ಇದೆ. ಹಾಗೆ ಅದರಲ್ಲಿ ನಮದೊಮ್ಮೆ ಹೆಚ್ಚು, ಒಮ್ಮೆ ಕಡಿಮೆ ಅಂತಿನಿ. ನನ್ನ ಅಭಿಪ್ರಾಯವಂತೂ ಇಷ್ಟೇ.

duty ಕಷ್ಟನಾ ಅಂದೆಲ್ಲಾ ತಾಯಿ, ನೀ ಕೇಳಬಾರದು, ನಾ ಹೇಳಬಾರದು ಅಷ್ಟು ಕಷ್ಟ ನಂದೇ ಅನುಭವ ಕೇಳು ಹೆಳ್ತಿನಿ. ಬೇರೆಯವರ ಸುದ್ದಿ ಈ departmentನಲ್ಲಿ ಮಾತಾಡಿದ್ರೆ. ಬದುಕೊದೆ ಕಷ್ಟ. ಈ fieldಗೆ ಬರೊಕಿಂತ ಮೊದಲು. ನಾ ತುಂಬಾನೇ Soft ಇದ್ದೆ. ಆಗ ಬದಲಾಗಿದ್ದಿನಿ. ಅಂದರೆ cruel ಅಂತಲ್ಲಾ ಕೆಲವೊಮ್ಮೆ ಹಂಗನೂ ಆಗ್ತೀನಿ. ಆಗಬೇಕು ಬೇರೆ ವಿಧಿನೆ ಇಲ್ಲ. ಸಂಟ್ರಿ duty ಒಂಥರಾ ಕಷ್ಟನೆ ಇದು ಇದ್ದಾಗ ಪ್ರಪಂಚನೇ ಪ್ರಳಯವಾಗುತ್ತೆ ಅಂದ್ರೂ ಒಂದ್ ಸೆಕೆಂಡ ಅಳಗಾಡೊ ಹಾಗಿಲ್ಲ. ಯಾಕೆಂದ್ರೆ full station ಜವಾಬ್ದಾರಿ ನಮ್ಮ ಮೇಲೆ ಇರುತ್ತೆ. ಏನೆ ಮಿಸ್ ಆದ್ರೂ, ಅಂದ್ರೆ ಒಂದ್ ಕಾಗದ, paper ಹೊದ್ರು ಕಷ್ಟ. ಯಾರಾದ್ರೂ ಆಫಿಸರ್ಸ್ ಬಂದರೆ ಕಷ್ಟ ಅದು ಪಿಎಸ್ಐ ತೆಲೆಗೆ ಬರುತ್ತೆ. ಹಾಗಾಗಿ ಅವರು ನಮಗೆ ಮೊದಲೆ ಜಾರ್ಚ್ ಮಾಡ್ತಾರೆ ಹಂಗೆಲ್ಲ ಆದ ಮೇಲೂ ವ್ಯತ್ಯಾಸ ಆದ್ರೆ ತಮ್ಮ ಮೇಲೆ ಹಾಕೊಳಲ್ಲ, ಸಂಟ್ರಿ ಇರೋರ ಮೇಲೆ ಹಾಕ್ತಾರೆ. ದೊಡ್ಡ ದೊಡ್ಡ ಸಮಸ್ಯೆ ಆಗ್ತಾವೆ.

ಒಂದ್ಸಲಾ ಹಿಂಗೆ ನನಗೆ ಡಿಪಾರ್ಟ್‌ಮೆಂಟ್, ಒಬ್ಬ senior PC ತುಂಬಾ ಕಾಡಸತಿದ್ದ. ಹಾಗೆ ಹೀಗೆ ತುಂಬಾ ಕ್ಯೂಟಿದ್ದಿಯಾ, ಒಂದೇ ಒಂದು ಕಿಸ್ ಕೊಡಲಾ, ನೋಡ್ತಾನೆ ಇರಬೇಕು ಅನುತ್ತೆ ಅಂತಿದ್ದಾ, ತಲೆಕೆಟ್ಟು ಹೋಗಿ ರೇಗದ್ರೆ just joke yar ನಿನ್ನ close ಕಲೀಗ್ ನಾನು ಅಷ್ಟು ಸಲಗೆ, ಅಧಿಕಾರ ಇರೊಲದಾ lifeನ light ಆಗಿ ಎಂಜಾಯಿ ಮಾಡಬೇಕು. ನಿಮ್ ಹೆಂಗಸರಿಗದೆನ್ ಗೊತ್ತು ಬಿಡು ಅಂತಿದ್ದ, ಆಗಿನ್ನು ಕೆಲಸಕ ಸೇರಿದ್ದು ಹೊಸತು ಅಂದ್ರಬಿ, ಒಂದೆಂಟು ತಿಂಗಳೆನೊ ಹೀಗೆ ಸುಮಾರ್ ಸಲ ಆಯ್ತು. ನನಗೆ ಆಯಪ್ಪನ ಮುಖ ನೋಡಿದ್ರೆ ಹೆಸಗಿ ಆಗ್ತಿತ್ತು. ಅವನ duty ಹೊರಗಿದ್ರು, ಸುಮ್ನೆ ಸ್ಟೇಶನ್‌ಗೆ ಫೋನ್ ಮಾಡೋದು, ಹಾಯ್ ಬುಲ್ ಬುಲ್ ಅಂತನೋ, ನಾನಿಲ್ಲದೆ ಅದ್ಹೆಂಗೆ ಸ್ಟೇಶನ್‌ನಲ್ಲಿರ್ತಿಯಾ ಪಿ.ಎಸ್.ಐಗೆ ಸ್ವಲ್ಪ line ಹೊಡೆದು ಕಾಳು ಹಾಕಿದ್ರಾಯಿತು ನಾವಿಬ್ಬರೂ ಒಂದೇ ಕಡೆ duty ಮಾಡಬಹುದು. ಈ ಟೆನ್ಷನ್‌ಗಳ ನಡುವೆನು lifeನ ಹ್ಯಾಪಿ ಕ್ಷಣನು ಕಳಿಬಹುದು. ಏನಂತಿಯಾ ಯೋಚನೆ ಮಾಡು ನಾಳೆ ಬರ್ತಿನಲ್ಲ, ನಿಟಾಗಿ ರಿಯಾಕ್ಟ್ ಮಾಡು ಓಕೆ. ಅಂತ ಹೇಳಿ ಫೋನ್ ಇಟ್ಟ. ತಡಕೊಳ್ಳೊಕೆ ಆಗದೆ ಪಿಎಸ್ಐಗೆ ಹೇಳಿದರೆ ಅವರು fieldಗಿನ್ನು ಹೊಸಬರು ಅದಕೆ ಹೀಗೆ ಆಗುತ್ತೆ. dont worry ನಾನಿದಿನಿ ಮಾಡ್ತಿನಿ ಎಲ್ಲಾ ಸರಿ ಹೋಗುತ್ತೆ. ಸ್ವಲ್ಪ ಅಡ್ಜೆಸ್ಟ ಮಾಡ್ಕೊಳ್ಳೊದು ಕಲಿಬೇಕು. ಇದೆಲ್ಲ ಹೊಸತಲ್ಲ. ಇದಕ್ಕೂ ಭಯಾನಕ ಇದೆ. ನಾನಿರೋ ಸ್ಟೇಷನ್‌ನಲ್ಲಿ ಅಷ್ಟಾಗಿ ಆಗಲ್ಲ. ಇನ್ನು ಆ ಪಿ.ಸಿ. ಮೇಲೆಲ್ಲ ತುಂಬಾ Influence ಇರೋ ಮನುಷಾ, ಹುಶಾರಾಗಿರಿ ಎದುರ ಹಾಕೊದೆ ಅನುಸರಿಸಕೊಂಡ್ಹೊದ್ರೆ ಉಳಕೊಂಡ್ರಿ ಇಲ್ಲಾಂದ್ರೆ ಪ್ರಪಾತಕ್ಕೆ ಬಿಳ್ತಿರಾ ಇರಲಿ ಏನೆ

ಆದರೂ ನಾನಿದಿನಿ ನಿನ ಜೊತೆಗೆ ಅಂತ ಇದ್ದಕಿದ್ದಂಗೆ ಏಕ ವಚನದಲ್ಲಿ ಮಾತಾಡ್ತಾ ನನಗೆ ಹೇಳಿದ್ದ ತಪ್ಪೇನೋ ಅಂತ ಭಯಾ ಆಯ್ತು. ಆದರೂ ಸುಮ್ಮನಾದೆ, ಮಾರನೆ ದಿನಾ ಈ Senior pc ಬಂದ ನನಗೆ ಸೆಲ್ಯೂಟ್ ಮಾಡಬೇಕನ್ನಲಿಲ್ಲ. ಅಲ್ಲಿ ಸೆಲ್ಯೂಟ್ ಮಾಡ್ಬಿದ್ರೆ, ಆಫಿಸರ್‌ಗೆ ಹೇಳಿ ಹೆಚ್ಚಿನ ಡ್ಯೂಟಿ ಹಾಕಸ್ತಾರೆ. ಟಾರ್ಚರ್ ಮಾಡ್ತಾರೆ. ನಾ ಸೆಲ್ಯೂಟ್ ಮಾಡದೆ ಇರದೆ ಎಂಥಾ ಅಪರಾದ ಆಯ್ತು. ನೀವ್ಯಾಕರಿ Stunt ಮಾಡ್ತಿರಾ, ಡ್ಯೂಟಿ ಇದ್ದರೆ ಮನೇಲಿರಿ ಕೆಲಸಕ್ಕೆ ಬಂದು ಪ್ರದರ್ಶನ ಮಾಡೋಕ್ಕಲ್ಲ ಸರ್ಕಾರ ನಿಮಗೆ ಇಟಕೊಂಡಿದ್ದು, ಏನಾದ್ರು ಇಬ್ಬರೂ adjust ಆಗಿರಿ, ಅವರು ಬಂದರೆ ಎದ್ದುನಿಂತು ಸಲ್ಯೂಟ್ ಹೊಡಿಬೇಕು ಅದು ನಿಮ್ಮ ಕರ್ತವ್ಯ, ಯಾರೆ ಬಂದರೂ ಅವರೆಂಥವರೆ ಇದ್ರೂ. ನಿಗರಾಡದೆ ಗೌರವಿಸಬೇಕು. ಅವರು ನಿಮ್ಮ ಮನೆಗೆ ಬಂದಿಲ್ಲ. ಇದು ಸ್ಟೇಶನ್ ನೋಡ್ಕೊಂಡ ಬಿಹೇವ್ ಮಾಡೊದು ಕಲಿರಿ, ಅಂತ ಹೇಳಿ ಆ ಪಿ.ಸಿ.ಗೆ Sorry ಕೇಳಿ ಹೋಗಿ ಕೆಲ್ಸ ನೋಡ್ರಿ, ಇಬ್ಬರೂ ಅಂದ್ರೂ ಬೇಸರವಾಗಿ ಕಣ್ಣಲ್ಲಿ ನೀರು ಬಂದ್ಬು Sorry ಅಂತ ಹೇಳಿ ಅಳ್ತಾ ಹೊರಗೆ ಬರ್‍ತಿದ್ದೆ, ಮತ್ತೆ ಸಾಹೇಬ್ರು ತಡದರೂ ಹೀಗೆಲ್ಲಾ ಅತ್ತರೆ, ನೀವು ಇಲ್ಲಿ ದಕ್ಕಲ್ಲ, ನಿಮ್ಮ ಕಣ್ಣಿರಿಗೆ ಇಲ್ಲಿ ಯಾರೂ ಕರುಣೆನು ತೊರ್‍ಸಲ್ಲಾ be dare go ahead ಅಂದ್ರೂ. ಬಂದೆ ಅವತ್ತಿನಿಂದ ಆ ಪಿ.ಸಿ. ಮಾತ್ ಕೇಳಿ ನನಗೆ ಫುಲ್ ಟೈಮ್ ಸೆಂಟ್ರಿ ಡ್ಯೂಟಿ ಹಾಕೊದಕೆ ಶುರುಮಾಡಿದ್ರು. ಮಾರ್ನಿಂಗ್ ಆರರಿಂದ ಸಂಜೆ ಒಂದೊಂದಿನ ಹತ್ತರವರೆಗೂ ಒಂದು ವಾರ ತುಂಬಾ ಸುಸ್ತಾಗ್ತಿಗ್ತು. ಊಟ-ತಿಂಡಿ ಎಲ್ಲಾ ಅಲ್ಲೆ ಒಂಥಾರಾ ಜಿತದಾಳಿನ ತರಹ ಅನಸ್ತು. ಒಂದೊ ಮಾಡಬೇಕು ಇಲ್ಲಾ ಬಿಟ್ಟು ಹೋಗಬೇಕಷ್ಟೇ. ಮನೆಲಿ ನೋಡದರೆ ಬಿಟ್ಟು ಹೋಗೊ ತರಹನೆ ಇಲ್ಲ. ಅಷ್ಟೆರಲ್ಲೇನೆ ಪಿಸಿಗೆ H.C. ಪ್ರಮೋಷನಾಯ್ತು. ಅಂದರೆ ಹೆಡ್ ಕಾನ್‌ಸ್ಟೇಬಲ್ ಆಯ್ತು. ನಮ್ಮ ಸ್ಟೇಶನ್‌ಗೆ ಹಟಕ್ಕೆ ಬಿದ್ದು ಹಾಕ್ಸಗೊಂಡ, ಆಗಲೆ ಸೆಂಟ್ರಿ ಕೆಲಸ ಸಾಕಯ್ತು ನನಗೆ, ವಿಧಿ ಇಲ್ಲದೆ ಮತ್ತೆ ಸಾಹೇಬರಿಗೆ Request ಮಾಡ್ಕೊಂಡೆ, ಏನ್ಮಾಡೊದರಿ hands ಇಲ್ಲ ನೀವು ಮಾಡಲೆಬೇಕು. ಇಲ್ಲಂದ್ರೆ ನಿಮಗೆ ದುಡಸಬೇಕು ಅನ್ನೋ ಉದ್ದೇಶ ನನಗಿಲ್ಲ. ನನ್ನ duty ನಾ ಮಾಡ್ತಿದಿನಿ ನಿಮ್ಮ ಡ್ಯೂಟಿ ನೀವು ಮಾಡಿ ಅಷ್ಟೇ. ಮತ್ತೆ ಒಂದು ನಾಲ್ಕು ದಿನ ಕಳೆದ ಮೇಲೆ ಅವರೆ ಕರದು ಹೊರಗಡೆ ಡ್ಯೂಟಿಗೆ ಹಾಕಿದ್ರು. ಅದು Trafficನಲ್ಲಿ ಸೀರೆ ಇಲ್ಲ ಅತಾರೆ compulsary ಪ್ಯಾಂಟ್-ಶರ್ಟ್ (ಪೋಲಿಸ್) ಯುನಿಫಾರ್ಮ್ ಹಾಕೊಂಡು ನಿಲ್ಲಬೇಕು. ಅಲ್ಲಿ ಕೂಡ ಹಾಗೆ, ಊಟಕ ಅರ್ಧಗಂಟೆ ಬಿಡ್ತಿದ್ರು ಮಿಕ್ಕಂಗೆ ಎಂಥಾದೂ ಇಲ್ಲ. ಅಲ್ಲಿನೂ Shift ಪ್ರಕಾರ ಇರುತ್ತೆ. ಆದರೆ ನನಗೆ ಅಲ್ಲಿ ಯಾವುದೇ Shift rules apply ಮಾಡೊಕೆ ಮನಸಿರಲಿಲ್ಲ. ಎಲ್ಲಾ H.C. ಮಾತಕೇಳಿ ಪಿ.ಎಸ್.ಐ ಸಾಹೇಬ್ರೂ ಹಾಗೆ ಮಾಡ್ತಿದ್ರು ಬೇರೆ ದಾರಿನೆ ಇಲ್ಲ. ನನಗನಸಿದ್ದು ಇದರರ್ಥ ನಾನು ಆ ಪಿ.ಸಿ. ಹೇಳಿದಂಗೆ ಕೇಳಬೇಕು ಅಂತ. ನಾನು ಮಣಿಲಿಲ್ಲ. ಏನಾಗುತ್ತ. ನೋಡೆ ಬಿಡೋಣಂತ, Iam also educated ಇದಕೆಲ್ಲಾ ಹೆದರಬಾರದು ಅನ್ಕೊಂಡಿದ್ದೆ.

ಆಮೇಲೆ ಮತ್ತೆ ಸಂಟ್ರಿಗೆ ಹಾಕಿದ್ರು ಮಾಮೂಲು ಅದೇ ಕಷ್ಟ ಯಾರಾದ್ರೂ ನನಸ್ಥಿತಿ ನೋಡಿ ಬೇರೆ ಲೇಡಿಸ ಮಾಡ್ತಿನಂದ್ರು ಅದು ತಪ್ಪಾಗಿತ್ತು. ಅವರಿಗೆ ಕಿರಿಕ್ ಶುರುವಾಗಿತ್ತು. ಅದಕೆ ಹೆದರಿ

ಯಾರೂ ಯಾವುದಕ್ಕೂ ತಲೆ ಹಾಕ್ತಿರಲಿಲ್ಲ. ಆಮೇಲೆ ಮತ್ತು ಬಿಡಲಿಲ್ಲ. ವಿಚಿತ್ರ ಕಿರಿಕಿರಿ. ಸುಮ್ ಸುಮ್‌ಗೆ ಊಟದ ಟೈಮ್ ಹಾಗೆ ಹೀಗೆ ಅಂತೆಲ್ಲಾ ನನಗೆ ಚೆಂಬರನಲ್ಲಿ ಕರಸಿ ಅವರಿಬ್ರೂ ಕೂತು ವಿಚಿತ್ರ ಹರಟೆ ಹೊಡಿತಾ ಕೂಡದು, ನಾನು ಸುಮ್ನೆ ಗಂಟೆಗಟ್ಟಲೆ ಎದುರು ನಿಲ್ಲಬೇಕು. ಏನು ಕೆಲಸ ಸರ್ ಅಂದ್ರೆ ಪೋಲಿಸರಗೆ ನಿಲ್ಲೋದು ಒಂದು ಕೆಲಸನೆ, ಇಂಪಾರ್ಟಂಟಾಗಿ ಮಾತಾಡ್ತಿದ್ರೆ ಡಿಸ್ಟರ್ಬ್ ಮಾಡಬಾರದು ಸುಮ್ನೆ ಕೇಳ್ತಿರಬೇಕು. ಅಂದ್ರು ಹೀಗೆ ದಿನಕ್ಕೆರಡ ಸಲ ಎರಡೆರಡ ತಾಸ್ ಮಾಡೋರು. ಒಂದಿನಾ ಆಫಿಸರ್ ವಿಜಿಟ್‌ಗೆ ಬಂದ್ರು ಆವಾಗೆ ನಾನು ಒಳಗೆ ಇದ್ದೆ. ಅವರೆದ್ರು ನನ್ನನ್ನು ಕೂಡ್ಸಿದ್ರು. ಎಲ್ಲಾ ಪ್ಲೇಟ್ ಚೆಂಜ್ ಮಾಡಿದ್ರು. ನಮ್ಮ ಸ್ಟೇಶನ್‌ನಲ್ಲಿ ತುಂಬಾ ಸಿನ್ಸಿಯರ್ ಹ್ಯಾಂಡ್ ಸರ್ ಇವರು, ಯಾವುದೇ ಕೆಲಸ ಕೊಟ್ರು ಅಚ್ಚುಕಟ್ಟಾಗಿ ಮಾಡ್ತಾರೆ. ಎಲ್ಲರ ಜೊತೆನು ಚೆನ್ನಾಗಿ ಮಿಂಗಲ್ ಆಗ್ತಾರೆ. ಅಷ್ಟೇ ಹಟ ಅದು ಕೆಲಸದ ವಿಷಯದಲ್ಲಿ ಯಾರೇ ಲೂಸ್ ಟಾಕ್ ಮಾಡಿದ್ರು, ಅವರ ಮಾತಲ್ಲೆ ಮೋಡಿ ಮಾಡ್ತಾರೆ. ತುಂಬಾ ಅಡ್ಜೆಸ್ಟಮೆಂಟ್ ನೆಚರ್ ಅಂತ ಹೇಳಿದ್ರು. ಕೆಲವು ಡಿಟೆಲ್ಸ್ ಫೈಲ್ ತರೊಕೆ ಹೇಳಿದ್ರು, ಅದರಲ್ಲಿ ಒಂದು Important ಫೈಲ್ ಇರ್‍ಲಿಲ್ಲ. ನನಗೆ ನೆನಪಿರೊ ಹಾಗೆ ಎಲ್ಲಾ ಫೈಲ್ಸ್ ಒಂದೇ ಕಡೆ ಇತ್ತು. ಅದು ಮಾತ್ರ ಇರ್‍ಲಿಲ್ಲ. ಎಷ್ಟು ಹುಡಕಾಡಿದ್ರು ಸಿಗಲಿಲ್ಲ. ದೊಡ್ಡ ಸಾಹೇಬ್ರು ರೇಗಾಡಿ ಹೋದ್ರು ಸಂಜೆವರೆಗೂ ಆ ಪೈಲ್ ಸಿಗಬೇಕು. ಇಲ್ಲಂದ್ರೆ ನಿಮ್ ಮೇಲೆ Action ತಗೋತಿನಿ ಅಂದು ಪಿ.ಎಸ್.ಐ.ಗೆ ಹೇಳಿದ್ರು. ಇದನ್ನು ಸಿನ್ಸಿಯರಿಟಿ ಅನಬೇಕಾ ಏನ್ರಿ. ಇದೇ ನಿಮ್ಮ ಸಿನ್ಸಿಯರ್ ಡ್ಯೂಟಿನಾ ಡಿಪಾರ್ಟ್‌ಮೆಂಟ್ ಫೈಲ್ಸ್ ಲೆಟರ್ಸ್ ಕಳದ್ಹಾಕೋದು, ಮಾತಿನಿಂದ ಎಲ್ಲರಗೂ ಬುಟ್ಟಿಗೆ ಹಾಕೊಂಡ್ರೆ ಅದು ಸಿನ್ಸಿಯಾರಿಟಿ ಅಲ್ಲ ಅಂತ ಹೇಳಿ ಹೋದ್ರು.

ಆ ಫೈಲ್ ಆ H.C. ಮತ್ತೆ ಪಿ.ಎಸ್.ಐ.ನೇ ಎತ್ತಿಟ್ಟಿರೋದು ಎಲ್ಲಾ ದೊಡ್ಡ ಚರ್ಚೆಆಯ್ತು. ಎಸ್.ಪಿ. ಎಲ್ಲಾ ಕರಸಿ ನನ್ನ ಎರಡು ತಿಂಗಳು ಸಸ್ಪೆಂಡ್ ಮಾಡಿದ್ರು, ಪಗಾರ ಇಲ್ಲ. ಮತ್ತೆ ಕೆಲಸಕ ಸೇರಿಸಿಕೊಳ್ಳಕೆ ದಿನಾ ಸ್ಟೇಶನ್‌ಗೆ, ರಿಕಮೆಂಡಗೆ ತಿರಗಿದೆ. ಕೊನೆಗೆ ಒಂದು ತಿಂಗಳಾದ ಮೇಲೆ H.C. ಹೇಳಿದ, ನನ ಜೊತೆ adjust ಆದ್ರೆ Job ಜೊತೆ ಪ್ರಮೋಶನ್ ಕೊಡ್ಸಿಬಿಡ್ತಿನಿ. ಟೆನ್ಶನ್ ನಿನಗ್ಯಾರು ಕೊಡಬಾರದು, ನೀನೆನು ನನಗೆ ಮದ್ವೆನೆ ಆಗಬೇಕಿಲ್ಲ. ಬೇಕಿದ್ರೆ ಸ್ವಲ್ಪ ದಿನಾ ಆದ ಮೇಲೆ ನಾನೆ ಮದ್ವೆ ಮಾಡ್ತಿನಿ ಅಂದ. ನಾನೇನು ಉತ್ತರ ಕೊಡಲಿಲ್ಲ. ಎರಡು ತಿಂಗಳ ಮುಗದ ಮೇಲೆ ಮತ್ತೆ ಜಾಯಿನ್ ಆದೆ, ಬೇರೆ ಕಡೆ ಹಾಕಿದ್ರು. ಅಲ್ಲಿ ಡ್ಯೂಟಿ ಮಾಮುಲೆ ಅಂದ್ರೂ, ಇವೆಲ್ಲ ಕಡೆ ಇರೋದೆ ಹಂಚಲಿಂದ, ಒಲಿಗೆ ಹಾರದ್ಹಾಗೆ ಎಷ್ಟ ಹೇಳಿಕೊಂಡ್ರು ಇದು ಮುಗಿಲಾರದ ಕತೆ.

ಏನಿಲ್ಲಾ ಇದೆಲ್ಲ ನನ್‌ಗಂಡಗ ಗೊತ್ತಾಗೊವರೆಗೂ ಚೆನ್ನಾಗಿದ್ವ. ಹೆಚ್ಚೆಂದ್ರೆ ದುಡಿತಿನಾದ್ದರಿಂದ ಮದ್ವೆ ಆಗಿದ್ದು, ಆದರೆ ಮದ್ವಿ ಆದ ಆರ್‌ತಿಂಗಳ ಮೇಲೆ ಅದೇ H.C. ಮಾಹಿತಿಕೊಟ್ಟಿದ್ದಾನೆ. ನಾನೆ ಇಟಕಂಡಿದ್ದೆ ಅಕಿಗಿ ಅಂತ ಹೇಳಿದ್ದಾನೆ. ನನಗೆ ಗೊತ್ತಾಗ್ತಿರಲಿಲ್ಲ ಇದು H.C. ಕಿರಿಕಿರಿ

ಅಂತ ಒಂದಿನಾ ನನ ಗಂಡ ಫುಲ್ ಕುಡದು ಬಂದು ಅರಚಾಡಿದ, ಕೈಗೆ ಸಿಕ್ಕಂಗ ಹೊಡೆಯಾಕ ಬಂದ ಆಗೆ ಕೇಳಿದ್ರ ಆ ಉತ್ತರ ಸಿಕ್ಕಿದ್ದು, ಸಾಕನ್ನಿಸಿದೆ ಬದುಕು ಈಗಾಗಲೇ. ಆದರೆ ಅನಿವಾರ್ಯ ಅಂತ ಬದಕ್ತಿದಿನಿ. ಹೊಟ್ಟೆಲೊಂದ್ ಜೀವ ಇತ್ತು ಅದಕ ಮೊಸ ಆಗಬಾರದಂತ.

**ಪ್ರಕರಣ : ೧೦**

ಹೆಸರು : ವಿಮಲಾಕ್ಷಿ

ವಯಸ್ಸು : ೪೯

ಜಾತಿ : ಕ್ರಿಶ್ಚಿಯನ್

ಶಿಕ್ಷಣ : ಬಿ.ಎ.

ಹುದ್ದೆ : ಪಿ.ಎಸ್.ಐ.

ನಮಸ್ಕಾರ, ಹೇಳಿ ಏನ್ ವಿಷಯ. ಓಹೊ! ಹೌದಾ. ನನ್ನ ಡ್ಯೂಟಿ ಎಕ್ಸ್‌ಪಿರಿಯನ್ಸ್ ಬರೆದರೆ ಒಂದು ಪುಸ್ತಕಾ ಆಗುತ್ತೆ. ಬರಿಬೇಡ್ರಿ ಮತ್ತೆ ಒಳಗ ಹಾಕಿಬಿಡ್ತಾರ ನಿಮ್ಮನ. ಈ ಫಿಲ್ಡ್ ಬಗ್ಗೆ ಮಾತಾಡೊದೆ ತಪ್ಪು. ಎರಡನೇ ಸರ್ಕಾರ ನಾವೇ ದೇಶಕ್ಕೆ ಅಂದ್ರೆ ಭಯಾ ಇರಲ್ವಾ! ಅಲ್ವಾ ತಮಾಷೆ ಮಾಡ್ದೆ. ಸಿರಿಯಸ್ ಆಗ್ಬೇಡಿ. ಹ್ಞೂಂ ಸ್ಟಾಟಿಂಗ್‌ನಲ್ಲಿ ಪೆದ್ದ ಪೆದ್ದನಂಗ ಇದ್ದೆ. ಭಾಳ ವರ್ಷ ಆಯ್ತಲ್ಲ ಎಲ್ಲಾ ಕಲಸಿದೆ ಫಿಲ್ಡ್. ಇಲ್ಲಪ್ಪ ಪಿ.ಯು.ಸಿ. ಮೇಲೆ ಜಾಬ್ ಆಯ್ತು. ಬಂದ ಮೇಲೆ ಬಿ.ಎ. ಮಾಡ್ಕಂಡೆ ಎಕ್ಸಟರ್ನಲ್ ಅಯ್ಯೋ ಇಲ್ಲಿ ದುಡಿದು, ಮನೇಲಿ ದುಡಿದು ಅದು ಮಾಡಿದಕ್ಕೆ ನೀವೇ ಮೆಡಲ್ ಕೊಡಬೇಕಷ್ಟೇ. ಅದು ಜಸ್ಟ್ ೫೬% ಆಗಿದೆ. ಇನ್ ಮುಂದೆ ಓದೋದು ಈ ಫಿಲ್ಡ್ ಆಗಲ್ಲಂತ ಕೈಬಿಟ್‌ಬಿಟ್ಟೆ. ಯಾವಾಗಲೊ ಒಮ್ಮೆ ತುಂಬಾ ನಿದ್ದೆ ರೆಸ್ಟ್ ಬೇಕನಸದಾಗೆ ಈ ಫಿಲ್ಡ್ ಬೇಡಾ ಅನ್ಸುತ್ತೆ ಆದ್ರೂ ನಾನ್ Enjoy ಮಾಡ್ತೀನಿ. ಅದು ನನ್ನ hobby ಇರದರಲ್ಲೆ ನಗನಗತಾ ಇರಬೇಕು. ಹ್ಞೂಂ ಪಿ.ಸಿ.ಗಿಂತಾ ಈ ಫಿಲ್ಡ್ ಪರ್ವಾಯಿಲ್ಲ. ಇದಕೂ ಮೇಲಿನ ಫಿಲ್ಡ್ ಬಹಳ ಕಷ್ಟ ಅನುಭವಗಳು ಕೇಳ್ತಿವಲ್ಲ ಇಷ್ಟೇ ಸಾಕು ಅನ್ಸತ್ತೆ. ಪಿ.ಸಿ ಫೀಲ್ಡ್‌ನಲ್ಲಿದಾಗ ಕಷ್ಟಗಳು ಆದವು ಹಂಗೆ ಮ್ಯಾನೆಜ್ ಮಾಡ್ತಾ ಬಂದೆ. ಏನಿಲ್ಲಾರಿ ಇಲ್ಲಿ ಎಲ್ಲರೂ ಕೇಳೋದು ಸೆಲ್ಯೂಟ್, ನೈಸ್ ಮಾಡೊದಷ್ಟೇ. ಅಷ್ಟಿದ್ರೆ ಏನ್ ಪ್ರಾಬಲಮ್ ಇಲ್ಲ. ಈಗಲೂ ಅಷ್ಟೇ ಮೇಲಿನವರು, ಕೆಳಗಿನವರು ಎಲ್ಲರನ್ನು ರೈಲ್ ಹತ್ತಸ್ತಿರಬೇಕು ಹಂಗೆ ಬಿಟ್ರೊ ಕೆಟ್ರಿ ಅಲ್ಲೆ, ಆವಾಗ ಶುರು ಆಗ್ತಾವೆ. ಹೆವಿಡ್ಯೂಟಿ ಸಂಟ್ರಿ ಕೆಲಸ, ಆರೋಪ, ನೀರು ಕಾಣದೆ ಇರೋ ಫಿಲ್ಡ್‌ಗಳಿಗೆಲ್ಲಾ ಒಯ್ದು ಹಾಕತಾರೆ. ಮೇಲಿನವರು ಹೇಳದಂಗೆ ಮುಚಗೊಂಡ ಮಾಡ್ತಿರಬೇಕು ಕೆಲಸ.

ಕೆಸ್‌ಗಳಾ ನಾನಾತರಹ ಬರ್ತವೆ ಸುಮ್ ಸುಮ್ನೆ ಯಾವುದೋ ಸೈಕಲ್‌ಗೆ ಗಾಡಿಯವನ್ ಗುದ್ದದ ಅಂತಾ ಅನ್ನೊದರಿಂದ ದೊಡ್ಡ ದೊಡ್ಡ ಗ್ಯಾಂಗ್ ರೇಪ್‌ಗಳು, ಬೇರೆ ಹಗರಣಗಳೆಲ್ಲ ಬರ್ತಾವೆ. ಹುಶಾರಾಗಿ ಹ್ಯಾಂಡಲ್ ಮಾಡಬೇಕು. ಏಯ್ ಗಂಡ-ಹೆಂಡ್ತಿ ಜಗಳಗಳಂತೂ ಲೆಕ್ಕನೆ ಇಲ್ಲ. ಅವು ಬಗೆಹರಿಯೊದು ಇಲ್ಲ. ಅಕೆ ಬಿಟ್ಟ ಅಂವ ಇರಲ್ಲ, ಅವನ್ ಬಿಟ್ಟ ಅಕಿ ಇರಲ್ಲ. ಇರ್ತಿನಂತ

ಕೆಸ ಬುಕ್ ಮಾಡಿದ್ರು ಅವರ ಮಕ್ಕಳ ಮದ್ವಿ ಆಗಿ ಡೈವರ್ಸಿಗೆ ಬರತನ ಅವು ಹಂಗೆ ಧೂಳು ಹಿಡಿದಿರ್ತಾವ. Action ತಗೊತಾರೆ, ಒಂದಿಪ್ಪತ್ ಸಲ, ಇಪ್ಪತ್ ತರಹ, ಅವರವರ ಬೇಡಿಕೆ ಈಡೇರತನಾ ತಿರಗಸ್ತಾರೆ. ಎಲ್ಲಿ ಮಟನಾದ್ರೂ ಯೋಚಿಸಬಹುದು ನೀವು. ನಮಗೆ ಸಾವಿರ ತಗಾದೆ ಉಸಿರ ಬಿಟ್ರು, ಉಸಿರ ಎಳಕೊಳ್ಳಕ್ಕೂ ಟೈಮ್ ಇರಲ್ಲ. ಇವತ್ ರಜೆ ಮಾಡಿದ್ದಿನಿ. ಸತ್ಯರತ್ನ ಒಂದ ತಿಂಗಳಿಂದ ಹೇಳಿದ್ರು ನಿಮ್ ವಿಷಯ. ಈಗ ಕೂತಿದ್ದಿನಿ ಅಂದ್ರಾ ಯಾವಾಗ ಹೊಗಬೇಕಾಗುತ್ತೊ ಹೇಳೊಕಾಗೆಲ್ಲ. ಎನ್ ವಿಮೆನ್ ಎಂಪಾವರ್‌ಮೆಂಟ್, ಸರ್ಕಾರ ಪ್ರೊಗ್ರಾಮ್‌ಗಳು ಏನೆಲ್ಲಾ ಮಾಡ್ತದ ಅದ್ಯಾವುದು Work out ಆಗಲ್ಲ. ತಲಪುಬೇಕಾದವರಿಗೆ ತಲಪಲ್ಲ. ಯಾಕಂದ್ರ ಎಷ್ಟೋ ಪ್ರಾಬಲಮ್‌ಗಳು ಹೆಣ್ಮಕ್ಕಳೇ ಅಲ್ಲಾ ಯಾರೂನೂ ಹೇಳಕಾಗಲ್ಲ. ಹೇಳದ್ರ ಇನಷ್ಟ ಹೆಚ್ಚಾಗ್ತವ ಹೊರತ್ ಕಮ್ಮೇನು ಆಗಲ್ಲ. ಹಂಗೆ ಅದರಾಗ ನಮ್ಮ Field ಭಾರಿ ಡೆಂಜರ್ ಎಷ್ಟೆ ಓದಿದ್ರೂ ಗಂಡೆದಿಯವರೆ ಇಲ್ಲಿ ದಕ್ಕದು. ಅದರಾಗ ಎರಡ್ ಮಾತಿಲ್ಲ. ಭಾಳಂದ್ರ ಭಾಳ ಗಟ್ಟಿ ಇರಬೇಕು. ಏನು ಬರಲಿ ಹಂಗೆ ಹೋಗ್ತಾ ಇರಬೇಕು. ಒಂದ ಎಳೆ ವ್ಯತ್ಯಾಸಾಯ್ತು ನಿಮ್ಮ ಜನ್ಮನೆ ಜಾಲಾಡ್ತಾರ. ಇಲ್ಲ ಇಲ್ಲ ಯಾವ ಪೇಪರಗೂ ಬರಲ್ಲ. ಯಾರೂ ಎದರ ಹಾಕೊಲ್ಲ ಪೋಲಿಸರಿಗೆ, ರಾಜಕಿದವರಿಗೆ ಮೊದಲೆ ಯಾರೂ ಎದರ ಹಾಕೊಳಲ್ಲ. ಹಂಗೆನರೆ ಕಾಲಕ್ಕೆ ತಕ್ಕಂಗ ಹೊಂದೊಕೊಲಾರದೆ ಎದರಾದರಿ ನೀವು ಅಲ್ಲಿ ಉಳಿಯಲ್ಲ. ನಿಮ್ ಜೀವ ತೆಗ್ಯಾಕು ಹೇಸಲ್ಲ ಅಂಥ ಡೆಂಜರ್ ಫೀಲ್ಡ್ ಇವು. ಬೆಣ್ಣೆನ ಕೂದಲು ತೆಗೆದಾಗ ತೆಕ್ಕೊಬೇಕು ಕೆಲಸ. ನಾ ಭಾಳ ಜೋರಿದ್ದೀನಿ, ಹೆಚ್ಚು ಓದಿದ್ದಿನಿ. ೧ ರೂಪಾಯಿ ಲಂಚ ತಗೊಳಲ್ಲ ಅಂದ್ರೆ ಯಾರೂ ನಂಬೊದಿಲ್ಲ. ತಗೊಲಾರದೆ ಇರ್ಲಿಕ್ಕೆ ಈ ಫಿಲ್ಡ್ ನಿಮಗೆ ಬಿಡಲ್ಲ. ನನ್ನ ಒಳಗು ಮಾಡೆ ಹೇಳ್ತಿದಿನಿ ನಾ. ಬಾವಿಯೊಳಗಿನ ಕಪ್ಪಿ ನೀರ್ ಕುಡಿದ್ರು ಬಂತು ಕುಡಿಲ್ಲಲಂದ್ರನು ಬಂತು. ನೀ ಕುಡಿದಿದೆ ಅಂತ ಅರ್ಥ. ಹಂಗೆ ಎಚ್ಚರಲಿಂದ ಎಲ್ಲಿದ್ರೂ ಇರಬೇಕು. ಇಲ್ಲಿ ಸ್ವಲ್ಪ ಹೆಚ್ಚು ಎಚ್ಚರಿಕೆ ಬೇಕೆ ಬೇಕು.

ನಾನೇ ಪಿ.ಸಿ.ಲಿಂದ ಪಿ.ಎಸ್.ಐ. ಆಗಬೇಕೆಂದ್ರೆ ಎಲ್ಲಾ ಎಲಿಜಿಬಲಿಟಿ ಇದ್ರನೂ ನನಗೆ ಆಗಬಾರದು ಅಂತ, ಎಷ್ಟು ಮಂದಿ ಪಟ್ಟು ಹಿಡದು ಏನೆನೆಲ್ಲಾ ಮಾಡ್ಯಾರ ಎರಡ ವರ್ಷ ತಡಾ ಆಯ್ತು, ಆಮೇಲೆ ಆಯ್ತು. ಈಗನೂ ಯಾಕಾದ್ರು ನಾ ಪಿ.ಎಸ್.ಐ. ಆದೆ ಅನ್ನೊ ಹಂಗ ಆಗ್ಯಾದ ಪರಿಸ್ಥಿತಿ. ಹಟಾ ಮಾಡಿ ಬಂದಿನಿ ಏನಾದ್ರೂ ಹೆಸರ ಮಾಡೆ ಮಾಡ್ತಿನಿ. ಬಿಡಲ್ಲ. ಜನಾ ಅಂತಾರ ಸಾವಿರ ಮಾತಾಡ್ತಾರ ಹೆಂಗಸರಿಗೆ ಯಾಕ್ ಬೇಕು ಇಂಥಾ ಕೆಲಸ. ನಮ್ಮ ಮನ್ಯಾಗೆ ನಮ್ಮತ್ತಿ - ಮಾವ ಯಾರೂ ಮಾತಾಡಿಲ್ಲ ಆರು ತಿಂಗಳ ನಾ ಪಿ.ಎಸ್.ಐ. ಆದಮ್ಯಾಲೆ, ಆಮೇಲೆ ತಾನೆ ಸರಿಹೊದ್ರು. ಗಂಡುಮಕ್ಕಳಕಿನಾ ಹೆಣ್ಣಮಕ್ಕಳಿಗೆ ತ್ರಾಸ್ ಆಗದು ಯಾಕಂದ್ರೆ ಇಂಥವೇ ಉದ್ರಿ ಕಿರಿಕಿರಿ. ಗಂಡನ ಮನೆ, ತವರ ಮನೆ, ಬಂಧು - ಬಳಗ ಮತ್ತು ಮ್ಯಾಲ ಇಂಥ ನಿರಾಳವಾಗಿ ಕೂಡಲಿಕೆ ಆಲಾರದಂಥ ಕೆಲಸ ಭಾಳೆ ತಾಕತ್ ಬೇಕು. ಮೆಂಟಲಿ ಭಾರಿ Strong ಇದ್ರಿ ನೀವು ಗೆದ್ರಿ ಅಷ್ಟೇ, ಹಂಗೆನೂ ಗೆದಿಲಿಕೆ ಬಿಡಲ್ಲ. ಪ್ರಯತ್ನ ಬಿಡಬಾರದು. ನಾನರ ಬಿಟ್ಟಿಲ್ಲ. ಸುಳ್ಳ ಹೇಳ್ತಿಲ್ಲ. ನಾನೆ ಶ್ಯಾಣೆ ಅಂತಾನು ಹೇಳ್ತಿಲ್ಲ. ನಮ್ಮ ತಂದಿನೆ Support ಬಹಳ ವೈಚಾರಿಕ ಆಲೋಚನೆ ಮಾಡ್ತಾರ ಅವರು.

ಇಲ್ಲಿಲ್ಲ, ನಾವು Converted ಕ್ರಿಶ್ಚಿಯನ್ ಅಲ್ಲ. ಮೂಲ ಅದೇ ಜಾತಿಯವರೆ, Converted ಆಗಾದು ಅವೆಲ್ಲ ಛಲೋ ಅಲ್ಲ ಹಂಗಾದರೆ ಏನ್ ಕಿರಿಟ ಬರೊದಿಲ್ಲ ಅಲ್ಲಾ! ಹುಟ್ಟಿದ ಒಂದ ಕಡಿ, ದುಡ್ಯಾದು ಇನ್ನೊಂದ್ ಕಡಿ, ತಿರಗದ ನೂರ ಕಡಿ ಹಂಗಾಗಿ ಇಂಥವೇ ಊರಿನ ಕನ್ನಡ ಬರಲ್ಲ ನಂಗೆ ಎಲ್ಲಾ ಮಿಕ್ಸ್ ಒಮ್ಮಿ ಹಾಂಗೆ  ಒಮ್ಮಿ ಹಿಂಗ ಹೊಡೆದೆ ಗಾಡಿ.

ಹೌದು ಎರಡ ವರ್ಷ ತಡಾ ಆಯ್ತು. ಸಾಕಷ್ಟು ತಿರಗಾಡಿ ಈ ಕೆಲಸ ತಗೊಂಡೆ ಆಮೇಲೆ ನನಗೆ ಮಹಿಳಾ ಪೋಲಿಸ್ ಠಾಣೆಗೆ ಕೊಡ್ತಿನಂದ್ರು ಅದುನು ನಾ ಒಪ್ಪಲಿಲ್ಲ. ಆಮೇಲೆ ಸಾಕಷ್ಟು ಪ್ರಾಬ್ಲಮ್‌ಗಳಾದವು. ಮೇಲಿನ ಆಫಿಸರ್‌ಗಳದು ಒತ್ತಡಗಳಿರ್ತಾವೆ. ಒಂದು ಘಟನೆ ನನಗೆ ಮರೆಯೋದಕ್ಕೆ ಆಗೋದಿಲ್ಲ. ನಮ್ಮಲ್ಲಿ ಒಬ್ರು ಪಿ.ಸಿ. ಇದ್ರು ಅವರು ಬಂದಾಗಿನಿಂದ ಒಂದೆ ಸ್ಟೇಶನ್ ಎಷ್ಟೆಲ್ಲಾ Influence ಮೇಲೆ ಐದ ವರ್ಷದ ಮೇಲೆ ಸ್ಟೇಶನ್ change ಆಗ ಬೇಕಂದ್ರ ಆಯಪ್ಪ ಮಾಡಿಲ್ಲ. ಊರು ಹೆಂಡ್ತಿ ಮಕ್ಕಳು ಬಿಟ್ಟು ಹೋಗಿಲ್ಲಾ ಒಂಥರಾ ಬೋರ್ ಮನಷ್ಯ. ಲೇಡಿ ಪಿಎಸ್‌ಐ ಅಂದ್ರ ಏನ್ ಮಾಡಕೊತಾಳ ಅಕಿ. ತಾಕತ್ ಇದ್ರೆ ನನಗೆ ಬ್ಯಾರೆ ಕಡೆ ಹಾಕ್ಲಿ ಡ್ಯೂಟಿ ಅಂದ ಎಲ್ಲಾರ ಎದುರು ಮಾತಾಡ್ತಿದ್ದ. ಒಂದೊಂದ್ ಸಲ ಎದುರು ಬಂದ್ರು ಬಂದ್ ಸೆಲ್ಯೂಟ್ ಹೊಡಿತಿರಲಿಲ್ಲ. ಚೆಂಬರ್‌ಗೆ ಕರದ್ರೆ ಬರ್ತಿರಲಿಲ್ಲ. ಕೆಲಸಾ ಹೇಳಿದ್ರೆ ಅದೆಲ್ಲಾ Neat ಆಗಿ ಮಾಡ್ತಿರಲಿಲ್ಲ. ಕೇಳಿದ್ರೆ ಸರಿಯಾಗಿ ರೆಸ್ಪಾನ್ಸ್ ಇರಲಿಲ್ಲ.

behaviour ಒಂಥರಾ ಒರಟು. ಒಂದ್ಸಲಾ ಆಫಿಸರ್ ವಿಜಿಟ್‌ಗೆ ಬಂದಿದ್ರು ಎಲ್ಲರೂ ತಮ್ಮ ಕೆಲಸಗಳ ಬಗ್ಗೆ ಹೇಳಿದ್ರು. ತೋರಿಸಿದ್ರು, ಪ್ರಾಬ್ಲಮ್ಸ್ ಹೇಳಿದ್ರು. ನನ್ನ ಅಧಿಕಾರದ ಬಗ್ಗೆ ಅವರಿಗೆ ಏನೂ ಅಷ್ಟು ಕಂಪ್ಲೇಂಟ್ಸ್ ಇರ್ಲಿಲ್ಲ. ನಾನು ಚೆನ್ನಾಗಿ ಮಾಡ್ತಿನಿ. Strict Rule ಕೂಡ fallowup ಮಾಡ್ತಿನಿ. ಆದರೆ ಈತ ಒಬ್ಬ ತಿಕ್ಕು. ಎರಡು ಮೂರು ಸಲ ಕಂಪ್ಲೆಟ್ಸ್ ಹೇಳಿದ್ದೆ ನಾನು ಮೇಲಿನವರಿಗೆ, ಆವತ್ತೆ ಬಂದ್ ಸಾಹೇಬರು ವಿಚಾರಿಸಿದ್ರೆ, ನಾ ಹೆಣ್ಮಕ್ಕಳ ಕೈಯಾಗೆ ದುಡಿಯಲ್ಲ, ಅವರಿಗೆ ಈ ಸ್ಟೇಶನ್‌ಲಿಂದ ತೆಗೆದು ಬ್ಯಾರೆ ಕಡೆ ಹಾಕ್ರಿ. ಮಹಿಳಾ ಪೋಲಿಸ್ ಸ್ಟೇಶನ್‌ಗೆ ಹಾಕ್ರಿ. ನನಗೆ ಬದಲಿ ಮಾಡ್ತಿನಂತಾರ. ಸಿಕ್ಕಾ ಪಟ್ಟೆ ಉಲ್ಟಾ ಪಲ್ಟಾ ಮಾತಾಡ್ತಾರ. ಸೆಲ್ಯೂಟ್ ಹೊಡದರ ಸೆಲ್ಯೂಟ್ ತಗೊಳಲ್ಲ ಅಕಿಗಿ ಎಷ್ಟಿರಬೇಕು. ಹೆಂಗ್ಸಾಗಿ ಅಕಿಗೆ ಅಷ್ಟಂದ್ರ ನಮಗೆಲ್ಲಾ ಎಷ್ಟಿರಬೇಕು. ನೀವು ಒಬ್ಬ ಗಂಡಸಾಗಿ ನನ್ನ ಸಮಸ್ಯೆ ತಿಳಕೊರಿ ಅಂತೆಲ್ಲಾ ಹೇಳಿದ. ಸಾಹೇಬ್ರು warn ಮಾಡಿದ್ರು ಅವರಿಗೆ. She as a sincier worker ನೆನಪಿರಲಿ ಅಂತ ಅವನಿಗೆ ಬೇರೆ ದೂರದ ಪ್ಲೇಸ್‌ಗೆ Transsfer order ಕೊಟ್ರು. ವಿಧಿಯಿಲ್ಲದೆ ಹೋದ. ಆಮೇಲೆ ಒಂದು ತಿಂಗಳು, ಹದಿನೈದ್ ದಿನಕೆಲ್ಲಾ ಫೋನ್ ಮಾಡೊವ ಮೇಡಂ sorry ನಾ ಹಂಗೆಲ್ಲ ಅನಬಾರದಿತ್ತು ಅಂದಿನಿರಿ ನನಗೆ ಅದೇ ಸ್ಟೇಶನ್‌ಗೆ ಕರಿಸಿಕೊಳ್ರಿ please ಅಂದ. ನಾನೇನು ಮಾಡಕಾಗಲ್ಲ. ಅದು ಸಾಹೆಬ್ರು ಆರ್ಡರ್ ನೀನೆ ಅವರ ಜೊತಿ ಮಾತಾಡು. ನನಗೂ ಮನಸ್ಸಲ್ಲಿತ್ತು ಬೇರೆ ಕಡೆ ಹೋಗಿ ಬರ್ಲಿ ಅಂತ. ಗೊತ್ತಾಗ್ಲಿ ಹೊರಗಿನ ವಾತಾವರಣಂತ ಸುಮ್ನಿದ್ದೆ. ನನ್ ಫ್ಯಾಮಿಲಿ ಡಿವೈಡ್ ಆಗೊದಕ್ಕು ಈ ಯಪ್ಪನೆ ಕಾರಣ. ನಾನು ಪಿ.ಸಿ.ಗೆ love ಮಾಡಿ ಮಾಡ್ಕೊಂಡೆ ಒಂದೇ ಸಮದಲ್ಲಿದ್ದಾಗ problem ಶುರುವಾಯ್ತು. ನಾನು ಹೈ ಪೋಸ್ಟಗೆ ಹೋಗಿ, ಆತ ಅದೆ ಪೋಸ್ಟಗೆ ಉಳಿದುಕೊಂಡಂತೆ. ಆಮೇಲೆ ಈ ಪಿ.ಸಿ. ನನಗೂ ಅಕಿಗೂ ಸಂಬಂಧದ ಅದಕೆ ಅಕಿ ಮಹಿಳಾ ಪೋಲಿಸ್ ಠಾಣೆಗೆ ಹೋಗ್

ಅಂದ್ರ ಹೋಗಲಾರದ ಇಲ್ಲಿಗಿ ಬಂದಾಳ. ನನಗೆ Transferನು ಮಾಡಲ್ಲ ನೋಡಬೇಕೆಂದ್ರೆ ಅಂತೆಲ್ಲಾ ಹೇಳಿದ. ನನ್ನ ಗಂಡಂದು ಒಂದೇ ಜಿದ್ದು ಆತ ಆ ಸ್ಟೇಶನ್‌ನಾಗ ಇರಬಾರದು. ನಾ ಎಷ್ಟು ಹೇಳದೆ ಅದು ಮೇಲಿಂದ ಬರಬೇಕು. ಆರ್ಡರ್ ನಾ ಹೇಳಿದ್ರೆ ಕೇಳ್ತಿಲ್ಲ. ಅಲ್ಲಿ ಯಾರು ಅಂದ್ರನು ಕೇಳದೆ ನನ್ನಿಂದ ದೂರಾದ್ರು ಅದೆಲ್ಲಾ ಬಿಡಿ ಬೇರೆ ವಿಷಯ.

ಆಮೇಲೆ ಒಂದಿನಾ ಆ ಪಿ.ಸಿ. ಅಲ್ಲಿ ಇನ್‌ಚಾರ್ಜ್ ಪಿ.ಎಸ್.ಐ.ಗೆ ಸುಳ್ಳು ಹೇಳಿ ಹುಶಾರಿಲ್ಲ ತೊರಸ್ಕೊಂಡು ಬರ್ತಿನಂತೆ ಹೇಳಿ. ಫುಲ್ ಕುಡದು ಸ್ಟೇಶನ್‌ಗೆ ಬಂದು, direact ಚೆಂಬರ್‌ಗೆ ಬಂದು. ಬಾಯಿಗೆ ಬಂದ್ಹಾಂಗೆ ಬಯ್ದು. ನೀ ಗಂಡನ ಜೋಡಿ ಅಧಿಕಾರ ಬಂದ ಮೇಲೆ ಜೀವನಾನ ಮಾಡಿಲ್ಲ ನೀ ಅವ ನಿನಗೆ ಕೆಳಗಿನವನಾಗಿ ಕಂಡ ಅಲ್ಲ. ನಿನಗಿನ ಮ್ಯಾಲಿರವನ ಕೂಡಾ ತಿರಗಿ ಅವನಿಗೆ ಹುಚ್ಚು ಮಾಡ್ದಿ ಬಿಟ್ಟು ಬಂದಿ ನಿನಗೆ ಅದಕೆ ಮಕ್ಕಳಾಗಿಲ್ಲ ಕಂಡಕಂಡವರಿಗಿ ಬಸರಾಗಿ ಅಬಾರ್ಶನ್ ಮಾಡ್ಕೊಂಡರ, ಖರೆ ಗಂಡನ ಜೊತಿ ಕೂಡ್ಲಿಕಿ ಮನಸ್ಸನು ಬರಲ್ಲ ಮಕ್ಕಳನು ಆಗಲ್ಲ. ನಿನ್ನಂತ ಬಂಜೆಗಿ, ಗಂಡ ಬಿಟ್ಟಕಿಗಿ ನಮ್ಮಂತವರು ಹೆಂಡರ, ಮಕ್ಕಳಿಗಿ ಬಿಟ್ಟರಾ ಕಷ್ಟ ನಿನಗೇನು ಗೊತ್ತು ನಿವೆಲ್ಲಾ ಹೆಂಗಸರು ಪೊಲೀಸರಿದಿರಲ್ಲ ನಿವೆಲ್ಲ "ಗೌರ್ಮೆಂಟ್ ಸೂಳೆ"ರು ನೀವು ಅಂತ ಬಾಯಿಗೆ ಬಂದ್ಹಂಗೆ ಬಯ್ದು. C.P.I., D.S.P.ಗೆ ಎಲ್ಲಾ ಕಡೆ ಫೋನ್ ಮಾಡಿದ್ರು. ಇವರಿಗೆಲ್ಲ ಕರೆಯಾಕ ಕಳಿಸಿ ಸರಿಗೆ ಇಬ್ಬರಿಗೂ ಚಾರ್ಜ್ ಮಾಡಿ. ಅವನ influence ಅವನು ಅದೇ ಸ್ಟೇಶನ್‌ಗೆ ಬಂದ. ನನಗೆ ಬೇರೆ ಕಡೆ ಪೊಸ್ಟಿಂಗ್ ಕೊಟ್ರು, ಮುಳ್ಳು ಬಟ್ಟೆ ಮೇಲೆ ಬಿದ್ರು, ಬಟ್ಟೆ ಮುಳ್ಳಿನ ಮೇಲೆ ಬಿದ್ರು ಎರಡು ಒಂದೆ. ಹರಿಯೊದು ಬಟ್ಟೆನೆ ಅಲಾ. ಹಂಗೆ ಸಾವಿರಾರು ಸಮಸ್ಯೆಗಳು ನಿಭಾಯಿಸ್ತಾ ಹೋಗಬೇಕು. ಗಂಡು ಹೆಣ್ಣು ಅಂತೆನಿಲ್ಲ. ಎಲ್ಲಾರಿಗೂ ಸಮಸ್ಯೆಗಳು ಈ ಫಿಲ್ಡ್‌ನಲ್ಲಿ ಇದಾವೆ. ಅದೊಂದು ಬಿಟ್ಟರೆ ಬೇರೆ ಏನು ಅಂಶಗಳಿಲ್ಲ. ಇರ್ತವೆ. ಮೇಲಧಿಕಾರಿಗಳದು ಒತ್ತಡಗಳೆಲ್ಲ ಇರ್ತಾವೆ. ನಿಭಾಯಿಸಬೇಕಷ್ಟೇ. ಆಗಲ್ಲಂದ್ರೆ ಬಿಟ್ಟ್ ಹೋಗಬೇಕಷ್ಟೇ.....

ಇಲ್ಲ ಮತ್ತೆ ವಿಮೆನ್ ಸ್ಟೇಶನ್‌ಗೇನು ಹಾಕಿಲ್ಲ. ನನಗೆ ಅಲ್ಲಿಗೆ ಹಾಕಿಕೊಳ್ಳೋದು ಬೆಶಿ ಅನಸ್ತಿದೆ.

**ಪ್ರಕರಣ : ೧೧**

ಹೆಸರು : ಪ್ರಮಿಳಾ ಬಾಯಿ

ವಯಸ್ಸು : ೪೯

ಜಾತಿ : ಲಂಬಾಣಿ

ಶಿಕ್ಷಣ : -------

ಹುದ್ದೆ : ಅಧ್ಯಕ್ಷ

ಎರಡು ವರ್ಷದ್ದಿಂದ ಕೆಲಸಾ ಮಾಡ್ಲಿಕತಿನಿ ಊರುಗಿನ ಮಂದಿಯೆಲ್ಲಾ ಒಪ್ಸಿ ಇಲೆಷನ್ ನಿಂದರಿಸಿದ್ರು ಆರಿಸಿ ಬಂದಿನಿ. ಅಧ್ಯಕ್ಷರ ಬದಲಾವಣೆ ಮಾಡದು ಪದ್ಧತಿ ಅದ. ಆದರೆ ನನಗೆ ಇರಲಿ ಅಂದಿದಕ್ ನಾನೆ ಮಾಡ್ತಿನಿ. ಮಿಸಲಾತ್ಯಾಗ ನಂದಾಗಿರದಂತ ಸಿಂಗವೆಲ್ಲಾ ಏನಂ ಗೊತ್ತಾಗಲ್ಲ. ನನ ಮಗ ಅದಾನಲ್ಲ ಎಲ್ಲಾ ಅವಂದೇ ಕುರುಪ, ಅಧಿಕಾರ ಬಂದಾಗಿಂದ ಎಲ್ಲಾ ಅಂವ ಹೇಳಿದಂಗೆ ಕೇಳಿನಿ

ಹ್ನೂಂ. ಅಂದರನೆ ಎಲ್ಲಾ ಊರನ ಕೆಲಸಗಳು ಮಾಡಲಿಕಿ ಆಗ್ಯಾದ. ಹಯ್ ನಾ ಇನು ಸಣ್ಣಕಿ ಇದ್ದ ಬಾರ, ತೇರಾ ವರಸಿದಕಿನೂ ಇರಲಿಲ್ಲ ಆವಾಗೆ ಮದವಿ ಮಾಡಕೊಂಡ ಬಂದ ಪೀರ್‍ಯಾನಾಯ್ಕ ಮುಂದ ಮೂರೆ ವರ್ಷಕ ಎದಿಬ್ಯಾನಿ ಅಂತೇ ಸತ್ತ್ ಹ್ವಾದ. ಆವಾಗ್ನಿಂದ ತಾಂಡದಾಗ ಒಂಟಿಬಾಳ್ವೆ ನಡೆಸಿನಿ. ಅಪ್ಪ ಸಾಯಗ ವರಸದ ಕೂಸ ಇತ್ತು. ಕೂಲಿ ಮಾಡೆ ಬದಕಲಕತಿನಲ್ಲ. ಎಲ್ಲ ನಂಟರು, ಬೀಗರ್, ಮಂದಿ ಮಕ್ಕಳ ಅರಾ. ಯಾರಿಗೆ ಯಾರ್ ಆತಾರ, ನಾಕ್ ಜನದಾಗ ಮ್ಯಾಲಿದ್ದರ ಎಲ್ಲರು ಮನಿತನ ಬರತಾರ, ಮನಿಗಿ ಕರಿತಾರ, ನಾವೆಲ್ಲದರಾಗ ಕಮ್ಮಿ ಅದಕ ನಮಗ ಇಲ್ಲಿತನಾ, ಅಂದರೆ ರಾಜಕೀಗಿ ಬರಾತಾನಾ ಕೀಳಂತೆ ನೋಡಲಿಕತಿರು, ಈಗ ಸ್ವಲುಪು ಬದಲೀ ಅನಿಸ್ತದ. ಅಧಿಕಾರದಾಗ ಇದ್ದರ ಯಾರ್ ಬಿ ಸಲಾಮ್ ಹೊಡಿತಾರಲ ಹಂಗೆ ನಂದು ಬದಕು.

ರಾಜಕೀ ಅಂದರ ಹೆದರಿಕೆ ಅದ ನನಗ ಇನಾನು, ಊರನ್ ಜನಾ ಎಟ್ ಹೇಳಿದರು ಕೇಳಿಲ್ಲ. ಜುಲಮಿ ಮಾಡಿ ತಂದ್ಯಾಕ್ಯಾರ ಇಲ್ಲಿಗ್, ಸುಮ್‌ನೆ ಒಂಟಿ ಪೊರ ನನ ಮಗ ಬಡಿದಾಡ್ತದ. ಅದಕಂತೆ ಯಾರಿಗಿ ದುಸರಾ ಮಾತಾಡಲ್ಲ ನಾ. ಏನದಾ ಊರಂದ್ರೆ ನಾಕ ಮಾತ ಬರ್‍ತಾದ ಹೊಗತಾದ, ಮಾತಾಡಕಂಬರ್ ಆಡಲಿಕ ಬಿಡಂತ ಸುಮ್ಮಿಕಿರೊದಕ ಭಾಳ ದಿನಾ ತಾಳತಿವಿ ಸಮಸ್ಯೆ ಅಂದ್ರ ನೂರಾರ್ ಇರ್‍ತಾವ ಒಂದಂದ್ರ ಹೆಂಗಸರಿಗಿ ಇದು ನಿಭಾವಣಿ ಮಾಡದ ಹಗರಲ್ಲವಾ ಹಿಂದ ಗಟ್ಟಿಗರ್ ಇರಬೇಕ ನನಗೆ ಒಂದ್ ಗಂಡ್ಸ ಮಗಾ ಅದಾಲ ಆನಿಬಲ ಇದ್ದಂಗ ಅದು.

ತಾಂಡದಾಗಿನವರೆ ಅಂತಾರ, ಅಕಿ ಎಲ್ಲಾ ಬಿಟ್‌ಕೆಸೀ ರಾಜಕೀಗಿ ಇಳದಾಳ, ಗಂಡ ಸತ್ತಿದಕ ಹಿಗ್ಗಾಗ್ಯಗದ ಅಕಿಗಿ, ಒಂಟಿ ಹೆಂಗ್ಸ್ ಕಸ ಮುಸರಿ ಮಾಡ್ಕಂಡ ಇರಾದ್ ಬಿಟ್ ದೇಶಾಳದಕ, ದುನಿಯಾದಾಗ ಆಗಾದೊಂದನ್ ಆಗಲ್ಲತು. ಅಂದ್ರ ಮಳಿ, ಬೆಳಿ, ಇಲ್ಲಾ ಎಲ್ಲಾ ಬಡರ್ ತಿನಲಾರದಟ್ ರೆಟ್ ಹೆಚ್ಚಾಗದಕ, ಬಡಬಗರ್ ಸಾಯ್ಯಾದೆ. ಹೆಂಗಸ್ ಲೋಡ್ಯಾರು ಕೆಲಸಾ ಮಾಡದರಲಿಂದಂತಾರ ಮತ್ ಊರವರ ಸಪೆಟ್‌ಲಿಂದ ಬಂದಿನಿ ಆದ್ರ ತ್ಯಾಡೆ ಜನಾ ಇಂಗಂತರ್‍ತಿತಾರ ಯಾಕಂದ್ರ ಅವರಿಗಿ ಅವರ ಹೆಂಡರಿಗಿ ನಿಲ್ಲಿಸಿದರ ಅವರ ಮೆರಿಬೊದಿತ್ತ ನಂದಂದ್ರ ಅವರ ಬ್ಯಾಳಿ ಬೆಯಲ್ಲ ಹ್ನೂಂ ಅದಕ ಇಂಗೆಲ್ಲಾ ಮಾತಾಡ್ತಾವ, ನಾ ಏನ್ ತೆಲಿಗಿ ತೆಗೊಮಲ್ಲ ದುನಿಯಾದಾಗ ಎಂಗಿದ್ದರೂ ಒಂದ ಅಂತದ.

ಇಟೆಲ್ಲದಕ ಅಂದ್ರ ನನಗ ತಾಂಡಾದ ಮೀಠ್ಯಾನಾಯ್ಕಗ ಸಂಬಂಧ ಹಚ್ಚಿ ಮಾತಾಡ್ತಾರ. ನನ ಗಂಡ ಪೀರ್‍ಯಾನಾಯ್ಕ-ಮೀಠ್ಯಾನಾಯ್ಕ ವಾರಿಗ್ಯಾರ್ ಅವರಿಬ್ಬರೂ ಒಮ್ಮೆ ಮದ್ವಿ ಆಗಿ ಬಂದವರ, ನನಗಂಡ ನಿಂತರ, ಕುಂತರ್ ಮೀಠ್ಯಾ. ಅಂತ ಸಾಯ್ತಿದ್ದು ಅಷ್ಟೆ ಅವರ ದೊಸ್ತಾನಿ. ಮಿಠ್ಯಾ ನಾಯ್ಕನ ಹೆಂಡ್ತಿ ನಾನು ಸಂಬಂಧದವರು, ಒಂದೇ ಊರವರು ಮದ್ವಿ ಆಗಿದ್ದು ಒಂದೇ ಊರವರ, ಒಮ್ಮೆ ಹೆಡೆದಿದ್ದು, ಆಕಿಗಿ ಮತ್ತೆಡ್ಡ ಎಣ್ಣ್ ಆಗ್ಯಾವ ನನ ಗಂಡಗ ಜಡ್ಡ ಬಂದ ಸತ್ತ.

ಈಗ ಮೀಠ್ಯಾ ನಾಯ್ಕಗ ಹೊಲಸ್ಯಾರ, ಅಂವ ನನ ಗಂಡಿದ್ದಾಗಿಂದ ಇಟಕೊಂಡನಂತಾರ, ಅವನ ಹೆಂಡ್ತಿನೂ ಈಚಿಗಿ ನಂಬ್ಯಾಳ ಎಲ್ಲಾ. ಏಟ್ ಹೇಳಿ ಮನಿಗಿ ಹೋಗಿ ಹಕಿಕತ ಮಾಡಿದ್ರೂ ಅಕಿ ಮಾತಾಡಿಲ್ಲ ತಿರಗಿ ನೋಡಲಾರದಂಗಾಗ್ಯದ ನಮ್ಮಾತ್ಮಕ ಗೊತ್ತಾದ ಮೀಠ್ಯಾನಾಯ್ಕ ನಮ್ಮಣ್ಣನ ಸರಿಹಾನ

ನನಗಂಡನ ಖಾಸ ದೊಸ್ತ ಅದಕ ಅವ ಸತ್ತ್‌ಮ್ಯಾಲ್ ಮನಿದೆಲ್ಲ ಮಗ ದೊಡ್ಡವಾಗತನಾ ಅವನೆ ಮಾಡ್ಯಾನ. ನನಗ ಆಸರ ಆಗೆಲೆಂದ ಇಲೆಷನ್ ನಿಲ್ಲಿಸಿ, ಗೆದಸ್ಯಾನ ಊರಾಗ ಛಲೋ ಮಂದಿಗಿ ನಾ ಏನ್ ಅಂತ ಗೊತ್ತಿದ್ದದಕ ನಾ ಎಡ್ಡ ವರ್ಷದಲಿಂದ ಕೆಲಸ ಮಾಡಲಾಕಾಗ್ಯದ.

ಇದರದ ನೂರೆಂಟ್ ಕೆಲಸಾ, ಸಮಸ್ಯ ಬಂದರ್ ಮೀಠ್ಯಾ ನಾಯ್ಕಮತ್ ನನ ಮಗ ಮಾಡ್ತಾರ. ಅದರ ತ್ಯಾಡೆ ಮಂದಿಗಿ ಹೊಟ್ಟಿಬ್ಯಾನ್ಯಾಗದ ಅಂವ ಇಲ್ಲಂದ್ರ ನನಗ್ ಏನರ ಮಾಡಬಹುದಿತ್ತು. ಈಗೆನ ಕಿಸ್ಯಾಕಾಗಲ್ಲಂತ ಮಾತಾಡಿ ಸಾಯ್ತಾವ. ಊರನ್ ಕೆಲಸಂದ್ರ ಮನಿ ಕೆಲಸಂದೇ ಮಾಡ್ತಿನಿ. ಗ್ರಾಮಪಂಚಾತಿ ಬಾಡಿಗಿ, ಇತ್ರ, ಸೊಂತದ್ ಕ್ಯಾಣಿ ಕಟ್ಟಿಸಿವಿ ಅಂಗನೊಡಿ ಸಾಮಾಣ್ ತರಸಿವಿ. ನರ್ಸ್ ಡಾಗಡರಗಳ ಬರಾದಕ ಎಲ್ಲಾ ವ್ಯವಸ್ಥ ಮಾಡ್ತಿವಿ.

ರೊಕ್ಕಾ ಇಲ್ಲದ ಯಾರ್ ಏನ್ ಮಾಡಲ್ಲ ಅಂಗೆ ನಾವುನು ಇದಿವಿ ತಂಗಂಡ್ರ್ ಒಂದ್ ಕತಿ ಬಿಟ್ಟಿರ ಒಂದಕತಿ ನನಗ್ ಮನಸಿಲ್ಲಂದ್ರನೂ ನಂದೆನ್ ಕೇಳಾಲ್ಲ. ಊರಾಗ ನಾಕಮಂದಿಗಿ ಅಂಜಿ ನಡಿಬೇಕ. ನೀ ಬ್ಯಾಡಂದ್ರ ಬೀಡ್ ಪಮಿಲಕ್ಕೆ ನಮಗಾರ ತಿನಲಿಕ ಬಿಡ್ ಎಳೆದಟಕ ಹೆಬ್ಬೆಟ್ಟಾಕು ಸಾಕ್ ಮುಂದಿಂದೆಲ್ಲಾ ಮೀಠ್ಯಾ ಅದಾನಲ್ಲ ನೊಡ್ಕೊತಾನಂತರ ಊರಾನ ಹಿರಿಕರು. ಅವರೆಲ್ಲ ನಮ್ಮ ಕೇರಿಗ್ ಬರಲ್ಲ ನಾವೇ ಹೊಗತಿವಿ ಅರ್ಜ್ ಇತ್ತಂದ್ರ ಅವರೇ ಹೇಳಿ ಕಳಸ್ತಾರ.

ಮೊದಲಂದ್ರ ಜಾತಿ ನೋಡಿ ಕರಿತಾರ ಎಲ್ಲ. ನಂದಾದ ಮ್ಯಾಲ ಅದಾರಲ್ಲ ಜಾತಿ ಗಂಡ ಮಗನದಾನ ಎಲ್ಲದಕ ಅವನೇ ಹೋಗಾದ ಬೇಶಿ. ನನಗ ಕರದರನು ಆಯಪ್ಪಗ ಕಳಸ್ತಿನಿ. ಅವರಿಲ್ಲಂದ್ರ ನನ್ ಮಗಾ ಹೊಗತಾನ ನಾ ಇಲ್ಲಿತನಾ ಯದಕನು ಓಗಿಲ್ಲ. ಸುಮ್ಮನೆ ಹೋಗಬೇಕ, ಜಾತಿ ಅಂತ ನಮ್ಮ ಬಗಲಾಗ ಯಾರ್ ಕೂಂಡ್ರಂಗಿಲ್ಲ. ಆಮೇಲೆ ನಮಗ್ ಜನದಾಗ ಭಾಷನ್ ಮಾಡ್ಲಿಕ ಬರಲ್ಲ ಎಲ್ಲಾ ಬ್ಯಾಡಂಬದ್ ಬೇಶಿ ಅಲ್ಲಾ ಅದಕ ಓಗಲ್ಲ. ನಮ್ಮ ಸಭಾಗಳ ಊರಾಗಂದ್ರ ಕಮ್ಮಿ ಜನೂ ಓಗಲಾರದ್ ಜಾಗದಾಗಿಟ್ಟರ ನಾ ಓಗಲ, ಬಯಲ್‌ನಾಗೆಲ್ಲೆನ ಆದರ ಹೋಗಿ ಒಂದ್ ಕಡಿ ಕೂತ್ ಹೇಳಿದೆಲ್ಲಾ ಕೇಳಿ ಬರ್ತೀನಿ. ಎಲ್ಲಾರ ಹೆಬ್ಬಟ್ ಒತ್ತದಿತ್ತಂದ್ರೆ ನನಮಗ, ಮತ್ ಮೀಠ್ಯಾನಾಯ್ಕ ಹೇಳಿದಲ್ಲಿ ಒತ್ತತಿನಿ. ಹಿರಿಕರಿಗಿ ಸಲಾಮಿ ಹೊಡೆದ್ ನಡಿಯಂತ ಬರಾದ್.

ಒಂದ ಟೇಮ್ ಶಾಲಿ ಮಳಿಬಂದ್ ಸೊರ್ತದಂದ್ರ ಸರಿ ಮಾಡಲಾಕ ಎಲ್ಲಾ ಸಾಮಾನ್, ರೆತಿ, ಶಿಮಿಂಟ ತಂದ್ಯಾಕ್ಸಿ ಕಾಯಲಾಕನು ಇಟ್ಟದ್ವಿ ಆದರಬಿ ೨೫ ಚೀಲದ ಶಿಮಿಂಟನಗ ಅರ್ಧಕರ್ಧ ಗಾಯಬ್ ಆಗ್ಯಾದ, ಎರಡೆ ದಿನದ್ರಾಗ, ಇನಾ ಕೆಲಸಾ ಶುರು ಆಗಿರಲಿಲ್ಲ. ಆವತ್ ಅವತ್ತಿಂದಿನ ಕಾಯಲಾಕಿರೊನ ಬಂದ್ ಮನಿಗೆ ಮನಿಗಿ ಕುಂಜಿಕೊಟ ಇವತ್ತೊಂದಿನ ಕೆಲಸಾದ ನನಗ ಮುಂಜಾಣೆ ಬಾರಾತನ ಬರ್ತಿನಿ. ಏನಾಗಲ್ಲಂತೇಳಿ ಹ್ಯಾದ, ಮರ್‌ದಿನ ಕೆಲಸ ಶುರು ಮಾಡ್ಲಿಕ ಹ್ಯಾದರ ಅರ್ಧ ಶಿಮಿಂಟಿಲ್ಲ. ನನ್ ಮಗಾ ಗಾಬರಿಮಾಡಿ ಕುಂಜಿ ಹಾಕೊಂಡ ಮನಿಗಿ ಬಂದ, ಎಲ್ಲಾ ಹೇಳಿದ ಮತ್ತವತ್ ಮೀಠ್ಯಾನಾಯ್ಕ ಊರಾಗಿರಲಿಲ್ಲ. ಗೌಡರ ಮನಿಗಿ ಹೋಗಿ ಇಷಯ ಹೇಳದ್ರಾಗ, ಊರ ಮಂದಿಗೆಲ್ಲಾ ಅದ್ಯಾಂಗನೆನೊ ಎಲ್ಲಾ ಗೊತ್ತಗ್ಯಾದ ಪಂಚಾಯ್ತಿ ನೆರಸಿ ನನಗ ನನ್ ಮಗನಿಗಿ ಇಚಾರ ಮಾಡಿ. ಎಲ್ಲಾ ಹಕಿಕತ

ಹೇಳಿದರ್‌ನು ನಂಬಿಲ್ಲ ಎಲ್ಲಾರ ಸೇರಿ ಪಾಚಹಜಾರ್ ೫೦೦೦/- ರೂಪಾಯಿ ಜುಲ್ಮಾನಿ. ಹೊತ್ ಮುಣಗದ್ರಾಗ ಕಟ್ ಬೇಕಂದ್ರೂ ನಮ್ಮದ್ಯಾತರ ತಪ್ಪಿಲ್ಲಂದ್ರ ಕೆಳಲ್ಲ. ಹೆಚ್ಚಾಗಿ ಮಾತಾಡದರ ಕೆಲಸಕ ರಾಜಿಣಾಮಾ ಕೊಡು, ರೊಕ್ಕ ಕಟ್ಟಿಲ್ಲಂದ್ರ ನನಗ ಮಗನಿಗಿ ಮೀಠ್ಯಾನಾಯ್ಕಗ ತಲೆಬೊಳ್ಸಿ ಕತ್ತಿಮ್ಯಾಲ ಕೂಂಡ್ರಿಸಿ ಮೂರ ದಿನ ಊರಮೆರಸ್ತಿವಿ ಅಂದರೂ ರೊಕ್ಕ ಇರಲಿಲ್ಲ. ೧೦/- (ಧಾದಂಗ) ದಂಗ ಬಡ್ಡಿ ತಂದ ಕಟ್ಟಿ ಇನಾ ಅದು ಕಟ್ಟಾದ ಮುಗಿದಿಲ್ಲ. ತ್ಯಾಡೆ ದಿನ ಸುಮಕಿದ್ದು ರಾಜಿಣಾಮ ಕೊಡ್ತಿನಿ. ನಮ್ಮಂಥವರಿಗಲ್ಲ ಇವೆಲ್ಲಾ ದೊಡ್ಡಮನಿ, ಮಜಬೂತ್ ಗಂಡಸಿಗಿ ನಡಿತಾವ.

**ಪ್ರಕರಣ : ೧೨**

ಹೆಸರು : ಮಲ್ಲಮ್ಮ

ವಯಸ್ಸು : ೨೯

ಜಾತಿ : ಎಸ್.ಟಿ.

ಶಿಕ್ಷಣ : ೩

ಹುದ್ದೆ : ಉಪಾಧ್ಯಕ್ಷ

ನಮ್ಮ ಹೆಸರು ಮಲ್ಲಮ್ಮ ನಾವು ಬ್ಯಾಡರು ನಮಗ ನಾಯಕರು ಅಂತಾರ ಅದರಲ್ಲೆ ಎರಡ್ ಬಣ. ನಾವು ಊರ ನಾಯಕರು ನನ್ನ ಗಂಡಗೇನು ಇಷ್ಟ ಇಲ್ಲ ನಾ ರಾಜಕೀಗಿ ಬರದು, ನಾವಿಬ್ಬರೂ ಹೆಂಡ್ತಿರು, ಅವರಿಗಿ ನನಗೆ ಮಕ್ಕಳಾಗಿಲ್ಲಾಂತ ಅಕಿಗಿ ಮಾಡಕೊಂಡ ಬಂದರ. ಇಲ್ಲ ಬ್ಯಾರೆ ಇಲ್ಲ. ಒಂದೇ ಮನ್ಯಾಗ ಇದಿವಿ. ಅಕಿ ಶಾಲಿ ಕಲತಾಳ, ನನಗಿನ ಚಂದದಾಳ. ಹೆಚ್ಚೆಂದ್ರ ಮೂರ ಗಂಡ ಹಡದಾಳ, ವರಷಿಗೊಂದರಂಗ ಮದಿ ಆಗಿ ವರ್ಷದಾಗ ಬಸರಾಗ್ಯಾಳ. ಹ್ಞೂಂ ನನಗೆ ಬಂಜಿ ಅಂತ ಮಕ್ಕಳಿಗಿ ಎತಗೋಲಾಕ ಬಿಡಲ ಈಗನೂ ಕೆಲಸದಕಿ ಇದ್ದಂಗ. ನಾ ಮನ್ಯಾಗ ಇರದು. ನಾ ರಾಜಕೀಗಿ ಬಂದರ ಮನ್ಯಾಗ ಮಾಡವರು ಯಾರೂ ಇಲ್ಲ ಅಂತ ಬ್ಯಾಡ ಅಂತಿದ್ದ ನಮ್ಮ ನಾಯಕ ಖರೆವು ಅಂದ್ರ ನಮ್ಮ ತಂಗೀಗಿ ಇಲೆಕ್ಷನ್ ನಿಂದರಸ್ಸಬೇಕು, ಸಾಲಿಕಲ್ತಾಳೆ, ಶ್ಯಾಣೆ ಅದಳಂತ ಆದರೆ ಅಕಿ ರಾಜಕೀಗಿ ಬಂದ್ರ ನಾ ಪೂರ್ತಿ ಮೂಲಿಗಿ ಕುಡಬೇಕಾತದಂದು ನಮ್ಮ ತೌರ ಮನಿಯವರು ಯೊಚನಾ ಮಾಡಿ ನನಗೆ ಗೆದಸಿದ್ರು.

ಸಮಸ್ಯೆ ಅಂತೇನಿಲ್ಲ ನಮ್ಮ ಅಣ್ಣ ಪಂಚಾಯ್ತ್ಯಾಗ ಕೆಲಸ ಮಾಡ್ತಾನ. ಅದೇನಂದರ ಕಾಗದ ಪತ್ರ ಬರೆಯದು, ಎಸ್.ಡಿಸಿ. ನಾ ಹೌದು ಅದೇ ನಾವು ಓದಿಲ್ಲ. ಬರದಿಲ್ಲ. ನಮಗವೆಲ್ಲ ಅಲ್ಲಾಕ ಬರಂಗಿಲ್ಲ, ಮಣ್ಣಿಲ್ಲ. ಅಂವ ಸರದಾರ ಅಲ್ಲ ಅದನಂತ ನನಗ ಜನಾ ಎಲ್ಲಾ ಗೆದಸಿ ತಂದ್ರೂ. ಎಲ್ಲಾ ಅವನೇ ಮಾಡ್ತಾನ. ಸಯಿ ಬೇಕಾದ್ರ ಮನಿಗಿ ಬರ್ತಾನ, ಅದಿಟು ಸಯಿ ಮಾಡದು, ಮನಿಕೆಲಸ ಮಾಡಕಂತ ಕೂಡದು ಹ್ಞೂಂ ನನ್ನ ಹೆಸರಿಟು ಬರಿಲಕ ಬರ್ತದಷ್ಟೇ. ಒಮ್ಮೊಮ್ಮೆ ಅದನು ಅಂವನೆ ಬರೆದ ನಡಿ ಅಂತಾನ. ಇಲ್ಲವಾ ಗಂಡಸರ ಸಾಯಾ ಇಲ್ಲದಂಗ ಏನೂನು ಆಗಲ್ಲ ಅವರಿದ್ರ ಎಲ್ಲಾ ಬಾಳೆವು ಚಂದಾಗ್ತಾದ. ಸ್ವಲುಪು ಬದಲಾಗಿನಿ ಮೊದಲೆಲ್ಲಾ ಎಂಥದೋ ಸೀರಿ-ಕುಬಸ ತೊಟಗೊತ್ತಿದ್ದ,

ಈಗ ದೊಡ್ಡ ಪಟ್ಟೆ ಸೀರಿ, ಮಂಚಿಂಗ್ ಕುಬಸ ಹಾಕೋತಿನಿ ಹೊರಗಬಂದ್ರ, ಗರತಿ ಗೌರಮ್ಮನಂಗ ಕಾಣ್ತೆನಂತಾರ ಎಲ್ಲಾರು.

ತೌರುಮನಿಯವರಿಗೆನು ಕಮ್ಮಿ ಇಲ್ಲ. ಬೇಕಾದಟು ರೊಕ್ಕ, ಬಂಗಾರ, ಕೀರತಿ, ಎಲ್ಲಾ ಚಂದ ದುಡದಿಟ್ಟಾನ ನಮ್ಮಪ್ಪ. ಒಂದ ಟೇಮ್‌ನಾಗ ಮೆರದ ಮನಿತನ ನಮ್ಮದು. ಗಂಡನ ಮನಿಗೆ ಬಡತಾನ, ಎಲ್ಲಾ ಮೋಸ ಮಾಡಿ ಮಾಡಕೊಂಡಾರ ನನಗ, ಯಾರದೋ ಊರಾಗಿಂದ ಹೊಲ, ಗದ್ದಿ ಎಲ್ಲಾ ತೊರಸಿ ಮಾಡ್ಕೊಂಡ್ ೧೫ ದಿನದಾಗ ಎಲ್ಲಾ ಗೊತ್ತಾಗ್ಯದ, ಬ್ಯಾರೆ ದಾರಿ ಇಲ್ಲ ಸುಮ್ಮ ಕುಂತಿನಿ. ಅದೆಲ್ಲಾ ಬ್ಯಾರೆ ಕತಿ ಅದ ಅದಕ ಮಾಡಿಕೊಟ್ಟಾರ ಇಲ್ಲಂದರ ಯಾರು ತಿರಗಿ ನೋಡಲ್ಲ ನಮ್ಮ ನಾಯಕರ ಮನಿಗಿ ಈಗ ನಾ ರಾಜಕೀಗಿ ಬಂದ ಮ್ಯಾಲ ಜೋಪಡಿಯೆಲ್ಲಾ ತೆಗದು ಮನಿಕಟ್ಟಿಸ್ಯಾನ ನಮ್ಮ ಅಣ್ಣಾ. ಎಲ್ಲಾ ಅವನ ಆಸರಿನೆ ನನಗ, ಅದಕ ಅವನಿಗಿ ಕೇಳಲಾರದೆ ಉಗಳುನು ದಾಟಲ್ಲ ನಾ.

ಯಾವ ಸಭಿಗೂ ತಪ್ಪಂಗಿಲ್ಲ, ಎಲ್ಲೆ ಇದ್ರು ಹೊಗತಿನಿ, ಯಾರಾನ ಒಬ್ಬರು ಬರ್ತಾರ ಜತಿಗಿ, ಇಲ್ಲಾ ಇಲ್ಲಿತಾನ ಒಂದ ಕೆಲಸಕನೂ ಬರಲ್ಲಾ. ಗಂಡನ ಮಾತ ಮೀರಿದಿ, ಕೈದಾಗ ಅಧಿಕಾರದಂತ ಮೇರಿತಿದಿ. ಅದೆಲ್ಲಿತನ ಇರ್ತಿನ ನೊಡತಿನಿ. ಅಂತಾನ ಹೊರಾಗ ಹೋಗದ ಅದಪಾ ಅಂದರ ಇನೊಂದ ಸ್ವಲ್ಪ ಹೆಚ್ಚಿಗಿ ಹಚ್ಚತಾರ ಕೆಲಸ. ಇಲ್ಲಂದರ ಅವರಿಬ್ಬರ ಕೂಡಿ ಯಾವದಾರ ಸುದ್ದಿ ತೆಗದ ಜಗಳಾ ಮಾಡ್ತಾರ ನಂಜೋತಿ ಹಂಗೆ ಹೆಣ್ಣಂದ್ರ ಅವೆಲ್ಲಾ ಇರ್ತಾವೆ. ಬ್ಯಾಡಂದ್ರ ಬಿಡಲಕ ಬರಲ್ಲ. ಹೆಣ್ಣಿನ ಜನುಮಾ ಅವೆಲ್ಲಾ ತಾಳದರೆ ಪುಣ್ಯ. ಮುಂದಿನ ಜನ್ಮಕ ಗಂಡಾಗಿ ಹುಟ್ಸತಾನ ಆ ದ್ಯಾವರು.

ಊರಾಗ ದೇವಸಾನದಾಗ ಹೆಚ್ಚ ಸಭಿ ಕರೆದು, ಗೌಡರು ಮತ್ತ ಮತ್ತ ಬ್ಯಾರೆ ಗಂಡಸರು, ನಮ್ಮ ಸೆಕ್ರೆಟ್ರಿ ಎಲ್ಲಾ ಮ್ಯಾಲ ಕೂಡ್ತಾರ. ನಾವು ಒಳಗ ಹೊಲಾಕ ಬರಲ್ಲ. ಅದಕ ಕಟ್ಟಿ ಕೆಳಗ ಕುಂದ್ರತಿನಿ. ಗೌಡರ್‍ರು, ಕುಕ್ಕರಣೆ ಸಮಕ ನಾವು ಯಾಂಗ ಕೂಡದವ್ವ ಅದು ನಮ್ಮ ಜಾತಿಗೆ ಸರಿ ಬರಲ್ಲ. ಯಾವುದೇ ಕೆಲಸ ಪದಿ ಬಂದ್ರೂ ಧರ್ಮ ಬಿಟ್ಟು ನಡೆದರ, ನಮ್ಮ ಬಾಳೆವು ಹಸನಾಗಲ್ಲ. ಜನಾ ತಗೊಂಡ್ ಎನ್ ಮಾಡ್ತಾರೆ. ನನಗೆ ಇಲೆಕ್ಷನ್ ನಿಂದರಸಿದವರಿಗಿ ಗೊತ್ತಾದ ಸಾಕು. ಏನ್ ಕೆಲಸಾ ಇದ್ರನೂ ಯಾರಿಗೂ ಇಲ್ಲನಲಾರದಂಗ ಮಾಡಂತೇಳಿನಿ ಅಣ್ಣಾಗ, ಅವನು ಅಂಗೆ ಧರ್ಮರಾಯ ಚಂಜಿತಾನಾ ಪಾನ್‌ಪರಾಗ್ ತಿಂತನಮದ್ ಬಿಟ್ರೆ ಮನುಷ್ಯ ಭಾಳ ಒಳ್ಯಾಂವ, ನಾಕ ಜನದಾಗ ಹೌದನಸಗೊಂಡಾನ. ಅಂವ ಹೇಳಿದಂಗ ಕೇಳಕಂತ ಹ್ಯಾದರ್ ಎನ್ ಸಮಸ್ಯೆ ಇಲ್ಲ. ನಾನೇ ಮಾಡದಂದ್ರ ಆಗಂಗಿಲ್ಲ, ಭಾಳ ಕಷ್ಟಾ ಆಗ್ತದ, ಎಲ್ಲಾ ಹೆಣ್ ಮಕ್ಕಳ್ ಮಾಡಂಥ ಕೆಲಸಾ ಅಲ್ಲಾ ಇವು, ಹಿಂದೊಬ್ಬರು ಮಜಬೂತ್ ಇರಬೇಕು. ನನಗ್ ಹೊರೆಗಿನವರ ಸಮಸ್ಯೆಕಿಂತ ನನಗ ಗಂಡಂದ ಬಾಳದ, ನಾಯಕಗ ಮನಸಿಲ್ಲ ಒಟ್ಟ ಎಂಗರ ಮಾಡಿ ನನಗೆ ಕೆಲಸಾ ಬಿಡಸಬೇಕೆಂತಾನ. ಅಷ್ಟೇ ಅದಕ ಎಂಗಾನ ಆಗಲಿ ನಾ ಬಿಡಬಾರದಂತ ನಮ್ಮಣ್ಣಾ ಹೇಳಾದು. ಎಲ್ಲಾ ಅವನಿಲಿಂದ ಆಗದು. ಅಂವ ಹೇಳಿದಕ ಹ್ಞೂಂ ಅನಾದಷ್ಟೇ ನಂದ್ ಕೆಲಸ.

ಪ್ರಕರಣ : ೧೩

ಹೆಸರು : ತಾರಾಬಾಯಿ

ವಯಸ್ಸು : ೩೬

ಜಾತಿ : ಲಿಂಗಾಯತ

ಶಿಕ್ಷಣ : ಎಸ್.ಎಸ್.ಎಲ್.ಸಿ

ಹುದ್ದೆ : ಅಧ್ಯಕ್ಷ

ವಿದ್ಯಾವಂತೆಯಾದ ತಾರಾಬಾಯಿನವರು ರಾಜಕೀಯ ಸೇರಿದ್ದು ತಮ್ಮ ಸ್ವಂತ ಇಚ್ಛೆಯಿಂದಲ್ಲಂತಾರೆ. ನಮ್ಮ ಯಜಮಾನರ ಒತ್ತಾಯಕ್ಕೆ ಬಂದೆ. ಎಂದು ಹೇಳುತ್ತಾರೆ. ಚುನಾವಣೆಗೆ ಅವರೆ ಸ್ಪರ್ಧಿಸಬಹುದಿತ್ತು. ಅಂದರೆ, ಹ್ಞೂಂ ಅವರು ಮೊದಲೆಲ್ಲ ಪ್ರಯತ್ನಪಟ್ಟರಂತೆ ಟೀಕೇಟ್ ಸಿಗಲಿಲ್ಲ. ಮೀಸಲಾತಿ ಹೆಸರಲ್ಲಿ ಹೆಣ್ಣುಮಕ್ಕಳಿಗೆ ಸಿಗುತ್ತೆ ಅಂತ ನನಗ ನಿಲ್ಲಿಸದ್ರು. ಮನೇಲಿ ಅತ್ತೆಯವರಿಗೆ ನಿಲ್ಲಸಬೇಕನಸಿತ್ತು ನನಗೆ ಆದರೆ ನಮ್ಮ ಮನೆಯವರು ಅಮ್ಮ ವಿಧವೆ ಹಾಗಾಗಿ ಎಲ್ಲೆ ಹೋದರು ಅಪಶಕುನ ಅಂತಾರೆ, ಮತ್ತು ಗಂಡ ಸತ್ತ ಹೆಣ್ಣು ಅಂದರೆ ಸುಲಭವಾಗಿ ಗಂಡಸರ ಕೆಟ್ಟಕಣ್ಣು ಬೀಳುತ್ತೆ ನೀನೆ ನಿಲ್ಲು ಅಂದರೂ ಅತ್ತೆಯವರು ಅದಕೆ ಒಪ್ಪಿಗೆ ಕೊಟ್ಟರು.

ಪ್ರಚಾರಕೆಲ್ಲ ಹೆಚ್ಚು ಅಂದರೆ ನನ್ನ ಗಂಡ, ಮೈದುನ ಎಲ್ಲಾ ಹೋಗಿದ್ದರೂ ಒಂದೆರಡು ಸಲ ನನ್ನನ್ನು ಕರಕೊಂಡು, ಹೋಗಿದ್ದರು. ಅಲ್ಲಿ ಭಾಷಣ ಮಾಡಬೇಕಿತ್ತು. ನನ್ನ ಮೈದುನ ಹಿಂದಿನ ದಿನ ಎರಡು ಪೇಜ್‌ನಷ್ಟು ಬರೆದು ಕೊಟ್ಟಿದ್ದರು, ಅದಿಷ್ಟು ಎರಡ್ ನಿಮಿಷದಾಗ ಹೆಳಿ ಬಂದ ಕುರ್ಚಿಗೆ ಕೊತೆ. ಸಿಕ್ಕಾಪಟ್ಟೆ ಹೆದರಿಕೆ ಅಷ್ಟೆಲ್ಲಾ ಗಂಡಸರ ಮಧ್ಯ ಯಾವತ್ತು ಕೂತಿರಲಿಲ್ಲ ಅದೆ ಮೊದಲು, ನನ್ನ ಅಕ್ಕ ಪಕ್ಕ ನನ್ನ ಗಂಡ ಮೈದುನ ಕುತ್ಕೊಂಡಿದ್ರು ಮುಗಿಸಿಕೊಂಡು ಬಂದಿವಿ ಮನೆಗೆ.

ಇಲ್ಲಿ ನನಗೆ ಗೆಲುವು ಆಗಬೇಕು ಅಂತ ನಮ್ಮ ಯಜಮಾನರು ಹಗಲು ರಾತ್ರಿ ನಿದ್ದೆಗೆಟ್ಟು ಪ್ರಚಾರ, ಮತ್ತೊಂದು ಅಂತ ಓಡಾಡ್ತಿದ್ದರು. ಎಲ್ಲದಕ್ಕೂ ಅವರೆ ನನಗೆ ಬೆಂಬಲ ಕೊಡ್ತಾರೆ. ಈ ಗೆಲುವಿಗೂ ಅವರೇ ಕಾರಣ. ಇಂಥ ಸೀಟ್ ಪಡೆದು ನಾಕು ಮಾತಾಡ್ತೀನಿ ಅಂದರೆ ಅಂಥಾ ಗಂಡ ಸಿಕ್ಕಿರೊದು ನನ್ನ ಅದೃಷ್ಟ. ನಮ್ಮ ಫ್ಯಾಮಿಲಿಲೇ ಇವರು ಒಳ್ಳೆಯವರು.

ಸಭೆ-ಸಮಾರಂಭಕ್ಕೆ ಒಬ್ಬಳಿಗಂತೂ ಅಪ್ಪಿ-ತಪ್ಪಿನೂ ಕಳಸಲ್ಲ. ಮನೆಯಲ್ಲಿ ಗಂಡಸರು ಯಾರಾದ್ರೂ ಒಬ್ಬರೂ ಜೊತೆ ಬಂದೆ ಬರ್‍ತಾರೆ. ತೀರಾ ಯಾರೂ ಇರಲಿಲ್ಲ. ಸಣ್ಣ-ಪುಟ್ಟ ಸಭೆ ಇದ್ದರೆ ನಮ್ ಮಗ ಬರ್‍ತಾನೆ ಜೊತತೆಗೆ ಅವನು ಈಗ ಎಂಟನೇ ಓದ್ತಾನೆ. ಸಣ್ಣ ಮಗ ಅಂದ್ರೂನು ಜೊತೆಗೆ ಒಂದು ಗಂಡು ಹುಡುಗ ಇದ್ದರೆ ಅದು ಎಷ್ಟೋ ಆಸರೆ ಇರುತ್ತೆ.

ತೀರಾ ದೊಡ್ಡ ಸಭೆಗಳಿದ್ದರೆ ಇವರ್‍ಯಾರು ಇಲ್ಲದೆ ಹೋದರೆ ಹೋಗೊದಿಲ್ಲ. ಕೆಲವೊಮ್ಮೆ ನಮ್ಮ ಯಜಮಾನ್ರು ಹೋಗಿ ಮುಗಸಕೊಂಡು ಬಂದು ಎಲ್ಲಾ ವಿಷಯನು ಹೇಳಿರ್‍ತಾರೆ. ಮಾಮೂಲಾಗಿ

ಜೊತೆಗಿರ್ತಾರೆ. ಒಂದ ಸಲ ಅತ್ತೆ ನಾನು ಒಂದು ಪಂಕ್ಷನ್‌ಗೆ ಹೋಗಿದ್ವಿ. ಅಲ್ಲೊಬ್ಬರು ಮನೆಗೆ ಕರೆದ್ರೂ ಊರ ಗೌಡರು ಅಂತ ಇಲ್ಲ ಅನ್ನೊಕಾಗದೆ ಹೋದವಿ. ಮನೆಗೆ ಬರೋಕೆ ತಡವಾಯ್ತು ನಮ್ಮ ಯಜಮಾನ್ರು ಒಂದು ವಾರ ಮಾತಾಡಿಲ್ಲ. ಪಂಚಾಯ್ತಿ ಕೆಲಸಗಳು ಒಂದಲ್ಲಾ ಒಂದ ಬರ್ತಾ ಇರ್ತಾವೆ. ಅವರು ಯಾವುದಕ್ಕೂ ಕೈ ಹಚ್ಚಲಿಲ್ಲ. ನನಗೆ ಬೇಜಾರಾಗಿ ರಾಜಿನಾಮೆ ಕೊಡಬೇಕು ಅನ್ನುವರೆಗೂ ಯೋಚನ ಮಾಡಿದ್ದೆ. ಅದೇ ಟೈಮ್‌ನಲ್ಲಿ ಊರಾಗ ಒಂದು ಮುಖ್ಯವಾದ ಕೆಲಸ ಆಗಬೇಕಿತ್ತು. ಅದು ನಮ್ಮ ಜಗಳದಲ್ಲಿ ಹಾಗೆ ಉಳಿದಿತ್ತು. ಅಂದರೆ ಅದೆಲ್ಲಾ ಕೆಲಸ ಅವರೆ ಮಾಡೊದರಿಂದ ನಂಗೊತ್ತಲ್ಲ ಅಂತ ಸುಮ್ನಿದ್ದೆ ಮತ್ತೆ ಈಗಾಗಿರದೆ ಸಾಕಾಗಪ್ಪಿದೆ. ಆ ಕೆಲಸದಲ್ಲೆನಾದ್ರೂ ವ್ಯತ್ಯಾಸ ಆದರೆ ನನಗ ಕೊಂದೆ ಬಿಡ್ತಾರೆ. ಅದು ಆ ಮೇಲೆ ಊರವರೆಲ್ಲಾ ದೊಡ್ಡ ಗಲಾಟೆ ಮಾಡ್ತಿದ್ದರೂ. ಆ ಮೇಲೆ ನಮ್ಮ ಮನೆಯವರು ಗೌಡರ ಜೊತೆ ಮಾತಾಡಿ ಅವರನ್ನು ಕರಕೊಂಡು ಸಮಸ್ಯೆ ಬಗೆಹರಿಸಿದ್ರು.

ಇಲ್ಲ ರೀ ಅಂಗೆಲ್ಲಾ ಕೂತಕೊಕಾಗಲ್ಲ ಆ ಕಡೆ ಕುರ್ಚಿಗಳು ಖಾಲಿ ಇದ್ದರೆ ಈ ಕಡೆ ತಂದ್ಹಾಕ್ತಾರೆ. ಇಲ್ಲಂದರೆ ಕೂತಿರೊ ಹೆಣ್ಣುಮಕ್ಕಳು ನಾವು ಹೊದವಿ ಅಂದರೆ ಬಿಟ್ಟು ಕೊಡ್ತಾರೆ. ಹೆಚ್ಚು ಹಿಂಗಾಗಿರೋದೆ. ಅವರ ಹೋಗಿ ಕೂಡ್ತಾರೆ. ಎಲ್ಲ ವ್ಯವಹಾರ ಅವರೆ ನೋಡ್ಕೊತಾರಲ್ಲ. ಅವರ ಹೇಳಿದಲ್ಲಿ ಸೈನ್ ಹಾಕಿದ್ರ ಆಯ್ತು. ಆಯ್ಯೋ ಅದನ್ನು ಒಂದೊಂದ್ಸಲ ಎಡವಟ್ಟು ಮಾಡಿರ್ತಿನಿ ನಾನು.

ಸಾಕಷ್ಟು ಊರಿಗೆ ಸೌಲತ್ತುಗಳು ಕೊಡ್ತಿವಿ. ಅಬಿವೃದ್ಧಿ ಯೋಜನೆ ಏನು, ಎತ್ತ ಅಂತ ನಾ ಯಾವುದಕ್ಕೂ ತಲೆ ಕೆಡಸಗೊಳಲ್ಲ. ಊರವರು ಸಮಸ್ಯೆ ಎಲ್ಲಾ ಬಂದು ಅವರತ್ತರನೆ ಹೇಳ್ತಾರೆ. ಇಲ್ಲಪ್ಪಾಂದ್ರೆ ಗೌಡರು, ಪಟೇಲರ ಹತ್ತರ ಹೇಳ್ತತಿರ್ತಾರೆ. ಅವರು ನಮ್ಮವರನ್ನು ಕರಸಿ ಕೆಲಸ ಮಾಡಸ್ತಾರೆ ಅಷ್ಟೇ. ಹೌದು ನಮ್ಮೂರ ಗೌಡ್ರು. ಪಟೇಲರು ತುಂಬಾ ಒಳ್ಳೆಯವರು ಯಾರಾದರೂ ನನ್ನ ಹೆಸರನ್ನು ಒಂಟಿಕ್ಷರದಲ್ಲಿ ಕರೆಯೊರ ಕೇಳಿದ್ರೂ ಅವರ ತಿಥಿ ಮಾಡ್ತಾರೆ. ಹ್ಹೂಂ ದೊಡ್ಡ-ದೊಡ್ಡ ವಿಷಯಗಳೆಲ್ಲ ಬಂದಾಗ ಗೌಡರ ಮನೆಗೆ ಹೋಗಿ, ಇವರ ಗಂಟೆಗಟ್ಟಲೆ ಕೂತು ಮಾತಾಡಿ ಗೌಡರ ಹೇಳಿದಂಗೆ ಮುಂದುವರಿತಾರೆ.

ಯಾವುದಕ್ಕೂ ಸಮಸ್ಯೆ ಮಾಡೋಲ್ಲ, ಅಷ್ಟಕ್ಕೂ ಅವರಿಗೆ ಕೇಳದೆ ನಾವಿಬ್ಬರೂ ಗಂಡ ಹೆಂಡ್ತಿ ಎಂಥಾ ನಿರ್ಧಾರನೂ ಮಾಡಲ್ಲ. ಪಟೇಲರು ಅಂತ ಹೇಳದ್ರಲ್ಲ ಅವರಿಂದ ಏನಾದರೂ ಸಮಸ್ಯೆ, ಇಲ್ಲ ಹಂಗೆನಿಲ್ಲ ಗೌಡರು ಅವರೆಲ್ಲಾ ಸಂಬಂಧಿಕರಲ್ಲ ಹೆಂಗಸು ಅನ್ನೊಳಲ್ಲಾ ಅಂದರನೂ ಒಂದ್ಸಲಾ ಪಟೇಲರಿಗೆ ಊರವರ್‍ಯಾರೋ ನಮಗಾಗದವರು ಹೇಳಿದ್ರೇನೊ ತಪ್ಪಾಗಿ ಅದಕ್ಕೆ ಸಣ್ಣ ಜಗಳಾ ಆಗಿ ಸರಿ ಹೊಯ್ತು.

ಆವಾಗೆಲ್ಲ ನನಗೂ ಗೌಡರ ಮನೆಗೆ ಕರೆಸಿದ್ರು, ವಿಷಯ ಇತ್ಯರ್ಥ ಆಯ್ತು ಕೊನೆಗೆ ನಾನೆ ಹಂಗೆಲ್ಲಾ ತಪ್ಪಾಗಿ ತಿಳಿಕೊಬೇಡಿ ನಿಮ್ಮಂಥಾ ಹಿರಿಯರ ನೆರಳಲ್ಲೆ ನಾವು ಬದುಕ್ತಿರೊದು. ತಪ್ಪಾದರೆ ಕಾಲಿಗೆ ಬಿಳ್ತಿನಿ ಅಂತ ಕೈ ಮುಗದಿದ್ದೆ ಅದಕ್ಕೆ ಅವರು ಬಹಳ ಬೇಜಾರಾಗಿ ಮನಸ್ಸು ಕರಗಸಿದ್ರು. ನಂದೇನು ತಪ್ಪಿಲ್ಲ ಆದರನೂ ಹೆಣ್ಮಕ್ಕಳು ಯಾವಾಗಲೂ ಸೋತು ಸೋತು ಬದುಕಿದ್ರೆನೆ ಬಾಳು

ಚಂದವಾಗುತ್ತೆ ನಾನಲ್ಲಿ ಅಷ್ಟೆ ಮಾಡಿಲ್ಲಂದರೆ ಊರೆಲ್ಲ ಗೌಡರ-ಪಟೇಲರ ಬಣಗಳಾಗ್ತಿದ್ದವು. ಜನರು ಎರಡು ತಂಡ ಆಗಿ ನಮಗೂ ಕೆಲಸ ಮಾಡೊಕಾಗ್ತಿರಲಿಲ್ಲ. ನಾನೇನು ಮನೇಲಿರ್‍ತಿನಿ. ನಮ್ಮ ಯಜಮಾನರು ಪಂಚಾಯ್ತಿ ಕೆಲಸಕ್ಕೆ ಹೆಚ್ಚು ಅಡ್ಡಾಡ್ತಾರೆ ಮನಸಲ್ಲಿಟ್ಟುಕೊಂಡು ಯಾರಾದ್ರೂ ಏನಾದರೂ ಮಾಡಿದರೆ, ರಾಜಕೀಯದ ಆಸೆಗೆ ಗಂಡನ ಬಲಿಕೊಟ್ಟಳು ಅಂತ ಜನಾ ಆಡ್ಕೋಬಾರದು ನೋಡಿ.

ಕೆಳಜಾತಿಗಳಲ್ಲಿ ಯಾವುದೇ ಸಮಸ್ಯೆ ಬಂದರೆ, ನಾವು ಅಲ್ಲಿಗಂಟ ಹೋಗಲ್ಲ ಅವರೆ ಇಲ್ಲಿ ಬಂದು ಬಗೆಹರಸಕೊಂಡು ಹೋಗ್ತಾರೆ. ನಮ್ಮ ಮನೆತನದಲ್ಲಿ ಹಂಗೆಲ್ಲಾ ಹೋಗೊಕೆ ಇಷ್ಟ ಪಡಲ್ಲ ಪ್ರಾಣ ಬಿಟ್ಟರೂ ಕುಲ, ಮಾನ ಕೆಡಸ್ಕೊಬಾರದು ಅಲ್ವಾ. ಯಾವುದೇ ಒಂದು ಸಣ್ಣ ನಿರ್ಧಾರಾನೂ ನಾ ತಗೋಳಲ್ಲ. ಮೊದಲಂದರೆ ನನಗೆ ಈ ತರಹದ ವಿಷಯಗಳು ಗೊತ್ತಾಗೊಲ್ಲ. ಅವರಿಲ್ಲದಾಗ ಯಾರಾದರೂ ಸಮಸ್ಯೆ, ಸಹಿಯಂತ ಬಂದರೆ ಅವರು ಬಂದಮೇಲೆ ಬರಲಿಕ್ಕೆ ಹೇಳಕಳಸ್ತಿನಿ, ಊಹ್ಞೂಂ ಬಸ್ ಪಾಸ್ ಇರಲಿ, ಎಂಥವೇ ಇರಲಿ ನಾ ಸಹಿ ಮಾಡಲ್ಲ. ಸಂದರ್ಭ ಬಂದಿಲ್ಲ ಬಂದರೆ ಏನಾದರೂ ಆಗಲಿ ಅವರಿಗೆ ಕೇಳದೆ ಮಾಡೊಲ್ಲ. ಮೈದುನರಿದ್ದರೆ ಅವರು ಕೂಡ ಅವರಣ್ಣ ಹಾಕಿದ ಗೆರೆ ದಾಟಲ್ಲ. ನನಗಿಂತ ಮೊದಲೆ ಅವರೇ ಹೇಳ್ತಾರೆ. ಅಣ್ಣ ಬಂದ ಮೇಲೆ ಬರಲಿ ವೈನಿ ನೀ ಹೊರಗಡೆ ಬರಬೇಡ. ನಾವೆಲ್ಲ ಅವರೂ ಇಲ್ಲಂತ್ಹೇಳಿ ಕಳಸ್ತಾರೆ.

ಹೆಚ್ಚು ಹೊಗಲ್ಲಾ ಪಂಚಾಯ್ತಿಗೆ ಅಗತ್ಯ ಬಿದ್ದರೆ, ಮನೆಗೆ ಫೋನ್ ಮಡ್ತಾರೆ, ಕರೆಕ ಕಳಸ್ತಾರೆ, ಒಂದರ್ಧ ಗಂಟೆ ಹೋಗಿ ಬರ್‍ತೀನಿ. ಇಲ್ಲ ಅತ್ತೆ ಏನು ಕೆಲಸ ಮಾಡಲ್ಲ. ನಾವಿದ್ದು ಅವರಿಗೆ ಕೆಲಸ ಹೆಚ್ಕೊದು ನೊಡದ್ರೆ ಮನೆ ಗಂಡಸರೆಲ್ಲ ಉಗಿತಾರೆ, ಇಲ್ಲ ನನಗೇನೂ ಅಂಥ ಕೆಲಸ ಇರಲ್ಲ. ಮಾಮೂಲು ಮನೆ ಅಂದ ಮೇಲೆ ಬಟ್ಟೆ, ಪಾತ್ರೆ, ಕಸ, ಅಡಗೆ ಮಾಡೋದು, ಮಕ್ಕಳಿಗೆ ಊಟ, ಗಂಡ ಮೈದುನ, ಅತ್ತೆಗೆಲ್ಲಾ ನೊಡಕೊಳ್ಳೊದು, ಹೊಗಡೆ ಅವರಿಲ್ಲಂದರೆ ಹೆಂಗೆ ಯಾವ ಕೆಲಸನು ನಡೆಯಲ್ಲವೊ, ಮನೆಲಿ ನಾನಿಲ್ಲದೆ ಒಂದು ಬಿಂದಗೇನು ಸರಿಯಲ್ಲ. ತವರು ಮನೆಗೆ ಹೆಚ್ಚು ಕಳಸಲ್ಲ. ನನ್ನ ಗಂಡ ಬಿಟ್ಟಿರಲ್ಲ. ಮನೇಲಿ ಮಾಡೋರು ಯಾರೂ ಇಲ್ಲ, ನಾ ಹೋದರೆ ಮನಿಯೆಲ್ಲಾ ತಿಪ್ಪೆ ಆಗುತ್ತೆ, ಅವರಿಗೆ ನೀವಾಗಿದ್ರೆ ಮನೆಲಿರೊಕೆ ಇಷ್ಟ. ಹಿಂಗಾಗಿ ಅವರೆ ಬಂದು ಹೋಗ್ತಾರೆ. ಊರಲ್ಲಿ ಎಲ್ಲಾರಿಗೂ ಗೊತ್ತು, ಇವರ ಹೆಂಡ್ತಿನೆ ನಮ್ಮ ಗ್ರಾಮಪಂಚಾಯ್ತಿ ಅಧ್ಯಕ್ಷರು ಅಂತಾರೆ.

ಯಾವ ಬೆಸರನೂ ಇಲ್ಲ. ನನ್ನ ಹೆಂಡ್ತಿ ಅಧ್ಯಕ್ಷ ಆಗಬೇಕು ಅಂತ ಅವರು ಎಷ್ಟೇಲ್ಲಾ ಕಷ್ಟಪಟರೂಂತ ನನಗೆ ಮಾತ್ರ ಗೊತ್ತು ಕಂಡವರ ಕೈಕಾಲ ಹಿಡಿದು ನನ್ನ ಇಷ್ಟರ ಮಟ ತಂದು ನಿಲ್ಲಿಸಿದಾರೆ, ಇವೆಲ್ಲಾ ಅವರ ಶ್ರಮದ ಫಲ ಹೆಣ್ಮಕ್ಕಳಂದ್ರ ಹೇಳದಂಗ ಕೆಳಕೊಂಡು ಬಿದ್ದಿರಬೇಕಂತ ಅನ ಗಂಡಂದಿರು ಎಸ್ ಮಂದಿ ನಮ್ಮ ಮನಿತನದಾಗ ಇದಾರೆ. ಅಂತಹವರನ್ನು ನೋಡಿದ್ರ ನನ್ ಭಾಗ್ಯ ಎಷ್ಟು ಛಲೋ ಅದ.

ಮಗಳಿಗಿ ಅಷ್ಟೇನು ಓದಿಸಲ್ಲಾ. ಒಳ್ಳೆ ಹುಡುಗಗ ನೋಡಿ ಮದ್ವಿ ಮಾಡಬೇಕಂತ ನಂದು ನಮ್ಮ ಮನೆಯವರದು ಆಸೆ. ಮಗ... ಮಗನಿಗಿ ಮಂತ್ರಿ ಮಾಡಬೇಕಂತ ನಮ್ಮನಿಯವರದು ಕನಸು.

ಗಂಡಸರಂದ್ರ ಅರಾಮಗಿ ಇಂಥ ಕೆಲಸ ಮಾಡಬಹುದು. ನಮಗಿವೆಲ್ಲಾ ಕಷ್ಟನೇ. ಏನೋ ಹಿಂದ ಊರವರದು, ಗೌಡರು, ಪಟೇಲರು ಎಲ್ಲರ ಸಹಕಾರದ ನಮ್ಮ ಮನೆಯವರು ನಾಲ್ಕು ಮಂದಿ ಹಂಚಕೊಂಡಾರ ಅಸ್ತಿಯೆಲ್ಲ ಛಲೋ ಅದ, ಮುಂದ್ಯಾಗ ಓಡಾಡಂಗಿದಿವಿ ಅಂದ್ರನೂ ಕಷ್ಟ ಈ ರಾಜಕೀಯ ಇನ್ನ ಏನೂ ಇಲ್ಲಂದ್ರ ಯಾವುದು ನಡೆಯಲ್ಲ.

ಹೆಣ್ಣಂದ್ರ ಎಲ್ಲನೂ ನಿಭಾಯಿಸಬೇಕು, ತಾಳಬೇಕು. ನಮಗೆ ಈ ರಾಜಕೀಯ ಪದವಿ ಶಾಶ್ವತ ಅಲ್ಲ. ಮನೆಯ ಪದವಿನೇ ಶಾಶ್ವತ ಎಲ್ಲರೂ ಸೀತಾಗ ಇನಾನು ನೆನಪ ಮಾಡಕೊತಾರ, ಅಕಿ ತಾಳಿ-ಬಾಳಿ ಮನೆತನಕ ಹೆಸರ ತಂದಿದಕ.

ನನಗೆ ತೃಪ್ತಿ ಅದ ಈ ಕೆಲಸದಾಗ, ಹೌದು ಮುಂದೆ ಹೆಚ್ಚಿನ ಸ್ಥಾನ ಸಿಕ್ಕರ ನಮ್ಮ ಯಜಮಾನರು ಇದಕ ಕಳಸದಂಗ ಮನಸಾರೆ ಒಪ್ಪಿ ಮಾಡಿದ್ರ ನಂದೇನು ಇಲ್ಲ. ಕೆಲಸ ಮಾಡ್ತಿನಿ. ಇಲ್ಲ ಅಂದ್ರ ಇಲ್ಲ. ಯಾರಿಂದನೂ ಏನು ಸಮಸ್ಯೆ ಇಲ್ಲ. ಅದಕೂ ಮೊದಲು ನಮ್ಮ ಮಾವ, ನಮ್ಮ ಮನಿಯವರ ತಂದಿನೂ ಕಾನ್ಸಿಲರ ಆಗಿ, ಒಳ್ಳೆ ಕೆಲಸ ಊರಿಗಿ ಮಾಡಿ ಹೋಗ್ಯಾರ, ಅದೆಲ್ಲದರ ಪುಣ್ಯಾನೆ ಈಗ ನಾನು ಅಧಿಕಾರ ಮಾಡಿಲಿಕತ್ತಿನಿ.

ಪ್ರಕರಣ : ೧೪

| | |
|---|---|
| ಹೆಸರು | : ಲಕ್ಷ್ಮೀದೇವಿ |
| ವಯಸ್ಸು | : ೪೯ |
| ಜಾತಿ | : ಕಬ್ಬಲಿಗರು |
| ಶಿಕ್ಷಣ | : ಬಿ.ಎ. |
| ಹುದ್ದೆ | : ಅಧ್ಯಕ್ಷ |

ನಮಸ್ಕಾರ ಬನ್ನಿ, ನನ್ನ ಹೆಸರು ಲಕ್ಷ್ಮೀದೇವಿ. ಬಿ.ಎ. ವರೆಗೂ ಓದಿದ್ದಿನಿ. ಮದ್ವಿ ಆಗೊದಕೆ ಇಷ್ಟ ಇಲ್ಲ. ರಾಜಕೀಯದದ ಹುಚ್ಚು ಜಾಸ್ತಿ. ತಂದೆಯವರು ರಾಜಕೀಯದಲ್ಲಿದ್ದರೂ ಒಬ್ಬಳೆ ಮಗಳು, ಅಣ್ಣ-ತಮ್ಮ ಯಾರು ಇಲ್ಲ. ತುಂಬಾ ಆಸ್ತಿಯೆಲ್ಲಾ ಇತ್ತು. ಒಂದು ಹುಡಗಗ ನೋಡಿ ಮದ್ವೆ ಮಾಡಿಕೊಟ್ರು. ಎಲ್ಲಾ ಚೆನ್ನಾಗಿತ್ತು. ನಾನು ನನ ಗಂಡ ಅಪ್ಪ ಅಮ್ಮನ ಹತ್ತಿರನೆ ಇದ್ವಿ. ಒಂದು ಗಂಡು ಮಗು ಆಯ್ತು ಸುಭಾಷ್ ಅಂತ ಹೆಸರಿಟ್ಟರು, ಅಪ್ಪಗೆ ರಾಜಕೀಯ, ರಾಜಕೀಯದಲ್ಲಿ ದುಡಿದ ವ್ಯಕ್ತಿಗಳು ಯಾವಾಗಲೂ ಅದರ ಬಗ್ಗೆನೆ ಹೇಳ್ತಿದ್ರು. ಅವರು ಯಾವುದೇ ಮಂತ್ರಿ ಎಂಥದು ಆಗಿಲ್ಲ. ಸುಮ್ನೆ ಅದರಲ್ಲಿ ಓಡಾಡ್ತಿದ್ರು. ನನ್ನ ಗಂಡನ ಮೇಲೆ ತುಂಬಾ ಪ್ರಾಣ ಇಟ್ಟಿದರು. ಆದರೆ ಆಸ್ತಿ ಆಸೆಗೆ ನಮ್ಮ ತಂದೆ-ತಾಯಿಗೆ ಊಟದಲ್ಲೆ ವಿಷ ಹಾಕಿದ್ರಂತೆ ಸರಿಯಾಗಿ ಗೊತ್ತಿಲ್ಲ. ಅದು ನಾನು ನೋಡಿದ್ದಿನಿ ಅಂತ ತಿಳಿದು ನನ್ನ ಕೊಲೆ ಮಾಡೋಕೆ ಬಂದಿದ್ರು ತಪ್ಪಿಸಿಕೊಂಡು ನಾನು ಬಿಟ್ಟ ದೂರದ ಊರಿಗೆ ಬಂದೆ, ನನ್ನ ಮಗನ ಬೇರೆಯೊಬ್ಬರ ಮನೆಲಿ ಬಿಟ್ಟಿದ್ದೆ ಈಗ ಜೊತೆಗೆ ಇದ್ದಾನೆ. ೨೫ ವರ್ಷ, ಬೇಗ ಮದ್ವೆ ಮಾಡಿದ್ರು, ಬೇಗನೆ ಹುಟ್ಟಿದ, ಅವನುಟ್ಟದ ಮೇಲೆ ನನ ಬಿ.ಎ. ಪೂರ್ತಿ ಮುಗದಿದ್ದು, ಅವನಿನ್ನು ಓದ್ತಿದಾನೆ.

ನಾನು ರಾಜಕೀಯಕ್ಕೆ ಬರಬೇಕು ಅನಸಿದ್ದೆ ನನ್ನ ಗಂಡನಹಂತವರನ್ನು ಬಗ್ಗ ಬಡಿಬೇಕು ಅಂತ. ಇಲ್ಲಾ ಅವನಾಗ್ಗೆ ಸತ್ತ, ಅವನು ಬೇರೆ ಮದ್ವೆ ಆಗಿತ್ತು. ಅವನ ಮಗ ಇದ್ದಾನೆ ಈಗ. ಇಲ್ಲ ಒಂದೇ ಊರಲ್ಲಿ ಇದ್ದಿವಿ. ನನ್ನ ಮಗನೆ ನನಗೆಲ್ಲ ಆಧಾರ ಊರೆಲ್ಲಿ ನಾಲ್ಕಜನಕೆ ಉಪಕಾರ ಮಾಡಿದಾನೆ. ಯಾರಿಗೂ ಅನ್ಯಾಯ ಮಾಡಬಾರದು ಅನ್ನೋದೆ ಅವನ ಛಲ. ಗೊತ್ತು ಅಪ್ಪನ ಎಲ್ಲಾ ವಿಷಯನು ಹೇಳಿದ್ದಿನಿ. ಹೆಸರು ಎತ್ತಬೇಡ, ನೆನಪಮಾಡಕೊಂಬೇಡ ಅನ್ನೋದೆ ಅವನ ಮಾತು. ಎಲೆಕ್ಷನ್ ಬಂದಾಗ ಟಿಕೆಟ್ ಎಲ್ಲಾ ತಗಂಡು, ಪ್ರಚಾರ ಮಾಡೋದು, ಬ್ಯಾನರ ಹಾಕಸೊದು ಎಲ್ಲಾ ಅವನೇ ಮಾಡಿದ್ದಾನೆ. ಅವನಲಿಂದನೇ ನಾನು ಗೆದ್ದಿದ್ದು. ರಾಜಕೀಯ ನಿಮ್ಮ ರಕ್ತದಲ್ಲೆ ಇದೇ ಅಂತ ಗೇಲಿ ಮಾಡ್ತಿರ್ತಾನೆ.

ಯಾವ ಮಿಟಿಂಗ್‌ಗಳು ಮಿಸ್ ಮಾಡೋದಿಲ್ಲ. ಎಲ್ಲದಕ್ಕೂ ಅಟೆಂಡ ಮಾಡ್ತಿನಿ. ಸಮನಾಗಿ ನೊಡ್ಕೊಳೆಲ್ಲ. ಯಾರು ದಿಕ್ಕಿಲ್ಲ ಅಧಿಕಾರ ಯಾಕ ಬೇಕು ಅಂತಾರೆ. ನನಗೆ ಸಮಾಜದ ಬಗ್ಗೆ ಬಹಳ ಕನಸಿದೆ, ಊರಲ್ಲಿ ರಸ್ತೆ, ಫರಸಿ ಹಾಕಸೋದು, ನಲ್ಲಿ ಎಲ್ಲಾ ವ್ಯವಸ್ಥೆ ಹಂತಹಂತವಾಗಿ ದುಡ್ತಿದಿನಿ. ತುಂಬಾ ಜನರು ಸಪೋರ್ಟ್ ಮಾಡ್ತಾರೆ.

ಮೊದಲೆಂದೆರಡು ಸಲ ಏನೆಲ್ಲಾ ಮಾತಾಡಿದ್ರೂ, ನಾ ಏನು ಅನಲಿಲ್ಲ. ಸ್ಟಿಟ್ ಆಗೆ ಇದ್ದಿನಿ. ನನ ಮಗ ಯಾರಾದ್ರು ಎದರು ನಿಂತರೆ ಅವರಿಗೆ ಸಿಗದ್ ಹಾಕ್ತಾನೆ ಅನ್ನೊ ಭಯ ಇದೆ. ಊರ ಗೌಡ್ರು ಅಡ್ಜಸ್ಟಮೆಂಟ್ ಮಾಡ್ಕೋಳಣ ಯಾವುದೇ ದುಡ್ಡ ಬಂದರು ಎಲ್ಲಾ ಖರ್ಚು ಮಾಡಬಾರದು ನಾವು ಬೇಳಿಬೇಕಲ್ಲಂತ ಹೇಳಿದ್ರು ಸುಮ್ಮನೆ ಹೌದು ಅಂತ ಹೇಳಿಬಂದೆ. ಯಾವುದಕ್ಕೂ ನಾ ಯಾರಿಗೂ ಕೈ ಕಾಲಿಗೆ ಬೀಳಲ್ಲ. ಗೌರವಸ್ತಿನಿ. ವಿಷಯ ಹೇಳಿರ್ತಿನಿ. ಕಂಡೆಲ್ಲೆಲ್ಲಾ ಸಹಿ ಮಾಡಬೇಕು, ಅಂದರೆ ಅವರು ಎಲ್ಲಿ ತೋರಿಸ್ತಾರೋ ಅಲ್ಲಿ ಮಾಡಬೇಕಂದ್ರ ನಾನು ಮಾಡಲ್ಲಾ ಅಂದರೆ, ರಾಜಿನಾಮೆ ಕೊಡು ಅಂದ್ರು, ನಾನು ಕೊಡಲ್ಲಂತನೆ ಹೇಳಿದ್ದು.

ಮನೆಗೆ ಕರೆಸಿ ಚಾ, ಬಿಸ್ಕಟ್ ಕೊಟ್ರು ಒಂದೆರಡ ಸಲ ಮೂರನೆ ಸಲ ಹೋದಾಗ ವಿಷಯ ನೈಸ್ ಮಾಡೊದಕೆ ಬಂದ್ರು ನಾನು ಎದ್ದು ಬಂದೆ. ಒಮ್ಮೆ ಮನೆಲಿ ಯಾರು ಇರ್ಲಿಲ್ಲ. ಬಂದು ಬೆದರಿಕೆ ಹಾಕಿದ್ರೂ, ಹೇಳಿದಂಗೆ ಕೇಳಬೇಕು ಪಂಚಾಯ್ತಿಗೆ ಬರಬಾರದು ಯಾವ ಊರ ಉದ್ಧಾರದ ಕೆಲಸ ಕೂಡ ಮಾಡಬಾರದು, ಊರಿನ ಗೌಡ ನಾನಿದ್ದಿನಿ, ನಾವೆಲ್ಲ ಮಾಡ್ತಿನಿ ಅಂದ್ರು ಇದಕ ಒಪ್ಪಲಿಲ್ಲಂದ್ರೆ ಆ್ಯಸಿಡ್ ಹಾಕ್ತಿನಿ, ಅಂದು ತಗೊಂಬಂದಿದ್ರು ನಮ್ಮ ಮನೆ ಸೋಫಾ ಮೇಲೆ ಹಾಕಿದ್ರು ಸುಟ್ಟು ಕರಕಲಾಯ್ತು. ನಿನ್ನ ಪರಿಸ್ಥಿತಿ ಹೀಗೆ ಅಂತ ಬೆದರಿಕೆ ಹಾಕಿದ್ರು. ಇಲ್ಲಾ ಹೆದರಲಿಲ್ಲ. ಇವೆಲ್ಲ ಮಾಮೂಲು ಅಂತ ಸುಮ್ಮನಾದೆ. ಅದಕ್ಕೂ ಬಗ್ಗದಿದ್ದಾಗ ಮೊದಲ ಕತೆ ಹೇಳಿದನಲ್ಲ ನಂದು ನನ್ನಗಂಡನ ಇನ್ನೊಂದು ಸಂಸಾರ ಆ ಹುಡಗ ನನ್ನ ವಿರುದ್ಧ ಎತ್ತಕಟ್ಟಿದ್ರು. ಆ ಹುಡುಗ ಹೌದು ಎಂದು ಹೇಳಿತು ಎಲ್ಲಾ ವಿಷಯನ ನನ ಮಗನಿಗೆ ಹೇಳದ, ಅವರಿಬ್ಬರೂ ಒಂದಾಗಿದ್ದು ಯಾರಿಗೂ ಗೊತ್ತಾಗಬಾರದು ಅಂತ ಭಾಷೆ ವಚನ ತಗೊಂಡ್ರು. ಒಂದವಧಿ ಮುಗಿತು, ಮತ್ತೊಂದವಧಿ ಅವರಮ್ಮನಿಗೆ ಅಂದ್ರೆ ನನ

ತಂಗಿಯಾಗಬೇಕಲ್ಲ ಅಕಿಗೆ ನನ್ನ ವಿರುದ್ಧ ನಿಲ್ಸಿದ್ರು ಆದರೆ ಪ್ರಚಾರ ಮಾಡೋವಾಗ ಮಕ್ಕಳಿಬ್ರು ಏನ್ ಮಾಡದ್ರೊ ಮತ್ತೆ ನಂದೆ ಮೇಲಿನ ಅಧಿಕಾರ ಸಿಕ್ತು. ನನ್ನ ತಂಗಿ ಮೆಂಬರ್ ಆದ್ರು ಏನಿಲ್ಲಾ ತುಂಬಾ ಹೊಂದಕೊತಾಳೆ ಬಹಳ ಜೋರು, ಮಕ್ಕಳಿಗೆ ಕರಕೊಂಡು ಗೌಡರ ಮನಗೆ ಆ್ಯಸಿಡ್ ತಂಗಂಡ್ ಹೋಗಿದ್ಲಳು, ಕಿಮಕ್ಕೆಂದ್ರೆ ನಿನ್ನ ಮಗಳು ನನ್ನ ಸೊಸೆಯಾಗ್ತಾಳೆ ಅಷ್ಟೆ ಅಂತ ಹೇಳಿ ಬಂದಿದ್ದಾಳೆ. ಅದಕ್ಕೂ ಮೀರಿದ್ರೆ ರೋಡ್ ಮೇಲೆ ನಿನ ಮಗಳ ಮೇಲೆನೆ ಅತ್ಯಚಾರ ಮಾಡ್ತಿನಿ ಅಂತ ಹೆದರಿಸಿ ಬಂದಿದ್ದಾರೆ. ವಿಷಯ ಗೊತ್ತಾಗಿ ತಪ್ಪು ಅಂತ ಬಯ್ದೆ. ಅದಕ್ಕೆ ನಾವೇನು ಹುಚ್ಚರಲ್ಲ ಅದೆಲ್ಲ ಮಾಡೋಕೆ ಅನಾಗರಿಕರಲ್ಲ ನಮ್ಮ ಎದುರಿಗೆ ಬರದಿರೋಕೆ ಅಷ್ಟೇ ಹಾಗ ಮಾಡಿದ್ದು ಅಂದ್ರು.

ಇಲ್ಲ ಆಸ್ತಿಯೆಲ್ಲ ಅರ್ಧಕರ್ಧ ಹಾಳಾಗಿದೆ ಇರೊದ್ರಲ್ಲೆ ಚೆನ್ನಾಗಿದಿವಿ. ಒಂದೇ ಮನೆಲಿ ಹೊಂದಕೊಂಡಿದಿವಿ ಅಂತ ಖುಷಿಯಿದೆ. ಜನರಿಗೆ, ಮೊದಲು ಗೌಡರು ಮಾತು ಕೇಳಿ ಎದರಾಗಿದ್ದರೂ ಈಗ ಅಷ್ಟೆಲ್ಲಾ ಏನಿಲ್ಲಾ, ಊರಿನ ಉದ್ಧಾರ ಆಗಬೇಕು ಅಂತಾರೆ. ಎಷ್ಟೋ ಜನ ವಿರುದ್ಧ ಕೂಡಾ ಇದ್ದಾರೆ ಮೆಂಬರ್ಸ್‌ಲ್ಲೆಲ್ಲಾ ಮಾತಾಡ್ತಾರೆ ಸಮಸ್ಯೆಗಳು ಬರ್ತಾವೆ. ಆದರೆ ಫೇಸ್ ಮಾಡಬೇಕು. ಬಹಳಷ್ಟು ಊರಿನ ಹಿರಿಯರೆಲ್ಲ ಮುಂದಿನಸಲ ನೀನು ನಿಲ್ಲಬೇಡಮ್ಮ ಹೋಲಸು ರಾಜಕೀಯ ನಿನಗೇನಾದ್ರು ಮಾಡ್ತಾರೆ. ಮಕ್ಕಳಿಗೆ ನಿಲ್ಸು ಅಂತಿರ್ತಾರೆ. ನೋಡಬೇಕು. ಪದೇ ಪದೇ ನಾವೆ ಆದರೆ ಬೇರೆಯವರಿಗೆ ಅವಕಾಶ ಸಿಗಬೇಕು. ಇರೋವಷ್ಟು ಅವಧಿಯಲ್ಲೆ ಒಳ್ಳೆಯ ಕೆಲಸಾ ಮಾಡಬೇಕಷ್ಟೇ.

ಮಕ್ಕಳಿಬ್ಬರೂ ರಾಮ-ಲಕ್ಷ್ಮಣರಿದ್ದಂಗಿದ್ದಾರೆ, ಅವರೆ ನಮಗೆ ಭುಜಬಲ, ಆಸ್ರೆ, ಎಷ್ಟೋ ಸಲ ಮೊಬೈಲ್ ಪೋನ್‌ಗೆಲ್ಲ, ಲ್ಯಾಂಡ್ ಲೈನ್‌ಗೆಲ್ಲಾ ಕೂಡ ಜೀವ ಬೆದರಿಕೆ ಹಾಕಿ ಫೋನ್ ಮಾಡಿರ್ತಾರೆ. ಪೇಪರಿಗೆ ಹಾಕಸ್ತಿವಿ ಅಂತೆಲ್ಲಾ ಹೇಳ್ತಾರೆ. ಏನಾಗುತ್ತೆ ಆಗಲಿ ಅಂತ ಸುಮ್ಮನೆ ಕೆಲಸ ಮಾಡ್ತಿರ್ತಿವಿ. ಎಲ್ಲರೂ ಒಂಥರಾ ನಮ್ಮ ಮಕ್ಕಳಿಗೆ ಗೌರವಿಸ್ತಾರೆ ಹಾಗೆನೆ ಎದರಾಡದೆ ಕೂಡ ಅದಕೆ ಕೆಲಸಗಳು ಲೇಟಾಗಲ್ಲ.

**ಪ್ರಕರಣ : ೧೫**

ಹೆಸರು : ಸಿದ್ದಮ್ಮ

ವಯಸ್ಸು : ೩೦

ಜಾತಿ : ಮಾದರು

ಶಿಕ್ಷಣ : -----

ಹುದ್ದೆ : ಉಪಾಧ್ಯಕ್ಷ

ಹೌದರಿ ಯವ್ವ ನಾನೇ ರಿ ಸಿದ್ದಮ್ಮ ನನ್ನ ಗಂಡನ ಮಾತಿಗಿ ಒಪ್ಪಿ ನಿಂತಕಂಡಿನ್ರಿ ಅವನಿಗರ ಏನು ಗೊತ್ತಿಲ್ಲರಿ. ಒಂದಿನಾ ಗೌಡರು ಕರಸಿ ಹೇಳಿದಾಗ ನಿನ್ನ ಹೆಂಡ್ತಿಗ್ ನಿಂದ್ರಸ ಬೇಕು ಇಲೆಸನ್‌ಗಂತ. ಬ್ಯಾಡರಿ ಹೆಂಗಸ್ರಿಗ್ಯಾಕಂದ್ರ, ಇಲ್ಲಲೆ ಎಲ್ಲಾ ಅವರದದ ಈಗ ಕಾಲ, ನಮ್ಮದೆಲ್ಲಾ ಮುಗಿತು ಅಂದಿದಕ, ನನಗಂಡ ಖುಷಿಲಿಂದ ಮನಿಗ ಬಂದು ಎಲ್ಲಾ ಹೇಳಿದರಿ ಅದಕ ಒಪ್ಪಿ ಬಿಟ್ಟೆರಿ.

ಹೇಳಿದಕ ಹೆಚ್ಚೆಟ್ಟೊತ್ತದ್ದು ಸುಮ್ಮನಿರದು ಕೂಲಿಗಿ ಎಲಿಗನು ಹೊಗಲ್ಲರಿ ಮನ್ಯಾಗೆ ಇರ್ತಿನಿ. ಒಂದಿನಾ ಸಾಯಬೇಕಂತ ಬಳಚೂರು ಕುಟ್ಟಿ ಸಿಮೆಣ್ಣೆಗಿ ಹಾಕಿ ಕುಡದಿದರಿ ನನಗಂಡ ನೋಡಿ ಬದಕಸಿಗಂಡ, ಈಗೆ ಒಮ್ಮೆ ಸಾಯಕ ಬಿಡಬ್ಯಾಡ, ದಿನಾ ಸಾಯಸು ಅಂತ ಒದರಾಡಿ ಅತ್ತೆ. ನಮಗ ಯಾ ಇಲೆಷನ್ ಬೇಕಿರಲಿಲ್ಲ ರ್ರೀ. ಎಂಥಾವು ಬೇಕಿರಲಿಲ್ಲ. ನಮ್ಮ ಗುಡಸಲದಾಗ ನಾವಿರ್ತಿವಂದ್ರ ನಮಗ ಬಿಡ್ಲಿಲ್ಲ. ನಮ್ಮಂಥವರು ಈ ಜಾತ್ಯಾಗ, ಹೆಣ್ಣಾಗಿ ಹುಟ್ಟಿದಕ ಕಾಲಗಿನ ತಗಂಡ ಹೊಡಕಬೇಕರಿ.

**ಪ್ರಕರಣ : ೧೬**

ಹೆಸರು : ಗುಂಡಮ್ಮ

ವಯಸ್ಸು : ೪೧

ಜಾತಿ : ಹೊಲೆಯ

ಶಿಕ್ಷಣ : -------

ಹುದ್ದೆ : ಅಧ್ಯಕ್ಷ

ನಮಸ್ಕಾರ್ರಿ ಮೇಡಂ, ನನ್ನ ಹೆಸರ ಗುಂಡಮ್ಮ, ಹೊಲೆರ ಹೆಣಮಗಳು ನಾವು ಅಜಮಾಸ್ ೪೧ ವರ್ಷ ಅದಾವರಿ ನಾನು ಮಕ್ಕಳು, ನಮ್ಮವ್ವ ಇದ್ದಿವ್ರಿ ನಮ್ಮನೆತದಾಗ ಎಲ್ಲಾರು ಇದೆ ಜೋಗತಿ ಕೆಲಸ ಮಾಡಿಕೊಂಡ ಬಂದಾರರಿ, ಮೂವಾರಿ ಅಕ್ಕತಂಗೆರು ಅದರಾಗ ನಾನ ತುಂಬಿದ್ದಕ್ಕೆ ಊರು ಗೌಡ್ರು ನನಗೆ ಜೋಗತಿ ಬಿಡಲಿಕ್ಕೆ ಹೇಳಿದ್ರಂತ್ರಿ ಆವಾಗಿದ್ದವರು, ಅವರೆ ಪಟ್ಟಕ್ಕೆ ಹಾಕೊಂಡಿದ್ರು. ರೀ ನನಗೆ ಈಗ ಎರಡ ಹೆಣ್ಣೆ ಅದಾವರಿ ನನಗನು ಹಂಗೆರಿ ಬಂದ ಹೊದವರು ಎನರ ಕೊಡ್ತಿರಕ್ಕ ರುಪ್ಯೆ ಅಷ್ಟೇ. ಸರ್ಕಾರದೊರು ಕೊಟ್ಟಾರ ಎರಡು ಎಕೆರೆ ಆಗಿತ್ತಂತ ರೀ ನನಗೆ ಹಿರೆರು ಕೊಟ್ಟಿದ್ದು ಒಂದೆಕರೆ ಹಳಿದು ಸಾಲಂತ ಅದಿಷ್ಟು ಮುರೆಹಾಕಿದ್ರಂತ ಒಂದು ಎಕರೆ ಇತ್ತರಿ ಈಗ ಇದಿಗೆ ಅಷ್ಟನು ನಂಬಲ್ಯಾಕ ಇಲ್ಲರಿ.

ಊರ ಗೌಡರ ಹೊಲದಾಗ ಕೆಲಸ ಮಾಡ್ತಿದ್ವ್ಯಾರಿ ಒಂದಿನಾ ಅವರೆ ಕರದ ಹೇಳಿದ್ರ ರೀ ಇಲೆಕ್ಷನಕ ನಿಂದರ ಬೇಕೆಂತ, ನಮಗ್ಯಾಕಂದ್ರನು ನಾ ಇದಿನಿ ನಿನ ಹಿಂದ ನೀ ನಿಂದರಕ ಬೇಕು. ಮುಂದ ಬರಬೇಕಂತ ಹೇಳಿದ್ರೂ ರಿ, ನನಗೆನು ತಿಳಿಲಿಲ್ಲ. ದೇವರ ಹೆಸರು ಮ್ಯಾಲ ಊರಿಗಿ ಬಿಟ್ಟಿರ್‍ತಾರರ್‍ರಿ ನಮಗ ಊರ ದೆವರಂದ್ರೆ ಗೌಡ್ರರಿ ಅದಕ ಅವರ ಹೇಳಿದ ಮಾತಿಗಿ ತಪ್ಪಿದರೆ ಆ ದೇವರ ಮೆಚ್ಚಂಗಿಲ್ಲರಿ. ನಿಂತೇ ರೀ ಎಲ್ಲಾ ಪರಚಾರ ಮಾಡಿದ್ರೂ, ನನಗೆನು ಕರಕಂಡ ಹೋದ್ರು ಹೋಗಿದ್ದೆ ತೆಲಿತುಂಬಾ ಶೆರಗ ಹಾಕಿಕೊಂಡು ಕೈ ಮುಗದಿದ್ದೆ, ಬರತಾನ ಕೈಯಿಳಿಸಿಲ್ಲ ಸಿರಿ ಸರಿಸಿಲ್ಲರಿ. ಖರ್ಚಿಗಿ ಅವರಿಷ್ಟ ಕೊಟ್ಟರ ರೀ ಸಾಕಾಗಲಿಲ್ಲ. ಅದಕ ಹೊಲ ಮಾರಿಕೊಂಡೆ ಜಗ್ಗಿ ದುಡಿಬಹುದು, ಇಲೆಷನ್‌ದಾಗ ಗೆದಿತಿನಿ ಗೌಡರಿರ್‍ತಾರ ಮನಿ ಕಟ್ಟಬಹುದು ಮಕ್ಕಳಿಗಾ ಶಾಲಿ ಓದಸಿ ಛಲೋ ಗಂಡಿಗೆ ಮಾಡಿಕುಡಬೇಕಂತ ಎಟಕ ಬಂತ ಆಟಕ ಮಾರಿದೆರಿ, ಅದು ಗೌಡರೆ ತಗೊಂಡು ಜಾಸ್ತಿ ಕೊಟ್ಟರ ರೊಕ್ಕರಿ, ಮಂದಿಯಾದರ ಕೆಮ್ಮಿ ರೊಕ್ಕಕ ಕೇಳಿದ್ರು ರೀ, ಅದಕ ಗೌಡರಿಗೆ ಕೊಟ್ಟೆ. ಗೆದ್ದ ಬಂದೇರಿ ಅಧ್ಯಕ್ಷಗಿರಿನೆ ಕೊಡಸಿದ್ರ ಗೌಡ್ರು. ಆದರೆ ಗೆದ್ದಾಗ ಮೆರವಣಿಗಿ ಊರ ತುಂಬಾ ಮಾಡಿದ್ರೂ ರೀ ಎಲ್ಲರಿಗಿ ಟ್ರ್ಯಾಕ್ಟರಿದಾಗ, ಬಂಡ್ಯಾಗ

ಕೂಡಿಸಿದ್ರು ಹಾರಾ ಎಲ್ಲಾ ಹಾಕಿದ್ರ ರೀ, ನಾ ಕಮ್ಮಿ ಜಾತಿ ಹೆಂಗಸಂತ, ನಡಸಿಕೊಂಡು ಮಂದಿ ಹಿಂದ ಕರಕಂಡ ಹ್ವಾದ್ರು, ನಮ್ಮ ಜನಾ ಬಿಟ್ಟು ಬ್ಯಾರೆ ಯಾರು ಹಾರ ಹಾಕಿಲ್ಲರಿ ಉಳಿದವರೆಲ್ಲ ದೂರಲಿಂದೆ ಹಾರ ಬೀಸಿ ಬಿಸಾಕತಿದ್ರಿ, ಅದು ಕೊಳ್ಳಿಗೆ ಬಿಳಲಿಲ್ಲ ಎತ್ತಿ ತಗೊಂಡ ಹಾಕಿಕೊಂಡೆ, ದೊಡ್ಡಮಂದಿ ಹಾರ ಅಂತ, ಅದಕ ಎಂದುಕಂಡಿಲ್ಲ ಹಾಕೋ ಅಂತ ಸಿಗದಿದ್ರ ರೀ ಊರ ತುಂಬಾ ನಡದು, ಕಾಲಿಗೆಲ್ಲ ಬೊಬ್ಬೆ ಎದ್ದು ಕಾಲು ರಗತ ಸೋರಕತ್ತಿತು. ನಂಬಲ್ಯಾಕ ಹಾಕೊಲಕ ಚಪ್ಪಲಿನು ಇರೆಲಿಲ್ಲ ರಿ ಅಂಗೆ ಊರೆಲ್ಲಾ ತಿರಗದಿರಿ.

ಮುಗಿಸಿ ಮನಿಗಿ ಬಂದು, ಎರಡು ದಿನ ಹಾಸಿಗಿ ಹಿಡಿದಿದ್ದು ಹೋತಿನಿ ಎಲ್ಲಾ ಸಭಿಗಿ ಇಲ್ಲರಿ, ಒಂದ ಸಭಿಗಿ ಕರದಿದ್ರು ಹೋದೆ ದೊಡ್ಡೊರೆಲ್ಲ ಕುತಿದ್ರು. ಹೋಗಿ ಹೊರಗೆ ಪಂಚಾಯ್ತಿ ಕಟ್ಟಿಮ್ಯಾಲ ಕೂತಿನಿ. ಎಲ್ಲಾ ಜೋರ ಜೋರ್ ಮಾತಾಡೊರ್ರಿ, ಚಾ ತಂದ ಕೊಟ್ರು, ಬಿಸೆಕೆಟ್ ಕೊಟ್ರಾ ರೀ, ಚಾ ಕುಡದೆ ಬಿಸ್ಕಟ್ ಮಕ್ಕಳಿಗಂತ ಮನಿಗಿ ತಗಂಬಂದೆ ರ್ರಿ. ಅದು ಎದಕ ಹೆಬ್ಬಟ್ಟ ಹಾಕಂತ ಕಾಗದ ಹೊರಗ ಕಳಿಸಿದ್ರು ಅದಕ ಹಾಕಿನಿ. ಎರಡ ತಿಂಗಳ ಆದ ಮ್ಯಾಲ ಯಾರೋ ಮ್ಯಾಲಿನವರು ಬಂದು ರೊಕ್ಕ ತಿಂದಿದಿ ಅಂತಂದು ಐದು ಸಾವಿರ ದಂಡಾ ಹಾಕ್ಯಾರರ್ರಿ ನೆಲಗೊಂದು ಗೊತ್ತಿಲ್ಲ. ಗೌಡರ ಮನಿಗಿ ಆರ ಸಲ ಹೋಗಿನಿ ಸಿಕ್ಕಿಲ್ಲ. ಮನ್ನಿ ಮನ್ನಿ ಸಿಕ್ಕಿದ್ರಿ. ಹೌದು ಕಟ್ಟಬೇಕು. ನಿಮ್ಮ ಕೇರಿ ಬಂಡಿ ಹಾಕಿಸಿದಂತ ಸುಳ್ಳು ಹೇಳಿದಿ ಅದಕ ಸಯಿ ಮಾಡಿದಿ ನಾ ಊರಾಗ ಇಲ್ಲದಾಗ ಅದಕ ಅವು ರೂಪಾಯಿ ಯಾರ ತಂಡೊರೊ ನಂಗೊತ್ತಿಲ್ಲಂದ್ರು, ಸಾಲ ಕಟ್ಯಾಕ ರೊಕ್ಕಯಿಲ್ಲ ಟೇಶನ್‌ಕ ಒಯ್ದುರಿ ನಮ್ಮವ್ವ ಕಂಗಾಲಾಗಿ ಮೆತ್ತನ ಮುದಕಿರಿ ಗೌಡರ ಬಲ್ಲಿಂದ ೬ರ ಬಡ್ಡಿಗಿ ಐದ ಸಾವಿರ ತಂದು ಕಟ್ಟಿ ನಂಗ ಬಿಡಿಸಿ ಕರಕಂಡ ಬಂದಾಳ, ಕೇರಿಯವರಿಗೆಲ್ಲ ಗೊತ್ತಾದರಿ ನನ ಪರಿಸ್ಥಿತಿ ರೊಕ್ಕ ಗೌಡಗ ಸುರದಾಳ, ಪಟ್ಟಕ ಹಾಕಂಡಿದ್ದನಲ್ಲ ಅವರಪ್ಪ ಅದಕ ಮಗನ ಮ್ಯಾಲ ಆಶಿ ಮಾಡಿ ಅವನಿಗಿ ಇಟಕೊಬೇಕಂತ ಮಾತಾಡ್ತಾರೆ, ಊರಾಗ ಒಂದಿನ ಚಪ್ಪಲಿಲೆ ಹೊಡದರ ರೊಕ್ಕತಿಂದಿನಂತ.

ಈಗ ಯಾವ ಸಭಿಗೂ ಹೋಗಲ್ಲರಿ, ಸಯಿ ಕೇಳ್ತಾರ ಹಾಕಿಲ್ಲಂದ್ರ ನನ್ನ ಮಕ್ಕಳಿಗ ಜೋಗತಿ ಮಾಡ್ತಾರಂತ, ನನಗೆ ಇದರಲಿಂದ ಬಿಡಗಡಿಯಾಗಿ ಬಂದು ಇಲ್ಲೆನ್ರಿ ಸೈ ಹಾಕದ್ರ ಒಂದ ತಪ್ಪು, ಬಿಟ್ರ ಒಂದ ತಪ್ಪೆ ಏನ್ ಮಾಡ್ಲಿರಿ ತಾಯಿ ಸಾಯಲಕಾಗ್ಯಾದ ಇದಿಟು ಚಿಂತಿ ಹತ್ತಿ ನೆಲ ಹಿಡದಿದೆ, ತೊರಸಬೇಕೆಂದ್ರ ರೊಕ್ಕ ಇಲ್ಲ. ವಯಸ್ಸಾಗ್ಯಾದಂತ ಯಾರು ನಮ್ಮ ಮನಿಗಿ ನಂಬಲ್ಲಿ ಬರಲ್ಲಾ, ಹರೆದವರೆ ಮನಿಗಿ ಹೊಗತಾರ.

ನಂಗ ಕೋರಟ್, ಕಛೇರಿ, ಗೊತ್ತಿಲ್ಲ. ಬ್ಯಾಡಂದ್ರನು ಜುಲಮಿ ಮಾಡಿ ಇಲೆಷನ್ ಮಡಿ ನನಗ ಇಷ್ಟ ತರಾಸ ಮಾಡಲಿಕತಾರ, ಮಕ್ಕಳಿಗಿ ಊಟಾಕ ಒಂದು ರೂಪಾಯಿದು ಅಕ್ಕಿಯಿಲ್ಲ. ದಿನಾ ಪುರತಿ ಗೌಡಕಿ ಹೊಲದಾಗ ದುಡದರ ನಿಂದ ಅಸಲಿಂದ ಬಡ್ಡಿಯಾಯಿತಂತಾರ. ಒಂದುನು ತಿಳಿಯವಲ್ತು. ಎನ ತಿಂದೆನಂದ್ರ ದುಡ್ಡಿಲ್ಲಾ. ಬಾಯಿಗ್ಹರಬೇಕಂದ್ರ ನಿರೀಲ್ಲ. ಮನ್ಯಾಗಿನ ಸಾಮನೆಲ್ಲ ಮಾರಿದೆ. ನಮ್ಮ ಹೆಸರ ಮ್ಯಾಲ ಅವರು ದುಡ್ಡ ಮಾಡಕೊತರ, ಮಾಡಕಲಿ ನಮಗ್ಯಾವದು ಬ್ಯಾಡರಿ ಆದ್ರ ನಾವಿಲ್ಲಿ

ಹೊಟ್ಟೆಗಿಲ್ಲದೆ ಸಾಯಕತರ, ನಮಲಿಂದ ಬಡ್ಡಿ ಕಟಿಸ್ಕತಾರ. ಇದಕ ನಮಗ್ಯಾಕ ರಾಜಕೀಗಿ ಇಳಿಸಿದ್ರು ಗೊತ್ತಾಗಿಲ್ಲ. ಸಾಲದವರು ಮನಿಗಿ ಬಂದು ಬಾಯಿಗಿ ಬಂದಂಗ ಬೈಯದು ಹೋಗ್ತಾರ ಯಾರ ಕೇಳಬೇಕು ಗೋಳು ನಮ್ಮದು ವಾರದಲಿಂದ ಮಕ್ಕಳಿಗಿ ಮನಿ ಮನಿಗಿ ಭಿಕ್ಷ ಬೇಡಕ ಕಳಸ್ತಿದಿನಿ. ಹಳಸಿದ್ದ ಎರಡರಡ ದಿನಾ ಇಟ್ಟು ತಿಂತಿವೆ. ಎಲ್ಲಿಗೆ ನಿಂದ್ರತದೊ ನಿಂದ್ರಲಿ.

**ಪ್ರಕರಣ : ೧೭**

ಹೆಸರು : ವೆಂಕಟಲಕ್ಷ್ಮೀ

ವಯಸ್ಸು : ೨೮

ಜಾತಿ : ಮರಾಠ

ಶಿಕ್ಷಣ : ಪಿ.ಯು.ಸಿ.

ಹುದ್ದೆ : ಅಧ್ಯಕ್ಷ

ಹತ್ತ ವರಷಾತರಿ ಶಾಲಿ ಬಿಟ್ಟ. ಅದು ಮುಗದ ಕೊಡಲೆ ಮದಿವಿ ಮಾಡಿದರು ರೀ. ಈ ಊರಿಗಿ ಕೊಟ್ಟಾರ. ಇಬ್ಬರ ಮಕ್ಕಳ ಆಗ ನನಗೆ ಒಂದು ತಿನ್ ವರ್ಷದ ಪೋರಿ ಅದ ಮಗ ದೊಡ್ಡವದನ ಶಾಲಿಗಿ ಹೊಗತಾನ ನಮ್ಮ ಮನಿಯವರ ನಿಂದರಂದದಕ ನಿಂತಿದ್ದು, ಅರಿಸಿ ಬಂದಿನ್ರಿ ಎಲ್ಲಾ ಕಡಿ ಅವರೆ ಅಡ್ಡಾಡ್ತಾರೆ, ಮಕ್ಕಳಿಗಿ ಬಿಟ್ಟ ಹೋಗಲಿಕ ಹ್ಯಾಂಗ ಬರ್ತದ. ಇದಿನ್ನಾ ಹಾಲುಕುಡಿತದ ಕೂಸು ಮಂದ್ಯಾಗ ಹೋಗಿ ಕೂತರ ಏನ್ ಛಂದ ಕಾಣಸ್ತದ. ನನಗ ನಾಚಿಕ ಬರತದ. ನನಗಂಡನು ಬ್ಯಾಡಂತನರಿ ಯಾರಾರ ಪಟ್ಟಣದಲಿಂದ ಬರವರಿದ್ರಂತ ಮೊದಲೆ ಹೇಳಿ ಕಳಸ್ತಾರ ಹೋಗಿ ಬರ್ತಿನಿರಿ.

ಕರಿತಾರ ಅಲ್ಲಿ ಅಲ್ಲಿ ಹಳ್ಳಿಗಳದಾಗ ಬರೆಂತ ಇವರಿಗೆ ಕಳಿಸಿತಿನಿ. ಒಂದಸಲಾ ನಗೆ ಬರಬೇಕಂತ ಮನಿಮುಂದ ಗಾಡಿತಂದು ನಿಂದರಿಸಿ ಕರಕಂಡ ಹೋದ್ರು, ಹೋಗಿದ್ದೆ, ಸ್ಟೇಜಿಗೆನ್ ಹೊಗಿಲಿಲ್ಲರಿ ಕೆಳಗೆ ಕುಂತು ಬಂದೆ, ಒಂದೆರಡು ಮಾತಾಡಂದ್ರ ನಾ ಒಲ್ಲಂತ ಬಂದಬಿಟ್ಟೆ. ಅದ್ಯಾಂಗಾಗ್ತದ ನನ್ನಗಂಡ ಇರ್ಲಿಲಂದ್ರ ನಾ ಗೆದಿತಿದ್ದಿಲ್ಲ. ಗೆದ್ದಿನಂತ ಗಂಡಗ ಮೂಲಿಗಿ ಬಡದಾಳ ಅನಸ್ಕೊದು ಚಲೊ ಅಲ್ಲ ಅದಕೆ. ಎಲ್ಲಾ ಏನ ನಡದದ ಅಂತ ಅವರು ಹೇಳ್ತಿರ್ತರಲ್ಲ ಅದೆಲ್ಲಾ ನಮ್ಮತನ ಏನು ತಂದಿಲ್ಲ. ಯಾ ಸಮಸ್ಯೆನು.

ಸಭೆಗೆ ಹೊದ್ರುವನು ಅಲ್ಲಿ ಮೊದಲಂದ್ರ ಹೆಣ್ಮಕ್ಕಳು ಯಾರು ಇರಲ್ಲ. ನಾವೇ ಒಂದಿಬ್ಬರು, ಅವರು ಇನ್ನೊಬ್ಬರು ಮೆಂಬರ್ ಅದರೆ ಅವರೆಂತದಕು ಬರಲ್ಲ. ಸುಮ್ಮಕ ಟೀ ಕುಡ್ಯಾಕ ಅಲ್ಲಿಗ್ಯಾಕ ಹೋಗಬೇಕ, ನಮ್ಮ ಮಾತುಗಳು ಏನು ಕೇಳಲ್ಲ ಯಾವ ಪಿವನ್‌ನು ಕೇಳಲ್ಲ. ಊರಾಗಿನ ಕೆಲಸ ಮಾಡ್ತಿನಂತರ ಏನು ಚೆಂಜಾಗಿಲ್ಲ. ಕೇಳಿದಕ ನಮ್ಮ ಮೆಂಬರಗೆ, ಮೆಂಬರ ಗಂಡಗ ಕೊಲ್ತಿನಂತ ಹೇಳಿದ್ರಂತೆ ಎದಕ ಬೇಕರಿ ತಣ್ಣಗ ಮನಿ ಮಕ್ಕಳಂತ ಇದ್ರ ಆಯ್ತು. ನಾವೆನು ಮನ್ಯಾಗ ಇರ್ತೀವಿ ಸಮಸ್ಯಾಗಲ್ಲ. ನಮ್ಮ ಯಜಮಾನರು ಹಗಲ ರಾತ್ರಿ ಅನಲಾರದಂಗ ಓಡಾಡ್ತಾರ ಸೇಡಿಟ್ಟು ಏನರ ಮಾಡಿದ್ರಂದ್ರ ರಾಜಕೀಗಿ ಇಳದು ಗಂಡಗೆ ಕೊಲ್ಲಸಿದಳು. ಆಕಿಗಿ ಏನರ ಸಂಬಂಧದ ಅಂತ ಕತಿ

ಕಟ್ಟುತಾರ, ಅದಕ ನಂಬಕಂಡು ನಾವಿದಿವಿ ಅದಕ ಹೇಳದಲ್ಲಿ ಸೈಯಿ ಮಾಡದು ನಮ್ಮ ಮ್ಯಾಲ ಏನಬಂದರು ಅವರು ನಿಭಾಯಿಸಂಗ ಕಂಡಿಷನ್ ಹಾಕಿನೆ ಮಾಡದು.

ಇಲ್ಲಿತನಕ ಏನು ಸಮಸ್ಯೆ ಆಗಿಲ್ಲ. ಆಫಿಸಿಗಿ ಹೋದರ ಒಬ್ಬರ ಚಂದಿರ್ತಾರೆ, ಒಬ್ಬರ ಚಂದಿರಲ್ಲ. ನಮಗ ಸುಮನೆ ಟೆನ್‌ಷನ್ ಮಾಡಕೊಳ್ಳೊದು ಆಗುತ್ತ ಅದಕ ನಾ ಇವರಿಗೆನು ಕಂಡಿಷನ್ ಹಾಕಿನೆ ನಿಂತಿದ್ದು, ಜಾಸ್ತಿತಗಲಕಂಡು ಯಾರಿಗಿ ಎದುರ ಹಾಕೊಬಾರದು ಅಂತ ಹ್ಞೂಂ ಅಂದಿದ ನಿಂತಿನಿ. ಲಾಭ ಬರ್ತದ ಎಷ್ಟು ಏನು ಅಂತೆ ಕೇಳಲ್ಲ ಬಂದಿದ್ರಗ ಸಾವರ, ಎರಡಸಾವರ ಕೊಟ್ಟು ಕಳಸ್ತಾರ. ಗೌಡರು ಹಂಗೆಲ್ಲಾ ಬೆಮಾನಿ ಮಾಡಂಗಿಲ್ಲ. ಅವರೆಷ್ಟರ ತಿನ್ನಿ ನಾವು ಕೇಳಂಗಿಲ್ಲ. ಕಲ್ತಿವಿ ಅಂದ್ರುನು, ಕಲತಿದ್ದೆಲ್ಲಾ ಪ್ರದರ್ಶನ್‌ಕ ಮಾಡಕಬರಲ್ಲ ಅಲ್ಲಿ. ನಮ್ಮ ನೆರಳಗಿ ಅಂಜಿ ನಡದರ ಏನರ ಒಂದಂತಾರ ಮೊದಲೆ ಹಳ್ಳಿ ಊರು, ಸಿಟಿ ಆದ್ರ ಆ ಕತಿನ ಬೇರೆ ಇರ್ತಿರ್ತು. ಊರಾಗ ಹಿಂಗೆ ಒಂದು ಕೆಸ್ ನಡದಿತ್ತರಿ. ಗೌಡರ ಮಗನಂದೆ ಅಂತಾರ ಕೈ ಗೊತ್ತಿಲ್ಲ ದೊಡ್ಡಮನಿ ಮಾತದು. ಅದಕ್ಕೆ ನಮ್ಮಲ್ಲಿ ಒಬ್ಬರ ಮೆಂಬರ ಸುಮ್ಮನೆ ಕೂತಾಗ ಅಂದಿದ್ದಳು ಬಡವರದಾದರೆ ಬಿಡ್ತಿದ್ರನು ಜೀವ ತೆಗೆತಿದ್ರು ದೊಡ್ಡವರು ಏನು ಮಾಡಿದ್ರು ತಪ್ಪಲ್ಲಂದಿದ್ದ ಕೇಳಿ ಯಾರೋ ಗೌಡರ ಮನಿಗಿ ಸುದ್ದಿ ಹೇಳಿ ಕಳಸಿದ್ರು. ಅದು ಗೊತ್ತಾಗಿ ಯಾವುದೋ ಪಂಚಾಯ್ತಿ ದುಡ್ಡಿನ ಕೆಸನಾಗ ಹಾಕ್ಸಿ ಅಕಿಗಿ ಒಳಗ ಹಾಕಬೇಕೆಂತ ಎಲ್ಲರೂ ಗೌಡರಂದಾರಿಲ್ಲ ಗೊತ್ತಿಲ್ಲ. ಊರ ಜನ ಮಾತಾಡ್ತರ. ಬಾಳ ಸೂಕ್ಷ್ಮ ಇದು ಏನು ಮಾತಡಿದ್ರು ತಪ್ಪೆ. ಅದೆ ಮನಸಿನಾಗ ಇಟ್ಟು ಅಕಿನ ಗಂಡಗ ಒಳಗ ಹಾಕ್ಸಿದ್ರು. ಹೊರಗ ತರಲಕ ೧೦.೦೦೦/- ರೂಪೈ ಖರ್ಚುಮಾಡಿದಳು. ಯಾರು ಕೈ ಹಚಲಿಲ್ಲ. ನಮ್ಮಲಿಂದ ಉಪಯೋಗ ಆದರೆ ಮಾಡಬೇಕು ಇಲ್ಲಂದ್ರ ಇಲ್ಲ. ಏನು ಮತಾಡಬಾರದು. ಇದು ಮೂರು ಬಿಟ್ಟು ನಿಂತವರಿಗಿ ಜಾಗ ಅಂತಾರೆ, ಆದರೆ ಎಚ್ಚರಲಿಂದ ಇರಬೇಕು. ಅದಕೆ ಯಾವುದಕ್ಕೂ ನಾ ಹೆಚ್ಚಿಗಿ ತಲಿಹಾಕಲ್ಲ.

**ಪ್ರಕರಣ : ೧೮**

ಹೆಸರು : ಸುಶಿಲಮ್ಮ

ವಯಸ್ಸು : ೩೩

ಜಾತಿ : ಎಸ್.ಟಿ.

ಶಿಕ್ಷಣ : ---------

ಹುದ್ದೆ : ಅಧ್ಯಕ್ಷ

ಊರಿನ ಜನ, ನನ್ನ ಗಂಡ ಎಲ್ಲರೂ ಒತ್ತಾಯದಲಿಂದ ನಿಂದ್ರಸಿದ್ರು ಇಲೆಕ್ಷನಗೆ, ಸಾಲಿ ಕಲಿಲಿಕಂದ್ರ ಇಂಥವಕೆಲ್ಲ ಬರಬಾರದು, ನಮಗೆನು ತಿಳಿಯಲ್ಲ. ಗೆದ್ದ ಬಂದ ಮ್ಯಾಲ ಐದಾರು ಸಭಿಗಿ ಹೋಗಿನಿ. ಗುಡ್ಯಾಗ ಮಾಡ್ತಾರ. ನಾನರ ಮ್ಯಾಲ ಹೋಗಿಲ್ಲ. ಒಂದಕಡಿಗಿ ಕುತು ಮಾತಾಡುದು ಕೆಳಸಗಂಡು ಚಾ ಕುಡಿದು ಬರದು ಹಿಂಗೆ ಮಾಡ್ತಿದ್ದೆ. ಎಲ್ಲಾ ತಿಳಿದಿದ್ದೆ ಅದಕ್ಕೆ ಆಪಿಸರ ಬರದ ಬ್ಯಾಡಂತ ಹೇಳ್ತಾನಷ್ಟೇ. ನಾನೆ ಸುಮನ ಹೊಗಬೇಕಂತ ಹೋಗಿರತಿನಿ.

ಮನ್ನಿ ಮನ್ನ ಒಂದು ಸಭೆ ಆಯಿತು. ಅಂಜನೆಯ ಗುಡ್ಯಾಗ ಮಾಡಿದ್ರು ಗುಡಿ ಒಳಗಿನ ಕಟ್ಟಿಮ್ಯಾಲ ದೊಡ್ಡ ದೊಡ್ಡವ್ರು ಕುರ್ಚಿ ಎಲ್ಲಾ ಹಾಕಿದ್ರು ಕೆಳಗ ಜನರಿಗಿನು ಒಂದು ಬೆಶಿಟ್ ಹಾಕಿದ್ರು ನಾನು ಒಂದಕಡಿ ಹೋಗಿ ಕೂತಗಂಡೆ ಎಲ್ಲಾ ಊರಿನವರು ಗಂಡಮಕ್ಕು ದೊಡ್ಡವರೆಲ್ಲ ಬಂದ್ರ ಜನಾ ಎದ್ದು ನಿಂತಚಪ್ಪಳಿ ಬಡದು ಕೆಳಗ ಕೂಡತಿದ್ರು. ಆದರೆ ನಾ ಹೊದರ ಯಾರು ತಿರಿಗಿನು ನೋಡಲಿಲ್ಲ. ಹಿಂದಿನ ಸಾಲನಾಗ ಒಂದಕಡಿಗೆ ಮೂಲಿಗಿ ಕುಂತಿದ್ದೆ.

ಆಮ್ಯಾಲ ಸ್ವಲ್ಪತ್ತಿಗೆ ಊರ ಹುಡುಗರು ನಮ್ಮಂದಿ ಗೌಡರಮಂದಿ ಎಲ್ಲಾ ಉಡುಗರು ಸುಟಿಗಂತ ಊರಿಗಿ ಬಂದಿದ್ದು ಅವರೆಲ್ಲ ಸಭೆಗೆ ಬಂದ್ರು ಅಧ್ಯಕರು ಹಾಜರಿದಾರೆ ಅಂತ ಭಾಷನದಾಗ ಹೇಳಿದ್ರೆ ಅವರೆಲ್ಲ ಅಲ್ಲೆ ನಿಂದರಿಸಿ, ಎಲ್ಲ ಅದಾರ ಅವರು ಅಂತ ಬೆಶಿ ಹಿಡದು ಕೇಳಿದ್ರು. ಅದರಂಗ ಎರಡ ಹುಡುಗರು ಬದ ನನಗೆ ಗುಡ್ಯಾಗ ಮ್ಯಾಲ ಕುರ್ಚಿಗಿ ಕೂಡಕ ಕರೆದ್ರು ಒಲ್ಲಂತ ಎಷ್ಟು ಅತ್ತರನು ಕೇಳಲಿಲ್ಲ ನಾಕುಡುರು ಎತಗಂಡ ಹೋಗಿ ಕೂಡಸದ್ರು. ಗೌಡರ ಬಗಲಾಗ ಗೌಡರು ಎದ್ದು ದೂರ ಸರದ್ರು ಪಂಚರು ನಾವೆಲ್ಲ ಕೆಳಗೆ ಹೊಗತಿವಿ ಅಂತ ಹೊಂಟನಿಂತರು ನಾ ಎಳಬೇಕಂದ್ರ ಬಿಡಲಿಲ್ಲ. ಅಷ್ಟರಗ ಒಬ್ಬರು ಮಾತಾಡದ ಇರತದಲ್ಲ ಅದ ಕೈ ತಗೊಂಡ ಹೇಳಿದ ಯೊರೊಬ್ಬರ ಎದ್ದ ಹ್ಯಾದರ, ಪಂಚರ ಕೇಳಗಿಳಿಲಿ, ಅಧ್ಯಕ್ಷರು, ಉಪಧ್ಯಕ್ಷರು ಮೆಂಬರಗಳ ಮ್ಯಾಲ ಕೂಡಲಿ ಅಂತ ಹೇಳಿದರ ಜನ ಎಲ್ಲಿ ಗಾಬರಿಯಾಗಿ ಚಪ್ಪಳಿಬಡಿದು, ಬಡಿದು, ಗೌಡರು ಎದ್ದನಿಂತ ಜಾತಿ ಬಿಡಬಾರದು, ಜೀವ ಬಿಟ್ಟರ ಚಿಂತಿಲ್ಲ ಅಂತ ಹೇಳಿದ್ರು ಬಾಯಿಗಿ ಬಾಯಿ ಹತ್ತಿ ಗಲಾಟೆಗಳಾದವು. ಪೋಲಿಸರ ಬಂದರು ಎಲ್ಲರು ಟೇಶನಿಗೆ ಹೋಗಿ ಒಷ್ಟು ಮಾತಾಡಿ ಹಂಗೆಲ್ಲಾ ಆಗಬಾರದು. ಈ ಹುಡುಗರು ಹೇಳಿದಂಗ ಜಾತಿಯೆಲ್ಲ ಬಿಟ್ಟು ನಿಂದರಬೇಕು. ಅಂದರ ಊರ ಬೆಳಿತದಂದ್ರು. ಹೆಚ್ಚು ಕಮ್ಮಿಯಾಗಿ ಈ ಹುಡುಗರ ಮುಂದಕ ಹೋದರ ಗೌಡರಿಗೆ ಒಳಗ ಹಾಕ್ತಿನಂದ್ರು ಗೌಡರು ಮಗನು ಅದರಾಗಿದ್ದ, ಹಾಕಿದ್ರಿ ಹಾಕಲಿ ಚಿಂತಿಲ್ಲ ಆದರೆ ಇವೆಲ್ಲ ನಮ್ಮೂರಾಗೆ ಮುಂದವರಿಬಾರದು ಅಂತ ಹೇಳಿದನು.

ಮತ್ತೆಲ್ಲಾ ಬಗೆಹರದ ಅಲ್ಲೆ ಸಭೆ ನಡಿತು. ಮರದಿನ ನನಗೆ ನನ ಗಂಡಗ ಕರೆಸಿದರು ಗೌಡರ ಮನಿಗಿ, ನೀ ರಾಜಿನಾಮ ಕೊಡು ಎಲ್ಲಾ ನಿನ್ನಲಿಂದೆ ಆಗಿದ್ದು ಅಂತ ಹೇಳಿದ್ರೂ. ನಮ್ಮ ಯಜಮಾನ ಆಯ್ತು ನಾವು ಬಿಟ್ಟುಕೊಡ್ತಿವಿ ಇಲ್ಲಿ ಅನಲ್ಲ. ಆದರೆ ನಮ್ಮ ಮ್ಯಾಲ ಆರೋಪ ಮಾಡದ ಬ್ಯಾಡ, ಅಂದರು ಅದೆಲ್ಲಾ ಇರ್ಲಿ ನೀ ಮೊದಲ ನಿಮ್ಮ ಹೆಣ್ಮಗಳಿಗೆ ಕೆಲಸ ಬಿಡಸಬೇಕಷ್ಟೇ ಅಂದರು ಆ ಮಾತ ಗೌಡರ ಮಗ ಕೇಳಿ ಎಲ್ಲಿರಿಗಿ ಹೇಳಿ ಊರ ಹುಡುಗರೆಲ್ಲಾ ಒಂದಾಗಿ ಸಭೆ ಮಾಡಿ ಊರಿಗಿ ಕೇಳಸಂಗೆ ಎಲ್ಲಾ ಹೇಳಿದ್ರು. ಗೌಡರ ಮಗಾನ ನಿಂತು ಎಲ್ಲರು ಬಂದಮ್ಯಾಲ ವಿಷಯ ಎಲ್ಲಟು ಮತ್ತ ಹೇಳಿದ. ನಮ್ಮಪ್ಪ ಅವರಿಗಿ ಮನಿಗಿ ಕರದು ಹೆದರಸ್ಯಾರ ಅದಕ ಅವರು ತಯರಾಗ್ಯಾರ, ಹಂಗೆನರ ಆಗಿ ಆಯಮ್ಮ ಪತ್ರ ಕೋಡದೆ ಅವರ ನಾವು ಗ್ರಾಮ ಪಂಚಾಯ್ತಿ ಕೀಲಿ ಹಾಕ್ತಿವಿ ಅಂತ ಹೇಳಿ, ಇಷ್ಟಕ್ಕೆ ನಿಲ್ಲಕ ಬಿಡಲ್ಲ, ಇದರ ಹಿಂದ ಇರವರೆಲ್ಲ ಒಳಗ ಹೊಗ್ತಾರ. ಪರಿಸ್ಥಿತಿ ಎಲ್ಲಾ ಕೆಡ್ತದ ಏನಾದರೂ ನಾವರೆಡಿ ನೀ ಕೊಡಬ್ಯಾಡಮ್ಮ ಕಾಗದಕ ಸೈಯಿ ಅಂತ ಹೇಳಿದರು. ಈಗ ತಿಂಗಳಾಯ್ತು ಇದೆಲ್ಲ ಆಗಿ ಇನ್ನ ಏನು ಆಗಿಲ್ಲ. ಯಾವಗ ಏನಾತದೊ ಅಂತ ಅಂಜಿಕಿ ಆ ಹುಡುಗರು ಊರಾಗ ಯಾರಿಗೆ ಏನಾದ್ರೂ ಆದ್ರ ಅದಕ ಹೊಣಿ ಗೌಡರ ಅಂತ ಪತ್ರ ಬರೆಸ್ಯಾರಂತ, ಅದಕ ಸುಮ್ಮನಾದರೇನು. ಅದಾದಮೇಲ ಒಂದ ಸಭಿ ನಡೆದು ನನಗನು ಎಲ್ಲರಂಗ ಮ್ಯಾಲ ಕರೆಕೊಂಡೊಗಿ ಕುಡುಸಿ ಮಾತಾಡಿದರು.

ಎಲ್ಲರಿಗಿ ಕೊಟ್ಟಂಗ ಗೌರವ ಕೊಟ್ಯಾರ ನಾನು ಶಾಲಿ ಕಲಿತರ ಎಲ್ಲಾ ನಮಗನು ತಿಳಿತಿತ್ತು. ಇಲ್ಲದಕ ಇಂಗಾಗದ ಕತಿ.

**ಪ್ರಕರಣ : ೧೯**

ಹೆಸರು : ಫಾತೀಮಾ

ವಯಸ್ಸು : ೪೫

ಜಾತಿ : ಮುಸ್ಲಿಂ

ಶಿಕ್ಷಣ : ಒನೇತರಗತಿ

ಹುದ್ದೆ : ಉಪಾಧ್ಯಕ್ಷ

ಅವರ ಹೆಸರು ಫಾತೀಮಾಂತೆ ನನ್ನ ಹೆಂಡ್ತಿ ಮದ್ವಿ ಆಗಿ ಬಾಳ ಸಾಲ ಆಯ್ತು. ಮಕ್ಕಳೆಲ್ಲಾ ಆಗ್ಯಾವ, ಬ್ಯಾರೆ ಊರಾಗ ಓದಲಾಕ ಇರ್ತಾರ ಇದ ಮೊದಲು ರಾಜಕೀಗಿ ಬಂದಿದ್ದು, ನಮ್ಮ ಖಾಂದಾನದಾಗ ಯಾರು ಬಂದಿಲ್ಲ. ಅವರು ಯಾರ ಬಂದರನು ಮಾತಾಡಲ್ಲ, ಹೊರಗ ಬರಲ್ಲ, ಇವತ್ತ ಇಷ್ಟರ ಒರಗೆ ಬಂದಾರ, ಬೆರೆ ಕಡೆ ಕರೆ, ತುಜ್‌ಕೊಚ್ ಪುಚತೆಕತೆ ಕ್ಯಾಕಿಬೋಲ.

ಅಷ್ಟೆ ಓದ್ವಿದ, ಅದು ಉರುದು ಓದಿದನಾ ಈಗ ಏನೆ ಇಲ್ಲ ಯಾದ ಕೆಲಸಕ ಕಳಸಿಲ್ಲ. ಮನಿಲಿಂದ ಹೊರಗೆ ಬರದ ಇಲ್ಲ ನಮ್ಮ ಜಾತ್ಯಾಗ ಆಗಿ ಬರಂಗಿಲ್ಲ ಅಸಲು ಬರೆಲ್ಲ. ಇವತ್ತ ನೀವ್ ಕರದಂರಂತ ಬಂದದೇಷ್ಟೇ ನಮ್ಮ ಆದಮಿ ಹೇಳಿದರ ನಿಂತಿದ್ದು. ನಾ ಎಲ್ಲಿಗಿ ಹೋಗಿಲ್ಲ, ಬಂದಿಲ್ಲಾ ಎಂಥದ ಗೊತ್ತಾಗಲ್ಲ. ಅಬ್ಬಾನ ಮನಿ, ಈ ಮನಿಗಷ್ಟೆ, ಅದನು ಇವರ ಬಂದಕೆಸಿ ಬಿಡಬೇಕು ಒಬ್ಬರೆ ಹೊಗಲ್ಲ.

ಒಂದ ಸಾಲ ಆತು ಗೆದ್ದು ಬಂದಕೇಶಿ, ಒಂದಿನಾಬಿ ಹೋಗಿಲ್ಲ. ನಾ ಆಫಿಸಿಗಿ, ಏನಿರಲ್ಲ ನಮ್ಮ ಕೆಲಸ ಅಲ್ಲಿ. ಎಲ್ಲ ಇವರೆ ಮಾಡಕೊಂಬರ್ತಾರ. ನಾ ಹೊದರನು ಯಾರು ಮಾತಾಡಲ್ಲ. ನಮದ ಮಾತನ ಕೆಳಲ್ಲ. ಪೆವನ್ ಯಾರು ಕೇಳಲ್ಲ. ಎದಕ ಬಂದಿರಿ ಅನಲ್ಲ. ಸಲಾಮನು ಅನಲ್ಲ. ನಾನೇ ಮಾತಡಬೇಕೆಂದ್ರನು ಹೆಚ್ಚಗಿ ಮಾತಾಡಲ್ಲಮ್ಮ. ಅಲ್ಲಿ ನಮಗೆನೊ ಶರಮ್ ಅನಸತದ ಮನ್ಯಾಗಂದ್ರ ಎಷ್ಟರ ಮತಾಡಬಹುದು. ಅಲ್ಲೆನ ಮಾತಾಡದ, ಗಂಡಮಕ್ಕಳೆಲ್ಲ ಇರ್ತಾರೆ. ನಿಮ್ಮಂಗ ಪಡಾಯಿನು ಮಾಡಸಿಲ್ಲ. ಅಬ್ಬಗ ಕೇಳಿದ ಆವಾಗೆ ಅಷ್ಟೆಸಾಕ ಚುಪಕೆ ಘರ ಮೆ ರಹ ಅಂದರ ಅವರು ಹೇಳದಂಗ ಕೇಳಬೇಕವರಿಗಿ ದೊಡ್ಡರಂದಂಗೆ ಕೆಳಕೆಸಿ ಸುಮ್ಮನಿರಬೇಕ ಅಷ್ಟೇ.

ನಮ್ಮ ಮಾವ-ಸಾಸ ಎಲ್ಲರು ಇದಕೆಲ್ಲಾ ಮೊದಲೆ ಬ್ಯಾಡಂತ ಹೇಳಿದರನ್ ಇವರ ಕೇಳಲ್ಲ. ಏನಾರ ಕೆಲಸಂತ ಯಾರಂದರ ಅವರ ಮನಿಗಿ ಬರತಾರ, ನಮದ ಪದ್ಧತಿ ಬುರ್ಕಾ ಇಲದಂಗ ಹೊರಗ ಬರಲ್ಲ. ಬಂದ್ರ ಎಲ್ಲಾ ನಮ್ ಜಾತಿದಾಗ ತಕಲೀಫ್ ಮಾಡತಾರ. ಈ ರಾಜಕೀ ಅಂದ್ರನ ಕೆಟ್ಟ ಏರಿಯ, ಎಲ್ಲಾದು ಬಿಟ್ಟ ಅದಕ ನಿಂದರಂತಾರ ನಾ ಬಿಡ್ತಿನಿ ನೀನೆ ಮಾಡಂತರ ಇವರ ಕೇಳಲ್ಲ.

ನೀ ಸುಮ್ಮನ ಇರು ನಿನ ಕೆಲಸ ಅಂದರ ಮನೆಕೆಲಸ ಮಾಡಕಂಡಕೆಸಿ ನಾ ಹೊರಗಿಂದ ಎಲ್ಲಾ ನೊಡಕತಿನಂತ, ನಮಗೆಷ್ಟ ಸಲ ಜಗಳ ಆಗ್ಯಾದ ಇದರ ಸಲ್ವಾಗಿ. ಅಂದರನು ಇವರದೆನ ಕೇಳಲ್ಲ. ಮನಿದು ಯಾರ್ದೆ ಮಾತ್ ಕೇಳಲ್ಲ. ಮನ್ಯಾಗ ಇವರ ಒರಗ ವಾದಮೇಲ ಎಲ್ಲರು ನಂದೆ ಆಶಾ ಅದಂತೆ ಹೇಳಿ, ಹೆಂಡ್ತಿ ಹೇಳಿದರ ಹೆಂಗೆ ಕೆಳಲ್ಲ. ಸಭಿ ಸುಂತಾ, ಏ ನಯಿ ಸುನತಾ ಕ್ಯಾ ಅಂತಾರ ಇಬ್ಬರ ಮದ್ಯ

ನಂದ ಜಾನ ತಿಂದ್ ಹಾಕ್ತಾರೆ. ಮನ್ನಿನೆ ಯಾರ ಬರತಾರ ಅಲ್ಲಿಗಿ ಬರಬೇಕಂದರ ನಮ್ಮ ಮಾವ ಕಳಸಿಲ್ಲ. ಒರಗ ಕಾಲಿಟ್ಟರ ಒರಗೆ ವೋಗಬೇಕ ಇಬ್ಬರಳ ಅಂತ ಎಳಿದ ಮ್ಯಾಲ ಅಲ್ಲಿ ವೋಗಿ ನನಗ ಬುಖಾರಾದಂತೆ ಏಳ ಬಂದರ, ಎಲ್ಲಾ ತಿಪ್ಲ ಯಾಕಂದ್ರ ಎಲ್ಲಾ ನಾನೆ ಮಾಡದರ ನಿಂದೆನಾಗದ ಮನಿ ಮಂದಿಯಾಂಗ ನೀನು ಮಾಡಬ್ಯಾಡ ಅಂತರ. ಎಲ್ಲಾ ಕೆಲಸ ಮಾಡಿದರನು ಮನಿದ್ ಸ್ವಲ್ಪ ಏನರ ಪಲಟಿ ಆದರ ಆಯ್ತು. ಓ ಕ್ಯಾಕಿ ಬನಾಯನ ತೇರಾ ಮರದ, ತೇರಾ ದಿಮಾಕ ವಯಿಚ ರಹತಾ, ಜಾಕ ಮರ, ಕಮರೇಮೆ ಅಂತ ಬಯ್ತಾರ ಸಾಸುಮಾ.

ಊರಿಂದು ಡ್ರೈನೈಜ್‌ದೆನಾ ರೊಕ್ಕ ತಿಂದರಂತ ಬಂದಿತ್ತು ಒಮ್ಮಿ ಇವರ ನೋಡದರ ಅವರ ಭಾನಗೆ ಕರಿಲಾಕ ಹೋಗ್ಯಾರ, ಈದಗ, ಒಂದ ವಾರ ಬರಲಂತ, ಅವರೆಲ್ಲಾ ಮನಿಗಿ ಬಂದ ಕೂತಾರ, ಚಾಯಿ, ನಾಷ್ಟಾ ಎಲ್ಲಾ ಮಾಡಂತ ಅಂವ ಬಾವಾಗೆ ಹೇಳದಕ್ಕೆ ಎಲ್ಲಾ ಮಾಡಿ ಕುಟ್ಟರನ ಅವರು ಮತ್ತ್ ಬರ್ತೀನಂದ್ರ, ಇಂವ ಬಂದ ಮ್ಯಾಲ ಬಂದ್ರ ಒಂದಿನಾ, ಇಂವ ಒರಗೆ ಓಗಲಾಕ ತಯಾರಿಲ್ಲ. ನಮ್ಮ ಮಾವ ಇದ್ದರ ಕೆತ್ತ ಖಾಯ ತೇರಾ ಮರದ ಪೈಸಾ ಕಾ ರಖಲಿಯಿ ದೆಕ ಚೊಡ ಜಾಂದೇ ಅಂತರ್ ಅಲ್ಲಿನಿಂತು.

ಅಖಿರಿಗಿ ಪೋಲಿಸರ ಬಂದರು ಮನಿಗಿ ಒದ್ದಕೆಸ ಎಳಕೆಂಡ ಹೊದರೆ ಎರಡ ದಿನಾ ಟೇಶನದಾಗೆ ಮನ್ಯಾಗ ಯಾರು ಬಿಡಸಲಿಕ ಸುದ ಒಗೆಲಿಲ್ಲ. ನಾ ಖಾನಾ, ಪೀನಾ, ನಾ ಸೋನಾ ಕುಚ ಬಿ ನಯಿ, ಯಾರಿಗ್ ಎಳಬೇಕು ಆ ಮೇಲೆ ಸೌದಿಲಿಂದ ನಮ್ಮ ಮೈದನ ಬಂದ್ರು ಎಲ್ಲಾ ಎಳೆದೆ ಕಹಾನಿ ಅವರ ಓಗಿ ರೊಕ್ಕ ಕಟ್ಟಿ ಬಿಡಸಿದರು. ಈಗ ಮನಿಲಿಂದ ಒರಗೆ ಹಾಕ್ಯಾರ ಇಬ್ಬರಿಗಿ ಛೋಟೆ ಬಚ್ಚೆ, ಏನ್ ಮಾಡಬೇಕ ಒಬ್ಬಕಿ ದಿನಾ ನಿಶಾದಾಗೆ ಬರತಾನ, ಎಂಗರ ಬಿಡಬೇಕು ಇದು ನಿವರ ಹೇಳಿ ದೀದಿ. ಎಲ್ಲಾ ಪೈಸಾ ಸಾಲಾ ಮಾಡಕಂತ ತಾನು ಕುಡೆದು, ಮಂದಿಗೆ ಕುಡಸದೆ ಮಾಡತಾನ. ನಂದ ಬಂಗಾರೆಲ್ಲ ಕೊಟ್ಟಿದ್ದ ನಮ್ಮಪ್ಪ ಅದೆಲ್ಲಾ ಮಾರಿಕುಂತಾನ ಕೇಳಿದರ ಕೈಗಿ ಸಿಕ್ಕದ ತಗೊಂಡು ಬಡಿತಾನ. ಸಾಕಾಗ್ಯದ ಜೇಹರ ಕುಡಿಬೇಕ ಎಲ್ಲಾ ರಾಜಕೀಲಿಂದೆ ಆಗ್ಯಾದ, ಹೆಣ್ಮಕ್ಕಳಿಗಿ ಕೊಡಲನ ಬೇಕದು ಬೇಶ ಅಂದ್ರ ಅಚ್ಛಾ ಆಗೋದು.

**ಪ್ರಕರಣ : ೨೦**

ಹೆಸರು : ರಾಧಮ್ಮ

ವಯಸ್ಸು : ೫೨

ಜಾತಿ : ಹಿರೆಮಠ

ಶಿಕ್ಷಣ : -------

ಹುದ್ದೆ : ಅಧ್ಯಕ್ಷ

ಎಲ್ಲಿ ಅರ್ಥ ಜೀವನ ಎನಮ್ಮಾ, ಪೂರತಿ ಮುಗಲಿಕ ಬಂದದ ನಮದು, ಒಬ್ಬಕಿನೆ ಮಗಳಿರದು. ಮದವಿ ಮಾಡಿ, ನನ ಬಲ್ಲೆ ಇಟಗಂಡಿನಿ ಇಬ್ಬರಿಗೂ, ಮನಿ ಅಳತನಕೆ ಬಂದಾನ. ಅವರ ತಂದಿ ಅಂದ್ರ ನಮ್ಮ ಬೀಗರ ಮಯರ್ ಆಗಿದ್ರು ಮೊದಲ, ಅದ ಚಟ ಇವನಿಗೂ ರಾಜಕೀ ರಾಜಕಿ ಅಂತಾನ. ಈಗ ನನಗ ವಯ್ಸು ಕೂಡಸ್ಯಾನ ಅಧಿಕಾರಕ, ಏನ್ ಅಧಿಕಾರನ, ಮಣ್ಣ, ಮಸಿ, ಏನು ತಿಳ್ಯಾಂಗಿಲ್ಲ ಬಿಡಂಗಿಲ್ಲಮ್ಮ ನಮಗ ನಿದರಂತರ ನಿಂದ್ರದು, ಕೂಂದರಂದ್ರೆ ಕೊಡದ ಎರಡೇ ಕಲಿಸಾರ ನಮಗೆ ಅವೆರಡೆ ಮಾಡ್ತಿನಿ ಆಯ್ತು.

ಮೂರ ವರಷದಲಿಂದ ನನಗ ತಗಲಾಕಂಡನ ನಮ್ಮ ಅಳಿಯ ನಾನ ನಿಂದರಬೇಕೆಂದ, ನಿನ್ನ ಹೆಣ್ತಗಿ ನಿಂದ್ರಸಪ್ಪ ಓದ್ಯಾಳ ಬರದಾಳ ಎಲ್ಲಾ ತಿಳಿತದಂದ್ರ ಅಕಿ ಹರೆದಕಿ ನಾಕ ಮಂದಿ ಕಣ್ಣಿಗ ಬಿದ್ದರೆ ಬಿಡದಿಲ್ಲತ್ತೆ ಸುಮಕ ನಿನ ನಿಂದ್ರ ಅಂತ ಈ ವರಷ ತಿಕಿಟ ತಗಂದೆ ಬಂದ ಮಗಳಿಗಿ ಭಾಳ ಖುಷಿಯದ ನನ ಗಂಡಗ ಎಷ್ಟರ ಪ್ರೀತಿ ಅದ ಅತ್ತೆ ಮ್ಯಾಲಿಂತ, ಎಂಟ ತಿಂಗಳಾತನಕತಿನಿ ಯಾರಿಗನು, ನನಗನು ನನೆಪು ಸುತ ಇಲ್ಲ ಅದರದ. ಎಲ್ಲೊಟು ಅವನ ಹೆಗಲಿಗೆ ಮನಿ ಹೆಂಡ್ತಿ, ಮಕ್ಕಳು, ನಾನು, ಅವರ ಮನಿ ಸಾಕಿಲ್ಲಂತ ಮತ್ತ ಇದೊಂದ ರಾಜಕೀ. ಒಂದ್ ನಿಮಿಷ ಪುರಸೊತ್ತಿಲ್ಲ ಅಣ್ಣಾರ ಇಲ್ಲೆನ್ರಿ, ಅಣ್ಣಾರ ಇಲ್ಲೆನ್ರಿ ಅಂತ ಬರತಾರ, ಎಲ್ಲಿ ಸೈಯಿ ಮಾಡಬೇಕಂದ್ರನು ನಮ್ಮಳ್ಯಾ ಹೇಳದೆ, ಅವರ ಎದರ ಇಲ್ಲದೆ ಮಾಡಂಗೆ ಇಲ್ಲ. ಮಾತನು ಆಡಸಲ್ಲ. ಅದಕೆ ಅವರ ಬರಲಿಂತ ನಿಮಗೆ ಎರಡ ಸಲ ಹೊಳ್ಳಿ ಹಾಕಿದ್ದು ನೀ ಈವತ್ತ ಸ್ವಲ್ಪ ತಡಮಾಡಿದ್ರ ಅವರು ಹೋಗಿದ್ರ ನಾನ ಮತ್ತೆ ಅದ ಕೆಲಸ ಮಾಡಬೇಕಿತ್ತು. ನಿಮ್ಮದು ಟೈಮ್ ಚಲೊ ಅದ ಅನಸ್ತದ ಇವತ್ತ. ಮನ್ನಿ ಒಬ್ಬರು ಯಾರೋ ಬಂದ ಬರಕಂದ ಹೋಗ್ಯಾರ ಎಲ್ಲಾ ಮಾಹಿತಿ ಏನ್ ರೊಕ್ಕನ ಕೊಟ್ಟಿಲ್ಲ. ನಿಮಗೆ ಕೊಡು ಅಂದಿಲ್ಲ. ನಮ್ಮ ತಮ್ಮನ ಪರಿಚಯದೊರು ನೀವಂತ ನಕಲಿ ಮಾಡಿನಷ್ಟೇ.

ಹೊಗತಿನಿ ತೀರಾ ಹೊಗಲ್ಲಂತೆನಿಲ್ಲ. ಜನಾನು ಭಾಳ ಮರ್ಯಾದಿ ಕೊಡತಾ, ಏನ್ ದುಸರ ಮಾತಡಲ್ಲ. ಅಂದರ ಆಫಿಸಿಗಿ ಹೊಗದ್ ಕಮ್ಮಿ ದೊಡ್ಡ ಮನಿ ಹೆಣ್ಣಮಕ್ಕಳು ಅಂಗೆಲ್ಲಾ ಹೋಗಿ ಕೂತರ ಮರ್ಯಾದಿ ಇರಲ್ಲ. ಅದರಾಗ ಎಲ್ಲಾ ಜಾತ್ಯರು ಬರತಾರ, ಯಾರ್‍ಯಾರದು ಕೈಲಿಂದ ಚಾ ಕುಡ್ಯಾದು ಎಲ್ಲಾ ಸೆರಿ ಬರಲ್ಲವ್ವ. ಅಲ್ಲಿ ಹೋದರ ಹಂಗೆ ಬರ್ತಿನಿ ನಾ ಒಂದ ಕಪ್ ಚಾ ಕಣ್ ಪಾಪಿಲೇ ಮುಟ್ಟಿಲ್ಲ. ಗೌಡರದು ಎಷ್ಟೇಲ್ಲಾ ಜುಲ್ಮಿ ಮಾಡ್ತಾರ ಗುರತಾಯಿ ಏನಾಗಲ್ಲ ತಿನರಿ, ಕುಡಿರಿ ಅಂತಾರ ನಮ್ಮನಸಿಗಿ ಒಪ್ಪಂಗಿಲ್ಲ. ಆ ಶಿವಾ ಮೆಚ್ಚಲ್ಲ ಯಾಕವ್ವ ಕಲಿತಿದೆಲ್ಲ ನೀನೆ ಹೇಳು. ನಂದ ಸರಿಯಂತಿದಿ ತಪ್ಪಂತಿದಿ ಬೇಶಿ ಹೆಳಿಬಿಡು.

ಹ್ವಾದ ವಾರ ನಮ್ಮ ಅಳ್ಯಾ ಊರಿಗಿ ಹೋಗಿದ್ರು, ಆವಾಗ ಗೌಡರು ಯಾವುದೋ ಒಂದ ಲಕ್ಷರೂಪಾಯಿದು ಕಾಗದಕ ಹೆಬ್ಬೆಟ್ಟ ಒತ್ತಂತ ಕಳಿಸಿದ್ರು. ನಂಗೇನ್ ಓದಕ ಬರಲ್ಲ ಬಿಡಲ್ಲ ಅದು, ನನ ಮಗಳು ಓದ್ಯಾಳಲ್ಲ ಬಿ.ಎಸಿ. ಅಕಿನ ನೋಡಿದಳು. ನಾ ಒರಗೆ ಬಂದಿಲ್ಲ ಅಲ್ಲೆ ಒಳಗೆ ಇದ್ದೆ ಇಬ್ಬರೂ ಊರಿಗಿ ಹೋಗಿವಿ ಬಂದ ಮ್ಯಾಲ ಕಳಸ್ತಿನಿ ಅಂತ ಎಳಿದಳು. ಮತ್ತ ರಾತ್ರಿ ಎಂಟಕ ಗೌಡರೆ ಬಂದಿದ್ರು ಆವಾಗನೂ ಹಂಗೆ ಮನ್ಯಾಗ ನಮ್ಮ ತಮ್ಮ ಇದ್ದ, ಹೇಳಿ ಕಳಿಸಿದ, ಇಲ್ಲ ಕೆಲಸದ ಮ್ಯಾಲ ಹೋಗ್ಯಾರಣ್ಣಾ ಅವರು ಬಂದ ಮ್ಯಾಕರಕಂಬರ್ತಿನಿ ಅಂತ ಹೇಳಿದ್ರು. ಹ್ವಾದರು. ಊರಿಗಿ ಫೋನ್ ಮಾಡಿ, ನಮ್ಮ ಮಗಳ ಅವರ ಗಂಡಗ ವಿಷಯ ಹೇಳಿದ್ಲು, ಎಲ್ಲಾ ಓದಿದ್ಲು, ಏನ್ ಮಾಡಬ್ಯಾಡರಿ ನಾ ಬರ್ತಿನಿ ಅಂತಂದು ಬೆಳಿಗ್ಗೆ ಹತ್ತಗಂಟೆಗೆಲ್ಲ ಬಂದಬಿಟ್ರು. ಆವಾಗ ನೋಡಿದ್ರ ಆ ಪತ್ರದ ಎಲ್ಲಾ ಲೆಕ್ಕ ಸುಳ್ಳಿತ್ತಂತ ಅದವರು ತಗೊಂಡಿದ್ದು ನಮ್ಮ ತಲಿಗಿ ಕಟ್ಟಬೆಕಂತ ಮಾಡಿದ್ರು. ಅದಾಗಲ್ಲಂತ ಅವರಪ್ಪರಲಿಂದ ಗೌಡ್ರಿಗಿ ಫೋನ್ ಮಾಡ್ಸಿದರು ಅವಾಗ ಸುಮ್ಮನಾದರು ಇಂತವ ತಲಿಬ್ಯಾನಿ ಬಿಟ್ರ ಮತ್ತೆನಂಥ ಸಮಸ್ಯ ಬರಲ್ಲ. ಸೈಯಿ ಮಾಡಿದ್ರ ಮನಿನ ಮುಳುಗತಿತ್ತಷ್ಟೆ. ಗೊತ್ತಿರಬೇಕ ಎಲ್ಲಾ.

# ೩. ಗ್ರಂಥಋಣ

**ಕನ್ನಡ ಮೂಲ ಕೃತಿಗಳು**


೧. ಅನಂತಮೂರ್ತಿ ಯು.ಆರ್., ಹಿಂಸೆಯ ಎಡ-ಬಲ, ಅಭಿನವ ಪ್ರಕಾಶನ, ಬೆಂಗಳೂರು, ೨೦೦೭.

೨. ಆಶಾದೇವಿ ಎಂ.ಎಸ್., ಸ್ತ್ರೀಮತವನುತ್ತರಿಸಲಾದಿತೆ?, ಅಕ್ಷರ ಪ್ರಕಾಶನ, ಸಾಗರ ೨೦೦೫.

೩. ಇಂದಿರಾ ಆರ್., ಮಹಿಳೆ ಮತ್ತು ಕೌಟುಂಬಿಕ ಹಿಂಸೆ, ರಾಘವ ಟ್ರಸ್ಟ್, ಮೈಸೂರು, ೨೦೦೦.

೪. ಇಂದಿರಾ ಜೈ ಪ್ರಕಾಶ್, ಸ್ತ್ರೀವಾದಿ ಮನೋವಿಜ್ಞಾನ, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ, ೨೦೦೯.

೫. ಕೃಷ್ಣಮೂರ್ತಿ ಮತ್ತೂರು, ಗಾಂಧಿ ಉಪನಿಷತ್, ಎಂ.ಪಿ. ಬಿರ್ಲಾ ಫೌಂಡೇಶನ್ ರೆಸ್‌ಕೋರ್ಸ್, ಬೆಂಗಳೂರು, ೨೦೦೨.

೬. ಉಷಾ ಎಂ., ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೪.

೭. ಉಷಾ ಎಂ., ಮಹಿಳೆ ಮತ್ತು ಜಾತಿ ಒಂದು ಸೈದ್ಧಾಂತಿಕ ಗ್ರಹಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೧.

೮. ಗಣೇಶ್ ಮೊಗಳ್ಳಿ ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೪.

೯. ಗಾಯತ್ರಿ ನಾವಡ, ಮಹಿಳಾ ಸಂಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩.

೧೦. ಗೀತಾ ಕೃಷ್ಣಮೂರ್ತಿ, ಮಹಿಳೆ, ಸಮಾಜ ಮತ್ತು ಕಾನೂನು, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೭.

೧೧. ಗೀತಾ ಕೃಷ್ಣಮೂರ್ತಿ, ಮಹಿಳಾ ಹಕ್ಕುಗಳು ಮಾನವ ಹಕ್ಕುಗಳ ನೆಲೆಯಲ್ಲಿ, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೯.

೧೨. ಚಂದ್ರಶೇಖರ ಟಿ.ಆರ್., ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೦೦೩.

೧೩. ಚಂದ್ರಪೂಜಾರಿ ಎಂ., **ಸಂಶೋಧಕರು ಮತ್ತು ಕ್ಷೇತ್ರಕಾರ್ಯ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೮.

೧೪. ಚಂದ್ರಪೂಜಾರಿ ಎಂ., **ಸಂಶೋಧನಾ ಜವಾಬ್ದಾರಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೮.

೧೫. ಚಂದ್ರಪೂಜಾರಿ ಎಂ., **ಸಂಶೋಧನಾ ಪ್ರಸ್ತಾವ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬, ೨೦೦೮.

೧೬. ಚಂದ್ರಪೂಜಾರಿ ಎಂ., **ಸಮಾಜ ಸಂಶೋಧನೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೫.

೧೭. ದೇಜಗೌ, **ಸಮಾಜವಾದಿ ರಾಮಮನೋಹರ ಲೋಹಿಯಾ**, ಸಹ್ಯಾದ್ರಿ ಪ್ರಕಾಶನ, ೧೯೮೯.

೧೮. ಮಧುಕೇಶ್, **ಡಾ. ಕಲ್ಪನಾ ಚಾವ್ಲಾ, ಅಂತರಿಕ್ಷದ ಚಿರಂತನ ನಕ್ಷತ್ರ**, ಅಖಿಲಾ ಏಜೆನ್ಸಿಸ್, ಮೈಸೂರು, ೨೦೦೩.

೧೯. ರಾಮಚಂದ್ರ ಸಿ.ಎನ್., **ವಸಾಹತೋತ್ತರ ಚಿಂತನೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪.

೨೦. ರಾಮಚಂದ್ರೇಗೌಡ ಹಿ.ಶಿ., **ತನ್ನ ತಾವು**, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩.

೨೧. ಲೀಲಾಸಂಪಿಗೆ, **ವೇಶ್ಯಾವಾಟಿಕೆ ಒಂದು ಅಧ್ಯಯನ**, ನೆಲೆ ಅಕಾಡೆಮಿ ಪ್ರಕಾಶನ, ಬೆಂಗಳೂರು, ೨೦೦೫.

೨೨. ವಿಜಯಶ್ರೀ ಸಬರದ, **ಮಹಿಳೆಯ ಶೋಷಣೆಯ ಸವಾಲುಗಳು**, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫.

೨೩. ಶಾಂತಾ ಬಿ. ಅಸ್ಪಿಗೆ, **ನಡೆತುರಗ**, ಅಮಿತಾಂಕಿತ ಪ್ರಕಾಶನ, ನಾಗಣಸೂರ, ೨೦೦೭.

೨೪. ಶ್ರೀಮತಿ ಎಚ್.ಎಸ್., **ಸೇರಿಕೊಂಡ ಎಳೆಗಳು**, ಬಾಲ್ಯದ ಕೆರೆ ಪ್ರಕಾಶನ, ಬೆಂಗಳೂರು, ೨೦೦೪.

೨೫. ಶ್ರೀಮತಿ ಎಚ್.ಎಸ್., **ಸ್ತ್ರೀವಾದ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೮.

೨೬. ಶ್ರೀಮತಿ ಎಚ್.ಎಸ್., **ಚಹರೆ**, ಬಾಲ್ಯದ ಕೆರೆ ಪ್ರಕಾಶನ, ಬೆಂಗಳೂರು, ೨೦೦೪.

೨೭. ಶೈಲಜ ಹಿರೇಮಠ, **ಪಾತರದವರು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೯.

೨೮. ಶೈಲಜ ಹಿರೇಮಠ, **ಸ್ತ್ರೀಕಥನ**, ಭುವನ ಪ್ರಕಾಶನ, ೨೦೦೩.

೨೯. ಸರೋಜಾ ಕೆ., **ಮಹಿಳಾ ಆರೋಗ್ಯ ಒಂದು ಮರು ಚಿಂತನೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೮.

೩೦. ಸರೋಜಾಕೆ., ಮಹಿಳಾ ಆರೋಗ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೧.

೩೧. ಸುಮಿತ್ರಾಬಾಯಿ ಬಿ.ಎನ್., ಸ್ತ್ರೀವಾದಿ ಪ್ರವೇಶಿಕೆ, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು, ೨೦೦೪.

೩೨. ಹಾಲತಿ ಸೋಮಶೇಖರ, ಮಹಿಳಾ ಚಳುವಳಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ವಿಸ್ಮಯ ಪ್ರಕಾಶನ, ಮೈಸೂರು, ೨೦೦೭.

೩೩. ಹಾಲತಿ ಸೋಮಶೇಖರ, ಸ್ತ್ರೀಪರ, ವಿಸ್ಮಯ ಪ್ರಕಾಶನ, ಮೈಸೂರು, ೨೦೦೩.

**ಮೂಲ ಕೃತಿಗಳು**

1. Aruna Goel, Violence and Protective Measures, for women development and Empowerment Deep and Deep Publications Pvt. Ltd., New Delhi, 2004.
2. Ashine Roy, Violence Against Women, Rajat publication New Delhi, 2003.
3. Betty Friedan, The feminine Mystique, W.W. Norton and company New York, London, 1997.
4. Gail Omvedt, New Movements and Newtheories in India, Kali for Women, New Delhi, 1997.
5. G.B. Reddy, Women and the law, Gigia Law Agencey, Hydrabad, 2007.
6. Greada lerner, The creation of patriarcry, Oxford university press New York oxfored, 1986.
7. Jyotsna Agnihotri Gupta, New Reproductive technologies freedome or dependncy? Sage publications, New Delhi, 2000.
8. Karen Boyle, Media and Violence, Sage publications, New Delhi, 2006.
9. Kate Millet, Sexual Politics, Virago press limited London, 1985.
10. Kultar Singh, Ualitative Social research Methods, Sage Publications, New Delhi, 2007.
11. Mamata Singh, Violence Against Women, Reference Press, New Delhi, 2003.
12. Marry wollstone craft, A Vindication of the rights of women, Dover publications INC mineola, New york, 1996.

13. Pamela Patton melanie M. Hughes, Women and Politics and Power, Pine forge Press, New Delhi, 2007.

14. Ram Ahuja, Violence Against Women, Rawat publication New Delhi, 2003.

15. Shashi Prabha jain, Violence Against Women, Radha publication, New Delhi, 2001.

16. Sheerryl Kleinman, Feminist Field Work Analysis, Sage publications, New Delhi, 2007

**ಅನುವಾದಿತ ಕೃತಿಗಳು**

೧. ಏಂಗೆಲ್ಸ್, ಅನು: ಗೋಪಾಲಕೃಷ್ಣರಾವ್, **ಕುಟುಂಬ ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ,** ಪ್ರಗತಿ ಪ್ರಕಾಶನ, ಮಾಸ್ಕೋ, ೧೯೮೦.

೨. ಕಮಲ ಎಂ.ಆರ್., **ಉತ್ತರ ನಕ್ಷತ್ರ,** ಕಥನ ಪ್ರಕಾಶನ, ಬೆಂಗಳೂರು, ೨೦೦೫.

೩. ಕಮಲ ಎಂ.ಆರ್., **ಕಪ್ಪು ಹಕಿಯ ಬೆಳಕಿನ ಹಾಡು,** ಕಥನ ಪ್ರಕಾಶನ, ಬೆಂಗಳೂರು, ೨೦೦೪.

೪. ಕಮಲ ಎಂ.ಆರ್., **ನನ್ನ ಕಥೆ,** ಕಥನ ಪ್ರಕಾಶನ, ಬೆಂಗಳೂರು, ೨೦೦೬.

೫. ಕಮಲ ಎಂ.ಆರ್., **ಸೆರೆ ಹಕ್ಕಿ ಹಾಡುವುದು ಏಕೆಂದು ಬಲ್ಲೆ,** ಕಥನ ಪ್ರಕಾಶನ, ಬೆಂಗಳೂರು, ೨೦೦೫.

೬. ಕೃಷ್ಣಮೂರ್ತಿ ಜಿ. ಅನು. ನಾಗಭೂಷಣಸ್ವಾಮಿ ಓ.ಎಲ್., **ಹಿಂಸೆಯನ್ನು ಮೀರಿ,** ಕೃಷ್ಣಮೂರ್ತಿ ಫೌಂಡೇಶನ್ ಇಂಡಿಯಾ, ೨೦೦೦.

೭. ತಾಪಿ ಧರ್ಮರಾವ್, ಅನು. ಸ. ರಘುನಾಥ, **ಕಬ್ಬಿಣದ ಕಾಚಾಗಳು,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೫.

೮. ಪಾರ್ವತಿ ಮೆನನ್, ಅನು. ಗಾಯತ್ರಿ ಎನ್., **ಅಡ್ಡಗೋಡೆಗಳನ್ನೊಡೆದು ಮುನ್ನಡೆದ ಹನ್ನೆರಡು ಮಹಿಳೆಯ ಕಥೆಗಳು,** ೨೦೦೭.

೯. ಫ್ಲೇವಿಯಾ ಆಗ್ನೇಸ್, ಅನು. ನೇಮಿಚಂದ್ರ, **ನನ್ನ ಕಥೆ ನಮ್ಮ ಕಥೆ,** ನೆಲಮನೆ ಪ್ರಕಾಶನ, ಮಂಡ್ಯ ಜಿಲ್ಲೆ, ೧೯೯೯.

೧೦. ಬರ್ಟ್ರೆಂಡ್ ರಸೆಲ್, ಅನು. ನಾರಾಯಣ ಪಿ.ವಿ., **ಅಧಿಕಾರ ಮೀಮಾಂಸೆ,** ವಸಂತ ಪ್ರಕಾಶನ, ಬೆಂಗಳೂರು, ೨೦೦೭.

೧೧. ಮಧುಕೀಶ್ವರ್, ಅನು. ಮೀರಾ ಎಲ್.ಜಿ., **ಮಾನುಷಿಯ ಮಾತು,** ಅಕ್ಷರ ಪ್ರಕಾಶನ, ಬೆಂಗಳೂರು, ೧೯೯೭.

೧೨. ಪಾರ್ಶಲೆ, ಅನು. ಶ್ರೀಮತಿ ಎಚ್.ಎಸ್. ಸಿಮೋನ್ ದ ಬೋವಾ, **ದ ಸೆಕೆಂಡ್ ಸೆಕ್ಸ್ ಒಂದು ಕನ್ನಡ ಓದು,** ಅಧ್ಯಯನ ಮಂಡಲ, ಬೆಂಗಳೂರು ೨೦೦೭.

೧೩. ರಾಮಚಂದ್ರನ್ ಸಿ.ಎನ್., ಅನು. ಗಿರಡ್ಡಿ ಗೋವಿಂದರಾಜು, **ವಸಾಹತೋತ್ತರ ಚಿಂತನೆ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪.

**ಕನ್ನಡ ಸಂಪಾದಿತ ಕೃತಿಗಳು**

೧. ಅಮರೇಶ ನುಗಡೋಣಿ, **ಕನ್ನಡ ಸಂಶೋಧನೆಯ ವೈಧಾನಿಕತೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ, ೨೦೦೮.

೨. ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ, **ಸ್ತ್ರೀವಾದಿ ಸಾಹಿತ್ಯ ವಿಮರ್ಶೆ,** ಕನ್ನಡ ಸಂಘ ಕ್ರೈಸ್ತ ಕಾಲೇಜು, ಬೆಂಗಳೂರು, ೧೯೯೪.

೩. ಮೀನಾಕ್ಷಿ ಬಾಳಿ, **ಚಿವುಟದಿರಿ ಚಿಗುರ,** ಅಖಿಲ ಭಾರತ ಜನವಾದಿ ಮಹಿಳಾ ಸಂಘಟನೆ, ಗುಲಬರ್ಗಾ, ೨೦೦೫.

೪. ರವೀಂದ್ರನಾಥ ಕೆ., **ಅಧ್ಯಯನದ ವಿಧಿವಿಧಾನಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ, ೨೦೦೮.

೫. ರವಿಕುಮಾರ ನ. ಚಂದ್ರಮಾಗಡಿ, **ಗೋಂದಲಪುರ ಹಿಂಸೆ-ನುಡಿ ನೋಟಗಳು,** ಅಭಿನವ ಪ್ರಕಾಶನ, ಬೆಂಗಳೂರು, ೨೦೦೧.

೬. ರಾಜೇಂದ್ರ ಚೆನ್ನಿ, ಎಸ್. ಸಿರಾಜ್ ಅಹಮದ್, **ಜಾಗತೀಕರಣ ಒಂದು ಸಮಗ್ರ ಮಂಥನ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪.

೭. ರಾಜಾರಾಂ ಹೆಗಡೆ, **ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪.

೮. ವಿರೂಪಾಕ್ಷಿ ಪೂಜಾರಹಳ್ಳಿ, **ಪೆರಿಯಾರರ ವಿಚಾರಧಾರೆ,** ಅಭಿನವ ಪ್ರಕಾಶನ, ಬೆಂಗಳೂರು, ೨೦೦೭.

೯. ಶ್ರೀಮತಿ ಎಚ್.ಎಸ್., ಡಾ. ಶಿವಾನಂದ ವಿರಕ್ತಮಠ, ಡಾ. ಜೆ. ಕೃಷ್ಣ, **ಮಹಿಳಾ ಆರ್ಥಿಕತೆ,** ಮಹಿಳಾದ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ ೫೮೩ ೨೭೬, ೨೦೦೭.

೧೦. ಶ್ರೀಮತಿ ಎಚ್.ಎಸ್., ಡಾ. ಶಿವಾನಂದ ವಿರಕ್ತಮಠ, ಡಾ. ಜೆ. ಕೃಷ್ಣ, **ಮಹಿಳಾ ದುಡಿಮೆ ಮತ್ತು ಬಿಡುವು,** ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ೨೦೦೭.

**ಸಂಪಾದಿತ ಗ್ರಂಥಗಳು**

1. Claire M. Fenzetti Jeffrey L. Eelleson Paqual Kenneoly Bergon, A Resource hand book of Violence Against Women, Sage Publications, New Dehli, 2005.

2. Emerson Dobash Russell p. Dobash, Bergon, Rethinking Violence against Women, Sage Publications, New Dehli, 1998.

3. Rinki Bhattacharya, Behind Closed doors, Sage Publications, New Dehli, 2005.

4. Savitri Goonasekere, Violence, law and womens Rights in South Asia, Sage Publications, Newdelhi, 2004.

5. Shirin Kudcredkar Sabisa Al - ISSA, Violence against Women, Women against Violence, Angrau Jain Publications, New Delhi, 1998.

**ಸಂಶೋಧನಾ ವರದಿಗಳು**

೧. ಅಂತಸ್ತಿನ ಅನ್ವೇಷಣೆ ಕರ್ನಾಟಕ ಗ್ರಾಮೀಣ ಮಹಿಳೆಯರ ಅಧ್ಯಯನದ ಸಂಕ್ಷಿಪ್ತ ವರದಿ, ಮಹಿಳೆಯರ ಕಾರ್ಯನೀತಿ ಸಂಶೋಧನಾ ಮತ್ತು ಪ್ರತಿಪಾದನಾ ಘಟಕ, ಉಚ್ಛ ಅಧ್ಯಯನಗಳ ರಾಷ್ಟ್ರೀಯ ಸಂಸ್ಥೆ, ಬೆಂಗಳೂರು, ೨೦೦೬.

೨. ಕೋಮುವಾರು ಸಮಸ್ಯೆ, ಈಶ್ವರಚಂದ್ರ, ಕಾನ್‌ಪುರ ಗಲಭೆ ವಿಚಾರಣಾ ಸಮಿತಿಯ ವರದಿ, ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ.

೩. ಪ್ರಭುತ್ವವು ಫಾಸಿಸ್ಟ್ ಆದಾಗ ಗುಜರಾತ್ ಜನಾಂಗ ಹತ್ಯೆ, ಮಹಿಳಾ ಚಳುವಳಿಯ ದೃಷ್ಟಿಕೋನದಲ್ಲಿ, ಅನು. ಇಶ್ವತನಿಷಾರ, ಕಮಿಟಿ ಅಗೆನಸ್ಟ್ ವೈಯೊಲನ್ಸ್ ಆನ್ ವುಮೆನ್ ಪಬ್ಲಿಕೇಶನ್, ೨೦೦೩.

೪. ಭಾರತದ ಲೈಂಗಿಕತೆಯ ಶೋಷಿತರ ವಿರುದ್ಧ ನಡೆಯುತ್ತಿರುವ ಮಾನವ ಹಕ್ಕುಗಳ ಉಲ್ಲಂಘನೆ, ಶ್ರೀ ಲತಾಬಾಟ್ಲಿವಾರಿ, ಬಿ.ಕೆ. ಅನಿತಾ, ಅನಿತಾ ಗುರುಮೂರ್ತಿ, ಚಂದನ್ ಎಸ್.ವಾಲಿ ಬೆಂಗಳೂರಿನ ಪ್ರಾಸಂಗಿಕ ಅಧ್ಯಯನ, ಪಿಯುಸಿಎಲ್ ಕರ್ನಾಟಕ ವರದಿ, ೧೯೯೪.

೫. India Second and third Ngo Alternative Report on CEDAW, Co-ordinated by NAWO, 2006.

೬. Life free of violence It's our Right, Global campaign for elimination of Gender based violence in the south Asia region.

೭. Our Voice Compiled case strories and best practices, CHARCA Project

೮. Towords equality Report of the committee on the status of women in India, Government of India ministry of education and Social welfare Department of Socilogy. Sage Publication New delhi, 1996.

೯. Women and Violence A country Report, A Study sponsored by UNESCO mainthreyi Krishnagaj, RCWS SNDT university, Bombay, 1995.

## ಮಹಾಪ್ರಬಂಧ


೧. ಅನುಸೂಯಾ ಕದಂ, ಮಹಿಳಾ ಶೋಷಣೆಯ ನೆಲೆಗಳು, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೨. ಕಲಾವತಿ ಬಿ.ಜಿ., ಜಾಹಿರಾತುಗಳಲ್ಲಿ ಮಹಿಳಾ ಪ್ರತಿನಿಧೀಕರಣ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೭.

೩. ಗೀತಾ ಕೆ.ಎಸ್., ಮಹಿಳೆ, ಕಾನೂನು ಮತ್ತು ನ್ಯಾಯ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೨.

೪. ನೇತ್ರಾವತಿ ಕೆ.ವಿ., ದಲಿತ ಮಹಿಳಾ ಸಂಕಥನ, ಜಾನಪದ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೩.

೫. ವೆಂಕಟೇಶ ಎ., ನಗರ ಹಾಗೂ ಗ್ರಾಮೀಣ ರಾಜಕೀಯದಲ್ಲಿ ಮಹಿಳೆ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೩.

೬. ವೆಂಕಟೇಶಮೂರ್ತಿ ಟಿ., ಆಧುನಿಕ ಕನ್ನಡ ನಾಟಕಗಳಲ್ಲಿ ಪ್ರಭುತ್ವ ಯಾಜಮಾನ್ಯತೆ ಹಾಗೂ ಅಧಿಕಾರ ಕೇಂದ್ರಗಳ ಪ್ರತಿನಿಧೀಕರಣ ವಸ್ತುನಿಷ್ಠ ಅಧ್ಯಯನ, ಭಾಷಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೭. ಶಿವಪ್ಪ ಬಸಪ್ಪ, ಮಹಿಳಾ ಆರೋಗ್ಯ ಯೋಜನೆಗಳು : ಕಾರ್ಯಗತಗೊಳಿಸುವಿಕೆಯಲ್ಲಿ ಮಹಿಳೆಯರ ಅರಿವಿನ ಪಾತ್ರ, ೨೦೦೭.


## ಕಿರುಪ್ರಬಂಧ


೧. ಅನಿತ, ಗ್ರಾಮ ಪಂಚಾಯತಿ ವ್ಯವಸ್ಥೆಯಲ್ಲಿ ಮಹಿಳಾ ಸಮುದಾಯದ ಭಾಗವಹಿಸುವಿಕೆ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬, ೨೦೦೮.

೨. ತಬಸಂ ಎಚ್., ಪ್ರಾಥಮಿಕ ಶಿಕ್ಷಣದಲ್ಲಿ ಮಹಿಳಾ ಶಾಲೆ ಬಿಡುವಿಕೆ; ಮುಸ್ಲಿಂ ಸಮುದಾಯದಲ್ಲಿ ಲಿಂಗಾಧಾರಿತ ನೆಲೆಯನ್ನು ಅನುಲಕ್ಷಿಸಿ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೭.

೩. ರಜಿಯಾಬಾನು ಕೆ.ಎಸ್., ಮುಸ್ಲಿಂ ಮಹಿಳೆಯ ಸಾಮಾಜಿಕ ಬದುಕು, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೮.

೪. ವೀಣಾ ಕುಲಕರ್ಣಿ, ಬ್ರಾಹ್ಮಣ ಮಹಿಳೆಯ ಸಾಮಾಜಿಕ ಚಹರೆ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೮.

೫. ಶಿವಪ್ಪ ಬಸಪ್ಪ, ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಮಹಿಳೆ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೩.

೬. ಶಿವಾನಂದಾಚಾರ್ ಬಡಿಗೇರ, ಕೌಟುಂಬಿಕ ಹಿಂಸೆ ಮತ್ತು ಮಹಿಳೆ, ಮಹಿಳಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೭.

## ನಿಯತಕಾಲಿಕೆಗಳು ಮತ್ತು ಪತ್ರಿಕೆಗಳು


೧. ಗೀತಾ ಕೃಷ್ಣಮೂರ್ತಿ, ಬಸವ ಪ್ರಭು ಹೊಸಕೇರಿ, *ಈ* ಕಾನೂನು ನಿಮಗೆ ಗೊತ್ತೆ (ಪ್ರಜಾವಾಣಿ), ದೀಪಾವಳಿ ವಿಶೇಷಾಂಕ, ೨೦೦೪.

೨. ಸುಧಾ, ೧೩ನೇ ಸೆಪ್ಟೆಂಬರ್ ೨೦೦೭.

೩. ಹೊಸತು ವಿಶೇಷ ಸಂಚಿಕೆ, ಜನವರಿ ೨೦೦೯.

೪. Economic and Political Weekly, Octorber 14, 2006.

೫. European gourmal of women's stuclies vol. 14 (3).

೬. Her Voice Vol. 3, April 2009, Hasamat College for women benglore.

೭. Manushi, Septemeber- October, Madhupoorninakishwar, 2006.

೮. Out look, vol. 20, No. 1, September, 2002.

೯. Women's Link, Vol. 14, No. 2, April-June 2008, Social Actior trust New Delhi.

## ೪. ದಾಖಲಿಸಿದ ಪ್ರಕರಣಗಳಲ್ಲಿ ಬಳಸಲಾದ ಪದಕೋಶ

೧. ಸಣ್ಣಕಿ – ಚಿಕ್ಕವಳು
೨. ಬಾರ – ಹನ್ನೆರಡು
೩. ತೇರಾ – ಹದಿಮೂರು
೪. ನಂಟರು– ಬಂಧುಗಳು
೫. ಬೀಗರ್ – ಬಂಧುಗಳು
೬. ಸಲಾಮ್– ನಮಸ್ಕಾರ
೭. ಎಟ್ – ಎಷ್ಟು
೮. ಜುಲಮಿ – ಒತ್ತಾಯ
೯. ದುಸರಾ – ಇನ್ನೊಂದು
೧೦. ನಿಭಾವಣೆ– ನಿಭಾಯಿಸುವಿಕೆ
೧೧. ಲೋಡ್ಯಾರು– ಹೆಣ್ಣುಮಕ್ಕಳು
೧೨. ಹಿಗ್ಗಾಗ್ಯದ– ಸಂತೋಷವಾಗಿದೆ
೧೩. ತ್ವಾಡೆ – ಕಡಿಮೆ
೧೪. ಬ್ಯಾಳಿ – ಬೇಳೆ
೧೫. ವಾರಿಗ್ಯಾರ್– ಜೊತೆಗಾರರು, ಸಮವಯಸ್ಕರು
೧೬. ದೊಸ್ತಾನಿ– ಗೆಳೆತನ
೧೭. ಹಕಿಕತ – ಬಗೆಹರಿಸು
೧೮. ಖಾಸಾದೋಸ್ತ–ಜೀವದ ಗೆಳೆಯ
೧೯. ತಗಂಡ್ರ – ತೆಗೆದುಕೊಂಡರೆ
೨೦. ಬ್ಯಾಡಂಬದ್– ಬೇಡವೆನ್ನುವುದು
೨೧. ಬಾರಾತನ– ಹನ್ನೆರಡರವರೆಗೆ
೨೨. ಹ್ವಾದರ – ಹೋದರೆ
೨೩. ಕುಂಜಿ – ಬೀಗ
೨೪. ಪಾಚ್‌ಹಜಾರ್–ಐದು ಸಾವಿರ
೨೫. ಜುಲ್ಮಾನಿ – ದಂಡ
೨೬. ಧಾದಂಗ – ಹತ್ತರಂತೆ
೨೭. ಮಜಬೂತ್ – ಗಟ್ಟಿತನ
೨೮. ಮನ್ಯಾಗ – ಮನೆಯೊಳಗೆ
೨೯. ಬಸರಾಗ್ಯಾಳ– ಗರ್ಭಿಣಿಯಾಗಿದ್ದಾಳೆ
೩೦. ಖರೆವು – ನಿಜ, ಸತ್ಯ
೩೧. ಶ್ಯಾಣೆ – ಜಾಣ
೩೨. ಅದಿಟು – ಅದಿಷ್ಟು, ಪೂರ್ತಿಯಾಗಿ
೩೩. ರೊಕ್ಕ – ದುಡ್ಡು, ಕಾಸು
೩೪. ಟೇಮ್‌ನಾಗ– ಸಮಯದಲ್ಲಿ
೩೫. ಜೋಪಡಿ– ಗುಡಿಸಲು
೩೬. ಜತಿಗಿ – ಜೊತೆಗೆ
೩೭. ದ್ಯಾವರು– ದೇವರು
೩೮. ಕುಕ್ಕರಣಿ– ಕುಲಕರ್ಣಿ, ಗ್ರಾಮದೊಡೆಯ
೩೯. ಚಂಜಿತನ– ಸಂಜೆಯವರೆಗು
೪೦. ಹೌದನಸಗೊಂಡಾನ– ಹೆಸರುವಾಸಿಯಾಗಿದ್ದಾನೆ
೪೧. ಎಂಗರ – ಹೇಗಾದರು
೪೨. ವೈನಿ – ಅತ್ತಿಗೆ
೪೩. ಛಲೋ – ಒಳ್ಳೆಯದು
೪೪. ಖುಷಿಲಿಂದ – ಸಂತೋಷದಿಂದ
೪೫. ಬಲ್ಲಿದ್ರ – ಹತ್ತಿರವಿದ್ದರೆ, ಬಳಿಯಿದ್ದರೆ
೪೬. ತಾಟ – ತಟ್ಟೆ
೪೭. ಖಾಲಿಯಾಗ್ಯದ– ಮುಗಿದು ಹೋಗಿದೆ
೪೮. ಇನ್‌ಮ್ಯಾಲ – ಇನ್ನುಮೇಲೆ
೪೯. ಮಕ್ಕ – ಮಲಗಿಕೊ
೫೦. ಖೂನದೊರು– ಪರಿಚಯದವರು
೫೧. ಕಾಲಾಗಿನ – ಕಾಲೊಳಗಿನ(ಚಪ್ಪಲಿ)
೫೨. ಪೋರಿ – ಹುಡುಗಿ
೫೩. ಪಾರ – ಹುಡುಗ
೫೪. ಕರಿತಾರ – ಕರೆಯುತ್ತಾರೆ
೫೫. ಬೇಮಾನಿ – ಅನ್ಯಾಯ
೫೬. ಅಂಜಿ – ಹೆದರಿ
೫೭. ಹರೆದಕಿ – ಯೌವ್ವನಾವಸ್ಥೆ
೫೮. ಪುರಸೊತ್ತು – ಬಿಡುವು
೫೯. ಮರ್ವಾದಿ – ಮರ್ಯಾದೆ

೬೦. ಬೇಶಿ – ಒಳ್ಳೆಯದು
೬೧. ತಲಿಬ್ಯಾನಿ – ತಲೆನೋವು
೬೨. ಖಾಂದಾನದಾಗ– ವಂಶದಲ್ಲಿ
೬೩. ತುಜ್‌ಕೊಚ್ – ನಿನಗೆ
೬೪. ಮುಚತೆಕತೆ – ಕೇಳ್ತಾರಂತೆ
೬೫. ಕ್ಯಾಕಿಬೋಲ – ಏನೋ? ಹೇಳು
೬೬. ಅಸಲು – ನಿಜವಾಗಿ
೬೭. ಆದಮಿ – ವ್ಯಕ್ತಿ
೬೮. ಅಬ್ಬಾ – ತಂದೆ
೬೯. ಶರಮ್ – ನಾಚಿಕೆ
೭೦. ಪಡಾಯಿ – ವಿದ್ಯಾಭ್ಯಾಸ
೭೧. ಚುಪಕೆ – ಸುಮ್ಮನೆ
೭೨. ಘರಮೆ – ಮನೆಯಲ್ಲಿ
೭೩. ರಹ – ಇರು
೭೪. ಮಾಮು – ಮಾವ
೭೫. ಸಾಸುಮಾ – ಅತ್ತೆ
೭೬. ಸಭಿ – ಎಲ್ಲರೂ
೭೭. ಸುನತಾ – ಕೇಳುತ್ತಾನೆ
೭೮. ನಹಿ(ಯಿ) – ಇಲ್ಲ
೭೯. ಜಾನ – ಜೀವ
೮೦. ತಿಪ್ಲ – ಕಷ್ಟ
೮೧. ಪಲಟಿ – ವ್ಯತ್ಯಾಸ
೮೨. ಬನಾಯನ – ಮಾಡಿದ್ದಾನಲ್ಲ
೮೩. ಮರದ್ – ಗಂಡ
೮೪. ದಿಮಾಕು – ಸೊಕ್ಕು
೮೫. ಜಾಕಮರ – ಹೋಗಿ ಸಾಯಿ
೮೬. ಕಮರೇಮೆ – ಕೋಣೆಯೊಳಗೆ
೮೭. ಭಾನ – ಅಕ್ಕ
೮೮. ಬಾಂವಾ – ತಂದೆ
೮೯. ಖಾಯಾ – ತಿಂದಿದ್ದಾನೆ
೯೦. ಪೈಸಾ – ದುಡ್ಡು
೯೧. ರಖಲಿಯೆ – ಇಟ್ಟುಕೊಂಡಿರುವ
೯೨. ದೇಕಭೋಡ – ಕೊಟ್ಟುಬಿಡು
೯೩. ಆಖರಿಗಿ – ಅಂತಿಮವಾಗಿ
೯೪. ಖಾನಾ – ಊಟ
೯೫. ಪೀನಾ – ಕುಡಿಯುವುದು
೯೬. ಸೋನಾ – ಮಲಗುವುದು
೯೭. ಕಹಾನಿ – ಕಥೆ
೯೮. ಭೋಟೆ ಬಚ್ಚೆ – ಚಿಕ್ಕಮಕ್ಕಳು
೯೯. ಜೇಹರ – ವಿಷ
೧೦೦. ಅಚ್ಛಾ – ಹೌದಾ, ಒಳ್ಳೆಯದು
೧೦೧. ಗುಡ್ಯಾಗ – ದೇವಸ್ಥಾನದಲ್ಲಿ
೧೦೨. ಸುಟಿಗೆ – ರಜೆಗೆ
೧೦೩. ಬಗಲಾಗ – ಪಕ್ಕಕ್ಕೆ
೧೦೪. ಕೀಲಿ – ಬೀಗ
೧೦೫. ಇಂಗಾಗತದ – ಹೀಗೆ ಆಗುತ್ತೆ
೧೦೬. ಬಗ್ಗಬಡಿಬೇಕು– ದಮನ ಮಾಡು, ನಾಶಮಾಡು
೧೦೭. ಫರಸಿ – ಬಂಡೆ
೧೦೮. ಬೆದರಿಶಿ – ಹೆದರಿಸಿ
೧೦೯. ವಚನ – ಭಾಷೆ
೧೧೦. ಅಜಮಾಸ – ಅಂದಾಜು
೧೧೧. ಮುರೆಹಾಕು – ಕಡಿತಗೊಳಿಸು
೧೧೨. ನಂಬಲ್ಯಾಕ – ನನ್ನ ಬಳಿ
೧೧೩. ಶೆರಗ – ಸೆರಗು
೧೧೪. ಜಗ್ಗಿ – ಹೆಚ್ಚು, ಬಹಳ
೧೧೫. ಕಮ್ಮಿಜಾತಿ – ಕೆಳಜಾತಿ
೧೧೬. ಬಿಸಾಕು – ಎಸೆ
೧೧೭. ತರಾಸ – ಕಷ್ಟ
೧೧೮. ಜಿದ್ದಮಾಡಿ – ಹಟಮಾಡಿ
೧೧೯. ಮಸ್ತ್ – ತುಂಬಾ, ಒಳ್ಳೆಯ
೧೨೦. ಕ್ವಾಣೆ – ಕೋಣೆ, ಕೊಠಡಿ
೧೨೧. ಕಾರೊಬಾರ – ಅಧಿಕಾರ, ಯಜಮಾನಿಕೆ
೧೨೨. ಮುಂಜಾನಿ – ಬೆಳಿಗ್ಗೆ
೧೨೩. ಬೆಳ್ತನ – ಬೆಳಗಾಗುವವರೆಗೆ
೧೨೪. ಉರಿ – ಜ್ವರ
೧೨೫. ಹೊಟ್ಲೆ – ಗರ್ಭಿಣಿ
೧೨೬. ಗೋಶಾ – ಪರದೆ
೧೨೭. ಬಾಹರ – ಹೊರಗೆ
೧೨೮. ಬೀವಿ(ಬಿ) – ಹೆಂಡತಿ
೧೨೯. ಪಗಾರ – ಸಂಬಳ
೧೩೦. ಭಾಬಿ – ಅತ್ತಿಗೆ
೧೩೧. ಅಮ್ಮಿ – ತಾಯಿ
೧೩೨. ಸಾಡಿ – ಸೀರೆ
೧೩೩. ಶ್ಯಾಮ್ – ಸಂಜೆ
೧೩೪. ತಕಲಿಫ್ – ಕಷ್ಟ
೧೩೫. ಖರಾಬ್ – ಕೆಟ್ಟ
೧೩೬. ಕಿಮ್ಮತ್ – ಮೌಲ್ಯ, ಬೆಲೆ
೧೩೭. ಮಜಾ – ಆನಂದ
೧೩೮. ಕರಾಮತ್ – ಕೈಚಳಕ
೧೩೯. ಬೇಜಾನ್ – ಬಹಳಷ್ಟು, ಸಾಕಷ್ಟು

೧೪೦. ನಮನಿ – ಒಂಥರಾ
೧೪೧. ಆಟ್ – ಅಷ್ಟು
೧೪೨. ಬಾಳ್ವಿ – ಬದುಕು, ಜೀವನ
೧೪೩. ಅಂಜಿಕಿ – ಹೆದರಿಕೆ
೧೪೪. ಮುಲಾಜು – ಹಂಗು
೧೪೫. ತಾಪ – ಕಷ್ಟ, ನೋವು
೧೪೬. ನೋಡಾಕ – ನೋಡಲು, ನೋಡುವುದಕ್ಕೆ
೧೪೭. ಖುಷಿ – ಸಂತೋಷ
೧೪೮. ಬಡಬಡ – ಬೇಗ ಬೇಗ
೧೪೯. ತಾಸ – ಗಂಟೆ
೧೫೦. ಇಟ್ಟಬಂದರು – ಶವಸಂಸ್ಕಾರ ಮಾಡಿದರು
೧೫೧. ನಿಗರಾಡು – ಮೆರೆದಾಡು
೧೫೨. ಕಿರಿಕಿರಿ – ತೊಂದರೆ
೧೫೩. ಹಂಚ್ – ಬಾಣಲೆ
೧೫೪. ಬ್ಯಾರೆ – ಬೇರೆ

